# ಇತಿಹಾಸ ದರ್ಶನ

ಸಂಪುಟ ೩/ಸಂಚಿಕೆ ೧

೧೯೮೮

೧೯೮೭ರಲ್ಲಿ ಬೆಂಗಳೂರಿನಲ್ಲಿ ನಡೆದ ಪ್ರಥಮ ವಾರ್ಷಿಕ ಸಮ್ಮೇಳನದಲ್ಲಿ
ಸಾದರಪಡಿಸಿದ ಪ್ರಬಂಧಗಳ ಸಂಪುಟ

ಸಂಪಾದಕರು
ಡಾ॥ ಸೂರ್ಯನಾಥ ಕಾಮತ್
ಲಕ್ಷ್ಮಣ್ ತೆಲಗಾವಿ




ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು

ITIHASA DARSHANA
Proceedings of the First Annual
Conference of the Karnataka Itihasa
Academy (Regd.) held at Bangalore
from 15th to 17th May 1987

Vol. 3, No. 1 : June 1988

Edited by Dr. Suryanath Kamath
& Laxman Telagavi

Published by Karnataka Itihasa Academy (Regd.)
'Ranganatha Nilaya,' No. 13 (Old No. 4)
15th Cross, New Temple Road
Malleshwaram, Bangalore 560 003



ರೂ. ೬೦-೦೦

ಲಕ್ಷ್ಮಿ ಮುದ್ರಣಾಲಯ
ಸಂಖ್ಯೆ. ೧೬೬, ೭ನೇ ತಿರುವು, ೪ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು ೫೬೦ ೦೧೮

# ಸಂಪಾದಕೀಯ

ಕರ್ನಾಟಕ ಇತಿಹಾಸ ಅಕಾದೆಮಿ ತನ್ನ ಮೂರು ವರ್ಷಗಳ ಅಸ್ತಿತ್ವದಲ್ಲಿ ಸಾಕಷ್ಟು ಹೆಮ್ಮೆ ಪಡುವ ಸಾಧನೆ ಮಾಡಿದೆ. ಮೂರು ವಾರ್ಷಿಕ ಸಮ್ಮೇಳನಗಳು, ವಿಜಾಪುರದ ಆದಿಲ್‌ಷಾಹಿ ಇತಿಹಾಸದ ಬಗ್ಗೆ ನಡೆಸಿದ ಅಖಿಲ ಭಾರತ ವಿಚಾರ ಸಂಕಿರಣ, ಪದವಿಪೂರ್ವ ತರಗತಿಗಳ ಇತಿಹಾಸ ಅಧ್ಯಾಪಕರಿಗೆ ಬೆಂಗಳೂರಿನಲ್ಲಿ ನಡೆಸಿದ ಕಾರ್ಯಾಗಾರ ಹಾಗೂ ೧೯೮೮ ಹಾಗೂ ೧೯೮೯ರಲ್ಲಿ ನಡೆಸಿದ ಸ್ಪರ್ಧಾತ್ಮಕ ಕರ್ನಾಟಕ ಇತಿಹಾಸ ಪ್ರಶಸ್ತಿ ಪರೀಕ್ಷೆ ಇವು ಗಣ್ಯ ಕಾರ್ಯಕ್ರಮಗಳು. ಈ ಪರೀಕ್ಷೆಗೆ ಮೊದಲ ವರ್ಷ ೧೫೦೦, ಈ ವರ್ಷ ೨೭೦೦ ವಿದ್ಯಾರ್ಥಿಗಳು ಹಾಜರಾದದ್ದು ಉಲ್ಲೇಖನೀಯ. ಇದಲ್ಲದೆ ಬೆಂಗಳೂರಲ್ಲೂ ಇತರ ಕಡೆಗಳಲ್ಲೂ ಭಾಷಣ, ವಿಚಾರಗೋಷ್ಠಿಗಳನ್ನೂ ಏರ್ಪಡಿಸಿದೆ. ತನ್ನ ಪರಿಮಿತ ಆರ್ಥಿಕ ಸಾಮರ್ಥ್ಯದ ನಡುವೆ 'ಇತಿಹಾಸ ದರ್ಶನ'ದ ಮೂರನೆಯ ವಾರ್ಷಿಕ ಅಂಕ ಬಿಡುಗಡೆ ಆಗುತ್ತಿದೆ.

ಪ್ರಸಕ್ತ ಅಂಕವು ೧೯೮೭ರಲ್ಲಿ ಬೆಂಗಳೂರಲ್ಲಿ ಡಾ॥ ಎಂ. ಚಿದಾನಂದಮೂರ್ತಿ ಅವರ ಅಧ್ಯಕ್ಷತೆಯಲ್ಲಿ ನಡೆದ ಪ್ರಥಮ ಸಮ್ಮೇಳನದಲ್ಲಿ ಮಂಡಿಸಲಾದ ಪ್ರಬಂಧಗಳ ಸಂಕಲನ. ಆರ್ಥಿಕ ಅಡಚಣೆಗಳಿಂದಾಗಿ ಇದನ್ನು ಇದಕ್ಕೂ ಮೊದಲು ಪ್ರಕಟಿಸಲು ಸಾಧ್ಯ ಆಗಲಿಲ್ಲ. ೧೯೮೮ರಲ್ಲಿ ಡಾ॥ ಜಿ. ಎಸ್. ಗಾಯಿ ಅವರ ಅಧ್ಯಕ್ಷತೆಯಲ್ಲಿ ತುಮಕೂರಲ್ಲಿ ನಡೆದ ದ್ವಿತೀಯ ಸಮ್ಮೇಳನದ ಪ್ರಬಂಧಗಳನ್ನು ಇದೇ ವರ್ಷ ಬಿಡುಗಡೆ ಮಾಡುವ ಆಶೆ ಇದೆ. ಹಾಗಾದಲ್ಲಿ ಮುಂದಿನ ವಾರ್ಷಿಕ ಸಮ್ಮೇಳನದ ಕಾಲಕ್ಕೆ ೧೯೮೯ರಲ್ಲಿ ಡಾ॥ ಶ್ರೀನಿವಾಸ ರಿತ್ತಿ ಅವರ ಅಧ್ಯಕ್ಷತೆಯಲ್ಲಿ ಗದಗದಲ್ಲಿ ಜರುಗಿದ ಮೂರನೆಯ ಸಮ್ಮೇಳನದ ಪ್ರಬಂಧಗಳನ್ನೂ ಪ್ರಕಟಿಸುವುದು ಸಾಧ್ಯ ಆಗಬಹುದು.

ಗೆಳೆಯರಾದ ಶ್ರೀ ಕೆ. ಎಲ್. ರಾಜಶೇಖರ್ ಅವರು ಇದರ ಮುದ್ರಣ ಕಾಲದಲ್ಲಿ ಕರಡು ತಿದ್ದಲು ನೀಡಿದ ನೆರವು ಸ್ಮರಣೀಯ. ಅವರಿಗೆ ಕೃತಜ್ಞತೆಗಳು. ವಾರ್ಷಿಕ ಸಮ್ಮೇಳನದ ಚಿತ್ರಗಳನ್ನು ಒದಗಿಸಿದ ಶ್ರೀ ಅ. ಲ. ನರಸಿಂಹನ್ ಅವರಿಗೂ ಅಂದವಾಗಿ ಮುದ್ರಿಸಿಕೊಟ್ಟ ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್ ಕುಮಾರ್ ಅವರಿಗೂ ಈ ಪ್ರಕಟಣೆಗೆ ನೆರವಾದ ಎಲ್ಲರಿಗೂ ನಮ್ಮ ವಂದನೆಗಳು.

೧೦-೬-೧೯೮೯
ಬೆಂಗಳೂರು

ಸೂರ್ಯನಾಥ ಕಾಮತ್
ಲಕ್ಷ್ಮಣ್ ತೆಲಗಾವಿ

# ಕರ್ನಾಟಕ ಇತಿಹಾಸ ಅಕಾದೆಮಿ (ರಿ)

ಬೆಂಗಳೂರು

## ಪರಿವಿಡಿ



**ಡಾ॥ ಎಂ. ಚಿದಾನಂದಮೂರ್ತಿ ಅವರು**

ಕರ್ನಾಟಕ ಇತಿಹಾಸ ಅಕಾದೆಮಿಯ ಪ್ರಥಮ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು

(ಚಿತ್ರ : ಅ. ಲ. ನರಸಿಂಹನ್)




ಡಾ॥ ವಿ. ಕೃ. ಗೋಕಾಕ ಅವರಿಂದ ಪ್ರಥಮ ವಾರ್ಷಿಕ ಸಮ್ಮೇಳನದ ಉದ್ಘಾಟನೆ



ಡಾ॥ ಜಿ. ಎಸ್. ದೀಕ್ಷಿತ್ ಅವರಿಂದ ಸಮ್ಮೇಳನಾಧ್ಯಕ್ಷ ಡಾ॥ ಎಂ, ಚಿದಾನಂದಮೂರ್ತಿ ಅವರಿಗೆ ಸನ್ಮಾನ.
ಪಕ್ಕದಲ್ಲಿರುವವರು : ಶ್ರೀ ಡಿ, ವಿ. ಅರಸ್



ಡಾ॥ ಕೆ. ವಿ. ರಮೇಶ್ ಅವರಿಂದ 'ಕನ್ನಡಿಗ–ಒಂದು ಐತಿಹಾಸಿಕ ವ್ಯಕ್ತಿಚಿತ್ರ' ಉಪನ್ಯಾಸ.
ಜತೆಯಲ್ಲಿರುವವರು : ಶ್ರೀ ಕೆ. ಅಭಿಶಂಕರ್ ಮತ್ತು ಡಾ॥ ಎಂ. ಚಿದಾನಂದಮೂರ್ತಿ



ಡಾ॥ ಸೂರ್ಯನಾಥ ಯು. ಕಾಮತ್ ಅವರಿಂದ ಉಪನ್ಯಾಸ.
ವೇದಿಕೆಯಲ್ಲಿರುವವರು : ಡಾ॥ ಎಸ್. ವಿ. ದೇಶಿಕಾಚಾರ್ ಮತ್ತು ಶ್ರೀ ಸಿ. ವ್ಹಿ. ಮಠದ



ಯಡೂರು ಸುಗ್ಗಿಕಟ್ಟೆ



ಹುಲುಕೋಡು ಸುಗ್ಗಿಬಾಗಿಲು ಕಟ್ಟೆ



ಚೌಡ್ಲು ಸುಗ್ಗಿದೇವರ ಮಂಟಪ



ಮಿಥುನಶಿಲ್ಪಸಹಿತವಾದ ಸುಗ್ಗಿಕಟ್ಟೆ, ಹೇರೂರು,



ಐಗೂರು ಸುಗ್ಗಿಮಂಟಪ



ಉಯ್ಯಾಲೆ ಸ್ತಂಭ, ಭೈರಾಪಟ್ಟಣ, ಚನ್ನಪಟ್ಟಣ ತಾಲ್ಲೂಕು



ಅರಳಗುಪ್ಪೆಯ ಚನ್ನಕೇಶವ ದೇವಾಲಯ : ಜಗತಿ,
ಅಲಂಕಾರಿಕ ಪಟ್ಟಿಕೆ ಮತ್ತು ಗೂಡ ಸಹಿತವಾದ ಕಲಿನ ತೆರೆ



ಅರಳಗುಪ್ಪೆಯ ಚನ್ನಕೇಶವ ದೇವಾಲಯ :



ಅರಳಗುಪ್ಪೆಯ ಚನ್ನಕೇಶವ ದೇವಾಲಯ :
ನವರಂಗದಲ್ಲಿರುವ ಸ್ತಂಭಗಳು



ಅರಳಗುಪ್ಪೆಯ ಚನ್ನಕೇಶವ ದೇವಾಲಯ : ಭಿತ್ತಿಶಿಲ್ಪಗಳು



ಅರಳಗುಪ್ಪೆಯ ಚನ್ನಕೇಶವ ದೇವಾಲಯ : 'ಹೊನ್ನೋಜ'
ಶಿಲ್ಪಿಯ ಹೆಸರುಳ್ಳ ಭಿತ್ತಿಶಿಲ್ಪಗಳು

ಡಾ॥ ಜಿ. ಎಸ್. ದೀಕ್ಷಿತ್

# ಸ್ವಾಗತ ಭಾಷಣ

ಪ್ರೊ॥ ಗೋಕಾಕ್ ಇವರೇ, ಪ್ರೊ॥ ಚಿದಾನಂದಮೂರ್ತಿ ಇವರೇ ಮತ್ತು ಪ್ರೊ॥ ಡಿ. ವಿ. ಅರಸು ಇವರೇ, ಕರ್ನಾಟಕ ಇತಿಹಾಸ ಅಕಾದೆಮಿಯ ಸದಸ್ಯರೆ ಮತ್ತು ಸಭಿಕರೆ,

ಕರ್ನಾಟಕ ಇತಿಹಾಸ ಅಕಾದೆಮಿಯ ಪ್ರಥಮ ವಾರ್ಷಿಕ ಸಮ್ಮೇಳನಕ್ಕೆ ತಮ್ಮೆಲ್ಲರಿಗೂ ಹೃತ್ಪೂರ್ವಕ ಸ್ವಾಗತ. ಸುಮಾರು ಒಂದು ವರ್ಷದ ಹಿಂದೆ ಡಾ॥ ಸೂರ್ಯನಾಥ ಕಾಮತ್‌ರ ನೇತೃತ್ವದಲ್ಲಿ ಇತಿಹಾಸ ಅಧ್ಯಯನದಲ್ಲಿ ಆಸ್ಥೆಯುಳ್ಳ ಕೆಲವರು ಇಂತಹ ಸಂಸ್ಥೆಯೊಂದನ್ನು ಸ್ಥಾಪಿಸಬೇಕೆಂದು ನಿಶ್ಚಯಿಸಿ ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ಪ್ರಾಧ್ಯಾಪಕ ಡಾ॥ ಎಂ. ವಿ. ಶ್ರೀನಿವಾಸ್ ಇವರ ಅಧ್ಯಕ್ಷತೆಯಲ್ಲಿ ಒಂದು-ಕಾರ್ಯಕಾರಿ ಸಮಿತಿಯನ್ನು ಆಯ್ಕೆ ಮಾಡಿದರು. ಡಾ॥ ಸೂರ್ಯನಾಥ ಕಾಮತ್ ಮತ್ತು ಶ್ರೀ ಲಕ್ಷ್ಮಣ್ ತೆಲಗಾವಿಯವರ ನಾಯಕತ್ವದಲ್ಲಿ 'ಇತಿಹಾಸ ದರ್ಶನ' ವೆಂಬ ನಿಯತಕಾಲಿಕವನ್ನು ಪ್ರಕಟಿಸಬೇಕೆಂದು ಮುಂದಿನ ಒಂದು ಕಾರ್ಯಕಾರಿ ಸಮಿತಿ ಸಭೆಯಲ್ಲಿ ನಿರ್ಣಯಿಸಲಾಯಿತು. ಸಾರ್ವಜನಿಕರಲ್ಲಿ ಇತಿಹಾಸದಲ್ಲಿ ಆಸಕ್ತಿ ಬೆಳಸುವ ಉದ್ದೇಶದಿಂದ ಅಕಾದೆಮಿಯು ಬೆಂಗಳೂರಿನ ವಿವಿಧ ಭಾಗಗಳಲ್ಲಿ ಉಪನ್ಯಾಸಗಳನ್ನು ಏರ್ಪಡಿಸಿತು. ನವೆಂಬರ್ ೮೬ರಲ್ಲಿ ಅಕಾದೆಮಿಯ ನಿಬಂಧನೆಯ ಕರಡನ್ನು ಅಂಗೀಕರಿಸಲಾಯಿತು ಮತ್ತು ಹೊಸ ಕಾರ್ಯಕಾರಿ ಸಮಿತಿಯನ್ನು ಆಯ್ಕೆ ಮಾಡಲಾಯಿತು. ೧೯೮೬ರ ಡಿಸೆಂಬರ್ ೧೪ರಂದು ಸಚಿವರಾದ ಪ್ರೊ॥ ಎ. ಲಕ್ಷ್ಮೀಸಾಗರ್ ಇವರು ಅಕಾದೆಮಿಯ ಔಪಚಾರಿಕ ಉದ್ಘಾಟನೆಯನ್ನು ನೆರವೇರಿಸಿದರು. ಅದೇ ಸಭೆಯಲ್ಲಿ ಡಾ॥ ಎಂ. ಚಿದಾನಂದಮೂರ್ತಿಯವರು 'ಇತಿಹಾಸ ದರ್ಶನ' ನಿಯತಕಾಲಿಕೆಯ ಪ್ರಥಮ ಸಂಚಿಕೆಯನ್ನು ಬಿಡುಗಡೆ ಮಾಡಿದರು.

ಇದುವರೆಗೂ ಸುಮಾರು ೨೦೦ ಜನರು ಅಕಾದೆಮಿಗೆ ಸದಸ್ಯರಾಗಿರುವುದು ನಮಗೆ ಹೆಮ್ಮೆಯ ವಿಷಯ, ಸಾಧ್ಯವಿದ್ದಷ್ಟು ಕಾಲೇಜು ಹಾಗೂ ಶಾಲೆಗಳ ಶಿಕ್ಷಕರನ್ನು ಸದಸ್ಯರನ್ನಾಗಿ ಮಾಡಿ, ಅವರ ಮೂಲಕ ಮತ್ತು ಅವರ ವಿದ್ಯಾರ್ಥಿಗಳ ಮೂಲಕ ಇತಿಹಾಸ ಸ್ಮಾರಕಗಳು, ಶಾಸನಗಳು ಹಾಗೂ ಐತಿಹಾಸಿಕ ಕಾಗದ ಪತ್ರಗಳ ಅನ್ವೇಷಣೆ, ಸಂರಕ್ಷಣೆ ಮತ್ತು ಸಂಗ್ರಹಗಳನ್ನು ಮಾಡಬೇಕೆಂಬುದು ಅಕಾದೆಮಿಯ ಉದ್ದೇಶ. ಪುರಾತತ್ವ ಇಲಾಖೆ, ಪತ್ರಾಗಾರ ಇಲಾಖೆ ಮತ್ತು ವಿಶ್ವವಿದ್ಯಾನಿಲಯಗಳು ಈ ಕೆಲಸಗಳನ್ನು ಮಾಡುತ್ತಿವೆ. ಅವುಗಳಿಗೆ ನಮ್ಮ ಸದಸ್ಯರು ತಮ್ಮ ಸಹಕಾರವನ್ನು ನೀಡಿರುತ್ತಾರೆ.

ಇನ್ನು ಇವತ್ತಿನ ನಮ್ಮ ಅತಿಥಿಗಳ ಬಗೆಗೆ ಒಂದೆರಡು ಮಾತು. ಸಮ್ಮೇಳನದ ಉದ್ಘಾಟಕರಾದ ಪ್ರೊ॥ ಗೋಕಾಕರು ಅಲಂಕರಿಸಿದ ಹುದ್ದೆಗಳು, ಅವರಿಗೆ ದೊರೆತ ಪುರಸ್ಕಾರಗಳು, ಅವರು ಸದಸ್ಯರಾಗಿರುವ

ಸಮಿತಿಗಳ ಮತ್ತು ಅವರ ಗ್ರಂಥಗಳ ಪಟ್ಟಿ ಬಹಳ ದೊಡ್ಡದಾಗಿರುವುದು ತಮ್ಮೆಲ್ಲರಿಗೂ ತಿಳಿದ ವಿಷಯ. ಮತ್ತು ಎಲ್ಲಾ ಕನ್ನಡಿಗರಿಗೂ ಹೆಮ್ಮೆಯ ವಿಷಯ. ನಮ್ಮ ಸಂಸ್ಥೆಯಂತಹ ಹೊಸ ಸಂಸ್ಥೆ ಯಾವ ರೀತಿ ಕೆಲಸ ಮಾಡಬಹುದೆಂದು ಮಾರ್ಗದರ್ಶನ ಮಾಡಲು ಅವರು ಅಪಾರ ಅನುಭವದಿಂದ ಸಮರ್ಥರಾಗಿದ್ದಾರೆ.

ಪ್ರೊ॥ ಚಿದಾನಂದಮೂರ್ತಿಯವರು ಅಕಾದೆಮಿಯ ಕೆಲಸದಲ್ಲಿ ಈಗಾಗಲೇ ನೆರವಾಗಿ ನಮ್ಮವರೇ ಆಗಿದ್ದಾರೆ. ಅವರು ದ್ರಾವಿಡ ಭಾಷಾಶಾಸ್ತ್ರ ಮತ್ತು ಇತಿಹಾಸ ಸಂಶೋಧನೆ—ಇವರೆಡರಲ್ಲಿಯೂ ಗಣ್ಯರೆಂದು ಭಾರತದಲ್ಲಿಯೂ ಹೊರಗೂ ಹೆಸರು ಮಾಡಿದ್ದಾರೆ. ಅವರು ಅಕಾದೆಮಿಯ ಪ್ರಥಮ ವಾರ್ಷಿಕ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ಸ್ವೀಕರಿಸಿ ಅದಕ್ಕೆ ಒಂದು ಘನತೆಯನ್ನು ತಂದುಕೊಟ್ಟಿದ್ದಾರೆ. ಇತ್ತೀಚೆಗೆ ಒಂದು ಪಾದ ಯಾತ್ರೆ ಮಾಡಿ, ಇಂತಹ ಪಾದಯಾತ್ರೆಗಳಿಂದ ಇತಿಹಾಸ ಸಂಶೋಧನೆಗೆ ಹೇಗೆ ಸಹಾಯವಾಗುತ್ತದೆ ಮತ್ತು ಇತಿಹಾಸದ ಬಗ್ಗೆ ಜನಸಾಮಾನ್ಯರಲ್ಲಿ ಆಸ್ಥೆಯನ್ನು ಹೇಗೆ ಹುಟ್ಟಿಸಬಹುದೆನ್ನುವುದನ್ನು ತೋರಿಸಿಕೊಟ್ಟಿದ್ದಾರೆ. ಇನ್ನೂ ಅನೇಕ ಪಾಠಗಳನ್ನು ಅವರಿಂದ ಕಲಿಯುವ ಸುಯೋಗವು ನಮ್ಮ ಸದಸ್ಯರಿಗೆ ಈಗ ಲಭ್ಯವಾಗಿದೆ.

ನಮ್ಮ ನಿಯತಕಾಲಿಕ 'ಇತಿಹಾಸ ದರ್ಶನ'ದ ಎರಡನೆಯ ಸಂಚಿಕೆಯನ್ನು ಪ್ರೊ॥ ಡಿ. ವಿ. ಅರಸು ಇವರು ಇವತ್ತು ಬಿಡುಗಡೆ ಮಾಡಲು ದಯವಿಟ್ಟು ಒಪ್ಪಿಕೊಂಡಿದ್ದಾರೆ. ಅವರು ಮೈಸೂರು ವಿಶ್ವವಿದ್ಯಾನಿಲಯ ದಲ್ಲಿ ಅಧ್ಯಾಪಕರಾಗಿ, ರಿಜಿಸ್ಟ್ರಾರರಾಗಿ, ವೈಸ್‌ಛಾನ್ಸಲರಾಗಿ ಒಳ್ಳೆಯ ಖ್ಯಾತಿಯನ್ನು ಗಳಿಸಿ, ಈಗ ಪದವಿ ಪೂರ್ವ ಶಿಕ್ಷಣ ಮಂಡಳಿಯ ನಿರ್ದೇಶಕರಾಗಿ ಮಂಡಳಿಯನ್ನು ಸಮರ್ಥವಾಗಿ ನಿರ್ವಹಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ನಮ್ಮ ಸದಸ್ಯರಲ್ಲಿ ಪದವಿಪೂರ್ವ ಕಾಲೇಜುಗಳ ಇತಿಹಾಸ ಶಿಕ್ಷಕರು ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಅವರ ಅನುಕೂಲಕ್ಕಾಗಿ ಈ ಸಮ್ಮೇಳನವನ್ನು ಅವರ ಪರೀಕ್ಷೆಯ ಕೆಲಸ ಮುಗಿಯುವ ಹೊತ್ತಿಗೆ ಸರಿಯಾಗಿ ಇಟ್ಟಿದ್ದೇವೆ. ಪದವಿಪೂರ್ವ ಶಿಕ್ಷಣದಲ್ಲಿಯ ಇತಿಹಾಸ ವಿಷಯದ ಪಠ್ಯಕ್ರಮವನ್ನು ಕುರಿತು ಒಂದು ವಿಚಾರಗೋಷ್ಠಿಯನ್ನು ನಮ್ಮ ಅಕಾದೆಮಿಯು ಯೋಜಿಸಬೇಕೆಂದು ಪ್ರೊ॥ ಅರಸು ಇವರು ಸಲಹೆ ಮಾಡಿದ್ದಾರೆ. ಇವತ್ತಲ್ಲಾ ನಾಳೆ ಈ ವಿಚಾರಗೋಷ್ಠಿಯನ್ನು ನಾವು ಏರ್ಪಡಿಸುತ್ತೇವೆ. ಈ ರೀತಿಯಾಗಿ ಇತಿಹಾಸ ಅಧ್ಯಯನ ದಲ್ಲಿ ಮತ್ತು ನಮ್ಮ ಅಕಾದೆಮಿಯಲ್ಲಿ ಆಸ್ಥೆಯುಳ್ಳ ಪ್ರೊ॥ ಅರಸು ಅವರು ಅಕಾದೆಮಿಯ ನಿಯತಕಾಲಿಕ 'ಇತಿಹಾಸ ದರ್ಶನ' ಎರಡನೆಯ ಸಂಚಿಕೆಯನ್ನು ಬಿಡುಗಡೆ ಮಾಡಲು ಒಪ್ಪಿರುವುದು ನಮ್ಮ ಸುಕೃತ.

ಸಮ್ಮೇಳನಕ್ಕೆ ಬೊಂಬಾಯಿ, ಬೀದರ್‌ಗಳಂತಹ ದೂರ ದೂರ ಪಟ್ಟಣಗಳಿಂದ ಸದಸ್ಯರು ಬಂದು ಕರ್ನಾಟಕ ಇತಿಹಾಸ ಅಕಾದೆಮಿಯನ್ನು ಸ್ಥಾಪಿಸಲು ನಾವು ಮಾಡಿದ ಪ್ರಯತ್ನ ಅವಶ್ಯವಾಗಿತ್ತೆಂದು ತೋರಿಸಿ ಕೊಟ್ಟಿದ್ದಕ್ಕೆ ಅವರಿಗೂ ಇವತ್ತಿನ ಸಭೆಗೆ ಬಹುಸಂಖ್ಯೆಯಲ್ಲಿ ಬಂದ ಸಭಿಕರಿಗೂ ವಂದನೆಗಳು. ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಆಜೀವ ಸದಸ್ಯರಾಗಿ ಈ ಸಂಸ್ಥೆ ಹೆಚ್ಚಿನ ಸೇವೆಯನ್ನು ಶಾಶ್ವತವಾಗಿ ನೆರವೇರಿಸಲು ಸಹಾಯ ಮಾಡಿ ಎಂದು ಸಾರ್ವಜನಿಕರನ್ನು ಕೇಳಿಕೊಂಡು ಇನ್ನೊಮ್ಮೆ ನಿಮ್ಮೆಲ್ಲರಿಗೂ ಸ್ವಾಗತವನ್ನು ಬಯಸಿ ನನ್ನ ಮಾತನ್ನು ಮುಗಿಸುತ್ತೇನೆ.

○

ಡಾ॥ ಎಂ. ಚಿದಾನಂದಮೂರ್ತಿ

# ಸಮ್ಮೇಳನದ ಅಧ್ಯಕ್ಷರ ಭಾಷಣ*

೧. ಇತಿಹಾಸದ ಅಧ್ಯಯದಲ್ಲಿ ಮೂಲಭೂತವಾಗಿ ಆಗಬೇಕಾದ್ದು–ಸಾಮಗ್ರಿ ಸಂಗ್ರಹಣೆ. ಈ ದಿಸೆಯಲ್ಲಿ ಹಳೆಯ ಮೈಸೂರಿನ ಶಾಸನಗಳು, 'ಎಪಿಗ್ರಾಫಿಯ ಕರ್ನಾಟಿಕ' ಹೆಸರಿನ ಸಂಪುಟಗಳಲ್ಲಿ ಪ್ರಕಟವಾಗಿ ಈಗ ಪುನರ್ಮುದ್ರಣಗೊಂಡು ಬೆಲೆಗೂ ದೊರಕುತ್ತಿವೆ. ಉತ್ತರಕರ್ನಾಟಕದ ಶಾಸನಗಳು ಬೇರೆ ಬೇರೆ ಕಡೆ ಚೆದರಿದಂತೆ ಪ್ರಕಟವಾಗಿವೆ. ಕೆಲವು ಕಡೆ ಸರಿಯಾಗಿ ಸಮೀಕ್ಷೆಯೂ ನಡೆದಿಲ್ಲ. ಸಮೀಕ್ಷೆ ನಡೆದು ಆ ಎಲ್ಲ ಶಾಸನಗಳು ಎಪಿಗ್ರಾಫಿಯ ಕರ್ನಾಟಿಕಾ ಮಾದರಿಯಲ್ಲಿ ಪ್ರಕಟಗೊಳ್ಳುವುದು ತೀರ ಅಗತ್ಯ ವಾಗಿದೆ. ಕರ್ನಾಟಕ ಸರ್ಕಾರವು ಅಂತಹ ಯೋಜನೆಯನ್ನು ಕೈಗೆತ್ತಿಕೊಳ್ಳಬೇಕು. ಯುವ ಸಂಶೋಧಕರು ಕಡತ, ಕಾಗದ ಪತ್ರಗಳಂತಹ ದಾಖಲೆಗಳನ್ನು ಸಂಗ್ರಹಿಸುವ ಮನಸ್ಸು ಮಾಡಬೇಕು. ಕರ್ನಾಟಕ ರಾಜ್ಯ ಪತ್ರಾಗಾರದ ಚಟುವಟಿಕೆಗಳು ತೀವ್ರಗೊಳ್ಳುವುದು ಅಗತ್ಯವಾಗಿದೆ.

೨. ಕರ್ನಾಟಕದ ಚರಿತ್ರೆಯನ್ನು ಬರೆಯುವವರು ಶಾಸನ, ತಾಮ್ರಪಟ, ಕಾಗದದ ದಾಖಲೆಗಳಂತೆಯೇ, ಹಸ್ತಪ್ರತಿಗಳ ಲಿಪಿಕಾರರು ಹೇಳಿಕೊಂಡಿರುವ ಎಷ್ಟೋ ಅಮೂಲ್ಯ ವಿಷಯಗಳತ್ತ ಗಮನ ಕೊಡುವುದು ಅಗತ್ಯ. ಅನೇಕ ಹಸ್ತಪ್ರತಿಗಳ ಲಿಪಿಕಾರರು ಸ್ತ್ರೀಯರು. ಎಷ್ಟೋ ಪುರುಷರು ತಮ್ಮ ಹೆಣ್ಣು ಮಕ್ಕಳಿಗಾಗಿ ಹಸ್ತಪ್ರತಿಗಳನ್ನು ಬರೆಸಿದ್ದಾರೆ. ಪ್ರಾಚೀನ ಕರ್ನಾಟಕವು ಸ್ತ್ರೀ ವಿದ್ಯಾಭ್ಯಾಸದ ಕಡೆ ಗಮನವನ್ನು ಕೊಟ್ಟಿತ್ತೆಂಬುದಕ್ಕೆ ಇವು ಸಾಕ್ಷಿ.

೩. ಕನ್ನಡಿಗರ ಬಹುಮುಖ ಜೀವನವನ್ನು ಹಿಂದಿನ ಸಾಹಿತ್ಯವು ತನ್ನದೇ ಆದ ರೀತಿಯಲ್ಲಿ ಹಿಡಿದಿಟ್ಟಿದೆ. ಸಂಗೀತ, ನರ್ತನ, ಚಿತ್ರ ಮೊದಲಾದ ಲಲಿತಕಲೆಗಳು, ಬೇರೆ ಬೇರೆ ವರ್ಗದ ಜನರ ಬದುಕು, ನಂಬಿಕೆಗಳು, ಎಷ್ಟೋ ರಾಜಕೀಯ ವಿವರಗಳು ಸಾಹಿತ್ಯದಲ್ಲಿ ಬಂದಿವೆ. ಐತಿಹಾಸಿಕ ಕಾವ್ಯಗಳೇ ಹುಟ್ಟಿವೆ. ಅವನ್ನೆಲ್ಲ ಬಳಸಿಕೊಳ್ಳುವುದು ಅಗತ್ಯ. ಜನ್ನನಲ್ಲಿ "ನಿನಗಾ ಧರ್ಮದ ಪೋದ ಪೋಂಬದು ನರ್ಮದೆಯಿಂ ಗೆಂಟು" ಎಂಬ ಮಾತು ಬರುತ್ತದೆ. (ನಿನಗೆ ಧರ್ಮ ಮಾರ್ಗವೆಂಬುದೇ ನರ್ಮದೆಗಿಂತ ದೂರ). ನರ್ಮದಾ ನದಿಯು ಏಳನೇ ಶತಮಾನದಿಂದ ಮುಂದಿನ ಆರುನೂರು ವರ್ಷ ಕನ್ನಡಿಗ ಚಕ್ರವರ್ತಿಗಳ ಸಾಮ್ರಾಜ್ಯಗಳ ಮೇರೆಯಾಗಿತ್ತು. ಅಂದಿನ ಕನ್ನಡಿಗರಿಗೆ ತಮ್ಮ ಸಾಮ್ರಾಜ್ಯದ ವಿಸ್ತಾರದ ಅರಿವಿತ್ತು. ಕನ್ನಡ ಭಾಷೆ ಗೋದಾವರಿಯವರೆಗೆ ಹಬ್ಬಿತ್ತು ಎಂದು ಕವಿರಾಜಮಾರ್ಗದಲ್ಲಿ ಹೇಳಿದೆ. ಗೋದಾವರಿ, ನರ್ಮದಾ ನದಿಗಳ ಪ್ರಾಂತದಲ್ಲಿ ಶಾಸನ, ಹಸ್ತಪ್ರತಿ, ಕನ್ನಡ ಸ್ಥಳನಾಮಗಳು, ಕನ್ನಡ ಮಾತನಾಡುವ ಜನ, ಜಾನಪದ ಈ ದೃಷ್ಟಿಗಳಿಂದ ಸಂಶೋಧನೆ ಆಗಬೇಕಾಗಿದೆ.

* ಸಾರಾಂಶ

೪. ಇತಿಹಾಸ ಸಾಮಗ್ರಿ ಸಂಗ್ರಹಣೆ ನಡೆದಷ್ಟು, ಅದನ್ನು ಬಳಸಿಕೊಂಡು ಮಾಡಬೇಕಾದ ವ್ಯಾಖ್ಯಾನ, ವಿಮರ್ಶೆ, ಪುನರ್ ರಚನೆಗಳ ಕಾರ್ಯ ನಡೆದಿಲ್ಲ. ವಿದ್ವಾಂಸರೊಬ್ಬರು ಉದ್ಗಾರ ತೆಗೆದಂತೆ, "ನಾವು ಇಟ್ಟಿಗೆ ತಯಾರು ಮಾಡುವವರಾಗಿದ್ದೇವೆಯೇ ಹೊರತು ವಾಸ್ತುಶಿಲ್ಪಿಗಳಂತೆ ಕಟ್ಟಡ ನಿರ್ಮಾತರಾಗಿಲ್ಲ." ರಾಜರ ಬಗ್ಗೆ, ಆಡಳಿತದ ಬಗ್ಗೆ, ಕಲೆಗಳ ಬಗ್ಗೆ, ಆಂದೋಲನಗಳ ಬಗ್ಗೆ, ಇತರ ಹತ್ತಾರು ವಿಷಯಗಳ ಬಗ್ಗೆ ಚರ್ಚೆಗಳಾಗಿವೆ, ಬಿಡಿ ಲೇಖನಗಳು ಬಂದಿವೆ, ಪುಸ್ತಿಕೆಗಳು ಬಂದಿವೆ. ಕರ್ನಾಟಕದ ಸಮಗ್ರ ಚರಿತ್ರೆಯನ್ನು ಅದರ ಆಳ ಅಗಲಗಳಲ್ಲಿ ಕಟ್ಟಿಕೊಡುವ ಕೃತಿ ಇನ್ನೂ ಬಂದಿಲ್ಲ. ಡಾ॥ ಪಿ. ಬಿ. ದೇಸಾಯಿ, ಡಾ॥ ಗೋಪಾಲ್, ಡಾ॥ ರಿತ್ತಿಯವರು ಬರೆದ 'ಎ ಹಿಸ್ಟರಿ ಆಫ್ ಕರ್ನಾಟಕ', ಕರ್ನಾಟಕ ಸರ್ಕಾರದ 'ಕರ್ನಾಟಕ ಪರಂಪರೆ ೧, ೨' ಇವೆಲ್ಲ ಒಳ್ಳೆಯ ಪ್ರಯತ್ನಗಳು ನಿಜ. ಕರ್ನಾಟಕ ಸಂಸ್ಕೃತಿಯನ್ನು ಅದರ ಸಮಗ್ರತೆಯನ್ನು ನಿರೀಕ್ಷಿಸುವವರಿಗೆ ಅವು ತೃಪ್ತಿ ಕೊಡುತ್ತವೆ ಎನ್ನಲಾರೆ. ನಾವಿನ್ನು ಬಿಡಿ ಬಿಡಿ ಅಧ್ಯಯನಗಳನ್ನೇ ಸಮರ್ಪಕವಾಗಿ ಪೂರೈಸಿಲ್ಲವೆನ್ನುವ ಮಾತು ನಿಜ. ಪ್ರತ್ಯೇಕ ರಾಜಮನೆತನಗಳು, ಚಿಕ್ಕ ಚಿಕ್ಕ ರಾಜಮನೆತನಗಳು, ಸಾಂಸ್ಕೃತಿಕ ಕೇಂದ್ರಗಳು ಇವುಗಳ ವರ್ಣನಾತ್ಮಕ ಸಮೀಕ್ಷೆಗಳು ನಡೆದಿಲ್ಲ. ಕರ್ನಾಟಕದ ಚರಿತ್ರೆಯೇನೋ ಸಂಶೋಧಕರಿಗೆ ಸ್ವರ್ಗ. ಕೈಯಿಟ್ಟಲ್ಲಿ ಚಿನ್ನ ಸಿಗುತ್ತದೆ. ಕ್ಷೇತ್ರಕಾರ್ಯವನ್ನು ಮಾಡುವವರಿಗಂತೂ ನಿರಾಸೆ ಎಂಬುದಿಲ್ಲ.

೫. ಕ್ರಮ–ವ್ಯವಸ್ಥಿತ ಕ್ರಮಕ್ಕೆ ನಾವು ಸಿದ್ಧರಾಗುವುದೊಂದೇ ಇತಿಹಾಸ ಸಂಶೋಧಕರಾಗಲು ಏಕೈಕ ಮಾರ್ಗ. ಇತಿಹಾಸದ ಮೇಲಿನ ಪ್ರೀತಿ ನಮ್ಮ ಕಾರ್ಯದಲ್ಲಿ ಉತ್ಸಾಹವನ್ನು ತುಂಬಿದರೆ ಕರ್ನಾಟಕದ ಮೇಲಿನ ಪ್ರೀತಿ ಅದರಲ್ಲಿ ಶ್ರದ್ಧೆಯನ್ನು ಮೂಡಿಸುತ್ತದೆ. ಸಂಶೋಧನೆ ಎನ್ನುವುದೊಂದು ಶ್ರೇಷ್ಠ ಅನುಭವ.

೬. ಕನ್ನಡಿಗರಲ್ಲಿ ತಮ್ಮ ನಾಡು, ನುಡಿಗಳ ಬಗ್ಗೆ ಇರುವ ನಿರಭಿಮಾನವನ್ನು ಹೋಗಲಾಡಿಸಲು ತಮ್ಮ ಇತಿಹಾಸದ ಬಗ್ಗೆ ಅರಿವನ್ನು ಮೂಡಿಸುವುದೊಂದೇ ಮಾರ್ಗ. ಪುಲಿಕೇಶಿ, ವಿನಯಾದಿತ್ಯ, ನೃಪತುಂಗ, ಮೂರನೆಯ ಕೃಷ್ಣ, ಆರನೆಯ ವಿಕ್ರಮಾದಿತ್ಯ, ವಿಷ್ಣುವರ್ಧನ, ವೀರಬಲ್ಲಾಳ, ಕೃಷ್ಣದೇವರಾಯರಂತಹ ದೊರೆಗಳ, ಅತ್ತಿಮಬ್ಬೆ, ಬಸವೇಶ್ವರ, ಪುರಂದರದಾಸರಂತಹ ಧಾರ್ಮಿಕ ವ್ಯಕ್ತಿಗಳ, ಕವಿಗಳ ಕಲಾವಿದರ ಬಗ್ಗೆ ಹೆಚ್ಚು ಹೆಚ್ಚು ಜನಪ್ರಿಯ ಬರಹಗಳು ಬರಬೇಕು. ಇತಿಹಾಸ ಜನರನ್ನು ಉತ್ತೇಜಿಸುತ್ತದೆ. ತಮ್ಮ ಉಜ್ವಲ ಪರಂಪರೆಯನ್ನು ಉಳಿಸಿಕೊಳ್ಳುವುದರ ಜೊತೆ ಮುಂದಿನ ಸುಖಮಯ ಭವಿಷ್ಯದತ್ತ ಉತ್ಸಾಹದಿಂದ ಹೆಜ್ಜೆ ಹಾಕಲು ಸಹಾಯ ಮಾಡುತ್ತದೆ. ಪುಣ್ಯಭೂಮಿ ಕರ್ನಾಟಕ ತನ್ನ ಕಳೆದ ನಾಲ್ಕುನೂರು ವರ್ಷಗಳಲ್ಲಿ ಬಹುಪಾಲು ನೆಲಗಳನ್ನು ಕಳೆದುಕೊಂಡಿದೆ. ಈ ಐತಿಹಾಸಿಕ ಕಟುಸತ್ಯ ಇಂದಿನ ವಾಸ್ತವಗಳಿಗೆ ಕಣ್ಣು ತೆರೆಸಬೇಕು. ಇಂದಿನ ಸಮಕಾಲೀನ ಮುಂದಿನ ಚರಿತ್ರೆ. ಬೆಂಗಳೂರಿನಂತಹ ನಗರ ಪ್ರದೇಶಗಳಿಗೆ ಮಿತಿಮೀರಿದ ಅನ್ಯ ಭಾಷೀಯರ ವಲಸೆ ನಡೆದು ಕನ್ನಡಿಗ ದಿಕ್ಕು ತೋಚದಂತಾಗಿದ್ದಾನೆ. ಕರ್ನಾಟಕದ ವ್ಯಾಪಾರ ಉತ್ತರದ ವ್ಯಾಪಾರಿಗಳ ಕೈಗೆ ಹೋಗಿದೆ. ಪ್ರಬಲ ಮಾಧ್ಯಮಗಳ ಮೂಲಕ ಹಿಂದಿ, ಶಿಕ್ಷಣದ ಮೂಲಕ ಇಂಗ್ಲೀಷ್ ಕನ್ನಡವನ್ನು ಮೂಲೆಗುಂಪಾಗಿಸಿವೆ. ಈ ಹಿನ್ನೆಲೆಯಲ್ಲಿ ಮುಂದಿನ ಶತಮಾನದ ಕನ್ನಡಿಗನ ಭವಿಷ್ಯವೇನು ? ಅಂದಿನ ಚರಿತ್ರಕಾರ ಇಂದು ಕರ್ನಾಟಕದ ಮೇಲೆ ನಡೆಯುತ್ತಿರುವ ಬಗೆ ಬಗೆಯ ಧಾಳಿ, ಆಕ್ರಮಣಗಳ ಬಗ್ಗೆ ಏನು ಬರೆಯುತ್ತಾನೆ ? ಊಹಿಸಿಕೊಳ್ಳಬಹುದು. ಚರಿತ್ರೆಯಿಂದ ನಾವು ಪಾಠ ಕಲಿಯುವುದು ಸಾಕಷ್ಟಿದೆ.

೭. ಕರ್ನಾಟಕವನ್ನು ಮುಸುಕಿರುವ ಮಬ್ಬನ್ನು ಹೊಡೆದೋಡಿಸುವಲ್ಲಿ ಇತಿಹಾಸಕಾರರ ಪ್ರಮುಖ ಪಾತ್ರವಿದೆ. ಕನ್ನಡಿಗರ ಸ್ವಸ್ವರೂಪ ಜ್ಞಾನೋದಯ ಕಾರ್ಯದಲ್ಲಿ ಇತಿಹಾಸಕಾರರು ಶ್ರೀ ಕೃಷ್ಣ ಪರಮಾತ್ಮರಾಗಬೇಕು.

ಕೆ. ಜಗನ್ನಾಥ ಶಾಸ್ತ್ರಿ

# ಶ್ರೀಕ್ಷೇತ್ರ ಹೊಂಬುಜದ ಶಾಸನಗಳು-ಒಂದು ಅಧ್ಯಯನ

ಹೊಂಬುಜ—ಒಂದು ಚಿಕ್ಕ ಊರು. ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನಲ್ಲಿದೆ. ಇದು ಜೈನ ಧರ್ಮೀಯರ ದಿಗಂಬರ ಪಂಥದ ಒಂದು ಅತಿಶಯ ಕ್ಷೇತ್ರ. ಇಲ್ಲಿ ಒಟ್ಟು ಇಪ್ಪತ್ತೆಂಟು ಶಿಲಾ ಶಾಸನಗಳಿವೆ. ಕ್ರಿ. ಶ. ೮೦೦ ರಿಂದ ಕ್ರಿ. ಶ. ೧೫೩೦ ರವರೆಗೆ ಇವುಗಳ ಹರವು ಇದೆ.

**ಶಾಸನಗಳ ವಿವರ :** ಪಂಚ ಬಸದಿಯ ಆವರಣದಲ್ಲಿ ಒಟ್ಟು ಹನ್ನೊಂದು ಶಾಸನಗಳಿವೆ. ಈ ಪ್ರದೇಶ ಸರಕಾರದ ಮೇಲ್ವಿಚಾರಣೆಗೆ ಒಳಪಟ್ಟಿದೆ. ಇಲ್ಲಿರುವ ಶಾಸನಗಳ ಹರವು ಕ್ರಿ. ಶ. ೯೫೦ ರಿಂದ ಕ್ರಿ.ಶ. ೧೨೯೬. ಪದ್ಮಾವತಿ ದೇವಾಲಯದ ಪ್ರಾಕಾರದಲ್ಲಿ ಒಟ್ಟು ಹತ್ತು ಶಾಸನಗಳಿದ್ದವು. ಈ ಪ್ರದೇಶವು ಜೈನರ ಶ್ರೀಮಠದ ಆಡಳಿತಕ್ಕೆ ಒಳಪಟ್ಟಿದ್ದು ಈಗ ಪದ್ಮಾವತಿ ದೇವಾಲಯವನ್ನು ಹೊಸದಾಗಿ ಕಟ್ಟಿಸಿದ್ದಾರೆ. ಈ ಹಿಂದೆ ಈ ಆವರಣದಲ್ಲಿದ್ದ ಕೆಲವು ಶಿಲಾ ಶಾಸನಗಳನ್ನು ಬೇರೆ ಕಡೆ ಇಟ್ಟದ್ದಾರೆ. ಕೆಲವನ್ನು ದೇವಾಲಯದ ಪ್ರಾಕಾರದಲ್ಲಿ ಇಟ್ಟಿದ್ದಾರೆ. ಈ ಪ್ರಾಕಾರದಲ್ಲಿದ್ದ ಶಾಸನಗಳ ಹರವು ಕ್ರಿ.ಶ. ೧೦೬೦ರಿಂದ ಕ್ರಿ.ಶ. ೧೫೩೦. ಸೂಳೆಯ ಬಸದಿಯ ಬಳಿ ಈ ಹಿಂದೆ ಎರಡು ಶಾಸನಗಳಿದ್ದುವು. ಒಂದು ಬಸದಿಯ ಮುಂದೆ ಇದ್ದ ಮಾನಸ್ತಂಭದ ಮೇಲೆ, ಮತ್ತೊಂದು ಕಲ್ಲಿನ ಮೇಲೆ. ಈ ಮಾನಸ್ತಂಭವನ್ನು ಈಗ ಶ್ರೀ ಪಾರ್ಶ್ವನಾಥ ಮತ್ತು ಶ್ರೀ ಪದ್ಮಾವತಿ ದೇವಾಲಯಗಳ ಮುಂಭಾಗದಲ್ಲಿ ಸ್ಥಾಪಿಸಲಾಗಿದೆ. ಮತ್ತೊಂದು ಸೂಳೆಯ ಬಸದಿಯ ಮುಂಭಾಗದಲ್ಲಿಯೇ ಇದೆ. ಇವುಗಳ ಹರವು ಕ್ರಿ. ಶ. ೧೦೬೨ ರಿಂದ ಕ್ರಿ. ಶ. ೧೦೬೭. ಚಂದ್ರಪ್ರಭ ಬಸದಿಯ ಹೊರಗೋಡೆಯ ಮೇಲೆ ಒಂದು ಶಾಸನವಿದೆ. ಇದರ ಕಾಲ ಕ್ರಿ. ಶ. ೧೦೬೬. ಊರಿನ ಹತ್ತಿರವೇ ಇರುವ ಗುಡ್ಡದ ಮೇಲೆ ಒಂದು ಬಸದಿ ಇತ್ತು. ಇದನ್ನು 'ಗುಡ್ಡದ ಬಸದಿ' ಎಂದು ಕರೆಯುತ್ತಿದ್ದರು. ಈಗ ಆ ಬಸದಿಯೂ ಇಲ್ಲ; ಶಾಸನವೂ ಇಲ್ಲ. ಕಮಠೇಶ್ವರನ ದೇವಾಲಯದ ಮುಂದೆ ಗೋಡೆಯ ಬದಿಗೆ ನಿಲ್ಲಿಸಿರುವ ಕಲ್ಲಿನ ಮೇಲೆ ಒಂದು ಶಾಸನವಿದೆ. ಇದರ ಕಾಲ ಕ್ರಿ. ಶ. ೧೨೮೮. ಇದೇ ದೇವಾಲಯದ ದ್ವಾರಬಂಧದ ಮೇಲೆ ಒಂದು ಶಾಸನವಿದೆ. ಇದರ ಕಾಲ ಕ್ರಿ. ಶ. ೮೦೦.

ಶಾಸನಗಳ ಸಂಖ್ಯೆ, ಸ್ಥಳ ಮತ್ತು ಅಳತೆ (E. C. – Inscriptions in Shimoga District, Part II ನಲ್ಲಿ ಹೇಳಿರುವಂತೆ) :

| ಕ್ರಮ ಸಂಖ್ಯೆ | ಶಾಸನ ಸಂಖ್ಯೆ | ಸ್ಥಳ | ಅಳತೆ |
|---|---|---|---|
| ೧ | ೩೫ | ಪಂಚ ಬಸದಿ ಅಂಗಳ | ೯' × ೪'.೪" |
| ೨ | ೩೬ | ಪಂಚ ಬಸದಿಯ ತೋರಣ ಬಾಗಿಲ ದಕ್ಷಿಣದ | |

| ಕ್ರ. ಸಂ. | ಶಾ. ಸಂ. | ಸ್ಥಳ | ಅಳತೆ |
| --- | --- | --- | --- |
| | | ಕಡೆ ಕಂಬದಲ್ಲಿ | ೬'.೬" × ೧'.೫" |
| ೩ | ೩೭ | —ಇದೇ— ಉತ್ತರದ ಕಡೆ ಕಂಬದಲ್ಲಿ | ೬'.೬" × ೧'.೫" |
| ೪ | ೩೮ | ಪಂಚ ಬಸದಿ ಅಂಗಳದಲ್ಲಿರುವ ಮಾನಸ್ತಂಭದ ಪೂರ್ವ ಮುಖ | — |
| ೫ | ೩೯ | —ಇದೇ— ದಕ್ಷಿಣ ಮುಖ | — |
| ೬ | ೪೦ | —ಇದೇ— ಪಶ್ಚಿಮ ಮತ್ತು ಉತ್ತರ ಮುಖ | — |
| ೭ | ೪೧ | —ಇದೇ— ಉತ್ತರದ ಕಡೆ ನೆಟ್ಟ ಕಲ್ಲು | ೨' × ೨' |
| ೮ | ೪೨ | —ಇದೇ— ದಕ್ಷಿಣದ ಕಡೆ ನೆಟ್ಟ ಕಲ್ಲು | ೩' × ೧' |
| ೯ | ೪೩ | | |
| ೧೦ | ೪೪ | ಪಾರ್ಶ್ವನಾಥ ಬಸದಿಯ ಪೂರ್ವದ ಕಡೆ ನೆಟ್ಟ ಕಲ್ಲು | ೪'.೬ × ೨'.೬" |
| ೧೧ | ೪೫ | —ಇದೇ— ಬಾಗಿಲಿನ ಪಶ್ಚಿಮ ಕಡೆ ಗೋಡೆಯ ಮೇಲೆ | — |
| ೧೨ | ೪೬ | ಪದ್ಮಾವತಿ ದೇವಾಲಯದ ಪ್ರಾಕಾರದಲ್ಲಿದ್ದ ಶಾಸನ | ೮'.೬" × ೪'.೮" 1 |
| ೧೩ | ೪೭ | —ಇದೇ— ಮುಖಮಂಟಪದ ತೋರಣದ ದಕ್ಷಿಣ ಕಂಬದ ಮೇಲೆ | — 2 |
| ೧೪ | ೪೮ | —ಇದೇ— ಒಳ ಬಾಗಿಲಿನ ಕಲ್ಲು | |
| ೧೫ | ೪೯ | —ಇದೇ— ಪ್ರಾಕಾರದಲ್ಲಿದ್ದ ೧ನೇ ಕಲ್ಲು | ೩'.೬" × ೧'.೩" |
| ೧೬ | ೫೦ | —ಇದೇ— ೨ನೇ " | ೨'.೬" × ೧'.೨" |
| ೧೭ | ೫೧ | —ಇದೇ— ೩ನೇ " | ೩'.೩" × ೯" |
| ೧೯ | ೫೨ | —ಇದೇ— ೪ನೇ " | ೨' × ೬" |
| ೨೦ | ೫೩ | —ಇದೇ— ೫ನೇ " | ೩'.೧೦" × ೨'.೨" |
| ೨೧ | ೫೪ | —ಇದೇ— ೬ನೇ " | ೫" × ೮" |
| ೨೧ | ೫೫ | —ಇದೇ— ಬಲಗೋಡೆಯ ಕಂಬ | — |
| ೨೨ | ೫೬ | —ಇದೇ— ಒಳಗಡೆ ಇರುವ ಕಲ್ಲು | ೨'.೧೦" × ೧'.೧೦" |
| ೨೩ | ೫೭ | ಸೂಳೆಯ ಬಸದಿಯ ಮುಂದಿನ ಮಾನಸ್ತಂಭ[3] | — |
| ೨೪ | ೫೮ | —ಇದೇ— ಎದುರಿಗಿರುವ ಕಲ್ಲು | ೮'.೬" × ೩'.೯" |

1 ಇದು ಈಗ ಸಭಾಂಗಣದ ದಕ್ಷಿಣದ ಗೋಡೆಯ ಬಳಿ ಇದೆ.

2 ಶಾಸನ ಸಂಖ್ಯೆ ೪೭ ರಿಂದ ೫೬ ನವರೆಗಿನ ಶಾಸನದ ಕಲ್ಲುಗಳು ಈ ಸ್ಥಳಗಳಲ್ಲಿ ಇಲ್ಲ. ಪದ್ಮಾವತಿ ದೇವಾಲಯವನ್ನು ಮತ್ತು ಮುಖಮಂಟಪವನ್ನು ಹೊಸದಾಗಿ ಕಟ್ಟಿಸಿದಾಗ ಸ್ಥಳಾಂತರಿಸಲಾಗಿದೆ.

3 ಇದನ್ನು ಈಗ ಸಭಾಂಗಣದ ಬಳಿ ಸ್ಥಾಪಿಸಿದ್ದಾರೆ.

| ಕ್ರಿ. ಸಂ. | ಶಾ. ಸಂ. | ಸ್ಥಳ | ಅಳತೆ |
|---|---|---|---|
| ೨೫ | ೫೯ | ಚಂದ್ರಪ್ರಭ ಬಸದಿಯ ಗೋಡೆಯ ಮೇಲೆ | |
| ೨೬ | ೬೦ | ಗುಡ್ಡದ ಬಸದಿಯ ಹೊರಗೋಡೆಯಮೇಲೆ | ೨'.೬" × ೨'.೫" |
| ೨೭ | ೬೧ | ಕಮಠೇಶ್ವರ ದೇವಾಲಯದ ಮುಂದೆ ಗೋಡೆಗೆ ನಿಲ್ಲಿಸಿರುವ ಕಲ್ಲು | ೨'.೦" × ೦'.೧೧" |
| ೨೮ | ೬೨ | ಇದೇ ದೇವಾಲಯದ ಮುಂಬಾಗಿಲಿನ ದ್ವಾರಬಂಧದ ಮೇಲೆ | — |

**'ಹೊಂಬುಚ' - ಹೆಸರಿನ ಹಿನ್ನೆಲೆ :** ಪ್ರಾಚೀನ ಕಾಲದಿಂದಲೂ ಈ ಪ್ರದೇಶವನ್ನು ಬೇಡರ ನಾಯಕರು ಆಳುತ್ತಿದ್ದರು. ಈಗಿನ 'ಹೊಂಬುಚ' ಎಂಬ ಊರು ಇರುವಲ್ಲಿ ಹಿಂದೆ 'ಕನಕಪುರ' ಎಂಬ ಊರು ಇತ್ತು. ಈಗಿನ ಹೊಂಬುಚ ಮತ್ತು ಬಿಲ್ಲೇಶ್ವರ–ಈ ಎರಡು ಊರುಗಳೂ ಸೇರಿ ಆಗ 'ಕನಕಪುರ' ಎಂಬ ಒಂದೇ ಊರಾಗಿತ್ತು ಎಂದು ಕಾಣುತ್ತದೆ.

ಪದ್ಮನಾಭ ಕವಿ 'ಶ್ರೀ ಪದ್ಮಾವತಿ ಮಹಾತ್ಮೆ ಅಥವಾ ಜಿನದತ್ತರಾಯ ಚರಿತ' ಎಂಬ ಸಾಂಗತ್ಯ ಕಾವ್ಯವನ್ನು ಬರೆದಿದ್ದಾನೆ. ಅದರಲ್ಲಿ, ಈ ಪ್ರದೇಶವನ್ನು ಬೇಡರನಾಯಕ ಆಳುತ್ತಿದ್ದ, ಎಂಬುದಕ್ಕೆ ಒಂದು ಪದ್ಯ ಇದೆ.

ಜಿನದತ್ತರಾಯ ಲಕ್ಕಿಮರದ ಬಳಿ ಇರುತ್ತಾನೆ. ಹೊಸಬನಾದ ಇವನನ್ನು ಕಂಡ ವನಚರರು ಹತ್ತಿರ ಬರುತ್ತಾರೆ. ಆಗ ಜಿನದತ್ತರಾಯ ಹೀಗೆ ಕೇಳುತ್ತಾನೆ :

ವನವ ರಕ್ಷಿಪರಾರು ಗೃಹವೆಲ್ಲಿ ನಿಮಗೆಂದು ।
ಜಿನದತ್ತರಾಯ ಕೇಳಿದನು ॥

ಇದಕ್ಕೆ ವನಚರರ ಉತ್ತರ—

ವನವೀ ಬ್ಯಾಡನಾಯಕನದು ನಮಗೀ ।
ವನದೊಳಗಾವಾಸ ಸ್ವಾಮಿ ॥

ಇದೇ ಕಾವ್ಯದ ಪ್ರಸ್ತಾವನೆಯಲ್ಲಿ ಒಂದು ಶ್ಲೋಕವನ್ನು ಕವಿ ಹೇಳುತ್ತಾನೆ :

ಕಲ್ಯಬ್ದೇ ಶತಪಂಚಕೇ ಪ್ರಭವ ಸಂವತ್ಸರೇ
ಸತ್ತಮೇಸ್ಯಾತ್ತಪಸ್ಯೇ ।
ಸಪ್ತಮ್ಯಾಂ ಕೃಷ್ಣಪಕ್ಷೇ ಪ್ರವರ ಗುರುದಿನೇ
ಕುಂಭಲಗ್ನೇ ಪ್ರಸೀದೇ ।
ಮೂಲಾಭೇ ಸಿದ್ಧಿಯೋಗೇ ಪ್ರಕಟಿತ ವಿಭವೇ
ಸುಪ್ರಶಸ್ತಾಂ ಚಕಾರ ।
ರಾಜಾ ಜೈನೇಂದ್ರದತ್ತಃ ಕನಕಮಯ ಪುರೇ
ಯಕ್ಷದೇವೀಂ ಪ್ರತಿಷ್ಠಾ ॥

ಕಲಿ ವರ್ಷದ ಐದು ನೂರನೆಯ ಪ್ರಭವ ಸಂವತ್ಸರದಲ್ಲಿ ಫಾಲ್ಗುಣ ಕೃಷ್ಣ ಸಪ್ತಮಿ ಗುರುವಾರದ ದಿವಸ ಕುಂಭಲಗ್ನವೂ ಮೂಲಾ ನಕ್ಷತ್ರವೂ ಸಿದ್ಧಿಯೋಗವೂ ಇರುವ ಶುಭ ಮುಹೂರ್ತದಲ್ಲಿ ಜೈನೇಂದ್ರದತ್ತನು ಕನಕಮಯ ಪುರದಲ್ಲಿ ಯಕ್ಷದೇವಿಯನ್ನು (ಪದ್ಮಾವತಿದೇವಿ) ಪ್ರತಿಷ್ಠಾಪಿಸಿದನು.[4]

ಈ ಹೇಳಿಕೆಯಿಂದ ಈಗಿನ ಹೊಂಬುಚ ಆಗ ಕನಕಪುರವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಇನ್ನು 'ಹೊಂಬುಚ' ಶಬ್ದದ ಬಗ್ಗೆ ಒಂದೆರಡು ಮಾತು. ನಾನು ಸಂಗ್ರಹಿಸಿರುವ "ಶ್ರೀ ಭಿಲ್ಲೇಶ್ವರ ಮಹಾತ್ಮೆ" ಎಂಬ ಸಾಂಗತ್ಯ ಕಾವ್ಯದಲ್ಲಿ ಒಂದು ಪದ್ಯ ಹೀಗಿದೆ :

ಕನಕಪುರದ ಅರಸ ಕನಕನಾಯಕ ಧೀರ ।
ಕನಕವನ್ನೇ ದಾನ ನೀಡೆ ।
ಮನ ಮೆಚ್ಚಿ ಪೊಂಬಿಚ್ಚ ಪುರವೆಂದು ಕರೆದರು ।
ವಿನಯದಿ ಪೊಗಳಿ ಪಾಡುತಲಿ ॥

ಈ ಪದ್ಯದಿಂದ ಈ ಪ್ರದೇಶವನ್ನು ಕನಕನಾಯಕ ಎಂಬ ಬೇಡರ ತಲೆಯಾಳು ಆಳುತ್ತಿದ್ದನೆಂದೂ ಅವನು ಬೇಡಿದವರಿಗೆ ಪೊನ್ನನ್ನೇ ಬಿಚ್ಚಿ ಕೊಡುತ್ತಿದ್ದನೆಂದೂ

ಅರ್ಥಿಗಳು ಈ ಊರನ್ನು ಪೊಂಬಿಚ್ಚಪುರ ಎಂದು ಕರೆದರೆಂದೂ ವ್ಯಕ್ತಪಡುತ್ತದೆ. ಅಲ್ಲದೆ ಜಿನದತ್ತರಾಯ ಈ ಪ್ರದೇಶಕ್ಕೆ ಬರುವ ಮೊದಲೇ ಈ ಊರು 'ಪೊಂಬಿಚ್ಚಪುರ' ಎಂದು ಪ್ರಸಿದ್ಧವಾಗಿದ್ದುದು ಕಂಡುಬರುತ್ತದೆ. ಇದು ರಾಜಧಾನಿಯಾದ ಮೇಲೆ 'ಪಟ್ಟಿ ಪೊಂಬುರ್ಚ' 'ಪೊಟ್ಟಿ ಪೊಂಬುಚ್ಚ' ಮುಂತಾದ ಹೆಸರುಗಳಿಂದ ಇದು ಕರೆಯಲ್ಪಟ್ಟಿರಬಹುದೆಂದೂ ತೋರುತ್ತದೆ. ಈ ಹೆಸರೇ ಕಾಲಾಂತರದಲ್ಲಿ ಪೊಂಬಿಚ್ಚ-ಪೊಂಬುಚ್ಚ-ಹೊಂಬುರ್ಚ-ಹೊಂಬುಚ ಆಗಿರಬೇಕು.

'ಶ್ರೀ ಪದ್ಮಾವತಿ ಮಹಾತ್ಮೆ' ಎಂಬ ಗದ್ಯರೂಪದ ಗ್ರಂಥದಲ್ಲಿ (ಪ್ರಕಾಶನ : ಶ್ರೀ ಸಿದ್ಧಾಂತಕೀರ್ತಿ ಗ್ರಂಥ ಮಾಲೆ, ಶ್ರೀ ಹೊಂಬುಜ ಜೈನಮಠ) ಜಿನದತ್ತರಾಯನ ಕಥೆ ಇದೆ. ಜಿನದತ್ತರಾಯ ಆಯಾಸಗೊಂಡು ಆ ಪ್ರದೇಶಕ್ಕೆ ಬಂದಿದ್ದಾನೆ. ಅಲ್ಲಿ ಒಂದು ನೀರಿನ ತಾಣ ಸಿಗುತ್ತದೆ. ಅಲ್ಲಿ ಅವನು ಕುದುರೆಯಿಂದ ಇಳಿದು ದಡದಲ್ಲಿದ್ದ ಲಕ್ಕಿಗಿಡದಲ್ಲಿ, ತನ್ನೊಡನೆ ತಂದಿದ್ದ ಪದ್ಮಾವತಿ ದೇವಿಯ ಶ್ರೀ ಮೂರ್ತಿಯನ್ನು ಇಟ್ಟು, ಕುದುರೆಗೆ ನೀರು ಕುಡಿಸಿ ಕಟ್ಟಿ ತಾನೂ ನೀರು ಕುಡಿದು ಮರದ ಬುಡದಲ್ಲಿ ಮಲಗಿ ವಿಶ್ರಾಂತಿ ಪಡೆಯುತ್ತಾನೆ. ಕನಸಿನಲ್ಲಿ ದೇವಿ ಕಾಣಿಸಿಕೊಂಡು "ಮುಂದೆ ಈ ಕಾಡು ಸುಂದರ ನಾಡಾಗುತ್ತದೆ. ನಿನ್ನ ಕೀರ್ತಿಯನ್ನು ನಾಲ್ದೆಸೆಯಲ್ಲಿ ನೆಲೆಸಿಲ್ಲಿಸುವೆ. ಇದು ನನ್ನ ಪರುಷಮೂರ್ತಿ. ಇದಕ್ಕೆ ಕಬ್ಬಿಣ ತಾಗಿಸಿದರೆ ಕನಕವಾಗುವುದು" ಎಂದು ಹೇಳುತ್ತಾಳೆ. ಎಚ್ಚೆತ್ತ ಜಿನದತ್ತ ಕುದುರೆಯ ಕಡಿವಾಣವನ್ನು ಆ ಮೂರ್ತಿಗೆ ತಾಗಿಸುತ್ತಾನೆ. ಆಗ ಅದು 'ಪೊನ್ನ ಸುರ್ಚಿತು' ಅಂದರೆ ಬಂಗಾರವನ್ನು ಕೊಟ್ಟಿತು. ಈ 'ಪೊನ್ನಸುರ್ಚಿತು' ಎಂಬ ಪದವೇ ಮುಂದೆ ಪೊಂಬುಜ-ಹೊಂಬುಜ ಆಯಿತು. ಇದು ಆ ಗ್ರಂಥದಲ್ಲಿ 'ಹೊಂಬುಜ' ಎಂಬ ಹೆಸರು ಆ ಊರಿಗೆ ಬಂದುದಕ್ಕೆ ಹೇಳಿರುವ ವಿವರಣೆ.

'ಪೊನ್ನಸುರ್ಚಿತು' ಎಂಬ ಪದ 'ಪೊಂಬುಜ' ಆಯಿತು ಎಂಬುದನ್ನು ಒಪ್ಪಿಕೊಳ್ಳುವುದು ಸರಿಯೆನಿಸಲಾರದು. ಆದರೆ 'ಪೊಂಬಿಚ್ಚ' ಪದ 'ಹೊಂಬುಚ' ಆಗಲು ಸಾಧ್ಯತೆಗಳಿವೆ. ಈ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಅಗತ್ಯವಿದೆ.

**ಅರಸೊತ್ತಿಗೆಯ ಪರಂಪರೆ :** ಉತ್ತರ ಭಾರತದಲ್ಲಿ ಮಧುರೆ ಒಂದು ರಾಜ್ಯ. ಅದನ್ನು ಉಗ್ರವಂಶದ ಅರಸರು ಆಳುತ್ತಿದ್ದರು. ಜಿನದತ್ತರಾಯ ತಂದೆ ಸಹಕಾರದೇವನ ನಡತೆಗೆ ಬೇಸತ್ತು, ರಾಜ್ಯತ್ಯಾಗ ಮಾಡಿ ಹೊರಟು ಈಗಿನ ಹೊಂಬುಜವಿರುವ ಪ್ರದೇಶಕ್ಕೆ ಬಂದು ಒಂದು ಲಕ್ಕಿಯ ಮರದ ಬಳಿ ವಿಶ್ರಾಂತಿ ಪಡೆಯುತ್ತಿರುತ್ತಾನೆ. ಅವನು ಇಲ್ಲಿದ್ದ ಕನಕಾಸುರನನ್ನು ಕೊಂದು ಕುಂದದ ಕೋಟೆಯಲ್ಲಿದ್ದ ಕರ ಮತ್ತು ಕರದೂಷಣ ಎಂಬ ರಾಕ್ಷಸರನ್ನು ಓಡಿಸುತ್ತಾನೆ. ಇದರಿಂದ ಪ್ರಸನ್ನಳಾದ ಜಿನದತ್ತನ ಆರಾಧ್ಯ ದೇವಿಯಾದ ಪದ್ಮಾವತಿಯು, ಲಕ್ಕಿಯ ಮರದಲ್ಲಿ ನೆಲೆಸಿ 'ಲೊಕ್ಕಿಯಬ್ಬೆ' ಎಂಬ ಹೆಸರನ್ನು ಪಡೆಯುತ್ತಾಳೆ. ಜಿನದತ್ತನಿಗೆ ಅವಳು ಈ ಊರನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಳ್ಳುವಂತೆ ಹೇಳುತ್ತಾಳೆ. ಅದರಂತೆ ಅವನು ಪೊಂಬುರ್ಚವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡುತ್ತಾನೆ.

ಇಲ್ಲಿರುವ ನಲವತ್ತೆಂಟನೆಯ ಶಾಸನದಲ್ಲಿ (**E. C., Inscriptions of Shimoga Dist-Part II, Nr 48**) ರಾಳ ಎಂಬುವನು ಇಲ್ಲಿ ರಾಜ್ಯ ಸ್ಥಾಪನೆ ಮಾಡಿದಂತೆ ಹೇಳಿದೆ. ಅವನು ಇಲ್ಲಿ ಪದ್ಮಾವತಿ ದೇವಿಯು ನೆಲೆಸಿದುದನ್ನು ಕಂಡು 'ಸಾ-ಅನ್ತಿನೋಳ್' ಎಂದು ಉದ್ಗರಿಸಿದನೆಂದೂ, ಆದರಿಂದ ಈ ರಾಜವಂಶಕ್ಕೆ 'ಸಾಂತರರು' ಎಂದು ಹೆಸರು ಬಂದಿತೆಂದೂ ಹೇಳಿದೆ. ಇದೇ ಹೆಸರು ಕಾಲಾಂತರದಲ್ಲಿ 'ಸಾಂತಾರರು' 'ಶಾಂತಾರರು' 'ಶಾಂತರು' ಎಂದು ರೂಪಾಂತರ ಹೊಂದಿದಂತೆ ಕಾಣುತ್ತದೆ. ಇವರ ನಾಡು 'ಸಾಂತಳಿಗೆ ನಾಡು' ಎಂದು ಪ್ರಸಿದ್ಧವಾಗಿದೆ.

ಹೀಗೆ ಬಂದ ಪೊಂಬುರ್ಚ ನಾಡಿನ ಪರಂಪರೆಯಲ್ಲಿ ಶ್ರೀ ಕೇಶಿ ಮತ್ತು ಜಯಕೇಶಿ ಎಂಬುವರು ಪ್ರಸಿದ್ಧರಾದರು. ಇವರ ಕಾಲ ಕ್ರಿ. ಶ. ೮೩೦ ಎಂದು ಇತಿಹಾಸಕಾರರು ಗುರುತಿಸಿದ್ದಾರೆ. ಶ್ರೀ ಕೇಶಿಗೆ ವಿವಾಹವಾಗಿತ್ತು. ಇವನ ಹೆಂಡತಿ ಮಹಾದೇವಿ. ಇವರ ಮಗ ರಣಕೇಶಿ. ಇವನ ನಂತರ ಅನೇಕರು ರಾಜ್ಯವಾಳಿದರು.

ಹಿರಣ್ಯಗರ್ಭ ಈ ಪರಂಪರೆಯ ಪ್ರಸಿದ್ಧ ರಾಜ. ಇವನ ಕಾಲ ಕ್ರಿ. ಶ. ೮೯೭. ಇವನು ಶಾಂತಳಿಗೆ ನಾಡನ್ನು

ಏಕಾಯತ್ತ ಮಾಡುತ್ತಾನೆ. ಇವನು ಮಹಾದಾನಿ. ಇವನನ್ನು ಕಂದುಕಾಚಾರ್ಯ, ದಾನವಿನೋದಿ, ವಿಕ್ರಮ ಶಾಂತರ ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರು. ಇವನ ಹೆಂಡತಿ ಲಕ್ಷ್ಮೀದೇವಿ. ಇವಳು ಬನವಸೆಯ ಅರಸನಾದ ಕಾಮದೇವನ ಮಗಳು. ಇವರ ಮಗ ಚಾಗಿ ಶಾಂತರ. ಇವನಿಗೆ ಆಳುಪರ ಅರಸನಾದ ರಣಂಜಯನ ಮಗಳಾದ ಎಂಜಲದೇವಿಯನ್ನು ಕೊಟ್ಟು ವಿವಾಹ ವಾಗಿತ್ತು. ಇವನು ಚಾಗಿಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದನು. ಇವರ ಮಗ ವೀರ ಶಾಂತರ. ಇವನ ಕಾಲ ಕ್ರಿ. ಶ. ೯೫೦ ಎಂದು ಇತಿಹಾಸಕಾರರು ನಿರ್ಣ ಯಿಸಿದ್ದಾರೆ. ಇವನಿಗೆ ಅದೆಯೂರ ಶಾಂತಿವರ್ಮನ ಮಗಳ ಜಾಕುಲದೇವಿಯನ್ನು ಕೊಟ್ಟು ವಿವಾಹವಾಗಿತ್ತು, ಇವರಿಗೆ ಕನ್ನರ ಶಾಂತರ ಮತ್ತು ಕಾಮದೇವ ಎಂಬ ಇಬ್ಬರು ಮಕ್ಕಳು ಇದ್ದರು, ಕನ್ನರ ಶಾಂತರನಿಗೆ ವಿವಾಹ ವಾದಂತಿಲ್ಲ. ಕಾಮಶಾಂತರನು ಬೀರಬಯಲ್‌ನಾಥನ ಮಗಳು ಚಂದಲದೇವಿಯನ್ನು ಮದುವೆಯಾದನು. ಇವರ ಮಗ ತ್ಯಾಗಿ ಶಾಂತರ. ಕಾಮದೇವನ ನಂತರ ತ್ಯಾಗಿ ಶಾಂತರ ಪೊಂಬುರ್ಚದ ರಾಜನಾದ. ಇವನಿಗೆ ಕದಂಬರ ಹರಿವರ್ಮನ ಮಗಳು ನಾಗಲದೇವಿಯೊಂದಿಗೆ ವಿವಾಹ ವಾಗಿತ್ತು. ಇವರ ಮಗ ನನ್ನಿ ಶಾಂತರ. ಇವನು ಪಲಸಿಗೆನಾಡಿನ ಅರಿಕೇಸರಿಯ ಮಗಳು ಸಿರಿಯಾದೇವಿ ಯನ್ನು ವಿವಾಹವಾಗಿದ್ದನು. ಇವರ ಮಗ ರಾಯ ಶಾಂತರ,ಇವನು ಅಕ್ಕಾದೇವಿಯನ್ನು ವಿವಾಹವಾಗಿದ್ದನು. ಇವರಿಗೆ ಚಿಕ್ಕವೀರ ಶಾಂತರ ಎಂಬ ಮಗ ಹುಟ್ಟಿದ. ಇವನ ಪತ್ನಿ ಬಿಜ್ಜಲದೇವಿ, ಇವರ ಮಗ ಅಣ್ಣಮದೇವ. ಅಣ್ಣಮದೇವನ ಹೆಂಡತಿ ಹೋಚಲದೇವಿ. ಇವರಿಗೆ ಬೀರಬ್ಬರಸಿ ಎಂಬ ಹೆಣ್ಣುಮಗಳೂ, ತೈಲಪ ಎಂಬ ಗಂಡುಮಗನೂ ಆದರು. ಬೀರಬ್ಬರಸಿಯನ್ನು ಆಳುಪರ ಬಂಕಿಯಾಳ್ವನಿಗೆ ಕೊಟ್ಟು ವಿವಾಹವಾಗಿತ್ತು. ಈ ಬಂಕಿ ಯಾಳ್ವನ ತಂಗಿ ಮಾಂಕಬ್ಬರಸಿಯನ್ನು ತೈಲಪದೇವ ವಿವಾಹವಾದನು. ಅನಂತರ ಇವನು ಗಂಗರ ರಾಜನಾದ ಪಾಲಯದೇವನ ಮಗಳು ಕೆಳೆಯಬ್ಬರಸಿಯನ್ನೂ ವಿವಾಹವಾದನು. ಈ ಕೆಳಯಬ್ಬರಸಿಯೇ ಪಟ್ಟದ ರಾಣಿಯಾದಳು. ಇವಳಿಗೆ ಬೀರದೇವ, ಸಿಂಗಿದೇವ, ಬ್ರಹ್ಮದೇವ ಎಂಬ ಮೂವರು ಗಂಡು ಮಕ್ಕಳಾದರು. ಹಿರಿಯವನಾದ ಬೀರದೇವನಿಗೆ ನಾಲ್ವರು ಹೆಂಡತಿಯರು. ಮೊದಲನೆಯವಳು ಬೀರಲಮಹಾದೇವಿ. ಇವಳು ಗಂಗ ವಂಶದವಳು. ಎರಡನೆಯವಳು ಬಿಜ್ಜಲದೇವಿ. ಇವಳು ನೊಳಂಬರ ರಾಜನಾದ ನರಸಿಂಗದೇವನ ಮಗಳು. ಮೂರನೆಯವಳು ಆಚಲದೇವಿ. ಇವಳಿಗೆ ಮಹಾದೇವಿ ಎಂಬ ಹೆಸರೂ ಇತ್ತು. ಇವಳು ಆಳುಪರ ವಂಶದವಳು. ನಾಲ್ಕನೆಯವಳು ಚಾಗಲದೇವಿ.

ಬೀರಲದೇವನ ಹಿರಿಯ ಹೆಂಡತಿ ಬೀರಲದೇವಿ ಯಲ್ಲಿ ನಾಲ್ಕು ಜನ ಗಂಡುಮಕ್ಕಳಾದರು. ತೈಲ, ಗೊಗ್ಗಿಗ, ಒಡ್ಡುಗ, ಬಮ್ಮ. ತೈಲನಿಗೆ ಭುಜಬಲ ಶಾಂತರ ಎಂದೂ, ಗೊಗ್ಗಿಗನಿಗೆ ಗೋವಿಂದರ, ನನ್ನಿಶಾಂತರ ಎಂದೂ, ಒಡ್ಡುಗನಿಗೆ ವಿಕ್ರಮ ಶಾಂತರ, ಒಡ್ಡಮರಸ ಎಂದೂ, ಬಮ್ಮನಿಗೆ ಬ್ರಹ್ಮದೇವ ಎಂದೂ ಹೆಸರುಗಳಿ ದ್ದವು.

ಇವರಲ್ಲಿ ತೈಲಪನಿಗೆ ಚಟ್ಟಲದೇವಿಯೊಂದಿಗೆ ವಿವಾಹವಾಗಿತ್ತು, ಇವರಿಗೆ ಪಂಪಾದೇವಿ ಎಂಬ ಮಗಳೂ ಶ್ರೀವಲ್ಲಭ ಎಂಬ ಮಗನೂ ಹುಟ್ಟಿದರು. ಪಂಪಾದೇವಿಗೆ ವಿವಾಹವಾಗಿತ್ತು. (ಪತಿಯ ಹೆಸರು ತಿಳಿಯದು). ಇವಳ ಮಗಳು ಬಾಚಲದೇವಿ.

ತೈಲಪನ ತಮ್ಮಂದಿರಾದ ಗೊಗ್ಗಿಗ ಮತ್ತು ಬಮ್ಮ ಇವರಿಗೆ ವಿವಾಹವಾದಂತಿಲ್ಲ. ಒಡ್ಡುಗನಿಗೆ ವಿವಾಹ ವಾಗಿದೆ. ಇವನ ಹೆಂಡತಿ ಚಂದಲದೇವಿ. ಇವಳಿಗೆ ಚಾಗಲದೇವಿ ಎಂಬ ಹೆಸರೂ ಇತ್ತು. ಇವಳು ಪಾಂಡ್ಯ ಕುಲದವಳು. ಇವರಿಗೆ ತೈಲ, ಗೋವಿಂದ ಮತ್ತು ಬೊಪ್ಪಗ ಎಂಬ ಹೆಸರಿನ ಮೂವರು ಗಂಡು ಮಕ್ಕಳಾ ದರು. ತೈಲನಿಗೆ ತೈಲುಗ, ತೈಲಹ, ತ್ರಿಭುವನಮಲ್ಲ ಎಂಬ ಹೆಸರೂ, ಗೋವಿಂದನಿಗೆ ರಾಯಶಾಂತರ ಎಂಬ ಹೆಸರೂ ಇದ್ದವು. ಗೋವಿಂದರ ಮತ್ತು ಬೊಪ್ಪಗನಿಗೆ ವಿವಾಹವಾದಂತಿಲ್ಲ. ತೈಲನಿಗೆ ಅಕ್ಕಾದೇವಿಯನ್ನು ಕೊಟ್ಟು ವಿವಾಹವಾಗಿತ್ತು. ಇವರಿಗೆ ಮೂವರು ಗಂಡು ಮಕ್ಕಳು. ಕಾಮದೇವ. ಸಿಂಹ, ಅಮ್ಮಣ ಎಂದು ಅವರ ಹೆಸರು. ಕಾಮದೇವನಿಗೆ ಪಾಂಡ್ಯಕುಲದ ಬಿಜ್ಜಲದೇವಿ ಪತ್ನಿಯಾದಳು. ಇವರಿಗೆ ಜಗದೇವ, ಸಿಂಗಿದೇವ ಎಂಬ ಇಬ್ಬರು ಗಂಡು ಮಕ್ಕಳೂ ಅಳಿಯದೇವಿ ಎಂಬ ಮಗಳೂ ಆದರು.

ಜಗದೇವರಾಯನೇ ಪೊಂಬುರ್ಚನಾಡಿನ ಕೊನೆಯ ರಾಜ, ಇವನು ದೋರಸಮುದ್ರದ ವಿಷ್ಣುವರ್ಧನನ ಮೇಲೆ ಯುದ್ಧ ಮಾಡಿ ಸೋತು ಹೋದನು. ಪೊಂಬುರ್ಚದನಾಡು ಹೊಯ್ಸಳ ರಾಜ್ಯದಲ್ಲಿ ವಿಲೀನ ವಾಯಿತು.

**ಬೀರಲದೇವಿಯ ವಂಶ :** ಹೊಂಬುಚದ ಶಾಸನ ಗಳಲ್ಲಿ ಬೀರಲದೇವಿಯ ವಂಶದ ವಿವರಣೆಯೂ ದೊರಕು ತ್ತದೆ.

ಇಕ್ಷ್ವಾಕು ವಂಶದಲ್ಲಿ ಧನಂಜಯ ಒಬ್ಬ ರಾಜ. ಇವನ ಹೆಂಡತಿ ಗಾಂಧಾರಿದೇವಿ. ಇವರ ಮಗ ಹರಿಶ್ಚಂದ್ರ. ಹರಿಶ್ಚಂದ್ರನ ಹೆಂಡತಿ ರೋಹಿಣೀದೇವಿ. ಇವರಿಗೆ ಇಬ್ಬರು ಗಂಡು ಮಕ್ಕಳು. ದಡಿಗ ಮತ್ತು ಮಾಧವ ಎಂದು ಅವರ ಹೆಸರು. ದಡಿಗನ ಮಗ ಕಿರಿಯ ಮಾಧವ. ಇವನ ಮಗ ಹರಿವರ್ಮ. ಹರಿವರ್ಮನ ಮಗ ವಿಷ್ಣುಗೋಪ. ಇವನ ಮಗ ತದಂಗಾಲ ಮಾಧವ. ಇವನಿಗೆ ಇಬ್ಬರು ಗಂಡು ಮಕ್ಕಳು. ಅವಿನೀತ ಮತ್ತು ದುರ್ವಿನೀತ ಎಂದು ಅವರ ಹೆಸರು. ದುರ್ವಿನೀತ ಮಹಾ ಪ್ರತಾಪಿ. ವಸುಧೆಗೆ ರಾವಣ ಎಂದು ಕುಪ್ರಸಿದ್ಧಿಯನ್ನು ಪಡೆದ ಕಾದುವೆಟ್ಟಿ ಎಂಬ ಅರಸನನ್ನು ಇವನು ಕಾಳಗದಲ್ಲಿ ಸೋಲಿಸಿದನು. ದುರ್ವಿನೀತನಿಗೆ ಮುಷ್ಕರ ಮತ್ತು ನೃಪಕಾಮ ಎಂಬ ಇಬ್ಬರು ಗಂಡುಮಕ್ಕಳು. ಮುಷ್ಕರನಿಗೆ ಶ್ರೀ ವಿಕ್ರಮ ಮತ್ತು ಭೂವಿಕ್ರಮ ಎಂಬ ಇಬ್ಬರು ಗಂಡು ಮಕ್ಕಳು. ನೃಪಕಾಮನ ಮೊಮ್ಮಗ ಶ್ರೀಪುರುಷ. ಇವನಿಗೆ ಶ್ರೀವಲ್ಲಭ ಎಂಬ ಹೆಸರೂ ಇತ್ತು. ಶ್ರೀಪುರುಷನಿಗೆ ಇಬ್ಬರು ಗಂಡುಮಕ್ಕಳು. ಶಿವಕುಮಾರ ಮತ್ತು ವಿಜಯಾದಿತ್ಯ ಎಂದು ಅವರ ಹೆಸರು. ಶಿವಮಾರನಿಗೆ 'ಸೈಗೊಟ್ಟನ್' ಎಂಬ ಬಿರುದೂ ಇತ್ತು. ವಿಜಯಾದಿತ್ಯನ ಮಗ ಎರೆಯಂಗ. ಇವನ ಮಗ ಶ್ರೀರಾಜಮಲ್ಲ. ಶ್ರೀರಾಜಮಲ್ಲನ ಮಗ ಮರುಳ. ಇವನ ಮಗ ಶ್ರೀ ಬೂತುಗ. ಇವನಿಗೆ ಎರೆಯಪ್ಪ, ಕಚ್ಚೆಯ ಗಂಗ, ಬೂತುಗ ಪೆರ್ಮಾನಡಿ ಎಂಬ ಮೂವರು ಗಂಡು ಮಕ್ಕಳು. ಬೂತುಗನ ಹೆಂಡತಿ ರೇವಕ. ಇವರಿಗೆ ಮರುಳದೇವ, ಮಾರಸಿಂಹ, ಶ್ರೀರಾಜವಲ್ಲಭ, ಶ್ರೀನೀತಿಮಾರ್ಗ ಮತ್ತು ವಾಸವ ಮಹೀಭುಜ ಎಂಬ ಐದು ಜನ ಗಂಡು ಮಕ್ಕಳು. ಶ್ರೀನೀತಿಮಾರ್ಗನಿಗೆ ಗೋವಿಂದರ ಎಂಬ ಹೆಸರೂ ಇತ್ತು. ವಾಸವ ಮಹೀಭುಜನ ಹೆಂಡತಿ ಕಂಚಲದೇವಿ. ಇವರ ಮಗ ಗೋವಿಂದರ ದೇವ. ಇವರ ವಂಶದಲ್ಲಿ ರಕ್ಕಸಗಂಗ ಎಂದು ಪ್ರಸಿದ್ಧನಾದ ವೀರ ಮಾರ್ತಾಂಡ ದೇವನು ಅರಸನಾದನು. ಇವನ ತಮ್ಮ ಅರುಮುಳಿದೇವ. ಇವನ ಹೆಂಡತಿ ಗಾವಬ್ಬರಸಿ. ಇವಳು ಕದಂಬವಂಶದವಳು. ಅರುಮುಳಿದೇವ ಮತ್ತು ಗಾವಬ್ಬರಸಿಯರಿಗೆ ಮೂವರು ಮಕ್ಕಳು. ಚಟ್ಟಲದೇವಿ, ಕಂಚಲದೇವಿ, ರಾಜ ವಿದ್ಯಾಧರ. ಪ್ರಾಯಶಃ ಈ ಮಕ್ಕಳನ್ನು ಬಿಟ್ಟು ತಂದೆ ತಾಯಿ ಸತ್ತು ಹೋಗಿರಬೇಕು. ಆದ್ದರಿಂದ ರಕ್ಕಸಗಂಗ ಇವರನ್ನು ತನ್ನ ಅರಮನೆಗೆ ತಂದು ಸಾಕಿ ಬೆಳೆಸಿದನು. ಚಟ್ಟಲದೇವಿಯನ್ನು ತೊಂಡೆನಾಡು ನಾಲ್ವತ್ತೆಣ್ಸಾಸಿರಕ್ಕೆ ರಾಜನೂ ಕಂಚಿಯನಾಥನೂ ಆದ ಕಾದುವೆಟ್ಟಿ ಎಂಬುವ ನಿಗೆ ಕೊಟ್ಟು ಮದುವೆಯಾಗಿತ್ತು. ಎರಡನೆಯವಳಾದ ಕಂಚಲದೇವಿಯನ್ನು ಪೊಂಬುರ್ಚದ ಬೀರದೇವನಿಗೆ ಕೊಟ್ಟು ವಿವಾಹವಾಗಿತ್ತು. ಅವಳಿಗೆ ಬೀರಲದೇವಿ ಎಂಬ ಹೆಸರೂ ಇತ್ತು.

**ದಾನಿಗಳು :** ಹೊಂಬುಜ ಶ್ರೀಕ್ಷೇತ್ರದ ಶಾಸನ ಗಳನ್ನು ಅಭ್ಯಾಸ ಮಾಡಿದರೆ, ಇಲ್ಲಿ ಕೆಲವು ದಾನವೀರರಿ ದ್ದುದು ತಿಳಿದು ಬರುತ್ತದೆ. ಚಟ್ಟಲದೇವಿ, ಪಂಪಾದೇವಿ, ಬಾಚಲದೇವಿ, ಚಾಗಲದೇವಿ, ಕಾಳಿದಾಸಯ್ಯ, ಪಟ್ಟಣ ಸ್ವಾಮಿ ನೊಕ್ಕಯ್ಯಶೆಟ್ಟಿ, ಭುಜಬಲಶಾಂತರ ಮುಂತಾದ ವರು ಪ್ರಸಿದ್ಧ ದಾನವೀರರಾಗಿದ್ದರು.

**ಚಟ್ಟಲದೇವಿ :** ಚಟ್ಟಲದೇವಿ ಗಂಗವಂಶದವಳು. ಇವಳ ತಂದೆ ಅರುಮುಳಿದೇವ, ತಾಯಿ ಗಾವಬ್ಬರಸಿ. ಚಟ್ಟಲದೇವಿಗೆ ಒಬ್ಬ ತಂಗಿ ಇದ್ದಳು. ಅವಳ ಹೆಸರು ಕಂಚಲದೇವಿ. ಕಂಚಲದೇವಿ ಪೊಂಬುರ್ಚನಾಡಿನ ಬೀರದೇವನ ಪತ್ನಿ.

ಚಟ್ಟಲದೇವಿಯನ್ನು ಕಾದುವೆಟ್ಟಿ ಎಂಬ ಪಲ್ಲವ ದೊರೆಗೆ ಕೊಟ್ಟು ವಿವಾಹವಾಗಿತ್ತು. ಕಾದುವೆಟ್ಟಿ ಕಾಂಚೀ ಪಟ್ಟಣದ ದೊರೆ. ಇವನ ರಾಜ್ಯ ನಾಲ್ವತ್ತೆಣ್ಸಾಸಿರದ ತೊಂಡೆನಾಡು ಎಂದು ಪ್ರಸಿದ್ಧವಾಗಿತ್ತು. ಇವನು ಈಶ್ವರ ವರಪ್ರಸಾದನೂ, ವೃಷಭಲಾಂಛನನೂ ಆಗಿದ್ದನು.

ಚಟ್ಟಲದೇವಿ ಚಿಕ್ಕವಳಿದ್ದಾಗಲೇ ಅವಳ ತಂದೆ-ತಾಯಿ ಸತ್ತುಹೋಗಿದ್ದರು ಎಂದು ಕಾಣುತ್ತದೆ. ಅನಂತರ

ಅರುಮುಳಿದೇವನ ಅಣ್ಣನಾದ, ರಕ್ಕಸಗಂಗ ಎಂದು ಪ್ರಸಿದ್ಧನಾದ, ವೀರಮಾರ್ತಾಂಡದೇವನು ಚಟ್ಟಲದೇವಿ, ಕಂಚಲದೇವಿ ಮತ್ತು ರಾಜವಿದ್ಯಾಧರ ಇವರನ್ನು ತನ್ನ ಅರಮನೆಗೆ ತಂದು ಸಾಕುತ್ತಾನೆ. ಹಾಗಾಗಿ ಶಾಸನಗಳಲ್ಲಿ ರಕ್ಕಸಗಂಗನೇ ತಂದೆ ಎಂದು ಹೊಗಳಲು ಕಾರಣವಾಗಿದೆ.

ಚಟ್ಟಲದೇವಿಯ ಗಂಡ ಯುದ್ಧರಂಗದಲ್ಲಿ ಸತ್ತು ಹೋಗುತ್ತಾನೆ. ಅನಂತರ ಅವಳು ಪೊಂಬುರ್ಚಕ್ಕೆ ಬಂದು, ತಂಗಿಯ ಮನೆಯಲ್ಲಿ ಉಳಿದ ಬಾಳನ್ನು ಸವೆಸುತ್ತಾಳೆ. ಇವಳು ಇಲ್ಲಿಗೆ ಬಂದ ಅನತಿ ಕಾಲದಲ್ಲಿ, ತಂಗಿಯಾದ ಕಂಚಲದೇವಿ ಮೃತಪಟ್ಟಂತೆ ಕಾಣುತ್ತದೆ. ಅನಂತರ ತಂಗಿಯ ಮಕ್ಕಳನ್ನು ತನ್ನ ಮಕ್ಕಳೆಂದೇ ಭಾವಿಸಿ ಸಾಕುತ್ತಾಳೆ. ಆದ್ದರಿಂದಲೇ ಕೆಲವು ಶಾಸನಕಾರರು, ಕಂಚಲದೇವಿಯ ಮಕ್ಕಳನ್ನು ಚಟ್ಟಲದೇವಿಯ ಮಕ್ಕಳೆಂದೇ ಹೇಳಿದ್ದಾರೆ. ತೀರ್ಥಹಳ್ಳಿಯ ೧೯೨ನೆಯ ಶಾಸನದಲ್ಲಿ ಚಟ್ಟಲದೇವಿಯು ಪೊಂಬುರ್ಚದಲ್ಲಿ ಕಟ್ಟಿಸಿದ ಉರ್ವಿತಿಲಕ ಬಸದಿಯ ಬಗ್ಗೆ ಹೇಳುತ್ತಾ– "ಚಟ್ಟಲದೇವಿಯುಂ, ಶ್ರೀ ತ್ರಿಭುವನಮಲ್ಲ ಶಾಂತರದೇವನಂ ಬೀರಬ್ಬರಸಿಯರ್ಗೆ ಪರೋಕ್ಷ ವಿನಯಮಾಗಿ ಈ ಬಸದಿಯಂ...." ಎಂದು ತಿಳಿಸಲಾಗಿದೆ. ಇದರಿಂದ ಚಟ್ಟಲದೇವಿಗೆ ತಂಗಿಯ ಬಗ್ಗೆ ವಿಶೇಷ ಗೌರವವಿತ್ತು ಎಂಬುದು ತಿಳಿದುಬರುತ್ತದೆ.

ಇವಳು ಪೊಂಬರ್ಚದಲ್ಲಿ 'ಉರ್ವಿತಿಳಕ' ಎಂಬ ಹೆಸರಿನ ಪಂಚ ಬಸದಿಗೆ ಶಕವರ್ಷ ೯೯೯ನೆಯ (ಕ್ರಿ. ಶ. ೧೦೭೭) ಪಿಂಗಳ ಸಂವತ್ಸರದ ಜ್ಯೇಷ್ಠ ಶುದ್ಧ ಬಿದಿಗೆ ಬೃಹಸ್ಪತಿವಾರ ಅಡಿಪಾಯವನ್ನು ಹಾಕಿಸಿ, ಅನಂತರ ಬಸದಿಯನ್ನು ಕಟ್ಟಿಸಿ, ದಾನಾದಿಗಳನ್ನು ನೀಡಿದ್ದಾಳೆ. ಇವಳನ್ನು ಹೊಗಳುವ ಅನೇಕ ಪದ್ಯಗಳು ಈ ಶಾಸನಗಳ್ಲಿವೆ. ಆ ಒಂದು ಪದ್ಯವನ್ನು ಇಲ್ಲಿ ನೋಡೋಣ :

(ಪಂಚ ಬಸದಿಯ ಅಂಗಳದ ತೋರಣ ಬಾಗಿಲ ಉತ್ತರ ಕಂಬದಲ್ಲಿರುವ ಬರೆಹದಲ್ಲಿ)

ಜನಕಂ ರಕ್ಕಸಗಂಗಂ ಭೂಮಿಪತಿ ಕಾಂಚೀನಾಥ
ನಾತ್ಮ ಪ್ರಿಯಂ ।
ವಿನುತರ್ ಶ್ರೀ ವಿಜಯರ್ ಸುಶಿಕ್ಷಿತರೆನಿಲ್ ವಿದ್ವಿಷ್ಟ
ಭೂಪಾಳ ಸಂ ।
ಹನ(ನ) ವಿಕ್ರಾಂತ ಯಶೋವಿಳಾಸ ಭುಜಬಲ
ಖಳೋಗ್ಗಲ್ಲಾಸಿ ತಾಂ ಗೊಗ್ಗಿನಂ।
ದನನಾ ಚಟ್ಟಲದೇವಿಗೆಂದೊಡೆ ಯಶಶ್ರೀಗಿನ್ನು
ಮುನ್ನೋನ್ನತರಾರ್॥

**ಪಂಪಾದೇವಿ** : ಪಂಪಾದೇವಿಯು ವಿಕ್ರಮ ಶಾಂತರನ ಮಗ ತೈಲಪಶಾಂತರನಿಗೆ ಚಟ್ಟಲದೇವಿ ಎಂಬ ರಾಣಿಯಲ್ಲಿ ಹುಟ್ಟಿದವಳು. ಇವಳಿಗೆ ಅಹಂಕಾರವಿರಲಿಲ್ಲ. ಇವಳು ಜಿನನ ಮಹಾಭಕ್ತೆ. ಇವಳು ವಿರಕ್ತೆಯೂ ಹೌದು. ಇವಳಿಗೆ ಅಭಿನವ ಅತ್ತಿಮಬ್ಬೆ ಎಂಬ ಬಿರುದೂ ಇತ್ತು. ಇವಳ ತಮ್ಮ ಶ್ರೀವಲ್ಲಭ ರಾಜನಾಗಿದ್ದಾಗ ಪಂಚಬಸದಿಯ ಬಡಗಣ ಪಟ್ಟಸಾಲೆಯನ್ನು ಕಟ್ಟಿಸಿ ದಾನಗಳನ್ನು ನೀಡಿದ್ದಾನೆ.

ಪಂಪಾದೇವಿಯ ಭಕ್ತಿಯನ್ನು ತಿಳಿಸುವ ಮತ್ತು ಅವಳ ನಿರಾಡಂಬರ ಜೀವನವನ್ನು ಪ್ರತಿಬಿಂಬಿಸುವ ಒಂದು ಪದ್ಯ ಹೀಗಿದೆ :

ವಿನುತ ಮಹಾಪುರಾಣ ಜಿನನಾಥ ಕಥೋಕ್ತಿಯೆ
ಕರ್ಣಭೂಷಣಂ ।
ಜಿನಮುನಿಗಳ್ಗೆ ಮಾಡುವ ಚತುರ್ವಿಧ ದಾನಮೆ
ಹಸ್ತಕಂಕಣಂ ।
ಜಿನಪತಿ ಭಕ್ತಿ ಸೂಕ್ತಿ ನುತಿಮಾಲೆಯೆ ಬಂಧುರ
ಕಂಠಮಂಡನಂ ।
ತನಗೆನೆ ತೈಲಭೂಪಸುತೆ ಮೆಚ್ಚುವಳೇ ತನುಭಾರ
ಭೂಷೆಯಂ ॥

**ಚಾಗಲದೇವಿ** : ಪಾರ್ಶ್ವನಾಥ ಬಸದಿಯ ಮುಂಭಾಗದಲ್ಲಿದ್ದ ಮುಖಮಂಟಪದ ತೋರಣದ ದಕ್ಷಿಣ ಭಾಗದ ಕಂಬದ ಮೇಲೆ ಉತ್ತರ ಮತ್ತು ದಕ್ಷಿಣ ಮುಖಗಳಲ್ಲಿರುವ ಶಾಸನಗಳಲ್ಲಿ ಇವಳನ್ನು ಹೊಗಳಿರುವ ಪದ್ಯಗಳಿವೆ. (ಈಗ ಮುಖಮಂಟಪವನ್ನು ಹೊಸದಾಗಿ ಕಟ್ಟಿಸಿದ್ದಾರೆ. ಮುಖತೋರಣದ ಕಂಬಗಳನ್ನು ಸ್ಥಳಾಂತರಿಸಲಾಗಿದೆ).

ಚಾಗಲದೇವಿ, ವಿಕ್ರಮ ಶಾಂತರ ಎಂದು ಹೆಸರು ಪಡೆದಿದ್ದ ಒಡ್ಡುಗನ ಪತ್ನಿ. ಇವಳು ಲೊಕ್ಕಿಯಬ್ಬೆ(ಪದ್ಮಾವತಿ) ಬಸದಿಯ ಮುಂಭಾಗದ ಮಕರ ತೋರಣಗಳನ್ನು ಮಾಡಿಸಿದಳು. ಬಳ್ಳಿಗಾವಿಯಲ್ಲಿ ಚಾಗೇಶ್ವರ ಎಂಬ ದೇವಾ

ಲಯವನ್ನು ಕಟ್ಟಿಸಿ ಕನ್ಯಾದಾನಾದಿ ಮಹಾದಾನಗೈದು, ವಂದಿವೃಂದಕ್ಕೆ, ಆಶ್ರಿತವರ್ಗಕ್ಕೆ ಪೊನ್ನನ್ನು ಬೇಡುವಷ್ಟು ಕೊಟ್ಟು ತನ್ನ ದಾನವೀರತೆಯನ್ನು ಮೆರೆಸಿದ್ದಾಳೆ. ಅಷ್ಟೇ ಅಲ್ಲ ಆ ದೇವಾಲಯದ ಪೂಜಾ ಕೈಂಕರ್ಯಾದಿಗಳು ವ್ಯವಸ್ಥಿತವಾಗಿ ನಡೆಯಲು ಸಾಕಷ್ಟು ಭೂಮಿಯನ್ನೂ ದಾನ ಮಾಡಿದ್ದಾಳೆ. ಇವಳನ್ನು ಹೊಗಳುವ ಒಂದು ಪದ್ಯ ಹೀಗಿದೆ :

ಗುಣದೊಳ್ ರೂಪಿನೊಳೊಳ್ಪಿನೊಳ್ ಸುಭಗಿ
ನೊಳ್ ಶೃಂಗಾರದೊಳ್ ಸೌಮ್ಯ ಲ।
ಕ್ಷಣದೊಳ್ ಮೈಮೆಯೊಳೋಜೆಯೊಳ್ ವಿಭವ
ದೊಳ್ ಶೀಲಂಗಳೊಳ್ ಭೃತ್ಯ ಪೋ ।
ಕ್ಷಣದೊಳ್ ಭೋಗದೊಳಾರ್ಪಿನೊಳ್ ವಿಭು
ತೆಯೊಳ್ ಕಾರುಣ್ಯದೊಳ್ ಪೋಲಿಸ ।
ಲ್ಕೆಣೆಯಾರ್ಗೆಲ್ಲ ಬೆಡಂಗಿಗೆಂದನುದಿಸಂ ವಿದ್ವಜ್ಜನಂ
ಬಣ್ಣಿಕುಂ ॥

ಬಾಚಲದೇವಿಯು ಮತ್ತೊಬ್ಬ ದಾನವೀರೆ. ಇವಳು ಭುಜಬಲಶಾಂತರ ಎಂದು ಪ್ರಸಿದ್ಧನಾದ ತೈಲಪದೇವನ ಮಗಳಾದ ಪಂಪಾದೇವಿಯ ಮಗಳು. ಇವಳ ಗುರು ಅಜಿತಸೇನಾ ಪಂಡಿತರು. ತಾಯಿಯಾದ ಪಂಪಾದೇವಿಯೊಂದಿಗೆ ಸೇರಿ ಇವಳೂ ಪಂಚಬಸದಿಯ ಬಡಗಣ ಪಟ್ಟಸಾಲೆಯನ್ನು ಕಟ್ಟಿಸಿದ್ದಾಳೆ.

**ಕಾಳಿದಾಸಯ್ಯ :** ಕಾಳಿದಾಸಯ್ಯ, ಭುಜಬಲ ಶಾಂತರ ಎಂದು ಪ್ರಸಿದ್ಧನಾಗಿದ್ದ ತೈಲಪನ ಕಾಲದಲ್ಲಿ, ಅರಮನೆಯಲ್ಲಿ ಸರ್ವಪ್ರಧಾನನಾಗಿದ್ದನು. ಇವನು ಲೊಕ್ಕಿಯಬ್ಬೆ (ಪದ್ಮಾವತಿ) ಬಸದಿಗೆ ಜಂಬಳ್ಳಿ ಮುಂತಾದ ಊರುಗಳನ್ನು ದಾನ ನೀಡಿ ತನ್ನ ತ್ಯಾಗವನ್ನೂ, ದಾನ ವೀರತೆಯನ್ನೂ ಮೆರೆಸಿದ್ದಾನೆ.

**ಭುಜಬಲ ಶಾಂತರ :** ಭುಜಬಲ ಶಾಂತರನೆಂದು ಪ್ರಸಿದ್ಧನಾದ ತೈಲಪನೂ ಸಹ ಅನೇಕ ದಾನಗಳನ್ನು ನೀಡಿದ ವಿವರಣೆ ಶಾಸನಗಳಲ್ಲಿ ಸಿಗುತ್ತದೆ. ಶಕವರ್ಷ ೯೮೭ನೆಯ ವಿಶ್ವಾವಸು ಸಂವತ್ಸರದ ಮಾಘ ಶುದ್ಧ ಪಂಚಮಿ ಸೋಮವಾರ ತಮ್ಮ ಗುರುಗಳಾದ ಕನಕನಂದಿ ದೇವರಿಗೆ ದಾನಬಿಟ್ಟ ವಿಷಯವನ್ನೂ ಶಾಸನ ಉಲ್ಲೇಖಿಸುತ್ತದೆ.

**ವಿಕ್ರಮಾದಿತ್ಯ ಶಾಂತರ :** ವಿಕ್ರಮಾದಿತ್ಯ ಶಾಂತರನು ಶಕವರ್ಷ ೮೭೦ ನೆಯ ವರ್ಷದಲ್ಲಿ ಕೊಂಡ ಕುಂದಾನ್ವಯುದ ಮೋನಿಸಿದ್ಧಾಂತ ಭಟ್ಟಾರಕರಿಗೆ ಕಲ್ಲಿನ ಬಸದಿಯನ್ನು ಕಟ್ಟಿಸಿಕೊಟ್ಟು, ದಾನ ಬಿಟ್ಟಿದ್ದಾನೆ.

**ಇತರರು :** ಅರಸು ಮನೆತನದವರೇ ಅಲ್ಲದೆ ಇತರರೂ ದಾನವೀರರಾಗಿದ್ದುದ್ದು ಈ ಶಾಸನಗಳ ಅಧ್ಯಯನದಿಂದ ತಿಳಿದು ಬರುತ್ತದೆ.

ಶ್ರೀದೇವಿ ದೇವಾಲಯಕ್ಕೆ ಮೊದಲನೇ ಮಂಟಪವನ್ನು ಕಾಂಬೋಧಿ ವೈಭವದ ಚಿಕ್ಕಪ್ಪಯ್ಯ ಎಂಬುವರ ಮಕ್ಕಳಾದ ರಾಮಶ್ರೇಷ್ಠಿ ಮತ್ತು ಬ್ರಹ್ಮಶ್ರೇಷ್ಠಿ ಇವರು ಕಟ್ಟಿಸಿಕೊಟ್ಟಿದ್ದಾರೆ. ಸೇವೆನಾಯ್ಕ, ಕೋಟಿನಾಯ್ಕ, ಮಾರಸೊಡ್ಡದೇವ ಮುಂತಾದವರು ಶಕ ವರ್ಷ ೧೨೮೯ ಸರ್ವಜಿತು ಸಂವತ್ಸರದ ಮಾಘ ಶುದ್ಧ ದಶಮಿಯುಂದು ಕಮಠೇಶ್ವರ ದೇವಾಲಯುವನ್ನು ಪುನಃ ಪ್ರತಿಷ್ಠಾಪನೆ ಮಾಡಿದ್ದಾರೆ. ಪಟ್ಟಣಸ್ವಾಮಿ ನೊಕ್ಕಯ್ಯಶೆಟ್ಟಿ ಎಂಬ ದಾನಿಯು ಅನೇಕ ಜೈನ ಮುನಿಗಳ ಸೇವೆಮಾಡಿ ಅವರ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ. ಜೈನ ಧರ್ಮದ ಉನ್ನತಿಗಾಗಿ ಅನೇಕ ದಾನಗಳನ್ನು ನೀಡಿದ್ದಾನೆ. ಅವನನ್ನು ಹೊಗಳುವ ಒಂದು ಪದ್ಯ ಹೀಗಿದೆ :

ಸಿರಿಗಾವಾಸಮನೇಕ ರತ್ನನಿಚಯೋತ್ಪತ್ಯಾಶ್ರಯಂ
ಭೀರುರ ।
ಕ್ಷರತಂ ಚಂದ್ರಕಳಾ ಪ್ರವರ್ಧನಮುದಂ ಪೀಯೂಷ
ಪಿಂಡಾಸ್ಪದಂ ।
ವರವೇಳಾವಳಯಾವೃತಂ ಸಮತೆಯಿಂ ವಾರಾಸಿ
ಪೋಲ್ತುಂ ಮನೋ ।
ಪರ ದಾನತ್ವದಿನೆಯ್ದೆ ಪೋಲದವಲಂ ಸಮ್ಯಕ್ತ್ವ
ವಾರಾಸಿಯಂ ॥

ಈ ಶಾಸನವನ್ನು ನೊಕ್ಕಯ್ಯಶೆಟ್ಟಿಯ ಮಗನಾದ ಮಲ್ಲ ಎಂಬುವನೇ ಬರೆದಿದ್ದಾನೆ.

**ಯುದ್ಧವೀರರು :** ಹೊಂಬುಜದ ಶಾಸನಗಳನ್ನು ಅಧ್ಯಯನ ಮಾಡಿದಾಗ ಅನೇಕ ಯುದ್ಧವೀರರು ಇದ್ದುದು ತಿಳಿದು ಬರುತ್ತದೆ. ಅವರಲ್ಲಿ ಕೆಲವರನ್ನು ಇಲ್ಲಿ ಪರಿಚಯ ಮಾಡಿಕೊಡಬಹುದು.

**ಬೀರದೇವ :** ಬೀರದೇವ ಒಬ್ಬ ಮಹಾ ಪರಾಕ್ರಮಿ. ಇವನಿಗೆ ವೀರಶಾಂತರ ಎಂಬ ಹೆಸರೂ ಇತ್ತು. ಇವನು ಶಾಂತಾರರ ರಾಜ್ಯವನ್ನು ಕ್ರಿ. ಶ. ೧೦೬೦ ರಿಂದ ಕ್ರಿ. ಶ. ೧೦೬೮ರವರೆಗೆ ಆಳಿದ. ಇವನು ಯುದ್ಧಕ್ಕೆ ಹೊರಟರೆ ಜಯಸಿದ್ಧ. ಅವನ ವೀರತನದ ಪ್ರಭಾವವನ್ನೂ ಕ್ಷಮಾಶೀಲತೆಯನ್ನೂ ತಿಳಿಸುವ ಒಂದು ಪದ್ಯ ಹೀಗಿದೆ :

ಧುರದೊಳಸಿಲತೆಯನುರ್ಚಿದೊ ।
ಡರಿನೃಪ ಯುವತಿಯರ ಮುಗುಳ ಕಂಕಣದ
ಕೀಲ್ ।
ತರತರದಿನುಚ್ಚಿದುವು ನಿಜ ।
ಕರ ಖಳ್ಗಮಮರ್ಕೆ ಕೀಲೆ ಶಾಂತರ ನೃಪತಿ ॥

**ತೈಲಪ :** ಇವನು ಬೀರದೇವನ ಮೊದಲ ಮಗ. ಇವನನ್ನು ಭುಜಬುಲ ಶಾಂತರ ಎಂದೂ ಕರೆಯುತ್ತಿದ್ದರು. ಇವನನ್ನು ಹೊಗಳುವ ಒಂದು ಪದ್ಯ ಹೀಗಿದೆ :

ನಳನೆ ವಿನೋದಿ ಧರ್ಮಜನೆ ಧಾರ್ಮಿಕಬ್ಧಿಯೆ
ರತ್ನದಾಗರಂ ।
ಕುಳಿಶಮೆ ಶಸ್ತ್ರಮರ್ಜುನನೆ ಧನ್ವಿ ಸುರೇಂದ್ರನೆ
ಭೋಗಿ ಮಂದರಾ ।
ಚಳಮೆ ಗಿರೀಂದ್ರಮುಪ್ರತಿಮ ರಾಯೆ ಝಳಪ್ಪನೆ
ಚಕ್ರಿ ತೈಲ ಮಂ ।
ಡಳಿಕನೆ ದಾನಿಯೆಂದು ಮುಡಿಗಿಕ್ಕಿದೆನಾರ್ಪವರೆತ್ತಿ
ಕೊಳ್ಳಿರೆ ॥

**ನನ್ನಿ ಶಾಂತರ :** ನನ್ನಿ ಶಾಂತರನೂ ಬೀರದೇವನ ಮಗ. ಇವನು ಶಾಂತರ ರಾಜ್ಯವನ್ನು ಕ್ರಿ. ಶ. ೧೦೭೭ ರಲ್ಲಿ ಆಳುತ್ತಿದ್ದನು. ಇವನಿಗೆ ಗೋವಿಂದರದೇವ, ಗೊಗ್ಗಿಗ, ಬೂತುಗ ಎಂಬ ಹೆಸರುಗಳೂ ಇದ್ದವು. ಇವನೂ ಮಹಾವೀರನೇ. ಇವನನ್ನು ಕುರಿತ ಒಂದು ಪದ್ಯ ಹೀಗಿದೆ :

ಪ್ರತಿಬಿಂಬಂ ರೂಪಿನೋಳ್ ಪೋಲ್ಕೆಮ ಗುಣ
ದೊಳದಾರ್ ಪೋಲ್ತಪರ್ ನಿನ್ನ ನಂಬೀ ।
ಸ್ತುತಿಯಂ ನಿಶ್ಚಯ್ಸಿ ಗೋವಿಂದರ ಬೆಸೆಯದಿರಿಂ
ತೆಂಬ ನಿನ್ನನ್ತೆ ನೋಡು ।
ನ್ನತಿಯೊಳ್ ಹೈಮಾಚಳಂ ಕ್ಷಾಂತಿಯೊಳವನಿ ತಳಂ
ಮೇರೆಯೋಳ್ ವಾರ್ಧಿ ಸೌಚ ।
ವ್ರತದೊಳ್ ಸಿಂಧೂದ್ಭವಂ ಸತ್ಯದೊಳಿನತನಯುಂ
ಸೌರ್ಯದೋಳ್ ಭೀಮಸೇನಂ ॥

**ಒಡ್ಡುಗ :** ಇವನು ನನ್ನಿ ಶಾಂತರನ ತಮ್ಮ. ಇವನನ್ನು ವಿಕ್ರಮ ಶಾಂತರ ಎಂದೂ ಒಡ್ಡಮರಸ ಎಂದೂ ಕರೆಯುತ್ತಿದ್ದರು. ಇವನು ವೀರನೂ ಹೌದು; ದಾನಿಯೂ ಹೌದು. ಇವನ ಪರಾಕ್ರಮವನ್ನು ಹೊಗಳುವ ಪದ್ಯ :

ಪರಿದುದರಾಗ್ನಿಯಂ ಮರೆದು ತಿಂದ ಪೆಣಂಗಳಿನಾದ
ಜೀರ್ಣದಿಂ ।
ಮರುಳ ಬಳಾಳಿ ವೈದ್ಯಮರುಳಂ ಬೆಸಗೊಂಡೊಡೆ
ದನ್ತಿಮದ್ದೆನಲ್ ।
ಕರಿಯನೆ ನುಂಗಿ ಸೂಡುಕೊಳೆ ವೈದ್ಯ ಮರುಳ್ಗೆ
ವೀರಲಕ್ಷ್ಮಿ ನೋ ।
ಡರಿಹರ ನಿನ್ನಿನಾಯ್ತಿದೆನೆ ವಿಕ್ರಮ ಶಾಂತರನಾದ
ನೊಡ್ಡುಗಂ ॥

**ಚಾಗಲದೇವಿ :** ವೀರಶಾಂತರನ ಪತ್ನಿಯಾದ ಇವಳು ದಾನವೀರೆಯಷ್ಟೇ ಅಲ್ಲ, ಯುದ್ಧವೀರೆಯೂ ಆಗಿದ್ದಳು. ಇವಳು ಪತಿಯೊಡನೆ ರಣರಂಗಕ್ಕೆ ಹೋಗಿ ಯುದ್ಧ ಮಾಡಿದ್ದಾಳೆ. ಇವಳ ವೀರತನವನ್ನು ಹೇಳುವ ಒಂದು ಪದ್ಯ :

ಸಲುಗುಗೆ ಸಾಮ್ಯಕ್ಕೆಕ್ಕೆ ಗೊ।
ಪಲರಕ್ಕೆಮ ಸತಿಯರಹಿತರಂ ಗೆಲ್ವೆಡೆಯೋಳ್ ।
ಗೆಲುವ ಬೆಡಂಗಿಯೆ ಬೀರನ ।
ಬಲಭುಜಾ ದಂಡದಲ್ಲಿ ಕೆಲದೊಳ್ ನಿಲ್ವಳ್ ॥

**ಮುನಿ ಪರಂಪರೆ :** ಹೊಂಬುಚದಲ್ಲಿರುವ ಶಾಸನಗಳಲ್ಲಿ ಜೈನಮುನಿ ಪರಂಪರೆಯ ವಿವರವಿದೆ.

ಮಹಾ ತೀರ್ಥಂಕರರಾದ ಶ್ರೀ ವರ್ಧಮಾನ ಮಹಾವೀರರ ಪರಂಪರೆಯಲ್ಲಿ ಗೌತಮ ಗಣಧರರು ಎಂಬುವರಿದ್ದರು. ಇವರ ನಂತರ ಚತುರಂಗುಲ ವೃದ್ಧಿಪ್ರಾಪ್ತರು ಎನಿಸಿಕೊಂಡಿದ್ದ ಕುಂದ ಕುಂದಾಚಾರ್ಯರು ಪ್ರಸಿದ್ಧರಾಗಿದ್ದರು. ಇವರ ಶಿಷ್ಯ ಪರಂಪರೆಯಲ್ಲಿ ಕಲಿಕಾಲ ಗಣಧರರು ಹೆಸರಾದರು. ಇವರ ಪರಂಪರೆಯಲ್ಲಿ ಸಮಂತಭದ್ರಸ್ವಾಮಿಗಳು ಪ್ರಸಿದ್ಧಿ ಪಡೆದರು. ಇವರ ಶಿಷ್ಯರಲ್ಲಿ ಶಿವಕೋಟ್ಯಾಚಾರ್ಯ ಎಂಬುವರೂ, ಅನಂತರ ವರದತ್ತಾಚಾರ್ಯ ಎಂಬುವರೂ, ಆಮೇಲೆ ಸಿಂಹನಂದ್ಯಾಚಾರ್ಯ

ಎಂಬುವರೂ ಪ್ರಸಿದ್ಧರಾದರು. ಈ ಸಿಂಹನಂದ್ಯಾಚಾರ್ಯರು ಗಂಗರಾಜ್ಯವನ್ನು ಸ್ಥಾಪಿಸಿದ ಮೇಧಾವಿಗಳು. ಇವರ ನಂತರ ಅನೇಕ ಮಹಿಮಾನ್ವಿತರೂ ತಪಸ್ವಿಗಳೂ ಇದ್ದರು. ಅಕಲಂಕದೇವ ಎಂಬುವರು ಅನಂತರದವರಲ್ಲಿ ಪ್ರಸಿದ್ಧರಾದವರು. ಆಮೇಲೆ ವಜ್ರನಂದ್ಯಾಚಾರ್ಯರು, ಪೂಜ್ಯಪಾದರು, ಶ್ರೀಪಾಲ ಭಟ್ಟಾರಕರು, ಅಭಿನಂದನಾಚಾರ್ಯರು, ಕವಿ ಪರಮೇಷ್ಠಿಗಳು, ತ್ರೈಲೋಕ್ಯದೇವರು, ಅಕಳಂಕಸೂತ್ರಕ್ಕೆ ವೃತ್ತಿಯನ್ನು ಬರೆದ ಅನಂತವೀರ್ಯ ಭಟ್ಟಾರಕರು, ಕುಮಾರಸೇನದೇವರು, ಮುನಿದೇವರು, ವಿಮಳಚಂದ್ರ ಭಟ್ಟಾರಕರು, ರಾಯರಾಚಮಲ್ಲನಿಗೆ ಗುರುಗಳಾಗಿದ್ದ ಕನಕಸೇನ ಭಟ್ಟಾರಕರು, ಶಬ್ದಾನುಶಾಸನಕ್ಕೆ ಪ್ರಕ್ರಿಯೆ ಎಂಬ ರೂಪಸಿದ್ಧಿಯನ್ನು ಬರೆದ ದಯಾಪಾಲದೇವರು, ಪುಷ್ಯಸೇನ ಸಿದ್ಧಾಂತದೇವರು, ರಕ್ಕಸಗಂಗನಿಗೆ, ಚಟ್ಟಲದೇವಿಗೆ, ಬೀರದೇವನಿಗೆ, ನನ್ನಿ ಶಾಂತರನಿಗೆ ಗುರುಗಳಾಗಿದ್ದ ವಾದಿರಾಜದೇವರು, ವಿಜಯ ಭಟ್ಟಾರಕರು, ಶಾಂತಿದೇವರು, ಗುಣಸೇನದೇವರು, ದಯಾಪಾಲದೇವರು ಕಮಲಭದ್ರರು, ಜಿತಸೇನ ಪಂಡಿತರು, ಶ್ರೇಯಾಂಸ ಪಂಡಿತರು ಮುಂತಾದ ಇಪ್ಪತ್ತೇಳು ಜನ ಜೈನಮುನಿಗಳು ಈ ಹೊಂಬುಚದಲ್ಲಿದ್ದರು.

ಶ್ರೀ ಶ್ರೇಯಾಂಸ ಪಂಡಿತರ ಕಾಲದಲ್ಲಿ ಪಂಚಬಸದಿ ಸ್ಥಾಪಿಸಲ್ಪಟ್ಟಿತು. ಈ ಮುನಿಗಳಲ್ಲೆಲ್ಲಾ ವಾದಿವಿದ್ಯಾನಂದ ಎಂಬುವರು ಅತ್ಯಂತ ಪ್ರಸಿದ್ಧರು. ಇವರು ವಾದಿಗಳು, ವಾಗ್ಮಿಗಳು, ವಿದ್ವಾಂಸರು, ಜೈನಧರ್ಮ ಪ್ರತಿಪಾದಕರು ಆಗಿದ್ದರು. ಇವರ ಕಾಲ ಕ್ರಿ. ಶ. ೧೫೩೦. ಇವರ ಯಶಸ್ಸನ್ನು ಕೀರ್ತಿಸುವ ಶಾಸನ ಹೊಂಬುಚದ ಈಗಿನ ಸಭಾಮಂಟಪದ ದಕ್ಷಿಣದ ಗೋಡೆಯ ಬಳಿ ಸುರಕ್ಷಿತವಾಗಿ ಇಡಲ್ಪಟ್ಟಿದೆ. ಈ ಶಾಸನದಲ್ಲಿ ಹೊಗಳಿರುವ ಕೆಲವರ ಸಾಧನೆಗಳನ್ನು ಇಲ್ಲಿ ನೋಡೋಣ :

ವಿದ್ಯಾನಂದರು ನಂಜರಾಜಪಟ್ಟಣದ ರಾಜನಾದ ನಂಜಿಥೇವ ಭೂಪನ ಸಭೆಯಲ್ಲಿ ನಂದನಮಲ್ಲಿಭಟ್ಟ ಎಂಬುವನನ್ನು ವಾದದಲ್ಲಿ ಸೋಲಿಸಿದರು.

ಶ್ರೀರಂಗನಗರದ ಕಾರ್ಯನ (ಶ್ರೀರಂಗಪಟ್ಟಣದಲ್ಲಿದ್ದ ಕ್ರೈಸ್ತ ಪಾದ್ರಿ) ಪೇರಂಗಿ ಮತವನ್ನು ಖಂಡಿಸಿ ವಿದ್ವಾಂಸರ ಮೆಚ್ಚುಗೆಯನ್ನು ಗಳಿಸಿದರು. ದಿಲ್ಲಿಯ ಬಾದಶಹನಾದ ಸಿಕಂದರನಿಂದ ಗೌರವಗಳನ್ನು ಸ್ವೀಕರಿಸಿದರು. ಕ್ರಿ. ಶ. ೧೫೩೦ರಲ್ಲಿ ಪಾರ್ಶ್ವನಾಥ ಸ್ವಾಮಿಯ ಮೂರು ಅಂತಸ್ತುಗಳುಳ್ಳ ಬಸದಿಯನ್ನು ಇವರು ಪುನರ್ನಿರ್ಮಾಣ ಮಾಡಿದರು.

**ಶ್ರೀಪದ್ಮಾವತಿ ದೇವಾಲಯದ ಪುನರ್ನಿರ್ಮಾಣ:** ಇಲ್ಲಿನ ಶಾಸನಗಳು ಪದ್ಮಾವತಿ ದೇವಾಲಯದ ಪ್ರಥಮ ನಿರ್ಮಾಣ ಹಾಗೂ ಪುನರ್ನಿರ್ಮಾಣಗಳ ಬಗ್ಗೆಯೂ ಮಾಹಿತಿಗಳನ್ನು ಒದಗಿಸುತ್ತವೆ.

ಜಿನದತ್ತರಾಯ ಪೊಂಬುರ್ಚ ನಾಡನ್ನು ಆಳಿದ್ದು ಕ್ರಿ. ಶ. ೭ ನೆಯ ಶತಮಾನದಲ್ಲಿ ಎಂದು ಇತಿಹಾಸಕಾರರು ಹೇಳುತ್ತಾರೆ. ಆಗ ಅವನು ಮನೆದೇವತೆಯಾದ ಶ್ರೀ ಪದ್ಮಾವತಿದೇವಿಗಾಗಿ ಒಂದು ದೇವಾಲಯವನ್ನು ಕಟ್ಟಿಸಿದನು.

ಈಗಿನ ಪಾರ್ಶ್ವನಾಥಸ್ವಾಮಿ ಬಸದಿಯ ಮುಂಭಾಗದಲ್ಲಿ ಹಿಂದೆ ಒಂದು ಮುಖ ಮಂಟಪವಿತ್ತು. ಅದರ ತೋರಣದ ದಕ್ಷಿಣದ ಕಂಬದ ಮೇಲೆ ಒಂದು ಶಾಸನವಿದೆ. (ಈಗ ಈ ಮುಖ ಮಂಟಪವಿಲ್ಲ. ಈ ಶಾಸನವನ್ನು ದೇವಾಲಯದ ಆವರಣದಲ್ಲಿ ಇಡಲಾಗಿದೆ). ಇದು ವೀರ ಶಾಂತರನ ಕಾಲದಲ್ಲಿ ಅಂದರೆ ಕ್ರಿ. ಶ. ೧೦೬೨ರಲ್ಲಿ ಕಟೆದ ಶಾಸನ. ಇದರಲ್ಲಿ ವೀರ ಶಾಂತರನು ಪದ್ಮಾವತಿ ದೇವಾಲಯವನ್ನು ಪುನರ್ನಿರ್ಮಾಣ ಮಾಡಿದಂತೆ ಹೇಳಿದೆ.

**ಸಾಹಿತ್ಯ :** ಶ್ರೀ ಹೊಂಬುಚ ಕ್ಷೇತ್ರದ ಶಾಸನಗಳು ಕೇವಲ ರಾಜಕೀಯ ವರದಿಗಳಾಗಿರದೆ ಸುಂದರವಾದ ಪದ್ಯಗದ್ಯಾತ್ಮಕ ಸಾಹಿತ್ಯದಿಂದ ಕೂಡಿವೆ. ರಾಜನನ್ನೋ ರಾಣಿಯನ್ನೋ ಮಹಾದಾನಿಯನ್ನೋ ವಿದ್ವಾಂಸನನ್ನೋ ಹೊಗಳಲು ಇಲ್ಲಿ ಸಂಸ್ಕೃತವನ್ನೂ ಕನ್ನಡವನ್ನೂ ಬಳಸಿಕೊಂಡಿದ್ದಾರೆ. ಸಂಸ್ಕೃತ ವೃತ್ತ ಛಂದಸ್ಸಿನೊಂದಿಗೆ ಕನ್ನಡದ ಅಕ್ಕರ, ಕಂದಗಳನ್ನೂ ಬಳಸಿದ್ದಾರೆ. ಇಲ್ಲಿ ಕೆಲವನ್ನು ನೋಡೋಣ.

1. ಬೀರದೇವ ಒಬ್ಬ ಮಹಾ ಪರಾಕ್ರಮಿ. ಇವನಿಗೆ ವೀರಶಾನ್ತರ ಎಂಬ ಹೆಸರೂ ಇತ್ತು. ಇವನು ಶಾಂತರ ರಾಜ್ಯವನ್ನು ಕ್ರಿ. ಶ. ೧೦೬೦ ರಿಂದ ಕ್ರಿ. ಶ. ೧೦೬೮ರವರೆಗೆ ಆಳಿದ. ಇವನನ್ನು ಹೊಗಳುವ ಒಂದು ಪದ್ಯ ಹೀಗಿದೆ. ಇಲ್ಲಿ ಬೀರದೇವನ ವೀರತನ, ಕ್ಷಮಾಗುಣ ಮುಂತಾದುವು ಪ್ರತಿಬಿಂಬಿತವಾಗಿವೆ :

ಎಲಗೇ ಚೆನ್ನನೆ ಬೀರುಗಂ ವಪುವಿನಿಂ ಭಾವೋ
ದ್ಭವಂ ತೆಕ್ಕನೆಂ ।
ತಲಗೇ ಬೀರನೆ ಬೀರುಗಂ ಬಿರುದಿನಿಂ ಭೀಮೋ
ಪಮಂ ಭಾಪ್ಪು ಮ ।
ತ್ತೆಲಗೇ ದಾನಿಯೆ ಬೀರುಗಂ ಪಿರಿಯನಾ
ಕರ್ಣಾಖ್ಯ ನಿಂದಕ್ಕು ಮಂ ।
ತೆಲಗೇ ಬೀರಲದೇವಿ ನೋಂತಳವನೊಳು
ಕೂಡಿರ್ಪ ಸೌಭಾಗ್ಯಮಂ ।

ಪಂಪಾದೇವಿಯ ಶ್ರದ್ಧಾಭಕ್ತಿಗಳನ್ನು ಅಭಿವ್ಯಕ್ತಿಗೊಳಿಸುವ ಪದ್ಯ ಹೀಗಿದೆ :

ಧರೆಯೆಲ್ಲಂ ಚಿತ್ರ ಚೈತ್ರಾಲಯ ನವರಚನಾ
ಚೂಳಕಂ ದಿಕ್ಕುರೀಂದ್ರೋ ।
ತ್ಕರ ಕರ್ಣ ಶ್ರೇಣಿಯೆಲ್ಲಂ ಜಿನಸವ ನಿನದತ್ತೂರ್ಯ
ಕೊತ್ತಾಳ ತಾಳಂ ।
ಸ್ಫುರಿತೋದ್ಯದ್ವ್ಯೋಮವೆಲ್ಲಂ ಪರಜಿನಪತಿ
ಜ್ಯಾಧ್ವಜಂ ತಾನೆನಲ್ ।
ವರ ಪಂಪಾದೇವಿಯೆತ್ತಂ ಬೆಳಗುವಳರ್ಹಚ್ಛಾಸನ
ಶ್ರೀಯ ಪೆಂಪಂ ।

**ಕಲಾಭಿರುಚಿ :** ಆಗಿನ ಕಾಲದಲ್ಲಿ ಸಾಹಿತ್ಯದ ಜೊತೆಗೆ ಗಮಕ, ಕಾವ್ಯರಚನೆ ಮುಂತಾದುವಕ್ಕೂ ಪ್ರೋತ್ಸಾಹವಿತ್ತು.

ಈ ಪ್ರದೇಶದಲ್ಲಿದ್ದ ಜೈನಗುರುಗಳು ಧರ್ಮ ಬೋಧೆಯ ಜೊತೆಗೆ ಕಾವ್ಯರಚನೆ, ಕಾವ್ಯವಾಚನ ಮುಂತಾದ ಲಲಿತ ಕಲೆಗಳನ್ನೂ ಕಲಿತಿರುತ್ತಿದ್ದರು. ರಾಜಾಸ್ಥಾನಗಳಲ್ಲಿ ಆಗಾಗ್ಗೆ ಧರ್ಮ ಸಿದ್ಧಾಂತಗಳ ಬಗ್ಗೆ ಚರ್ಚೆಯೂ ನಡೆಯುತ್ತಿತ್ತು. ಆಗಾಗ್ಗೆ ಕಾವ್ಯವಾಚನವೂ ನಡೆಯುತ್ತಿತ್ತು.

ಬಾಲಚಂದ್ರದೇವರು ಎಂಬುವರು ಹೊಂಬುಚದಲ್ಲಿದ್ದ ಜೈನ ಸನ್ಯಾಸಿಗಳು. ಇವರು ಧರ್ಮ ಭೋಧೆಯ ಜೊತೆಗೆ ಕಾವ್ಯರಚನೆಯನ್ನೂ ಮಾಡುತ್ತಿದ್ದರು ; ಕಾವ್ಯ ವಾಚನವನ್ನೂ ಮಾಡುತ್ತಿದ್ದರು. ಇವರನ್ನು ಹೊಗಳುವ ಒಂದು ಶ್ಲೋಕ ಹೀಗಿದೆ :

ಕವಿತ್ವೇ ಗಮಕಿತ್ವೇಚ ವಾದಿತ್ವೇ ವಾಗ್ಮಿತಾಜಯೇ ।
ತ್ರೈವಿಧ್ಯ ಬಾಳಚಂದ್ರಸ್ಯ ಸದೃಕ್ಷೋ ನಾಸ್ತಿ
ನಾಸ್ತಿ ಹಿ ॥

**ಸಂಸ್ಕೃತ ಭಾಷೆ :** ಹೊಂಬುಚದಲ್ಲಿರುವ ಶಾಸನ ಸಾಹಿತ್ಯದಲ್ಲಿ ಸಾಕಷ್ಟು ಸಂಸ್ಕೃತವನ್ನು ಬಳಸಲಾಗಿದೆ. ಶಾಸನಕವಿಗಳು ಸಂಸ್ಕೃತ ಭಾಷೆಯಲ್ಲಿಯೂ ವಿದ್ವಾಂಸರಾಗಿರುತ್ತಿದ್ದರು ಎಂಬುದೂ ರೂವಾರಿಗಳು ಸಂಸ್ಕೃತ ಭಾಷಾಜ್ಞಾನವುಳ್ಳವರಾಗಿರುತ್ತಿದ್ದರು ಎಂಬುದೂ ಪೊಂಬುರ್ಚ ನಾಡನ್ನು ಆಳಿದ ಮಾಂಡಲಿಕರು ಸಂಸ್ಕೃತ ಭಾಷಾಭಿಮಾನಿಗಳೂ ಆಗಿದ್ದರು ಎಂಬುದೂ ಈ ಶಾಸನಗಳ ಅಧ್ಯಯನದಿಂದ ತಿಳಿದು ಬರುತ್ತದೆ.

ಪಂಚ ಬಸದಿಯ ಅಂಗಳದಲ್ಲಿ ಒಂದು ಶಾಸನವಿದೆ, ಇದನ್ನು ಕಟೆದ ಕಾಲ ಕ್ರಿ. ಶ. ೧೦೭೭.

ಅಕಲಂಕದೇವರು ಜೈನ ಸಂನ್ಯಾಸಿಗಳಲ್ಲಿ ಮಹಾ ಪ್ರಸಿದ್ಧರು. ಅವರನ್ನು ಪ್ರಶಂಸಿಸುವ ಒಂದು ಪದ್ಯ ಸಂಸ್ಕೃತದಲ್ಲಿದೆ. ಸ್ರಗ್ಧರಾವೃತ್ತದ ಈ ಪದ್ಯ ಅವರ ವಿದ್ವತ್ತನ್ನು ಯಥಾವತ್ತಾಗಿ ಪ್ರತಿಬಿಂಬಿಸುವಲ್ಲಿ ಸಫಲತೆಯನ್ನು ಪಡೆದಿದೆ. ಆ ಪದ್ಯ ಹೀಗಿದೆ :

ರಾಜನ್ಸುದ್ಧೋಪ್ಯಬುದ್ಧಸ್ಸುರಗುರುರಗುರುಃ
ಪೂರಣೋಽಪೂರಣೋಚ್ಚಃ ।
ಸ್ಥಾಣುಃ ಸ್ಥಾಣುಸ್ತ್ವಜೋಽಜೋರವಿರವಿರಲ
ಘುರ್ಮಾಧವೋಽಮಾಧವಸ್ತು ।
ವ್ಯಾಸೋಪ್ಯವ್ಯಾಸಯುಕ್ತಃ ಕಣಭುಗಕಣ ಭುಗ್ವಾಗ
ವಾಗೇವ ದೇವೀ ।
ಸ್ಯಾದ್ವಾದಾಮೋಘ ಜಿಹ್ವೇ ಮಯಿ ವಿಶತಿ
ಸತಿಮ್ಮಂಟಪಂ ವಾದಿಸಿಂಹೇ ॥

**ಪಂಚಮಹಾಮಾತೆಯರು :** ಹೊಂಬುಚದ ಶಾಸನಗಳಲ್ಲಿರುವ ಸಂಸ್ಕೃತ ಸಾಹಿತ್ಯವನ್ನು ವಿವೇಚಿಸುವಾಗ ನಮ್ಮ ಗಮನವನ್ನು ಸೆಳೆಯುವ ಅಂಶಗಳಲ್ಲಿ ಪಂಚಮಹಾಮಾತೆಯರ ವಿಷಯವೂ ಒಂದು. ಸಾಮಾನ್ಯವಾಗಿ ವೈದಿಕ ಸಂಪ್ರದಾಯದಲ್ಲಿ "ಅಹಲ್ಯಾ, ದ್ರೌಪದೀ, ಸೀತಾ, ತಾರಾ ಮಂಡೋದರೀ ತಥಾ। ಪಂಚಕನ್ಯಾಂ ಸ್ಮರೇನ್ನಿತ್ಯಂ ಮಹಾಪಾತಕ ನಾಶನಂ" ಎಂದು ಪಂಚಮಹಾ

ಮಾತೆಯರನ್ನು ಪಂಚ ಪತಿವ್ರತೆಯರು ಎಂಬ ಆಭಿಧಾನದಿಂದ ಕರೆಯುವ ವಾಡಿಕೆ ಇದೆ. ಅದೇ ರೀತಿ ಜೈನ ಸಂಪ್ರದಾಯದಲ್ಲಿಯೂ ಪಂಚಪತಿವ್ರತೆಯರನ್ನು ಸ್ಮರಿಸುವ ಸಂಪ್ರದಾಯವಿದೆ. ಶಾಸನ ಸಾಹಿತ್ಯದಲ್ಲಿ ಅಪರೂಪವಾಗಿ ಸಿಗುವ ಈ ಪಂಚಮಾತೆಯರ ಸ್ಮರಣೆಯನ್ನು ಹೊಂಬುಚದ ಶಾಸನಗಳಲ್ಲಿ ನೋಡಬಹುದು.

ಪಂಚ ಬಸದಿಯ ನಿರ್ಮಾಣಕ್ಕೆ ಕಾರಣೀಭೂತಳಾದ ಚಟ್ಟಲದೇವಿಯನ್ನು ಹೊಗಳುವಾಗ ಪಂಚಮಾತೆಯರನ್ನು ಸ್ಮರಿಸಿ, ಚಟ್ಟಲದೇವಿ ಈ ಪಂಚಮಹಾಮಾತೆಯರ ಸರಿಸಮಾನಳು ಎಂಬುದನ್ನು ಕವಿ ಹೇಳಿದ್ದಾನೆ. ಆ ಶ್ಲೋಕ ಹೀಗಿದೆ :

ಆಹಾರಾಭಯ ಭೈಷಜ್ಯ ಶಾಸ್ತ್ರ ದಾನೈರ್ನ್ನಿರನ್ನರೈಃ ।
ಶ್ರೀಮಚ್ಚಟ್ಟಲದೇವೀಯಂ ಬಾಭಾತಿ ಭುವನಸ್ತುತಾಂ ।
ರೋಹಿಣೀ ಚೇಳಿನೀ ಸೀತಾ ರೇವತಾ ಚ ಪ್ರಭಾವತೀ ।
ಪುಶ್ರೂಯನ್ತೇ ವಾರ್ತಾಯಾ ಸೇಯಂ ದೃಶ್ಯತೇ ವಿಮಳೈರ್ಗುಣೈಃ ॥

**ರೂವಾರಿಗಳು :** ಕೆಲವು ಶಾಸನಗಳಲ್ಲಿ ರೂವಾರಿಗಳು ತಮ್ಮ ಹೆಸರನ್ನು ಹೇಳಿಕೊಂಡಿದ್ದಾರೆ.

1. ಸೂಳೆಯ ಬಸದಿಯ ಎದುರಿಗಿರುವ ಶಾಸನವನ್ನು ಕಟೆದವನು ಸಕಲ ಚಂದ್ರ ಪಂಡಿತ ದೇವರ ಶಿಷ್ಯನಾದ ಮಲ್ಲಿನಾಥ.
2. ಪಂಚ ಬಸದಿಯ ಮುಂದಿರುವ ತೋರಣ ಬಾಗಿಲಿನ ಉತ್ತರದ ಕಡೆಯ ಕಂಬದಲ್ಲಿದಲ್ಲಿರುವ ಶಾಸನವನ್ನು ಕಟೆದವನು ಮಾದೆಯ. ಇದನ್ನು ಬರೆಸಿದವನು ದೇವರಸ ದಣ್ಣಾಯಕ.
3. ಪಂಚ ಬಸದಿಯ ಅಂಗಳದ ಮಾನಸ್ತಂಭದ ಪೂರ್ವಮುಖದ ಶಾಸನವನ್ನು ಕಟೆದವನು ನನ್ನೋಜ. ಇವನು ಶ್ರೇಯಾಂಸ ಪಂಡಿತರ ಶಿಷ್ಯ.
4. ಇದೇ ಮಾನಸ್ತಂಭದ ಪಶ್ಚಿಮ ಮತ್ತು ಉತ್ತರಮುಖದ ಶಾಸನವನ್ನು ಕಟೆದವನು ಸೇನಬೋವ ಶೋಭನಯ್ಯ.
5. ಪಾರ್ಶ್ವನಾಥ ಬಸದಿಯ ಬಾಗಿಲಿನ ಪಶ್ಚಿಮ ಗೋಡೆಯ ಮೇಲಿನ ಶಾಸನವನ್ನು ಕಟೆದವನು ಸಾಯೋಜನ ಮಗ ಸಾಂತೋಜ. ೦

ಡಾ॥ ಎಲ್. ಆರ್. ಕುಲಕರ್ಣಿ

# ಬಸವಪೂರ್ವದ ಬೀದರ ಜಿಲ್ಲೆಯ ಶಿವಶರಣ-ವೀರಸಂಗಯ್ಯ

ಕರ್ನಾಟಕದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಇತಿಹಾಸದ ಪುಟಗಳಲ್ಲಿ ಕಲ್ಯಾಣದ ಕ್ರಾಂತಿ ಒಂದು ಮಹೋನ್ನತ ಪುಟ. ದೀನ-ದಲಿತರ ಬದುಕಿಗೆ ಪುಷ್ಟಿ ಸಮಷ್ಟಿಯನ್ನು ನೀಡಿದ ನವೋದಯ ಕಾಲ. ಮಾನವ ಧರ್ಮದ ಮೂಲವನ್ನೇ ಹಿಂಜಿದ ಅಪೂರ್ವ–ಅದ್ಭುತ ಘಟನೆ. ಜಾತೀಯತೆ-ಕಂದಾಚಾರಗಳನ್ನು ಒಡೆದು ವ್ಯಕ್ತಿ ಗೌರವ - ಸ್ವಾತಂತ್ರ್ಯ, ಸಮಾನತೆ, ಪ್ರೀತಿ, ಸಾಮರಸ್ಯ, ಕಾಯಕತತ್ವಗಳ ಮೇಲೆ ಹೊಸ ಸಮಾಜವನ್ನು ಶರಣರು ರೂಪಿಸಿದರು. ಬದುಕಿನ ಮೌಲ್ಯಗಳನ್ನು ಪುನಃ ವಿಮರ್ಶಿಸಿದರು. ಶೋಷಣೆ, ದರ್ಪ–ದಬ್ಬಾಳಿಕೆ-ದೌರ್ಜನ್ಯಗಳ ವಿರುದ್ಧ ಹೊಸ ಧ್ವನಿಯನ್ನು ಎತ್ತಿದರು. ಪ್ರಪಂಚದ ಸಾಮಾಜಿಕ ಇತಿಹಾಸಕ್ಕೆ ಅಪೂರ್ವ ಕಾಣಿಕೆ ನೀಡಿದರು. ಅವರು ವಂದ್ಯರು.

ಇಂಥ ಶರಣರ ಸಾಲಿನಲ್ಲಿ ಬೀದರದ ವೀರ-ಗಣಾಚಾರಿ-ವೀರಸಂಗಯ್ಯ ಪ್ರಮುಖನಾಗಿದ್ದಾನೆ.[1] ೧೨ನೇ ಶತಮಾನದಲ್ಲಿ ಕಲ್ಯಾಣದಲ್ಲಿ ಕ್ರಾಂತಿ ನಡೆಯುವ ಮುನ್ನವೆ ದರ್ಪ - ದೌರ್ಜನ್ಯಗಳ ವಿರುದ್ಧ ಖಡ್ಗ ಹಿರಿದ ವೀರಸಂಗಯ್ಯ ಕಲ್ಯಾಣದ ಕ್ರಾಂತಿಯ ಕಿಡಿಗೆ ಮೂಲ ಪ್ರೇರಕನೆಂದರೆ ಅತಿಶಯೋಕ್ತಿಯಲ್ಲ. ಇಡೀ ಪ್ರದೇಶವನ್ನೇ ವೀರಶೈವ ಧರ್ಮದ ಕೇಂದ್ರವನ್ನಾಗಿ ಬೆಳಗಿಸಿದ ಮಹಾ ಪ್ರಭಾವಶಾಲಿ ಶರಣನವನು. ಆತನ ಹೆಂಡತಿ ಚಂದ್ರಾಣಿ ಪುರುಷ ದಬ್ಬಾಳಿಕೆಯ ವಿರುದ್ಧ ಪ್ರತಿಭಟಿಸಿ ತನ್ನನ್ನು ತಾನೇ ರಕ್ಷಿಸಿಕೊಂಡ ವೀರಶರಣೆ. ಇವರೀರ್ವರ ಪರಿಚಯ ಲೇಖನ ಒಂದು ಶರಣ ಸಂಸ್ಕೃತಿಯ ನಿಜ ದರ್ಶನವಾಗಿದೆ.

ವೀರಸಂಗಯ್ಯನ ಬಗೆಗೆ ವಿವರವಾದ ಮಾಹಿತಿ ಲಭ್ಯವಿಲ್ಲವಾದರೂ, ಚೆನ್ನಮಲ್ಲಯ್ಯ ವಿರಚಿತ 'ವೀರ ಸಂಗಯ್ಯನ ಚೌಪದನ'ದಲ್ಲಿ ಬರುವ ವರ್ಣನೆಯಿಂದ ಸಮಗ್ರವಲ್ಲದಿದ್ದರೂ ಆತನ ಮಹತ್ವಪೂರ್ಣ ಕಾರ್ಯದ ಬಗೆಗೆ ನಮಗೆ ಮಾಹಿತಿ ದೊರೆಯುತ್ತದೆ.

ಶತ-ಶತಮಾನಗಳಿಂದಲೂ ಬೀದರ ಸಂತರ ಶರಣರ ತವರೂರು. ಶಿವಭಕ್ತಿಯ ಕೇಂದ್ರ. ಇಂಥ ಪವಿತ್ರ ಪರಿಸರದಲ್ಲಿ ಶರಣ ಸಂಸ್ಕೃತಿಗೆ ಸುಪ್ರಸಿದ್ಧವಾದ ಮನೆತನದಲ್ಲಿ ಸಂಗಯ್ಯನ ಜನನ. 'ಸ್ವಾಮಿ ಹುಟ್ಟಿದನು ಬಿದರೂರು ಪುರದೊಳಗೆ.'[2] ವೀರಸಂಗಯ್ಯನ ತಂದೆ ಕಾಮಣ್ಣ, ತಾಯಿ ಸೋಮಲದೇವಿ.[3] ಶಿವ-ಭಕ್ತಿ ದುರಂಧರರೆಂದು ಮೆರೆದವರು. ನಿಗರ್ವಿ ದಂಪತಿಗಳು. ಸಂತಾನವಿಲ್ಲವೆಂಬ

1. ಶಿವಶರಣ ವೀರಸಂಗಯ್ಯನ ಬಗೆಗೆ ಲೇಖನ ಬರೆಯಲು ನನಗೆ ಪ್ರೇರಣೆ ನೀಡಿದವರು ಲಾಡಗೇರಿಮಠದ ಶ್ರೀ ಶಾಂತಲಿಂಗ ಸ್ವಾಮಿಗಳು. ಲೇಖನಕ್ಕೆ ಬೇಕಾದ ಆಧಾರಗಳನ್ನು ಹಾಗೂ ಸೂಕ್ತ ಸಲಹೆಗಳನ್ನು ಒದಗಿಸಿದ್ದಾರೆ. ಅವರಿಗೆ ನಾನು ಕೃತಜ್ಞ,
2. 'ಚೌಪದನ', ಡಾ॥ ಸುಂಕಾಪುರ (ಸಂ.), ಜೀವನ ಜೋಕಾಲಿ, ಪು. ೭೯ ; ಫ. ಗು. ಹಳಕಟ್ಟಿ, ಶಿವಶರಣರ ಚರಿತ್ರೆ, ಭಾಗ-೧,೨ ; ತ. ಸು. ಶಾಮರಾಯ, ಶಿವಶರಣ ಕಥಾರತ್ನಕೋಶ, ಪು. ೪೨೨. ಬೀದರ ನಗರಕ್ಕೆ ಅನೇಕ ಹೆಸರುಗಳು : ಬಿದಿರೆ > ಬಿದಿರುಪುರ > ಬಿದಿರೂರುಪುರ.
3. ಅದೃಶ್ಯಕವಿ, ಪ್ರೌಢರಾಯನಕಾವ್ಯ, ಸಂಧಿ. ೧೩.

ಕೊರಗು. ಕಾರಣ ಕುಲದೇವತೆಯಾದ ಕೇತಕಿ ಸಂಗಮೇಶ್ವರನಲ್ಲಿ ಸಂತಾನಕ್ಕಾಗಿ ಪ್ರಾರ್ಥನೆ.[4] "ನಂಬಿ ಕರೆದರೆ ಓ ಎನ್ನನೇ ಶಿವನು." ದಂಪತಿಗಳ ಸದಾಚಾರ-ಸದ್ಭಕ್ತಿಗಳ ಫಲವಾಗಿ ಅವರಿಗೆ ಸಂತಾನ ಪ್ರಾಪ್ತಿ. ಸಂಗಮೇಶ್ವರನ ಕೃಪೆಯಿಂದ ಜನಿಸಿದ ಕಾರಣ ಸಂಗಯ್ಯನೆಂದೇ ನಾಮಕರಣ.

ಅದೃಶ್ಯಕವಿ ವಿರಚಿತ 'ಪ್ರೌಢರಾಯನಕಾವ್ಯ'ದಲ್ಲಿ ನಿರೂಪಿಸಿದಂತೆ,

> ಆ ಪುರದಿ (ಬೀದರ ಕೋಟೆ) ಶಿವಭಕ್ತ ಶಿವ
> ಸೀಮಂತ ಮಣಿಯನಿಪ । ಗೋಪವಾಹನಪಾದ ।
> ಭಜಕ ಕಾಮಣ್ಣಯ್ಯನ । ರೂಪುಯೌವನ ಸಗುಣ
> ರಾಜಿ-ರಾಜಿಸುವ ಸೋಮಲದೇವಿ ।
> ಯೆಂದೆಂಬುವ । ಓಪಳೊಡಗೂಡಿರುತ ।
> ವ್ಯಾವಹಾರಮುಖದಿಂದ । ಸೋಪು-ಸಕಲಾತಿ
> ನವರತ್ನ ವಾಜಿಯ ಫಲವ । ಕೇಪುಗಳ
> ತಂದು ಬೆಲೆಗಿತ್ತು ಬಿಲುಹರದನಾಗಿರಲು
> ಒಂದು ದಿವಸದಲಿ ॥ ೧೩ ॥ [5]

ವೀರಸಂಗಯ್ಯನ ತಂದೆ ಕಾಮಣ್ಣಯ್ಯ ಒಬ್ಬ ಸುಪ್ರಸಿದ್ಧ ವ್ಯಾಪಾರಿಯಾಗಿದ್ದ. ನವರತ್ನ ಮುಂತಾದ ಬೆಲೆಯುಳ್ಳ ವಸ್ತುಗಳಲ್ಲಿ ವ್ಯಾಪಾರ ವಹಿವಾಟು ಇಟ್ಟುಕೊಂಡಿದ್ದನೆಂದರೆ ಆತನೊಬ್ಬ ಅತ್ಯಂತ ಶ್ರೀಮಂತ ಹಾಗೂ ರಾಜಮನ್ನಣೆ ಪಡೆದ ವರ್ತಕನಾಗಿದ್ದನೆಂದು ನಂಬಲು ಸಾಧ್ಯವಿದೆ. ಚಾಲುಕ್ಯ, ರಾಷ್ಟ್ರಕೂಟ ಹಾಗೂ ಕಾಕತೀಯರ ಕಾಲದ ಅನೇಕ ಶಾಸನಗಳಲ್ಲಿ ಇಂಥ ಶ್ರೀಮಂತ ವರ್ತಕರ ಹೆಸರುಗಳನ್ನು ನಾವು ಕಾಣುತ್ತೇವೆ. ಅವರೆಲ್ಲ 'ವೀರ ಬಣಜಿಗ'ರೆಂದು ವರ್ಣಿಸಲ್ಪಟ್ಟಿದ್ದಾರೆ. ಇಲ್ಲಿ ಕಾಮಣ್ಣಯ್ಯನೂ ಒಬ್ಬ ಧನಿಕ 'ವೀರ ಬಣಜಿಗ'ನೆಂದು ಭಾವಿಸಿದರೆ ಇತಿಹಾಸಕ್ಕೆ ಅಪಚಾರವಾಗಲಾರದು.

ಸಂಗಯ್ಯನ ಬಾಲ್ಯ ಪವಿತ್ರ ಪರಿಸರದಲ್ಲಿ ರೂಪಿತವಾಯಿತು. ಶಿವದೇವಸ್ವಾಮಿಗಳು ಸಂಗಯ್ಯನಿಗೆ ದೀಕ್ಷೆ ನೀಡಿದರು. ಬಹುಶಃ ಸಂಗಯ್ಯನಿಗೆ ಆಗ ೧೨ ವರುಷ ವಯಸ್ಸು. ಶಿವದೇವಸ್ವಾಮಿಗಳು ರುದ್ರಮುನಿಗಳ ಉತ್ತರಾಧಿಕಾರಿಗಳು. ರುದ್ರಮುನಿಗಳು ಮಹಾತಪಸ್ವಿಗಳು. ಆಂಧ್ರ-ಕರ್ನಾಟಕದಲ್ಲಿ ಅನೇಕ ಮಠಗಳನ್ನು ಸ್ಥಾಪಿಸಿ ವೀರಶೈವ ಧರ್ಮದ ಪತಾಕೆಯನ್ನು ಹಾರಿಸಿದರು.

ಗುರುಲಿಂಗಜಂಗಮ ದಾಸೋಹಕ್ಕೆ ಇವರ ಮಠ ಸುಪ್ರಸಿದ್ಧ.[6] ಇಡೀ ಪರಿಸರವೆಲ್ಲಾ ವೀರಶೈವ ಧರ್ಮದ ಹಾಗೂ ಜ್ಞಾನದ ಕೇಂದ್ರವಾಗಿತ್ತು. ಇಂಥ ಪವಿತ್ರ ಪರಿಸರದಲ್ಲಿ ವೀರಸಂಗಯ್ಯ ತನ್ನ ಬಾಲ್ಯದ ಕ್ಷಣಗಳನ್ನು ಕಳೆದ.

ಈ ಮೇಲಿನ ಮಾತಿಗೆ ಒಪ್ಪವಾಗುವಂತೆ ನಮಗೆ ದೊರೆತ 'ಓಂಕಾರೇಶ್ವರ ಚರಿತ್ರೆ'ಯಲ್ಲಿ ಉಪಯುಕ್ತವಾದ ಮಾಹಿತಿ ದೊರೆತಿದೆ. ಈ ಚರಿತ್ರೆ ನಮಗೆ ಕೋಹಿರದಲ್ಲಿ ಡಾ॥ ಡಿ. ಎನ್. ದೀಕ್ಷಿತ (ಮಹಾರಾಜ) ಅವರ ಮನೆಯಲ್ಲಿ ದೊರೆಯಿತು. ಕೋಹಿರ ಗ್ರಾಮದ ಬಗ್ಗೆ ಹಾಗೂ ವೀರಸಂಗಯ್ಯನ ಜೀವನದ ಬಗ್ಗೆ ಈ ಚರಿತ್ರೆ ಹೊಸ ಬೆಳಕನ್ನು ಚೆಲ್ಲುತ್ತದೆ. ಈ ಚರಿತ್ರೆಯನ್ನು ಕಾಲ-ಕಾಲಕ್ಕೆ ಬರೆಯಲಾಗಿದೆ. ಸುಮಾರು ೫೦೦ ಅಧ್ಯಾಯಗಳನ್ನೊಳಗೊಂಡ ಈ ಚರಿತ್ರೆ ಸಂಸ್ಕೃತದಲ್ಲಿ ಬರೆಯಲ್ಪಟ್ಟಿದೆ. ಎಲ್ಲ ಅಧ್ಯಾಯಗಳೂ ದೊರೆಯುವುದಿಲ್ಲ. ಉಳಿದಿದ್ದರಲ್ಲಿ ಉಪಯುಕ್ತ ಮಾಹಿತಿ ಲಭ್ಯ. ಈ ಚರಿತ್ರೆಯ ಪ್ರಕಾರ ವೀರಸಂಗಯ್ಯ ಬಾಲ್ಯದಲ್ಲಿಯೇ ಪ್ರತಾಪಿಯಾಗಿದ್ದ. ಅತುಲ ತೇಜಸ್ವಿಯಾಗಿದ್ದ. ಒಂದು ಸಲ ಕೋಹಿರದ ದೀಕ್ಷಿತ ಮನೆತನದ ೨ನೇ ವೇಣಂಭಟ್ಟರು (೧೦೦೦ ವರುಷಗಳ ಹಿಂದೆ ಜೀವಿಸಿದ್ದರು) ಬೀದರ ನಗರಕ್ಕೆ ಬಂದರು. ಅವರ ಉದ್ದೇಶ ಬೀದರದ ನರಸಿಂಹಕ್ಷೇತ್ರಕ್ಕೆ (ನರಸಿಂಹಝರಾ) ಭೇಟಿ ನೀಡುವದಾಗಿತ್ತು. ಆಗ ತೇಜಸ್ವಿ ಬಾಲಕನಾದ ವೀರಸಂಗಯ್ಯನ ಭೇಟಿಯಾಯಿತು. ವಿಭೂತಿ-ರುದ್ರಾಕ್ಷಿ ಧರಿಸಿದ ವೀರಸಂಗಯ್ಯ ಇವರಿಗೆ ಶಿವನ ಪುತ್ರನೆಂದೆ ಕಂಗೊಳಿಸಿದನಂತೆ. ಕುತೂಹಲ ತಡೆಯದೆ ವೇಣಂಭಟ್ಟರು ಆತನ ಹೆಸರು ಕೇಳಿದರಂತೆ. ವೀರ

---

4. ಈ ದೇವಾಲಯ ಜಹಿರಾಬಾದ್ ಸಮೀಪದಲ್ಲಿದೆ. ಅನೇಕರ ಕುಲದೇವತೆ.
5. ಅದೃಶ್ಯಕವಿ, ಪ್ರೌಢದೇವರಾಯನ ಕಾವ್ಯ. ಸಂಧಿ ೧೩
6. ಬೀದರದ ಲಾಡಗೇರಿ ರುದ್ರಮುನಿಗಳ ಮಠ ಇಂದಿಗೂ ಸುಪ್ರಸಿದ್ಧ. ಇವರು ಬಸವಪೂರ್ವದವರು. ಇವರ ಬಗೆಗೆ ವಿವರವಾದ ಲೇಖನ ಬರೆಯುತ್ತಿದ್ದೇನೆ.

ಸಂಗಯ್ಯ ದಿಟ್ಟತನದಿಂದ ಸ್ಪಷ್ಟ ಕನ್ನಡದಲ್ಲಿ ಅವರಿಗೆ ಉತ್ತರ ಕೊಟ್ಟನಂತೆ.

ವೇಣಂಭಟ್ಟರು ಸಂಪ್ರೀತರಾಗಿ ಆತನನ್ನು ಕೋಹಿರಕ್ಕೆ "ನನ್ನ ಹಿಂಬಾಲ ಬರುತ್ತೀಯಾ" ಎಂದು ಕೇಳಿದಾಗ "ಯಾಕಾಗಲಿ" ಎಂದು ವೀರಸಂಗಯ್ಯ ಉತ್ಸಾಹದಿಂದ ನುಡಿದನಂತೆ. ಒಂದು ಸಾವಿರ ವರ್ಷಗಳ ಹಿಂದೆಯೇ ಬೀದರದಲ್ಲಿ ಕನ್ನಡ ಭಾಷೆ ಪ್ರಚಲಿತವಿತ್ತು ಎಂಬ ಅಂಶ ಈ ಚರಿತ್ರೆಯಿಂದ ಬೆಳಕಿಗೆ ಬರುತ್ತದೆ.

"ಸೋಮನಾ ಪ್ರಭೆಯಂತೆ ಬೆಳೆದ" ಸಂಗಯ್ಯನನ್ನು ಕಂಡು ತಂದೆ-ತಾಯಿಗಳಿಗೆ ಅವನ ಮದುವೆ ಮಾಡಬೇಕೆಂಬ ಹಂಬಲ ಮೂಡಿತು. ಓಂಕಾರಪುರದಲ್ಲಿರುವ ಬೀಗರ ಮನೆಯ ವಧು ಚಂದ್ರುಣಿಯೇ ಸಂಗಯ್ಯನಿಗೆ ಸೂಕ್ತಳೆಂದು ತೀರ್ಮಾನಿಸಿದರು. ಚಂದ್ರುಣಿ ಭೀಮಯ್ಯ-ಕಮಲದೇವಿ ಅವರ ಏಕೈಕ ಪುತ್ರಿ. ಓಂಕಾರೇಶ್ವರ ಚರಿತ್ರೆಯಲ್ಲಿ ವರ್ಣಿಸಿದಂತೆ ಚಂದ್ರುಣಿ ಲಿಂಗಾಧಾರಿಣಿಯಾದ ಸೌಜನ್ಯ ಸುಂದರಿ. ಎಕ್ಕಲಾದೇವಿಯ ಪರಮಭಕ್ತಳು. ವೀರಸಂಗಯ್ಯನೊಂದಿಗೆ ವಿವಾಹ ನಿಶ್ಚಿತವಾಯಿತು. ಓಂಕಾರಪುರದ ಮುತ್ತೈದೆಯರು ಚಂದ್ರುಣಿಗೆ ಎಣ್ಣೆ ಹಚ್ಚಿ ಪನ್ನೀರನೆರೆದು ಸೋಬಾನ ಹಾಡಿ ಮುತ್ತಿನದಂಡೆ ಕಟ್ಟಿದರು. ಓರಗೆಯ ಗೆಳತಿಯರೊಡನೆ ನಕ್ಕು ನಲಿಯುತ್ತ ಕೋರೂಟ ಮುಗಿಸಿ ಬೀದಿಯಲ್ಲಿ ಬರುತ್ತಿರುವಾಗ ನಗರದ ಅರಸ ಮಾಧವರಾಯನ ಕುವರ ಭಾಸ್ಕರ ತನ್ನ ದಂಡಿನೊಂದಿಗೆ ಅಲ್ಲಿಗೆ ಬಂದ. ಚಂದ್ರುಣಿಯ ರೂಪ ಯೌವನ ಕಂಡು ಮೋಹ ಪರವಶನಾದ. ಅವಳನ್ನು ವಶಪಡಿಸಿಕೊಳ್ಳಬೇಕೆಂದು ಚಿಂತಾತುರನಾದ. ಆದರೆ ಪರ-ಪುರುಷನ ನೋಟದಿಂದ "ವಿಧಿಯೆಮಗೆ ಬಂತೆಂದು" ಮನನೊಂದು ಮನೆಗೆ ಬಂದು ತಾಯಿಯ ಮಡಿಲಲ್ಲಿ ದುಃಖಿಸಿದಳು. ನಿನಗೆ "ಬೈದವರ ಎಳೆತರಿಸಿ ಕೊಲ್ಲಿಸುವೆ" ಎಂದು ತಂದೆ ತಾಯಿಗಳು ಅವಳನ್ನು ಸಂತೈಯಿಸಿದರು.

ಮೋಹಪರವಶನಾದ ಭಾಸ್ಕರ ಚಂದ್ರುಣಿಯನ್ನು ಕರೆತರಬೇಕೆಂದು ತನ್ನ ಸೈನಿಕರನ್ನು ಕಳಿಸಿದ. ಚಂದ್ರುಣಿಯ ತಂದೆ ಒಂದು ತನ್ನ ಮಗಳನ್ನು ಭಾಸ್ಕರನಿಗೆ ಕೊಡುವುದಿಲ್ಲವೆಂದು ನುಡಿದ. ಭಾಸ್ಕರ ಧನ, ಕನಕದ ಆಸೆ ಆಮಿಷ ನೀಡಿದ. ರಾಜ್ಯದಲ್ಲಿ ಸುಖವಾಗಿರಲು ಸೌಕರ್ಯ ನೀಡುವುದಾಗಿ ಹೇಳಿದ. ಯಾವುದಕ್ಕೂ ಭೀಮಯ್ಯ ಒಪ್ಪದೆ ಅವಳು ವೀರಸಂಗಯ್ಯನ ಮಡದಿಯೆಂದು ಹೇಳಿದ. ಕುಪಿತನಾದ ಭಾಸ್ಕರ ಭೀಮಯ್ಯನನ್ನು ಹೊರನೂಕಿಸಿದ ಹಾಗೂ ಸೈನಿಕರನ್ನು ಚಂದ್ರುಣಿಯನ್ನು ಕರೆತರಲು ಕಳಿಸಿದ. ಚಂದ್ರುಣಿ ಧೈರ್ಯದಿಂದ ಭಾಸ್ಕರನ ಅರಮನೆಗೆ ಬಂದು "ಅರಮನೆಗೆ ಬರಬಹುದೆ ಪುರುಷನುಳ್ಳವಳು. ಶರಣ ಕೇಳಿದರೆ ನಿಮ್ಮ ಮುರಿದು ಕೊಲ್ಲುವರು" ಎಂದು ಭಾಸ್ಕರನಿಗೆ ಸ್ತ್ರೀಧರ್ಮದ ಹಿತನುಡಿಗಳಿಂದ ಚುಚ್ಚಿದಳು. ಹೀಗೆಯೇ ಭಾಸ್ಕರ ಹಾಗೂ ಚಂದ್ರುಣಿ ಅವರೀರ್ವರಲ್ಲಿ ವಾದ-ವಿವಾದ ಬೆಳೆದು ಕೊನೆಗೆ ಭಾಸ್ಕರ ಚಂದ್ರುಣಿಯ ಸೆರಗನ್ನು ಹಿಡಿದೆಳೆದ. ಘಾಸಿಯಾದ ಚಂದ್ರುಣಿ ಸೆರಗ ಭವಿ ಮುಟ್ಟಿದನೆಂದು ಮುತ್ತಿನ ದಂಡೆ ಹರಿದು ಹಾಕಿದಳು. ಶೀಲ ರಕ್ಷಣೆಗಾಗಿ ಮಾರಿಯಂತೆ ಪ್ರತಿಭಟಿಸಿದಳು. ಮನೆಗೆ ಬಂದು ಅರಮನೆಯಲ್ಲಿ ನಡೆದ ಘಟನೆಯನ್ನು ತಿಳಿಸಿದಳು. ಬಿದರೂರು ಪುರದಲ್ಲಿರುವ ವೀರಸಂಗಯ್ಯನಿಗೂ ತಿಳಿಸಿದಳು.

ಓಂಕಾರಪುರದಲ್ಲಿ ನಡೆದ ಘಟನೆಯ ಸುದ್ದಿಯನ್ನು ಕೇಳಿ ವೀರಸಂಗಯ್ಯ ಕ್ರೋಧತಪ್ತನಾದ. "ಕಡಿದು ಭಾಸ್ಕರನ ಶಿರ ಚಂಡಾಡದತನಕ ಬಿಡೆನೆಂದು" ಮೀಸೆ ಹುರಿಗೊಳಿಸಿದ. ಲಗು-ಬಗೆಯಿಂದ ಓಂಕಾರಪುರಕ್ಕೆ ನಿಬ್ಬಣವನ್ನು ಹೊರಡಿಸಿದ. ಬಿದರೂರುಪುರದ ಬೀಗರನ್ನು ಭೀಮಯ್ಯ ಆದರದಿಂದ ಸ್ವಾಗತಿಸಿದ. ಗುರು-ಹಿರಿಯರ-ನೆಂಟರೆಲ್ಲರ ಎದುರಿನಲ್ಲಿ ಶುಭಮುಹೂರ್ತದಲ್ಲಿ ವೀರಸಂಗಯ್ಯ-ಚಂದ್ರುಣಿಯರ ವಿವಾಹ ನಡೆದು ಹೋಯಿತು. ಅದ್ದೂರಿಯ ಮೆರವಣಿಗೆಯಲ್ಲಿ ಮಗಳನ್ನು ಭೀಮಯ್ಯ ಬೀಳ್ಕೊಟ್ಟ.

ಇನ್ನೂ ಚಂದ್ರುಣಿಯ ಕನಸನ್ನೇ ಕಾಣುತ್ತಿದ್ದ ಭಾಸ್ಕರ ಮೆರವಣಿಗೆಯ ಸಪ್ಪಳ ಕೇಳಿ ಚಂದ್ರುಣಿಯ ಮದುವೆ ನಡೆದು ಹೋಯಿತೆಂದು ತಿಳಿದು ತನ್ನ ಸೈನಿಕರನ್ನು ಮೆರವಣಿಗೆಯ ಮೇಲೆ ಮುತ್ತಿಗೆ ಹಾಕಲು ಕಳಿಸಿದ. ವೀರಾಧಿ-ವೀರಸಂಗಯ್ಯ "ಹೆಣ್ಣು ಕೇಳುವನ ಹೆಸರೇನು ? ಕಣ್ಣು ತಲೆ ವಾಸುಂಟು ನಿಮ್ಮ ಅರಸನಿಗೆ ಮಣ್ಣು ಕಾಣದೆ ಸಾಯಬೇಡ" ಎಂದು ಘರ್ಜಿಸಿದ. ಎರಡೂ ಬಣಗಳಲ್ಲಿ ಉಗ್ರಕದನ ಪ್ರಾರಂಭವಾಯಿತು.

ಅರಸನ ಹಿರಿಯ ಪ್ರಧಾನಿಯ ರುಂಡ ಹಾರಿಹೋಯಿತು. ಅನೇಕ ಸೈನಿಕರು ಜೀವ ಕಳೆದುಕೊಂಡರು. ಉಳಿದವರು ಕಂಗೆಟ್ಟರು. 'ಓಂಕಾರೇಶ್ವರ ಚರಿತ್ರೆ'ಯ ಪ್ರಕಾರ ವೀರ ಸಂಗಯ್ಯ ರಣಚಂಡಿಯಂತೆ ಕಾದಾಡಿದ ಲಂಕಾದಹನ ಮಾಡಿದ ಚರಿತ್ರವಾನ್ ಪುರುಷನಂತೆ ಕಂಗೊಳಿಸಿದ. ಚರಿತ್ರೆಯ ಪ್ರಕಾರ ಈ ಕದನ ಸೋಮವಾರ ಮಧ್ಯಾಹ್ನ ನಡೆಯಿತು. ಇದರಲ್ಲಿ ವೀರಸಂಗಯ್ಯ ಜಯಭೇರಿ ಹೊಡೆದ. ಮಡದಿಯನ್ನು ಬಿದರೂರುಪುರಕ್ಕೆ ಕರೆದು ಕೊಂಡು ಬಂದ.

ಓಂಕಾರಪುರದಲ್ಲಿ ನಡೆದ ಕದನದಲ್ಲಿ ಅಪಜಯ ಹೊಂದಿದ ಭಾಸ್ಕರ ಸಿಟ್ಟಿನಿಂದ ಕುದಿಯುತ್ತಿದ್ದ. ಮತ್ತೊಂದು ಕದನಕ್ಕಾಗಿ ಯೋಚಿಸಿದ. ಈ ಎರಡ ನೆಯ ಕದನ ಬೀದರದಲ್ಲಿ ನಡೆಯಿತು. ಬೀದರದ ಕೋಟೆಗೆ ಭಾಸ್ಕರ ಮುತ್ತಿಗೆ ಹಾಕಿದ. ಹೊರಭಾಗದಲ್ಲಿ ರುವ ಲಾಡಗೇರಿಯನ್ನು ಸುಲಿದು ಬೆಂಕಿ ಹಚ್ಚಿದ. ಜನರೆಲ್ಲ ಗೋಳಿಟ್ಟರು. ಕದನದ ಸುದ್ದಿಯನ್ನು ಕೇಳಿದ ವೀರಸಂಗಯ್ಯ ಸಿಂಹದಂತೆ ಕೆರಳಿದ. ಕತ್ತಿಹಿಡಿದು ಕುದುರೆಯೇರಿ ರಣರಂಗಕ್ಕೆ ಧಾವಿಸಿದ.

"ಕತ್ತರಿಸಿ ಶಿರಗಳನ್ನು ಕಡಿಯುತಲಿ ಬರಲು" ಭಾಸ್ಕರನು ತತ್ತರಿಸಿ ರಣರಂಗದಿಂದ ಪಲಾಯನ ಮಾಡಿದ, ರಣರಂಗದಲ್ಲಿ ಲಿಂಗ ಕಟ್ಟಿದ ಹೆಣವನ್ನು ಕಂಡು ವೀರ ಸಂಗಯ್ಯ ಅತಿಯಾಗಿ ಮರುಗಿದ. ಒಬ್ಬ ಶಿವಶರಣನ ಹತ್ಯೆಯಾದದ್ದು ಮಹಾಪಾತಕವೆಂದು ಹಳಹಳಿಸಿದ. ಎರಡನೆಯ ಯುದ್ಧದಲ್ಲಿಯೂ ವೀರಸಂಗಯ್ಯನೇ ಜಯ ಗಳಿಸಿದ. ಇಷ್ಟಾದರೂ ಭಾಸ್ಕರನ ಹಗೆತನ ಇನ್ನೂ ಮುಗಿದಿರಲಿಲ್ಲ. ಪಲಾಯನ ಮಾಡಿ ಪ್ರಾಣ ಉಳಿಸಿ ಕೊಂಡಿದ್ದರೂ ಹೇಗಾದರೂ ಮಾಡಿ ವೀರಸಂಗಯ್ಯ ನನ್ನು ಮುಗಿಸಬೇಕೆಂದು ಕನವರಿಸಿದ. ಗುರುಲಿಂಗ ಜಂಗಮರೆಂದರೆ ವೀರಸಂಗಯ್ಯನಿಗೆ ಪಂಚಪ್ರಾಣ. ಇದನ್ನರಿತ ಭಾಸ್ಕರ ಜಂಗಮರೂಪಿಯಾಗಿ ಹೋಗಿ ವೀರಸಂಗಯ್ಯನನ್ನು ಮುಗಿಸಬೇಕೆಂದು ದುರಾಲೋಚಿ ಸಿದ. ಜಂಗಮರೂಪದಲ್ಲಿ ಬಂದ ಭಾಸ್ಕರನನ್ನು ವೀರ ಸಂಗಯ್ಯ ಪರಸೆಂದೇ ಭಾವಿಸಿದ. ಅವನ ಚರಣಕ್ಕೆ ಎರಗಿದಾಗ "ವೈರಿ ಸಿಕ್ಕಿದನು ಕೈಯೊಳಗೆ" ಎಂದು ಭಾಸ್ಕರ ಕತ್ತಿಯಿಂದ ಅವನನ್ನು ತಿವಿಯಲು ಯತ್ನಿಸಿದ. "ನರ ಕೊಲ್ಲಲ್ ಹರ ಕಾಯ್ವನು" ಎನ್ನುವಂತೆ ವೀರಸಂಗಯ್ಯನ ಮುಗ್ಧಭಕ್ತಿಗೆ ಶಿವನೇ ಪ್ರತ್ಯಕ್ಷನಾಗಿ ಭಾಸ್ಕರನ ಕೈಯನ್ನು ತಡೆದು ವೀರಸಂಗಯ್ಯನನ್ನು ರಕ್ಷಿಸಿದ. ಶಿವನ ರೂಪಕಂಡು ವೀರಸಂಗಯ್ಯ ಭಕ್ತಿ ಯಿಂದ ಪುಳಕಿತನಾದ. "ಶಿವನೆ ಭಾಸ್ಕರಗೆ ಕೃಪೆಮಾಡಯ್ಯ ನೀನು ಅವನಿಂದ ಕಂಡೆನಾ ನಿಮ್ಮ ಚರಣವ" ಎಂದು ಶಿವನಲ್ಲಿ ಬೇಡಿದ. ಔದಾರ್ಯದ ಶರಣ–ಸಂಸ್ಕೃತಿಯ ಅಪೂರ್ವ ಉದಾಹರಣೆ ಇದು. ಭಾಸ್ಕರ ತನ್ನಷ್ಟಕ್ಕೆ ತಾನೇ ಪಶ್ಚಾತ್ತಾಪ ಪಟ್ಟು "ಹರನ ಕಂಡೆನು ತಾಯಿ ನಿಮ್ಮನೊಡನಾಡಿ" ಎಂದು ವಿನೀತನಾಗಿ ಚಂದ್ರಾಣಿ ಯಲ್ಲಿ ಕ್ಷಮೆ ಕೇಳಿದ. ಗುರುಸ್ಥಳಕ್ಕೆ ದೀಕ್ಷೆ ಮಾಡಿಸ ಬೇಕೆಂದು ಪ್ರಾರ್ಥಿಸಿದ. ತನ್ನ ಸೆರಗನ್ನು ಹಿಡಿದೆಳೆದು ಶೀಲಭಂಗ ಮಾಡಲು ಸಿದ್ಧನಾದ ಭಾಸ್ಕರನನ್ನು ಚಂದ್ರಾಣಿ "ಪರನಾರಿ ಸೋದರ ರಾಜೇಂದ್ರ ಬಾರೊ" ಎಂದು ಕರೆದು ಆದರಿಸಿದಳು ; ಅಜ್ಞಾನಿ, ಅವಿವೇಕಿ, ಕಾಮಾಂಧನಾದ ಭಾಸ್ಕರ ಶಿವಶರಣರ ಸಂಗದಲ್ಲಿ ಅರುಹಿನ-ಆಚಾರದ ನೆಟೆಯನ್ನು ಕಂಡುಕೊಂಡು ಸುಜ್ಞಾ ನಿಯಾದ.

ಇದಿಷ್ಟು 'ವೀರಸಂಗಯ್ಯನ ಚೌಪದನ'ದಲ್ಲಿ ರೂಪಿತವಾದ ಕಥಾಸಾರಾಂಶ. ಇದು ಎಲ್ಲರಿಗೂ ಗೊತ್ತಿದ್ದ ವಿಷಯವಾದ್ದರಿಂದ ಹೆಚ್ಚಿನ ವಿವರಣೆ ಅನ ವಶ್ಯವೆಂದು ಸಂಕ್ಷಿಪ್ತದಲ್ಲಿ ಮೂಲಕಥೆಯನ್ನು ಇಲ್ಲಿ ವಿವರಿಸಿದೆ.

ಐತಿಹಾಸಿಕತೆ : ಈ ಚೌಪದನದಲ್ಲಿ ವಿವರಿಸಿದ ಘಟನೆಗಳ, ವ್ಯಕ್ತಿಚಿತ್ರಗಳ ಹಾಗೂ ಸ್ಥಳನಾಮಗಳ ಐತಿಹಾಸಿಕತೆಯನ್ನು ಕಂಡುಹಿಡಿಯುವುದೇ ಈ ಲೇಖನದ ಉದ್ದೇಶ. ಇತಿಹಾಸದ ಚೌಕಟ್ಟಿಗೆ ಒಪ್ಪವಾಗುವಂತೆ ಎಲ್ಲ ಘಟನೆಗಳ, ವ್ಯಕ್ತಿಗಳ ಸ್ಥೂಲ ವಿವರಣೆ ಅಥವಾ ಕೂಲಂಕಷ ವಿಮರ್ಶೆ ಔಚಿತ್ಯಪೂರ್ಣ ಹಾಗೂ ಅನಿ ವಾರ್ಯ.

ಈ ಚೌಪದನ ಕಲಬುರಗಿ ದೇಶದ ಅಂಬುಲಗಿಯ ಭಕ್ತ ಚೆನ್ನಮಲ್ಲಯ್ಯನಿಂದ ರಚಿತವಾಗಿದೆ. ಇದೊಂದು ಐತಿಹಾಸಿಕ ಕಥಾವಸ್ತುವನ್ನು ಹೊಂದಿದ ಚೌಪದನ ವೆಂದು ಡಾ॥ ಸುಂಕಾಪೂರ ಅವರು ಅಭಿಪ್ರಾಯ ಪಟ್ಟಿ

ದ್ದಾರೆ.[7] ಇದನ್ನು ಬರೆದ ಕವಿಯ ಕಾಲ ಇಲ್ಲಿ ಉಲ್ಲೇಖ ವಾಗಿಲ್ಲ ಹಾಗೂ ಆತನು ಬೀದರ ಪರಿಸರದ ಪರಿಚಯ ವಿಲ್ಲದವನು ಎಂಬುದನ್ನು ನಾವು ಗಮನಿಸಬಹುದು. ಅಂದಮೇಲೆ ಈ ಕವಿ ಬೀದರ ಪ್ರದೇಶದ ಪರಿಸರದಲ್ಲಿ ನಡೆದ ಘಟನೆಗಳನ್ನು ಹೇಗೆ ರೂಪಿಸಿದ ? ಆತನ ರಚನೆ ಐತಿಹಾಸಿಕ ಸತ್ಯಕ್ಕೆ ಎಷ್ಟು ಸಮೀಪ ? ಎಂಬ ಅನುಮಾನ ಮೂಡುವುದು ಸಹಜ.

ನಮ್ಮ ಎಲ್ಲ ಐತಿಹಾಸಿಕ ಸಮಸ್ಯೆಗಳಿಗೆ ಸಮಂಜಸ ವಾದ ಅರ್ಥವಿವರಣೆ ದೊರೆಯುವುದು ಸಾಧ್ಯವೇ ಇಲ್ಲ. ಈ ಕಾರಣದಿಂದ ಇಡೀ ಕಥಾವಸ್ತುವನ್ನೇ ಕಾಲ್ಪನಿಕ ವೆಂದು, ನಂಬಲನರ್ಹವೆಂದು ತಳ್ಳಿಬಿಡುವುದು ಪ್ರಾಜ್ಞರ ಲಕ್ಷಣವಲ್ಲ. ಕವಿಯ ಕಾಲ ನಮಗೆ ಗೊತ್ತಿಲ್ಲವಾದರೂ ಅವನು ಚಿತ್ರಿಸಿದ ಘಟನೆಗಳ, ವ್ಯಕ್ತಿಗಳ ಆಧಾರದ ಮೇಲಿಂದ ಅನೇಕ ಸಮಕಾಲೀನ ಐತಿಹಾಸಿಕ ಸಂಗತಿ ಗಳನ್ನು ಜೋಡಿಸಲು ಸಾಧ್ಯವಿದೆ.

೧. ನಮ್ಮ ಮೊದಲನೆಯ ಪ್ರಶ್ನೆ, ಓಂಕಾರಪುರ ಯಾವುದು ? ಈ ಓಂಕಾರಪುರ, ಕೋವೂರು ಹಾಗೂ ಇಂದಿನ ಕೋಹಿರ (ಆಂಧ್ರ) ಎಲ್ಲ ಒಂದೇ. ಅಂದಿನ ಕೋವೂರು ಇಂದಿನ ಕೋಹಿರ ಎನ್ನುವದಕ್ಕೆ ನಮಗೆ ಶಾಸನಗಳ ಆಧಾರವಿದೆ. ನಂದಿ–ಕಂದಿಯಲ್ಲಿ (ಆಂಧ್ರ) ದೊರೆತ ಕಲ್ಯಾಣಿ ಚಾಲುಕ್ಯರ ಕಾಲದ ಕನ್ನಡ ಶಾಸನದಲ್ಲಿ 'ಕೋವೂರು' ಗ್ರಾಮದ ಉಲ್ಲೇಖವಿದೆ.[8] ಈ ಗ್ರಾಮ ವನ್ನು ನಂದಿ–ಕಂದಿಯ ನಾರಣೇಶ್ವರ ದೇವರಿಗೆ ಕಾಣಿಕೆ ಯೆಂದು ನೀಡಲಾಗಿದೆ. ಈ ಶಾಸನದ ಕಾಲ ೯೩೬ ಶಕ ವರ್ಷ ಅಂದರೆ ಕ್ರಿ.ಶ. ೧೦೧೪. ಪಂಪಪೆರ್ಮಡಿ ಈತನು ಈ ಭಾಗದ ಚಾಲುಕ್ಯರ ಮಹಾಮಂಡಳೇಶ್ವರನೆಂಬುದು ಈ ಶಾಸನದಿಂದ ತಿಳಿದುಬರುತ್ತದೆ. ಕೋಹಿರದಲ್ಲಿಯೂ ಒಂದು ಕನ್ನಡ ಶಾಸನ ದೊರೆತಿದೆ.[9] ಈ ಶಾಸನ 'ವೀರ ಸಂಗಯ್ಯನ ಕಟ್ಟೆ'ಯ ಮೇಲೆ ದೊರೆತಿದೆ. ಇದು ಮೊದಲಿ ನಿಂದಲೇ ಇದೆಯೋ ಅಥವಾ ಇತ್ತೀಚೆಗೆ ಯಾರಾದರೂ ಹಾಗೆ ಕೂಡಿಸಿರಬಹುದೋ ತಿಳಿಯದು. ಅಲ್ಲಿಯ ಜನರು ಈ ಶಾಸನ ಇಲ್ಲಿಯೇ ದೊರೆತಿದೆ ಎಂದು ಹೇಳುತ್ತಾರೆ. ಈ ಶಾಸನದ ಕಾಲ ೯೯೧ ಶಕ ವರ್ಷ ಅಂದರೆ ಕ್ರಿ.ಶ. ೧೦೬೯ರ ವರ್ಷ ೨ನೆಯ ಸೋಮೇಶ್ವರನ ಕಾಲ. ಈ ಶಾಸನದಲ್ಲಿಯೂ ಮಹಾಮಂಡಳೇಶ್ವರನ ಹೆಸರು ಪಂಪ ಪೆರ್ಮಡಿ ಎಂದು ಉಲ್ಲೇಖಿಸಲ್ಪಟ್ಟಿದೆ. ಈ ಎರಡು ಕನ್ನಡ ಶಾಸನಗಳ ಆಧಾರದ ಮೇಲಿಂದ ಅಂದಿನ ಕೋವೂರು ಇಂದಿನ ಕೋಹಿರ ಎನ್ನುವದರಲ್ಲಿ ಸಂಶಯ ವಿಲ್ಲ. ಬಹುಮನಿ ಸುಲ್ತಾನರ ಕಾಲದಲ್ಲಿ ಕೋಹಿರ ಎಂದೇ ಉಲ್ಲೇಖಿಸಲ್ಪಟ್ಟಿದೆ. ಆ ಕಾಲದಲ್ಲಿಯೂ ಕೋಹಿರ ಮಾಂಡಲೀಕರ ರಾಜಧಾನಿಯ ಸ್ಥಳ ವಾಗಿತ್ತು.[10] ಕಾಳೇ ಮುಹಮ್ಮದನು ಬಹುಮನಿ ಕಾಲ ದಲ್ಲಿ ಕೋಹಿರದಲ್ಲಿ ಅಧಿಕಾರ ನಡೆಸುತ್ತಿದ್ದ.

೨. ಇಂದಿನ ಕೋಹಿರ ಅಂದಿನ ಓಂಕಾರಪುರ ವೆನ್ನುವದಕ್ಕೆ ನಮಗೆ ಏನು ಆಧಾರ ? ಇಂದಿನ ಕೋಹಿರ ಅಂದಿನ ಓಂಕಾರಪುರವೇ ಎಂದು ಹೇಳಲು ನಮಗೆ ಶಾಸನಗಳ ಆಧಾರವಿಲ್ಲ. ಆದರೆ ಸಮಕಾಲೀನ ಸಾಹಿತ್ಯಿಕ ಆಧಾರವಿದೆ. 'ಓಂಕಾರೇಶ್ವರ ಚರಿತ್ರೆ' ನಂಬಲರ್ಹ ವಾದ ಸಮಕಾಲೀನ ಗ್ರಂಥ. ಇದರ ವಿಷಯವಾಗಿ ಈ ಮೊದಲೇ ವಿವರಿಸಲಾಗಿದೆ. ಓಂಕಾರಪುರ(ಪಟ್ಟಣ)ದ ಬಗ್ಗೆ ಮಹತ್ವಪೂರ್ಣವಾದ ಬೆಳಕನ್ನು ಈ ಗ್ರಂಥ ನೀಡುತ್ತದೆ.

ಈ ಚರಿತ್ರೆಯ ಪ್ರಕಾರ ಓಂಕಾರಪುರ ಬಹಳ ಪ್ರಾಚೀನವಾದ ನಗರ. ಸುಮಾರು ೧೪೪೪ ವರುಷಗಳ ಹಿಂದೆ ಪ್ರಸಿದ್ಧಿಗೆ ಬಂತು. ಓಂಕಾರಪುರದ ವರ್ಣನೆ ಬ್ರಹ್ಮಾಂಡಪುರಾಣದಲ್ಲಿ (ಕಾಲಿಕಾಖಂಡ) ಶಿವ–ಬ್ರಹ್ಮರ ಸಂವಾದ ರೂಪದಲ್ಲಿ ಬಂದಿದೆ. ಅಲ್ಲದೆ ಉಪಪುರಾಣ ಗಳಾದ ವಾಯು–ಅಗ್ನಿಪುರಾಣಗಳಲ್ಲಿ ನಾರದ–ಅಗಸ್ತ್ಯರ ಸಂವಾದದ ಸಂದರ್ಭದಲ್ಲಿ ಹಾಗೂ ಕಾಲಜ್ಞಾನದಲ್ಲಿ ಓಂಕಾರಪುರ ಉಲ್ಲೇಖಿಸಲ್ಪಟ್ಟಿದೆ.

---

7 ಚೌಪದನಗಳು, ಪ್ರಸ್ತಾವನೆ, ಪು. ೮

8 ಎನ್ಯುವಲ್ ರಿಪೋರ್ಟ್ ಆಫ್ ಎಪಿಗ್ರಫಿ, ೧೯೬೦–೬೧, ೯೪ ಬಿ

9 ಅಲ್ಲೇ, ೧೯೬೦-೬೧, ಸಂಖ್ಯೆ ೫೭

10 ಇಸಾಮಿ ಫುತೂಹುತ್ ಸಲಾತೀನ್, ಪು. ೫೬೩-೫೬೭. ಈತ ಬಹುಮನಿ ಕಾಲದ ಇತಿಹಾಸಕಾರ.

ಇದಕ್ಕೆ ಓಂಕಾರಪುರವೆಂದು ಹೆಸರು ಬರಲು ಕಾರಣವೇನು ? ಸುಮಾರು ೧೪೪೪ ವರುಷಗಳ ಹಿಂದೆ ಕೋಹಿರದ ದೀಕ್ಷಿತ ಮನೆತನದ ಮೂಲಪುರುಷರಾದ ಸುದರ್ಶನ ದೀಕ್ಷಿತರು ಧರ್ಮಪುರಿ (ಆಂಧ್ರ) ಯಿಂದ ಇಲ್ಲಿಗೆ ಬಂದರು. ಅವರು ಶಿವಭಕ್ತರು. ೫೦ ವರ್ಷಗಳವರೆಗೆ ತಪಸ್ಸು ಮಾಡಿದರು. ಆ ಕಾರಣ ಓಂಕಾರೇಶ್ವರ (ಶಿವ) ಪ್ರತ್ಯಕ್ಷನಾದನಂತೆ. ಶಿವನ ಸ್ಮಾರಕವಾಗಿ ಲಿಂಗ ಸ್ಥಾಪಿಸಿದರು ಹಾಗೂ ನಗರಕ್ಕೆ ಓಂಕಾರಪುರವೆಂದು ನಾಮಕರಣ ಮಾಡಿದರು. ಓಂಕಾರೇಶ್ವರ ದೇವಾಲಯದ ಪ್ರತಿಷ್ಠಾಪನೆಯಿಂದ ಈ ನಗರ ಪ್ರಸಿದ್ಧಿಗೆ ಬಂತು. ಮೊಗಲರ ಕಾಲದಿಂದ ನಿಜಾಮ ಅರಸರ ಕಾಲದವರೆಗೆ ಕೋಹಿರಿನ ದೀಕ್ಷಿತ – ಮನೆತನದವರಿಗೆ ವರ್ಷವೂ ಮಾಸಾಶನ ದೊರೆಯುತ್ತಲಿತ್ತು. ಓಂಕಾರೇಶ್ವರನ ಪೂಜೆ ಇತರ ಖರ್ಚಿಗೆ ಸರಕಾರದಿಂದ ಧನ ಅವರಿಗೆ ದೊರೆಯುತ್ತಿತ್ತು. ೧೨೬೯ ಫಸಲಿಯ ಒಂದು ಫರಮಾನ್ ಈ ವಿಷಯವನ್ನು ತಿಳಿಸುತ್ತದೆ. ಅಲ್ಲದೆ ದೀಕ್ಷಿತ ಮನೆತನದವರು ಸುಪ್ರಸಿದ್ಧ ಜ್ಯೋತಿಷಿಗಳಾಗಿದ್ದರು. ಮೊಗಲ ಕಾಲದ ಉಂಗುರ ಮುದ್ರೆಗಳೂ ಇವರಿಗೆ ನೀಡಲ್ಪಟ್ಟವು. ಅವು ಇಂದಿಗೂ ಇವೆ. ಇವರಲ್ಲಿ ತಾಮ್ರಪಟಗಳು ಇನ್ನಿತರ ದಾಖಲೆಗಳೂ ಇವೆ. ಇವುಗಳು ಇಂದಿನ ಕೋಹಿರ ಅಂದಿನ ಓಂಕಾರಪುರವೆಂದು ನಂಬಲು ಬಲವಾದ ಆಧಾರಗಳು.

೩. ಇದಲ್ಲದೆ ಇಂದಿಗೂ ವೀರಸಂಗಯ್ಯನ ಹೆಸರು ಕೋಹಿರದಲ್ಲಿ ಮನೆಮಾತು. ಶರಣನ ನೆನಪಿಗಾಗಿ 'ವೀರಸಂಗಯ್ಯನ ಕಟ್ಟೆ' ಇಂದಿಗೂ ಜೀವಂತ ಸಾಕ್ಷಿಯಾಗಿದೆ. ಈ ಸ್ಥಳದಲ್ಲಿಯೇ ಕದನ ನಡೆಯಿತೆಂದು ಊರ ಹಿರಿಯರು ಹೇಳುತ್ತಾರೆ.

೪. ಅರಸು ಮಾಧವರಾಯ ಹಾಗೂ ಆತನ ಮಗ ಭಾಸ್ಕರ ಯಾರು ? ಚೌಪದನದಲ್ಲಿ ಮಾಧವರಾಯನನ್ನು ಅರಸನೆಂದು ವರ್ಣಿಸಲಾಗಿದೆ. ನಮಗೆ ದೊರೆತ ಯಾವ ಶಾಸನದಲ್ಲಿಯೂ ಈತನ ಹೆಸರು ಉಲ್ಲೇಖಿಸಲ್ಪಟ್ಟಿಲ್ಲ. ಪಂಪಪೆರ್ಮಾಡಿ ಆ ಕಾಲದ ಚಾಲುಕ್ಯರ ಮಹಾಮಂಡಳೇಶ್ವರನೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. 'ಓಂಕಾರೇಶ್ವರ ಚರಿತ್ರೆ' ನಮಗೆ ಕೋಹಿರ ನಗರದ ಅರಸು ಮನೆತನದ ವಿವರಣೆಯನ್ನು ಸ್ಪಷ್ಟವಾಗಿ ನೀಡುತ್ತದೆ.

೫. ಸುದರ್ಶನ ದೀಕ್ಷಿತರಿಂದ ಪ್ರಸಿದ್ಧಿಗೆ ಬಂದ ಓಂಕಾರಪುರ ರಾಜಧಾನಿಯಾಗಿ ಕಂಗೊಳಿಸಿತು. ಸುದರ್ಶನರು ತಪಸ್ಸು ಮಾಡುತ್ತಿರುವ ಕಾಲದಲ್ಲಿ ಒಬ್ಬ ತೇಜಸ್ವಿ ಬಾಲಕ ಇವರೆಡೆಗೆ ಬಂದ. ಆತ ಕ್ಷತ್ರಿಯ ಬಾಲಕನಾಗಿದ್ದ. ಆತನನ್ನು ತಮ್ಮ ಬಳಿಯೇ ಇಟ್ಟುಕೊಂಡರು. ಅವನ ಗುಣ–ಸ್ವಭಾವ ಕಂಡು ಸುದರ್ಶನರು ಅವನಿಗೆ ರಾಜನಾಗೆಂದು ಆಶೀರ್ವದಿಸಿದರು. ಅಂತೆಯೇ ಅವರ ಶಿಷ್ಯನಾದ ಕ್ಷತ್ರಿಯ ಬಾಲಕ ಪ್ರತಾಪನೆಂದು ಅಭಿಧಾನ ಹೊಂದಿ ಓಂಕಾರಪುರದ ಅರಸನಾದ. ೮೦ ಗ್ರಾಮಗಳ (ಪರಗಣಾದ) ಅಧಿಕಾರ ಅವನಿಗೆ ದೊರೆಯಿತು. ಪ್ರತಾಪನ ನಂತರ ಏಳು ಜನ ಅರಸರು ಓಂಕಾರ ನಗರದಲ್ಲಿ ಅಧಿಕಾರ ನಡೆಸಿದರು. 'ಓಂಕಾರೇಶ್ವರ ಚರಿತ್ರೆ'ಯಲ್ಲಿ ವಂಶಾವಳಿಯ ವಿವರ ಹೀಗಿದೆ :

ಪ್ರತಾಪ ಮಮ ಶಿಷ್ಯ ಪ್ರಮುಖಲು ।
ದ್ವಿತೀಯೋ ವಿದ್ಯಾಧರ ।
ತೃತೀಯೋ ಪು ಚಂದ್ರಜ । ಚತುರ್ಥೆ ನರಹರಿ ಪ್ರೋಕ್ತಾ
ಪಂಚಮೇ ಸಿಂಹವಾಹನ । ಷಷ್ಠೇತು ಮಾಧವಾ ಪ್ರೋಕ್ತಾ
ಸಪ್ತಮೇ ಭಾಸ್ಕರ ಪ್ರಭು.

ಇಲ್ಲಿ ನಮಗೆ ಬೇಕಾದ ಹೆಸರು ಮಾಧವರಾಯ ಹಾಗೂ ಭಾಸ್ಕರ ವಂಶಾವಳಿಯ ಪ್ರಕಾರ ಇವರು ಆರನೆಯ ಹಾಗೂ ಏಳನೆಯ ಅರಸರು. ಇವರ ಕಾಲದ ಬಗ್ಗೆಯೂ ಚರಿತ್ರೆ ವಿವರ ನೀಡುತ್ತದೆ. ಸುದರ್ಶನರು ಸುಮಾರು ೧೪೪೪ ವರುಷಗಳ ಹಿಂದೆ ಓಂಕಾರನಗರವನ್ನು ಪ್ರಸಿದ್ಧಿಗೆ ತಂದರು. ಅಲ್ಲಿ ಅರಸೊತ್ತಿಗೆಯನ್ನು ಸ್ಥಾಪಿಸಿದರು. ಮೊದಲನೆಯ ರಾಜ ಪ್ರತಾಪ. ಸುದರ್ಶನರ ಪ್ರಮುಖ ಶಿಷ್ಯ. ಅಂದರೆ ಈತನು ೧೪೪೪ ವರುಷಗಳ ಹಿಂದೆ ರಾಜ್ಯಭಾರ ಪ್ರಾರಂಭಮಾಡಿದ. ಅವನಿಂದ ಏಳನೇ ವಂಶದವರೆಗೆ ಒಬ್ಬೊಬ್ಬರ ಆಯುಷ್ಯದ ಅವಧಿಯನ್ನು ಸುಮಾರು ೫೦ ವರುಷ ಎಂದು ನಾವು ಭಾವಿಸಿದರೆ ಸುಮಾರು ೪೦೦ ವರುಷಗಳ ನಂತರ ಮಾಧವರಾಯ ಹಾಗೂ ಭಾಸ್ಕರ ಇವರು ಅಧಿಕಾರಕ್ಕೆ ಬಂದರೆಂದು ಹೇಳಬಹುದು. ಅಂದರೆ ಸುಮಾರು ೧೦೦೦ ವರುಷಗಳ ಹಿಂದೆ ಇವರು ಓಂಕಾರಪುರದ ದೊರೆಗಳಾಗಿ

ದ್ದಾರೆಂಬುದು ಸ್ಪಷ್ಟವಾಗುತ್ತದೆ. ದಿವಂಗತ ಹಳಕಟ್ಟಿಯವರು ಮಾಧವರಾಯ ಹಾಗೂ ಭಾಸ್ಕರ ಇವರು ಚಾಲುಕ್ಯ ಮನೆತನದವರೆಂದು ಅಭಿಪ್ರಾಯಪಟ್ಟಿದ್ದಾರೆ. ಹಾಗಿದ್ದ ಪಕ್ಷದಲ್ಲಿ ಅವರ ಹೆಸರು ಶಾಸನಗಳಲ್ಲಿ ಉಲ್ಲೇಖಿಸಲ್ಪಡಬಹುದಾಗಿತ್ತು. ಇವರು ಕ್ಷತ್ರಿಯರಾಗಿದ್ದರೆಂದು ಚರಿತ್ರೆ ನಮಗೆ ತಿಳಿಸುತ್ತದೆ. ಇವರು ಜೈನರಲ್ಲವೆಂಬುದೂ ಸ್ಪಷ್ಟವಾಗುತ್ತದೆ. ಕೋಹಿರದಲ್ಲಿ ಇಂದಿಗೂ ಜೈನ ಮನೆತನದವರಿಲ್ಲ ಹಾಗೂ ಜೈನ ಸ್ಮಾರಕಗಳಿಲ್ಲ. ಆದರೆ ಕೋಹಿರದ ಸುತ್ತಮುತ್ತಲಿನ ಪ್ರದೇಶದಲ್ಲಿ ಚಾಲುಕ್ಯರ ಕಾಲದಲ್ಲಿ ಜೈನರ ಪ್ರಭಾವವಿತ್ತೆಂಬುದು ಶಾಸನಗಳಿಂದ ತಿಳಿದುಬರುತ್ತದೆ. ಭಾಸ್ಕರ ಸ್ತ್ರೀ ವ್ಯಾಮೋಹಿಯಾಗಿದ್ದ. ಆತನ ಕಾಲದಲ್ಲಿಯೇ ರಾಜಧಾನಿ ಹಾಳಾಯಿತು ಎಂದು ಚರಿತ್ರೆ ತಿಳಿಸುತ್ತದೆ.

**ಯಾರು ? ಹಾಗೂ ಕಾಲ :** ಹಾಗೆಯೇ ವೀರಸಂಗಯ್ಯನು ಯಾರು ? ಎಂಬ ಪ್ರಶ್ನೆಯನ್ನು ನಾವು ಸಮಂಜಸವಾಗಿ ಬಿಡಿಸಬೇಕಾಗುತ್ತದೆ. ಈ ಮೊದಲೇ ವಿವರಿಸಿದಂತೆ ವೀರಸಂಗಯ್ಯ ಭಾಸ್ಕರನೊಡನೆ ಎರಡು ಸಲ ಕದನ ಮಾಡಿ ಜಯಗಳಿಸಿದ. ವಿಪುಲವಾಗಿ ಸೇವಕ ಪಡೆ, ಕುದುರೆ, ಕಠಾರಿ ಇತ್ಯಾದಿಗಳ ಬಳಕೆಯಾಯಿತು. ಒಬ್ಬ ಶಿವಶರಣರಿಗೆ ಇಷ್ಟು ಸೇವಕ ಪಡೆ ಸೌಕರ್ಯ ಹೇಗೆ ಬಂತು ? ಎಂಬ ಪ್ರಶ್ನೆ ಮೂಡುತ್ತದೆ.

ವೀರಸಂಗಯ್ಯನ ತಂದೆ ಕಾಮಣ್ಣಯ್ಯ ಒಬ್ಬ ಹೆಸರಾಂತ ಶ್ರೀಮಂತ ರಾಜಮಾನ್ಯ ವರ್ತಕನೆಂಬುದನ್ನು ಈ ಮೊದಲೇ ವಿವರಿಸಲಾಗಿದೆ. ಆ ಕಾಲದ ಅನೇಕ ಶಾಸನಗಳಲ್ಲಿ ವರ್ತಕರು ವಿದೇಶಗಳಿಗೂ ಹೋಗಿ ವ್ಯವಹಾರ ನಡೆಸುತ್ತಿದ್ದರು ಎಂಬುದು ಉಲ್ಲೇಖಿಸಲ್ಪಟ್ಟಿದೆ. ಸ್ವರಕ್ಷಣೆಗಾಗಿ ಹಾಗೂ ವ್ಯವಹಾರದ ಏರ್ಪಾಡಿಗಾಗಿ ಕಳ್ಳಕಾಕರಿಂದ ರಕ್ಷಣೆಗಾಗಿ ಅನೇಕ ಜನ ಸೇವಕರ ಪಡೆಯನ್ನು ಅವರು ಹೊಂದಿರುತ್ತಿದ್ದರು. ಧನಿಕ ವರ್ತಕನಾದ ಕಾಮಣ್ಣಯ್ಯನಲ್ಲಿ ವಿಪುಲವಾದ ಸೇವಕ ಪಡೆ ಇತ್ತೆಂಬುದರಲ್ಲಿ ಸಂಶಯವೇ ಇಲ್ಲ. ಅವನು ರಾಜ ಪ್ರಮುಖನಾಗಿದ್ದನೆಂದು ನಂಬಲು ಬೀದರ ಕೋಟೆಯಲ್ಲಿ ದೊರೆತ ಕನ್ನಡ ಶಾಸನ ಆಧಾರವಿದೆ.[11] ಈ ಕನ್ನಡ ಶಾಸನದ ಕಾಲ ಸ್ಪಷ್ಟವಾಗಿಲ್ಲ. ಆದರೆ ೧೨ನೇ ಶತಮಾನದ್ದೆಂದು ನಂಬಲಾಗಿದೆ. ಇದರಲ್ಲಿ ಮಾದಿಶೆಟ್ಟಿಯ ಮಗನಾದ ಕಾಮಯ್ಯನಿಗೆ ೧೨ (ಮ್ಯಾಟರ) ಭೂಮಿಯನ್ನು ದೇವರ ಹೆಸರಿನಲ್ಲಿ ಕಾಣಿಕೆಯಾಗಿ ನೀಡಲಾದ ವಿವರವಿದೆ. ಈ ಶಾಸನದಲ್ಲಿ ಅರಸು ಮನೆತನದ ಹಾಗೂ ಅರಸರ ಹೆಸರಿನಲ್ಲಿ ಈ ಶಾಸನದಲ್ಲಿ ಬರುವ ಕಾಮಯ್ಯ ಬಹುಶಃ ಚೌಪದನಾದ ಕಾಮಣ್ಣಯ್ಯನೇ ಆಗಿರಬೇಕು.

ಇನ್ನೊಂದು ಗಮನಾರ್ಹ ಅಂಶವೆಂದರೆ ಬೀದರ ಕೋಟೆಯ ಒಳ ಪ್ರದೇಶದಲ್ಲಿ ವೀರಸಂಗಯ್ಯನ ಸಮಾಧಿ ಇಂದಿಗೂ ಇದೆ,[12] ವೀರಸಂಗಯ್ಯ ಸಾಮಾನ್ಯ ವ್ಯಕ್ತಿಯಾಗಿದ್ದರೆ ಕೋಟೆಯ ಒಳಪ್ರದೇಶದಲ್ಲಿ ಆತನ ಸಮಾಧಿ ಇರುವುದು ಅಸಾಧ್ಯ. ಕೇವಲ ರಾಜರ ವಂಶದವರಿಗಷ್ಟೇ ಇಂಥ ಸೌಕರ್ಯ ಇರುವುದು ಸಹಜ. ಇಲ್ಲಿ ಮೇಲೆ ವಿವರಿಸಿದ ಶಾಸನದ ವಿವರಕ್ಕೂ ವೀರಸಂಗಯ್ಯನ ಸಮಾಧಿಗೂ ಒಂದು ಸಂಬಂಧ ಇದೆ ಎಂದು ನಂಬಲು ಸಾಧ್ಯವಿದೆ. ವೀರಂಗಯ್ಯನು ಬೀದರ ನಗರದ ಅಧಿಪತಿಯಾಗಿದ್ದನೆ ? ಈ ಮಾತಿಗೆ ಪುಷ್ಟಿ ನೀಡುವ ಒಂದು ಆಧಾರ ನಮಗೆ ಲಭ್ಯವಿದೆ. ಸುಮಾರು ಮೂರು ಶತಮಾನಗಳ ಹಿಂದೆ (ಮೋಡಿಬರಹ) ಬರೆದುದೆನ್ನಲಾದ 'ಸುಲ್ತಾನ ಸುರಳಿ'[13] ಪುಸ್ತಕದಲ್ಲಿ "ಬೀದರ್ ಮಧ್ಯೆ ವೀರಸಂಗಯ್ಯ ಮಣ್ಣನ ಹಿಂದೂ ರಾಜ ಕರೀತ ಹೋತಾ" ಎಂದು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ. ಅವನ ಸಮಕಾಲೀನರು ಚಿಂಚೋಳಿಯ ಸಿಂಧರೆಂದೂ ವಿವರಿಸಲಾಗಿದೆ. ಸಿಂಧೂರಂಜೋಳಬೇಣಿ (ಬೇಂದರ) ಯಲ್ಲಿ ಪ್ರಭುತ್ವ ಹೊಂದಿದ್ದರೆಂಬುದು ಅವರ ಶಾಸನಗಳಿಂದ ತಿಳಿದುಬರುತ್ತದೆ. ಇವರು ಕಲ್ಯಾಣಿ ಚಾಲುಕ್ಯರ ಮಾಂಡಲೀಕರಾಗಿದ್ದರು. ವಿಷಾದದ ಸಂಗತಿಯೆಂದರೆ ಕಲ್ಯಾಣ ಚಾಲುಕ್ಯರ ಶಾಸನದಲ್ಲಿ ಬೀದರದ ಬಗೆಗೆ ವಿವರವೇ ಇಲ್ಲ. ಬಹುಶಃ ವೀರಸಂಗಯ್ಯ ಕಲ್ಯಾಣ

---

11. ಎನ್ಯುವಲ್ ರಿಪೋರ್ಟ್ ಆಫ್ ಇಂಡಿಯನ್ ಎಫಿಗ್ರಫಿ, ೧೯೬೦-೬೧
12. ಬೀದರ್ ಡಿಸ್ಟ್ರಿಕ್ಟ್ ಗೆಝೆಟಿಯರ್, ಪು. ೫೬೪
13. ಈ ಹಸ್ತಪ್ರತಿ ಶ್ರೀಯುತ ಗುಂಡಪ್ಪ ಪಿಂಬಳಗೇಕರ, ಕಿರಾಣಾ ಮರ್ಚಂಟ್, ಬೀದರ್ ಇವರ ಹತ್ತಿರ ಇದೆ.

ಚಾಲುಕ್ಯರ ಮಾಂಡಲೀಕನಾಗಿದ್ದನೋ ಇಲ್ಲವೋ ಎಂಬುದು ಸ್ಪಷ್ಟವಾಗುವುದಿಲ್ಲ.

ನಮ್ಮ ಮುಂದಿನ ಪ್ರಮುಖ ಪ್ರಶ್ನೆ ವೀರ ಸಂಗಯ್ಯನು ಜೀವಿಸಿದ ಕಾಲ. ಈತನು ಬಸವ ಪೂರ್ವದವನೇ ಅಥವಾ ಇತ್ತೀಚಿನವನೆ ? ನಮಗೆ ಲಭ್ಯ ವಾಗಿರುವ ಆಧಾರಗಳ ಮೇಲಿಂದ ಹೇಳುವದಾದರೆ ವೀರಸಂಗಯ್ಯ ಬಸವಪೂರ್ವದವನೆಂದೇ ಹೇಳಬಹುದು.

೧. ಅನೇಕ ಪುರಾಣಗಳಲ್ಲಿ ವೀರಸಂಗಯ್ಯನ ಹೆಸರು ಉಲ್ಲೇಖಿಸಲ್ಪಟ್ಟಿದೆ. ಇವುಗಳಲ್ಲಿ ಮುಖ್ಯ ವಾದವುಗಳೆಂದರೆ, ೬೩ ಪುರಾತನರ ಕಥೆಗಳು, ಅಮರ ಗಣಾಧೀಶ್ವರ ಚರಿತ್ರೆ ಇತ್ಯಾದಿ. ಅವನು ಇತ್ತೀಚಿನ ವನಾಗಿದ್ದರೆ ಪ್ರಾಚೀನ ಗ್ರಂಥಗಳಲ್ಲಿ ಅವನ ಹೆಸರು ಬರುವುದು ಅಸಹಜ.

೨. ಇನ್ನೊಂದು ಆಧಾರವೆಂದರೆ ಅದೃಶ್ಯಕವಿ ವಿರಚಿತ 'ಪ್ರೌಢರಾಯನ ಕಾವ್ಯ.'

"ವಶುಧೇಶ ಕೇಳು ಬಿಜ್ಜಳ ನೃಪಾಲಕನೊಡನೆ, ಬಸವೇಶ ಪೇಳ್ದ ಕಥೆಯಂ ಪೇಳ್ವೆನಾಲಿಪುದು" 14 ; ಬಸವೇಶ್ವರನೇ ಬಿಜ್ಜಳನಿಗೆ ಬಿದರೂರಿನ ಸುಪ್ರಸಿದ್ಧ ಶಿವಶರಣ ವೀರಸಂಗಯ್ಯನ ಕಥೆಯನ್ನು ವಿವರಿಸಿದನೆಂದು ಕವಿ ಇಲ್ಲಿ ಉಲ್ಲೇಖಿಸಿದ್ದಾನೆ, ಅಂದಮೇಲೆ ಬಸವನಿಗಿಂತ ವೀರಸಂಗಯ್ಯ ಅನೇಕ ವರ್ಷಗಳ ಪೂರ್ವದಲ್ಲಿ ಜೀವಿಸಿದ್ದ ನೆಂಬುದಕ್ಕೆ ಅದೃಶ್ಯಕವಿಯ ಕೃತಿ ಸಾಕ್ಷಿ.

೩. ವೀರಸಂಗಯ್ಯನ ಕಾಲವನ್ನು ನಿರ್ಣಯಿಸು ವಲ್ಲಿ ಈತನ ಸಮಾಧಿ ನಮಗೆ ನಂಬಲರ್ಹ ಆಧಾರ. ಬೀದರ ಕೋಟೆಯ ಒಳಪ್ರದೇಶದಲ್ಲಿ ವೀರಸಂಗಯ್ಯನ ಹಾಗೂ ಆತನ ಪತ್ನಿ ಚಂದ್ರಾಣಿಯ ಸಮಾಧಿಗಳು ಇಂದಿಗೂ ಜೀವಂತ ಸಾಕ್ಷಿಗಳಾಗಿವೆ. ೧೨ನೇ ಶತಮಾನದ ಪೂರ್ವದಲ್ಲಿ ಈ ಸಮಾಧಿಗಳು ನಿರ್ಮಾಣಗೊಂಡಿರಬಹು ದಾಗಿದೆ. ಅದರ ನಂತರ ನಿರ್ಮಾಣವಾಗುವ ಸಂಭವ ಕಡಿಮೆ. ಕಾಕತೀಯರ ಅಧೀನದಲ್ಲಿದ್ದ ಕಾಲದಲ್ಲಿ ಬೀದರ ಕೋಟೆಯಲ್ಲಿ ದೇವಾಲಯಗಳು ಇನ್ನಿತರ ಹಿಂದೂ ಸ್ಮಾರಕಗಳು ಕಂಗೊಳಿಸುತ್ತಿದ್ದವೆಂದು ಇತಿಹಾಸ ಕಾರರ ಅಭಿಪ್ರಾಯ. ಸುಮಾರು ಕ್ರಿ. ಶ. ೧೩೦೦ ರಿಂದ ಮುಸಲ್ಮಾನ್ ಅರಸರ ಪ್ರಾಬಲ್ಯ ದಕ್ಷಿಣದಲ್ಲಿ ಪ್ರಾರಂಭವಾಯಿತು. ಕ್ರಿ. ಶ. ೧೩೨೪ರ ವೇಳೆಗೆ ಬೀದರ ಕೋಟೆ ಮಹಮ್ಮದ್ ಬಿನ್ ತುಘಲಕ್‌ನ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ. ಶ. ೧೪೦೦ ರಿಂದ ಬೀದರ ದಲ್ಲಿ ಬಹುಮನಿ ಸುಲ್ತಾನರ ಚಟುವಟಿಕೆಗಳು ಪ್ರಾರಂಭ ವಾದವು. ಕ್ರಿ. ಶ. ೧೪೨೪ರಲ್ಲಿ ಕೋಟೆಯ ಒಳಭಾಗದಲ್ಲಿ ಸೋಲಾ ಎಂಬ ಮಸೀದಿ ನಿರ್ಮಾಣವಾಯಿತು. ಬಹು ಮನಿ ಸುಲ್ತಾನರ ನಂತರ ಬರೀದ್‌ಶಾಹಿ ಸುಲ್ತಾನರು, ನಂತರ ಹೈದ್ರಾಬಾದಿನ ನಿಜಾಮ್ ಅರಸರು ಬೀದರ ಪ್ರದೇಶದ ಮೇಲೆ ಪ್ರಭುತ್ವ ನಡೆಸಿದರು. ಇವರ ಆಳ್ವಿಕೆಯಲ್ಲಿ ಬೀದರ ಕೋಟೆಯ ಒಳ ಪ್ರದೇಶದಲ್ಲಿ ಹಿಂದೂ ದೇವಾಲಯ ಹಾಗೂ ಸ್ಮಾರಕಗಳ ರಚನೆ ಅಸಾಧ್ಯವೇ ಸರಿ. ಎಂದಮೇಲೆ ವೀರಸಂಗಯ್ಯನ ಸಮಾಧಿ ರಚನೆ ಕಾಕತೀಯರ ಕಾಲದಲ್ಲಿ ಅಥವಾ ಅದಕ್ಕೂ ಪೂರ್ವದಲ್ಲಿ ನಿರ್ಮಾಣವಾಗಿರಬೇಕೆಂಬುದು ನಿರ್ವಿವಾದ. ಮಹಮ್ಮದೀಯರ ಕಾಲದಲ್ಲಿಯೂ ಈ ಸಮಾಧಿ ನಾಶಗೊಳ್ಳದೇ ಉಳಿದಿದ್ದು ಒಂದು ಪವಾಡವೇ ಸರಿ.

೪. ಕೊನೆಯದಾಗಿ ನಮಗೆ ಓಂಕಾರೇಶ್ವರ ಚರಿತ್ರೆ ಪ್ರಮುಖವಾದ ಹಾಗೂ ನಂಬಲರ್ಹವಾದ ಆಧಾರ. ಈ ಚರಿತ್ರೆಯ ಪ್ರಕಾರ ಕೋಹಿರದ ದೀಕ್ಷಿತ್ ಮನೆತನದ ಎರಡನೆಯ ವೇಣಂಭಟ್ಟ ವೀರಸಂಗಯ್ಯನ ಸಮಕಾಲೀನನೆಂದು ತಿಳಿದುಬರುತ್ತದೆ. ದೀಕ್ಷಿತ ಮನೆತನದ ವಂಶಾವಳಿಯ ಪ್ರಕಾರ ಎರಡನೇ ವೇಣಂ ಭಟ್ಟ ಸಾವಿರವರ್ಷಗಳ ಹಿಂದೆ ಜೀವಿಸಿದ್ದು ಅಲ್ಲದೇ ಮಾಧವರಾಯ ಹಾಗೂ ಭಾಸ್ಕರ ಇವರೀರ್ವರಿಗೂ ೧೦೦೦ ವರ್ಷಗಳ ಹಿಂದೆ ಕೋಹಿರ್ ನಗರದ ಪ್ರಭು ಗಳಾಗಿದ್ದರೆಂಬುದನ್ನು ಈ ಮೊದಲೇ ವಿವರಿಸಲಾಗಿದೆ. ವೀರಸಂಗಯ್ಯ ಇವರೀರ್ವರ ಸಮಕಾಲೀನನಾಗಿದ್ದರಿಂದ ಆತನು ಸಾವಿರ ವರ್ಷಗಳ ಹಿಂದೆ ಜೀವಿಸಿದ್ದನೆಂದು ನಂಬಲು ಯಾವ ಸಂಶಯವೂ ಇಲ್ಲ. ಈ ಮೇಲೆ ವಿವರಿಸಿದ ಆಧಾರಗಳ ಮೇಲಿಂದ ಹೇಳುವುದಾದರೆ

---

14. ಅದೃಶ್ಯಕವಿ, ಪ್ರೌಢರಾಯನ ಕಾವ್ಯ, ಸಂಧಿ ೧೩

ವೀರಸಂಗಯ್ಯ ಕ್ರಿ. ಶ. ೧೦೦೦ ಹಾಗೂ ಕ್ರಿ. ಶ. ೧೧೦೦ರ ಅವಧಿಯಲ್ಲಿ ಜೀವಿಸಿದ್ದನೆಂದು ಸ್ಪಷ್ಟವಾಗುತ್ತದೆ.

ಸಂಶೋಧನೆ ಪ್ರಗತಿಯ ಲಕ್ಷಣ. ಪ್ರಾಜ್ಞರು, ಸಂಶೋಧಕರು ಈತನು ಜೀವಿಸಿದ್ದ ಕಾಲವನ್ನು ಅತ್ತ ಇತ್ತ ಎಳೆದಾಡಬಹುದು. ಪ್ರಾಂಜಲ ಮನಸ್ಸಿನ ಸಂಶೋಧನೆಗೆ ಸ್ವಾಗತ. ವೀರಸಂಗಯ್ಯ ಐತಿಹಾಸಿಕ ವ್ಯಕ್ತಿ ಎಂಬುದು ನಿರ್ವಿವಾದ. ಆತನ ಸುತ್ತ ಹೆಣೆದ ಘಟನೆಗಳು ಕೆಲವು ಪವಾಡ ಹಾಗೂ ಅತಿರಂಜಿತ ವರ್ಣನೆಗಳನ್ನು ಬಿಟ್ಟರೆ ಕಾಲ್ಪನಿಕವೆನಿಸಲಾರವು.

ಸಾವಿರಾರು ವರ್ಷಗಳಿಂದ ಇತ್ತೀಚಿನವರೆಗೆ ವೀರ ಸಂಗಯ್ಯ ಸಾಹಿತ್ಯ ಹಾಗೂ ಪ್ರಾರಂಭಿಕ ಕೃತಿಗಳಲ್ಲಿ ಸ್ಥಿರಸ್ಥಾನ ಪಡೆದಿದ್ದಾನೆ. ಬೀದರ ಪ್ರದೇಶದಲ್ಲಿ ಈತನ ಹೆಸರು ಮನೆಮಾತು. ಮಕ್ಕಳಿಗೆ ಈತನ ಹೆಸರನ್ನು ಇಡುವುದು ವಾಡಿಕೆ. ಒಬ್ಬ ಶಿವಶರಣ ಇಷ್ಟು ಸ್ಥಾನ ಗಳಿಸಬೇಕಾದರೆ ಆತ ಒಬ್ಬ ಮಹಾ ಪ್ರಭಾವಶಾಲಿಯಾದ ವ್ಯಕ್ತಿತ್ವವನ್ನು ಹೊಂದಿರಬೇಕಾಗುತ್ತದೆ. ಸಾಮಾನ್ಯ ವ್ಯಕ್ತಿಯ ಬಗ್ಗೆ ಇಷ್ಟೊಂದು ಸಾಹಿತ್ಯ ಲಭ್ಯವಾಗುವುದು ವಿರಳ.

ಈತನು ಜೀವಿಸಿದ ಕರ್ಮಭೂಮಿ ಲಾಡಗೇರಿ. ಇದು ರುದ್ರಮುನಿಗಳ ಗದ್ದಿಗೆಯ ಅತ್ಯಂತ ಪವಿತ್ರ ಜಾಗೃತ ಸ್ಥಳ. ಈ ಪ್ರದೇಶವೆಲ್ಲ ಶಿವಪುರವೆಂದೇ ಹೆಸರು ಗಳಿಸಿತ್ತು. ಶಿವಶರಣರ ಅನುಷ್ಠಾನದ ಕೇಂದ್ರವಾಗಿತ್ತು. ಇಲ್ಲಿ ವೀರಸಂಗಯ್ಯನು ಅನುಷ್ಠಾನ ಮಾಡಿದ ಸ್ಥಳ (ಗವಿ) ಇನ್ನೂ ಹಸಿರಾಗಿದೆ. ಗುರುಲಿಂಗಜಂಗಮ ದಾಸೋಹ ಗಣಾರಾಧನೆ ನಿತ್ಯದ ಮಾತಾಗಿತ್ತು. ಪ್ರಾಚೀನ ಬೀದರ ಪ್ರದೇಶವೇ ಇದಾಗಿತ್ತು. ಇಂದಿಗೂ ಈ ಪರಿಸರದಲ್ಲಿ ಸಪ್ತ ಪೇಟೆಗಳು ಪ್ರಸಿದ್ಧವಾಗಿವೆ. ಲಾಡಗೇರಿ, ಕುಂಬರವಾಡ, ಹಾರೂರಗೇರಿ, ಮಂಗಳಪೇಟೆ, ಇತ್ಯಾದಿಗಳು ಇಂದಿಗೂ ಇಲ್ಲಿ ಪ್ರಚಲಿತವಾಗಿವೆ. ಶಾಸನಗಳ ಹಾಗೂ ಸಮ ಕಾಲೀನ ಕೃತಿಗಳ ಆಧಾರವಿಲ್ಲವೆಂದು ಅಲ್ಲಗಳೆಯಲು ಬರುವಂತಿಲ್ಲ. ಸದ್ಭಕ್ತಿ ಸದಾಚಾರಗಳಿಂದ ವೀರಸಂಗಯ್ಯ ಇಡೀ ಪ್ರದೇಶವನ್ನು ಜಾಗೃತಗೊಳಿಸಿದ್ದ. ಅವನ ಸ್ಮಾರಕವಾದ ವೀರಸಂಗಯ್ಯನ ಗವಿ(ಲಾಡಗೇರಿ) ಇರುವ ಸ್ಥಳ ಬೇರೊಬ್ಬರ ಹೊಲದಲ್ಲಿತ್ತು. ಅದನ್ನು ಇಂದು ಆ ಹೊಲದ ಒಡೆಯ ತನ್ನಿಂದ ತಾನೇ ಸ್ಫೂರ್ತಿಗೊಂಡು ರುದ್ರಮುನಿಗಳ ಮಠಕ್ಕೆ ಒಪ್ಪಿಸಿದ್ದಾನೆ. ಇದರಿಂದ ವೀರಸಂಗಯ್ಯನ ಪ್ರಭಾವ ಇಂದಿಗೂ ನಮ್ಮ ಕಣ್ಣ ಮುಂದೆ ಸಾಕ್ಷಿಯಾಗಿದೆ. ಬೀದರದ ಒಳಕೋಟೆಯಲ್ಲಿ ಅವನ ಸಮಾಧಿ ಇಂದಿಗೂ ಉಳಿದುಕೊಂಡಿರುವುದು ಆಶ್ಚರ್ಯವಾದ ಸಂಗತಿಯಾಗಿದೆ. ಹಾಗೂ ಅವನ ಪ್ರಭಾವೀಪೂರ್ಣ ವ್ಯಕ್ತಿತ್ವಕ್ಕೆ ಕೈಗನ್ನಡಿಯಾಗಿದೆ.

೧೫ನೇ ಶತಮಾನದಲ್ಲಿ ಜೀವಿಸಿದ್ದ ಬೊಮ್ಮಗೊಂಡೇಶ್ವರ ಇನ್ನೊಬ್ಬ ಪ್ರಶಸ್ತ ಶಿವಶರಣ. ಈತನೂ ಅನೇಕ ವಚನಗಳನ್ನು ರಚಿಸಿದ್ದಾನೆಂದು ತಿಳಿದುಬರುತ್ತದೆ.[15] ಅವುಗಳ ಕೂಲಂಕಷ ಪರಿಷ್ಕರಣ ಇನ್ನೂ ನಡೆಯಬೇಕಾಗಿದೆ. ಆತನ ಒಂದು ವಚನದಲ್ಲಿ ವೀರಸಂಗಯ್ಯನ ಪ್ರಭಾವೀ ವ್ಯಕ್ತಿತ್ವ ನಿದರ್ಶನದ ವರ್ಣನೆ ಹೀಗೆ ಇದೆ:

ಶ್ರೀ ಗುರು ವೀರಸಂಗಮನ ಬಣ್ಣಿ — ಬಣ್ಣಿಸುವುದೆಂತು ಸಾಧ್ಯವೋ
ಸೂಳೆಯಮನೆಯಲ್ಲುಂಡು ಅವಳ ದೀಕ್ಷೆಯ ಗೈದು
ಶಿವಶರಣೆಯನ್ನಾಗಿ ಮಾಡಿದ ; ಕಾಟುಗನ ಮನೆಯಲ್ಲುಂಡು
ಅವನ ಜಂಗಮ ದಾಸೋಹಿಯಾಗಿ ಮಾಡಿದ; ವೈರಿ ಭಾಸ್ಕರಂಗೆ
ಲಿಂಗದೀಕ್ಷೆಯ ತೆತ್ತು ಮೈದುನನನ್ನಾಗಿ ಮಾಡಿಕೊಂಡ ; ಮೃತ
ಪಟ್ಟವಂಗೆ ಮರಳಿ ಪ್ರಾಣವ ತೆತ್ತು ಪರುಷದ ಪುತ್ಥಳಿ ಪತಿತಪಾವನ ಮೂರ್ತಿ
ಶ್ರೀ ಗುರು ವೀರಸಂಗಯ್ಯನ ಶ್ರೀಪಾದಕ್ಕೆ ನಮೋ ನಮೋ ಎಂದು
ಬದುಕಿದನು ಬಸವಣ್ಣ.

ಬೊಮ್ಮಗೊಂಡೇಶ್ವರನು ವೀರಸಂಗಯ್ಯನ ಬಗ್ಗೆ ಎಷ್ಟೊಂದು ಪೂಜ್ಯಭಾವನೆ ಹೊಂದಿದ್ದಾನೆಂಬುವುದಕ್ಕೆ

15. ಈತನ ವಚನಗಳನ್ನು ಶ್ರೀ ಶಾಂತಲಿಂಗ ಸ್ವಾಮಿಗಳು (ಲಾಡಗೇರಿ), ಬೀದರ್ ಇವರು ಕಲೆ ಹಾಕಿದ್ದಾರೆ.

ಈ ಮೇಲಿನ ವಚನವೇ ಸಾಕ್ಷಿ. ವೀರಸಂಗಯ್ಯನ ದೀನ-ದಲಿತರ ಉದ್ಧಾರದ ಕಾರ್ಯ ಪ್ರಶಂಸನೀಯ.

ಭಕ್ತ ಚೆನ್ನಮಲ್ಲಯ್ಯನ ವಿರಚಿತ 'ವೀರಸಂಗಯ್ಯನ ಚೌಪದನ' ಒಂದು ಸುಂದರ ಕೃತಿ. ಶರಣ ದಂಪತಿಗಳ ಮೋಹಕ ಚಿತ್ರ ಬಲು ಸೊಂಪಾಗಿ ಮೂಡಿದೆ. ಇಲ್ಲಿ ವೀರಸಂಗಯ್ಯನಷ್ಟೆ ಆತನ ಪತ್ನಿ ಚಂದ್ರುಣಿಯೂ ಪ್ರಾಮುಖ್ಯತೆ ಪಡೆದಿದ್ದಾಳೆ. ಒಂದೆಡೆ ವೀರಸಂಗಯ್ಯನು ವೀರಪ್ರತಾಪನಾಗಿ, ಕ್ಷಮಾಶೀಲನಾಗಿ ಕಂಗೊಳಿಸಿದರೆ, ಇನ್ನೊಂದೆಡೆ ಶರಣೆ ಚಂದ್ರುಣಿ ಸ್ತ್ರೀಧರ್ಮದ ಮೂಲ ಸಂಕೇತವಾಗಿ ಮೆರೆದಿದ್ದಾಳೆ. ಶೀಲಭಂಗ ಮಾಡಲೆತ್ನಿಸಿದ ಕಾಮುಕನನ್ನು ಔದಾರ್ಯದಿಂದ ಕ್ಷಮಿಸಿ ಸಹೋದರ ನೆಂದು ಮನ್ನಿಸಿ, ಹೆಣ್ಣು ಎಷ್ಟು ಕರುಣಾಮಯಿ ಎಂಬು ದನ್ನು ತೋರಿಸಿದ್ದಾಳೆ. ಧಾರ್ಮಿಕವಾಗಿ, ಸಾಮಾಜಿಕ ವಾಗಿ ವೀರಸಂಗಯ್ಯ ಮುಗ್ಧಭಕ್ತಿಯ ಶರಣನಾಗಿ ಬಾಳಿ ದರೂ, ದರ್ಪ ದೌರ್ಜನ್ಯ ಅನ್ಯಾಯದ ವಿರುದ್ಧ ಖಡ್ಗ ಹಿರಿದು ಮೆರೆದಿದ್ದಾನೆ. ಇವರಿಬ್ಬರ ಚಿತ್ರ ಬದುಕಿನ ತೇಜೋಮಯ, ಅಷ್ಟೇ ಚೇತೋಹಾರಿಯಾದ ಅನು-ಪಮ ನಿದರ್ಶನವಾಗಿದೆ.

ಡಾ॥ ಟಿ. ದಯಾನಂದ ಪಟೇಲ್

# ಹೊಯ್ಸಳ ಶಿಲ್ಪಗಳಲ್ಲಿ ಕಂಡುಬರುವ ಸಸ್ಯಸಂಪತ್ತು

ಕಲೆ ಸಮಕಾಲೀನ ಸಮಾಜ ಮತ್ತು ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ ಎಂಬ ಅಂಶವನ್ನು ಎಲ್ಲ ಕಲಾ ಇತಿಹಾಸಜ್ಞರು ಒಪ್ಪುವವರಾದರೂ ಸು.ಕ್ರಿ.ಶ. ೧೧ನೇ ಶತಮಾನದಿಂದ ಪ್ರಾರಂಭವಾಗಿ ೧೪ನೇ ಶತಮಾನದ ಮಧ್ಯಭಾಗದವರೆಗಿನ ಹೊಯ್ಸಳರ ಕಾಲದಸಾಂಸ್ಕೃತಿಕ ಇತಿಹಾಸವನ್ನು ಬರೆಯುವಲ್ಲಿ ದುರದೃಷ್ಟವಶಾತ್ ಈ ಅಂಶವನ್ನು ಅಷ್ಟಾಗಿ ಗಮನಿಸಿದಂತಿಲ್ಲ. ಹೊಯ್ಸಳ ಶಿಲ್ಪಗಳ ವಿವರವಾದ ಅಧ್ಯಯನದಿಂದ ಆ ಕಾಲದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳು ಬೆಳಕಿಗೆ ಬರುತ್ತವೆ. ಹೊಯ್ಸಳರ ಕಾಲದ ದೇವಾಲಯಗಳ ಹಲವಾರು ಶಿಲ್ಪಗಳು ಹಾಗೂ ಅಂಕಣಗಳಲ್ಲಿ ಅನೇಕ ಸಸ್ಯಗಳು ಚಿತ್ರಿತವಾಗಿವೆ. ಅವು ತುಂಬ ಅಸ್ಪಷ್ಟವಾಗಿರುವ ಕಾರಣ ಅವನ್ನು ಖಚಿತವಾಗಿ ಗುರುತಿಸಲಾಗುವುದಿಲ್ಲ. ಆದರೂ ಕೆಲವು ಉತ್ತಮ ಕೆತ್ತನೆಗಳನ್ನು ಅವಲೋಕಿಸುವುದರಿಂದ ಹೊಯ್ಸಳ ಕಾಲದ ಸಸ್ಯಸಂಪತ್ತಿನ ಬಗ್ಗೆ ಸಾಕಷ್ಟು ಅಂಶಗಳನ್ನು ಗ್ರಹಿಸಬಹುದಾಗಿದೆ. ಆಲ, ತಮಾಲ, ಅರಳಿ, ಬಾಳೆ, ಮಲ್ಲಿಗೆ ಮತ್ತು ಕಬ್ಬು ಮೊದಲಾದ ಕೆಲವು ಮರಗಿಡಗಳು ಕಂಡುಬರುತ್ತವೆ.

ಆ ಕಾಲದ ಹಲವಾರು ಶಾಸನಗಳಲ್ಲಿ ಆಗಿನ ಸಸ್ಯಸಂಪದದ ಬಗ್ಗೆ ಉಲ್ಲೇಖಗಳಿವೆ. ಮರಗಳು, ಗಿಡಗಳು, ಪೊದರುಗಳು ಹಾಗೂ ವನಗಳ ಬಗ್ಗೆ ಉಲ್ಲೇಖಗಳಿವೆ. ಕೃಷ್ಣರಾಜನಗರ ತಾಲ್ಲೂಕಿನ ಲಾಲನಹಳ್ಳಿಯ ಶಾಸನವೊಂದರಲ್ಲಿ ಹುಣಿಸೇಮರದ ಬಗ್ಗೆ ಪ್ರಸ್ತಾಪವಿದೆ.[1] ಟಿ. ನರಸೀಪುರ ತಾಲ್ಲೂಕಿನ ತಲಕಾಡಿನ ಶಾಸನವೊಂದರಲ್ಲಿ ಅಡಿಕೆ ತೋಟದ ಬಗ್ಗೆ ಪ್ರಸ್ತಾಪವಿದೆ.[2] ಟಿ. ನರಸೀಪುರದ ಸೋಮನಾಥಪುರದ ಶಾಸನವೊಂದರಲ್ಲಿ ತಾವರೆ, ಅಡಿಕೆ, ಶ್ರೀಗಂಧ, ಅರಿಸಿನ ಮತ್ತು ಏಲಕ್ಕಿ—ಇವನ್ನು ಉಲ್ಲೇಖಿಸಲಾಗಿದೆ.[3] ಗುಂಡ್ಲುಪೇಟೆ ತಾಲ್ಲೂಕು ಬಂಡೀಪುರದ ಶಾಸನವೊಂದರಲ್ಲಿ ಹೂವಿನತೋಟದ (ಪೂಂದೋಟಿಯಂ) ಬಗ್ಗೆ ಉಲ್ಲೇಖವಿದೆ.[4] ನಂಜನಗೂಡು ತಾಲ್ಲೂಕು ಹೆಮ್ಮರಗಾಲದ ಶಾಸನದಲ್ಲಿ[5] ಅರಳೀಮರದ ಬಗ್ಗೆ ಉಲ್ಲೇಖವಿದೆ. ಗುಂಡ್ಲುಪೇಟೆ ತಾಲ್ಲೂಕಿನ ರಾಘವಪುರದ[6] ಮತ್ತೊಂದು ಶಾಸನದಲ್ಲಿ ಹಲವಾರು ಗಿಡ–ಮರಗಳ ಪ್ರಸ್ತಾಪವಿದೆ. ಎಂದರೆ ಆ ಕಾಲದಲ್ಲಿನ ಸಸ್ಯಸಮೃದ್ಧಿಯ ಬಗ್ಗೆ ಇವು ಸಾಕ್ಷ್ಯಾಧಾರಗಳನ್ನು ಒದಗಿಸುತ್ತದೆ. ಕಲ್ಲತ್ತಿಮರ, ಚಿಂಚಮರ, ಹೊಂಗೇಮರವೆ,

1. ಎ. ಕ, ಸಂ. V; ಕೃನಾ. ೧೧೮
2. ಅದೇ, ತೀನ. ೧೫೧
3. ಅದೇ, ತೀನ. ೮೮
4. ಅದೇ, ಸಂ. III, ಗುಂ. ೧೮೭
5. ಅದೇ, ಸಂ. ೩೬೯
6. ಅದೇ, ಗುಂ. ೪೦

ಆಲದಮರ, ಗೊಟ್ಟಿಯಮರ, ಕಗ್ಗಲಿಮರ, ಮತ್ತಿಮರ ಮೊದಲಾದುವನ್ನು ಹೆಸರಿಸಿದೆ. ನಾಗಮಂಗಲದ[7] ಶಾಸನಗಳಲ್ಲಿ ನೇರಳೆಮರ, ಬೇಲದಗಿಡ ಮತ್ತು ಪರಿಶುದ್ಧ ಪಾರಿಜಾತ ಪುಷ್ಪಗಳು ಉಲ್ಲೇಖಿತವಾಗಿವೆ. ಮಂಡ್ಯ ತಾಲ್ಲೂಕಿನ ಹೊಸಬೂದನೂರಿನ[8] ಶಾಸನವೊಂದರಲ್ಲಿ ಅಡಿಕೆ, ತೆಂಗು ಮೊದಲಾದ ಮರಗಳ ಉಲ್ಲೇಖವಿದೆ. ನಾಗಮಂಗಲ ತಾಲ್ಲೂಕಿನ ಅಳಿಸಂದ್ರದ[9] ಶಾಸನವೊಂದರಲ್ಲಿ ಗಂಧದಮರ, ಕಲ್ಲತ್ತಿಮರ, ನೇರಳೇಮರ, ಹುಣಸೇಮರ ಮೊದಲಾದವುಗಳನ್ನು ಹೆಸರಿಸಲಾಗಿದೆ. ಮದ್ದೂರು ತಾಲ್ಲೂಕು ವೈದ್ಯನಾಥಪುರದ[10] ಶಾಸನವೊಂದು ವೃಂದಾವನ (ಹೂದೋಟ) ನಿರ್ಮಾಣದ ಬಗ್ಗೆ ಉಲ್ಲೇಖಿಸಿದೆ. ಮದ್ದೂರು ತಾಲ್ಲೂಕಿನ ತಿಪ್ಪೂರದ[11] ಮತ್ತೊಂದು ಶಾಸನದಲ್ಲಿ ಪಾರಿಜಾತದ ಮರ ಮತ್ತಿತರ ಪುಷ್ಪಗಳನ್ನು ಹೆಸರಿಸಲಾಗಿದೆ.

ಹೊಯ್ಸಳ ದೇವಾಲಯಗಳಲ್ಲಿ ಸಸ್ಯಸಂಪದದ ಚಿತ್ರಣ ಸಮೃದ್ಧವಾಗಿದೆ. ಶಿಲ್ಪಿ ಅವನ್ನು ಉದ್ದೇಶಪೂರ್ವಕವಾಗಿ ಹಲವಾರು ಶಿಲ್ಪಗಳು ಹಾಗೂ ಅಂಕಣಶಿಲ್ಪಗಳಲ್ಲಿ ಕಡೆದಿರುವನು. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯ,[12] ಬೇಲೂರಿನ ಚನ್ನಕೇಶವ ದೇವಾಲಯ,[13] ಸೋಮನಾಥಪುರದ ಕೇಶವ ದೇವಾಲಯ,[14] ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಿ ದೇವಾಲಯ,[15] ಗೋವಿಂದನಹಳ್ಳಿ ಪಂಚಲಿಂಗೇಶ್ವರ ದೇವಾಲಯ,[16] ಹೊಸಹೊಳಲಿನ ಲಕ್ಷ್ಮೀನಾರಾಯಣ ದೇವಾಲಯ,[17] ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯ,[18] ಅಮೃತಪುರದ ಅಮೃತೇಶ್ವರ ದೇವಾಲಯ,[19] ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯ,[20] ಮೊದಲಾದ ಕಡೆಗಳಲ್ಲಿ ಸಸ್ಯಸಂಪತ್ತಿನ ವಿಪುಲ ಚಿತ್ರಣ ನಮಗೆ ಕಂಡುಬರುತ್ತದೆ.

**ಅರಳೀಮರ :** ಅರಳಿ ಹಿಂದೂಗಳಿಗೆ ಪವಿತ್ರವಾದ ವೃಕ್ಷ. ಬಹುಮಟ್ಟಿಗೆ ಭಾರತದ ಎಲ್ಲ ನಗರ ಹಾಗೂ ಗ್ರಾಮಗಳಲ್ಲಿನ ಜನತೆ ಇದನ್ನು ಪವಿತ್ರವಾದ ವೃಕ್ಷವೆಂದು ಪರಿಗಣಿಸಿ ಪೂಜಿಸುವುದು ಕಂಡುಬರುತ್ತದೆ. ಹೊಯ್ಸಳ ದೇವಾಲಯಗಳಲ್ಲಿ ಭಾಗವತದ ಕಥೆಯನ್ನು ಚಿತ್ರಿಸುವ ಪಟ್ಟಿಕೆಗಳಲ್ಲಿ ಅರಳೀಮರ ಅನೇಕ ಕಡೆಗಳಲ್ಲಿ ಕಂಡುಬರುತ್ತದೆ. ಮೊನಚಾದ ಎಲೆಗಳಿಂದ ಕೂಡಿರುವ ಮರಗಳನ್ನು ಕಡೆಯಲಾಗಿದೆ. ಗಾರ್ದಭಾಸುರನೊಡನೆ ಕೃಷ್ಣನ ಕಾಳಗ, ಗೋವರ್ಧನ ಗಿರಿಯನ್ನು ಕೃಷ್ಣ ಎತ್ತುತ್ತಿರುವುದು ಹಾಗೂ ಇಂದ್ರ ಅದನ್ನು ಪೂಜಿಸುತ್ತಿರುವುದು, ಶಿಶು ಕೃಷ್ಣನನ್ನು ಗೋಪಿಯರಿಗೆ ನೀಡುತ್ತಿರುವುದು ಮೊದಲಾದ ಪ್ರಸಂಗಗಳನ್ನು ನಿರೂಪಿಸುವ ಪಟ್ಟಿಕೆಗಳಲ್ಲಿ ಅರಳಿ ಮರದ ಕೆತ್ತನೆ ಸುಂದರವಾಗಿದೆ.

**ಆಲದಮರ :** ಬಹಳ ಹಿಂದಿನಿಂದ ಬೆಳೆಯುತ್ತಿರುವ, ಈಗಲೂ ಬೆಳೆಯಲಾಗುತ್ತಿರುವ ಆಲವು ಹೊಯ್ಸ

7. ಅದೇ, ಸಂ. VII, ನಾಮಂ. ೧ ಮತ್ತು ೭
8. ಅದೇ, ಮಂ. ೫೬
9. ಅದೇ, ನಾಮಂ. ೭೨
10. ಅದೇ, ಮಂ. ೬೯
11. ಅದೇ, ಮದ್ದೂರು ೫೪
12. ಎಂ. ಎ. ಆರ್., ೧೯೩೦, ಪು. ೩೩, ೧೨ (ಚಿತ್ರ ೧)
13. ಆರ್. ನರಸಿಂಹಾಚಾರ್. ಆರ್ಕಿಟೆಕ್ಚರ್ ಅಂಡ್ ಸ್ಕಲ್ಪ್ಚರ್ ಇನ್ ಮೈಸೂರು, ನಂ. II ಮತ್ತು ಎಂ. ಎ. ಆರ್., ೧೯೩೧, ಫಲಕ X
14. ಎಂ.ಎ.ಆರ್., ೧೯೩೨, ಪು. ೧೬
15. ಆರ್. ನರಸಿಂಹಾಚಾರ್, ಪೂರ್ವೋಕ್ತ III
16. ಎಂ. ಎ. ಆರ್, ೧೯೩೩, ಪು. ೧೫
17. ಅದೇ, ಫ. III ಮತ್ತು ಫ. IV (ಚಿತ್ರ 2)
18. ಅದೇ, ಫ. VII (ಚಿತ್ರಗಳು ೧ ಮತ್ತು ೨)
19. ಅದೇ, ೧೯೩೧, ಫ. III (ಚಿತ್ರ ೩)
20. ಅದೇ, ೧೯೧೫, ಪು. ೨೨

ಳತ ಕಾಲದಲ್ಲಿ ಸರ್ವೇಸಾಮಾನ್ಯವಾಗಿದ್ದಂತೆ ಕಂಡುಬರುತ್ತದೆ. ಬಹುಮಟ್ಟಿಗೆ ನೆರಳಿಗಾಗಿ ಇದನ್ನು ನೆಡುತ್ತಿದ್ದಂತೆ ಕಾಣುತ್ತದೆ. ಹೊಯ್ಸಳ ದೇವಾಲಯದ ಪಟ್ಟಿಕೆಗಳಲ್ಲಿ ಅನೇಕ ಕಡೆ ಇದರ ಚಿತ್ರಣವಿದೆ. ಯಮುನೆಯ ದಡದ ತೋಪುಗಳಲ್ಲಿ ಕೃಷ್ಣ ಕ್ರೀಡಿಸುತ್ತಿರುವುದು, ಪಾಂಡವರ ವನವಾಸ ಪ್ರಸಂಗ, ಭೀಮ ಹಿಡಿಂಬನನ್ನು ವಧಿಸಿ ಅವನ ಸೋದರಿಯನ್ನು ವಿವಾಹವಾಗುವ ಪ್ರಸಂಗ-ಇವುಗಳಲ್ಲೆಲ್ಲ ಆಲವನ್ನು ಅದರ ಕೊಂಬೆರಂಬೆಗಳು ಹಾಗೂ ಎಲೆಗಳ ಸಮೇತ ಸುಂದರವಾಗಿ ಚಿತ್ರಿಸಲಾಗಿದೆ.

**ತೆಂಗಿನಮರ :** ಹೊಯ್ಸಳ ದೇವಾಲಯಗಳಲ್ಲಿ ತೆಂಗಿನಮರದ ಚಿತ್ರಣ ಕೆಲವು ಕಡೆ ಕಂಡುಬರುತ್ತದೆ. ಆನೆಯ ಅಲಂಕಾರ ಪಟ್ಟಿಯನ್ನು ಚಿತ್ರಿಸುವ ಪಟ್ಟಿಕೆಗಳು ಹಾಗೂ ಕಂಸನ ನಗರ ಚಿತ್ರಿಸುವ ಭಾಗವತದ ಪಟ್ಟಿಕೆಗಳಲ್ಲಿ ತೆಂಗಿನಮರವನ್ನು ಅದರ ಅಗಲವಾದ ಗರಿಗಳು ಹಾಗೂ ಕಾಯಿಗಳ ಗೊನೆಗಳ ಸಮೇತ ಕಡೆಯಲಾಗಿದೆ. ತೆಂಗಿನಮರದ ಅತಿಯಾದ ಎತ್ತರವನ್ನು ಚಿತ್ರಿಸುವ ಸಲುವಾಗಿ ದೊಡ್ಡ ದೊಡ್ಡ ಗರಿಗಳು ಆಕಾಶವನ್ನು ಮುಟ್ಟುವಂತೆ ತುಂಬಾ ಚೆನ್ನಾಗಿ ಶಿಲ್ಪಿ ಕಡೆದಿರುವನು. ಮರದ ಗೊನೆಯಲ್ಲಿ ಕಾಯಿಗಳನ್ನು ಚಿತ್ರಿಸುವುದು ಹೊಯ್ಸಳ ಶಿಲ್ಪಿಯ ಕಲಾನೈಪುಣ್ಯ ಹಾಗೂ ಪರಿಪಕ್ವತೆಯನ್ನು ಸೂಚಿಸುತ್ತದೆ. ತೆಂಗಿನಕಾಯಿ ಮಾತ್ರವಲ್ಲದೆ ಅದರ ಎಲ್ಲ ಭಾಗಗಳೂ ಉಪಯೋಗಕ್ಕೆ ಬರುವುದರಿಂದ ಅದನ್ನು ಸಂಸ್ಕೃತದಲ್ಲಿ 'ಕಲ್ಪವೃಕ್ಷ'ವೆಂದೇ ಕರೆಯಲಾಗುತ್ತದೆ.

**ತಮಾಲ ವೃಕ್ಷಗಳು :** ಹೊಯ್ಸಳ ದೇವಾಲಯಗಳ ಶಿಲ್ಪಗಳು ಹಾಗೂ ಪಟ್ಟಿಕೆಗಳಲ್ಲಿ ತಮಾಲವೃಕ್ಷವನ್ನು ತುಂಬ ಚೆನ್ನಾಗಿ ಚಿತ್ರಿಸಲಾಗಿದೆ. ಕೃಷ್ಣನನ್ನು ವೇಣುಗೋಪಾಲನನ್ನಾಗಿ ಪ್ರತಿನಿಧಿಸುವ ಭಿತ್ತಿಶಿಲ್ಪಗಳಲ್ಲಿ ಅವನು ತಮಾಲವೃಕ್ಷವನ್ನು ಒರಗಿರುವಂತೆ ಚಿತ್ರಿಸಲಾಗಿದೆ. ಕೃಷ್ಣನನ್ನು ವೇಣುಗೋಪಾಲನಾಗಿ ಚಿತ್ರಿಸಿರುವ ಮತ್ತೆ ಕೆಲವು ಶಿಲ್ಪಗಳಲ್ಲಿ ಕೃಷ್ಣ ಅಡ್ಡಗಾಲು ಹಾಕಿಕೊಂಡು ತಮಾಲವೃಕ್ಷವನ್ನು ಒರಗಿಕೊಂಡು ಉದ್ದನೆಯ ಕೊಳಲ ನೂದುತ್ತಿರುವಂತೆ ಚಿತ್ರಿಸಲಾಗಿದೆ. ವೃಕ್ಷದ ಕೊಂಬೆಗಳು ದೇವರು ಮತ್ತು ಇತರರಿಗೆ ನೆರಳು ನೀಡುತ್ತಿರುವಂತೆ ಚಿತ್ರಿಸಲಾಗಿದೆ. ಸಸ್ಯಸಂಪದವನ್ನು ಚಿತ್ರಿಸಲು ಹೊಯ್ಸಳ ಶಿಲ್ಪಿಗಳು ಹೆಚ್ಚು ಪ್ರಾಧಾನ್ಯ ನೀಡಿರುವರು.

**ಬಾಳೆ :** ಸೋಮನಾಥಪುರದ ಕೇಶವ ದೇವಾಲಯದಲ್ಲಿ ಕೃಷ್ಣ ನಿಂತಿರುವ ಭಂಗಿಯಲ್ಲಿರುವ ಒಂದು ಶಿಲ್ಪವಿದ್ದು, ಬಾಳೆಯಗಿಡ, ಮುಸಲ, ಚಕ್ರ, ಶಂಖಗಳನ್ನು ಹಿಡಿದಿರುವುದನ್ನು ಚಿತ್ರಿಸಲಾಗಿದೆ. ಯಮುನೆಯ ತೀರದಲ್ಲಿ ಗೋಪಿಯರೊಡನೆ ಜಲಕ್ರೀಡೆಯಾಡುತ್ತಿರುವ ಕೃಷ್ಣನನ್ನು ಚಿತ್ರಿಸಿರುವ ಭಿತ್ತಿಪಟ್ಟಿಕೆಯಲ್ಲಿ ಸುಂದರವಾದ ಬಾಳೆಯಗಿಡವನ್ನು ಕೆತ್ತಲಾಗಿದೆ. ದಕ್ಷಿಣಭಾರತದ ಎಲ್ಲ ಕಡೆ ವ್ಯಾಪಕವಾಗಿ ಇದನ್ನು ಬೆಳೆಯಲಾಗುವುದು. ದಪ್ಪ ಕಾಂಡದಿಂದ ಎಲ್ಲ ಕಡೆಗೆ ವಿಶಾಲವಾಗಿ ಹರಡಿರುವ ದೊಡ್ಡ ದೊಡ್ಡ ಎಲೆಗಳನ್ನು ಕೆತ್ತಲಾಗಿದೆ.

**ಮಾವು :** ಕೃಷ್ಣ ಯಮುನೆಯ ತೀರದಲ್ಲಿನ ತೋಪುಗಳಲ್ಲಿ ಕ್ರೀಡಿಸುತ್ತಿರುವುದು, ಗಾರ್ದಭಾಸುರನೊಡನೆ ಕೃಷ್ಣನ ಕಾಳಗ, ಗೋವರ್ಧನ ಪರ್ವತವನ್ನು ಕೃಷ್ಣ ಎತ್ತುತ್ತಿರುವುದು ಹಾಗೂ ಇಂದ್ರ ಅವನನ್ನು ಪೂಜಿಸುತ್ತಿರುವುದು ಮೊದಲಾದುವನ್ನು ಪ್ರತಿನಿಧಿಸುವ ಹೊಯ್ಸಳ ದೇವಾಲಯಗಳ ಪಟ್ಟಕೆಗಳಲ್ಲಿ ಮಾವಿನಮರಗಳ ಸುಂದರ ಚಿತ್ರಣವಿದೆ. ತೋಪುಗಳಲ್ಲಿ ಇಂಥ ಅನೇಕ ಮರಗಳಿದ್ದು, ಸಾಕಷ್ಟು ಕೊಂಬೆಗಳಿಂದ ಕೂಡಿದ್ದು ಛತ್ರಿಯಂತೆ ಒಳ್ಳೆಯ ನೆರಳು ನೀಡುವಂತಿವೆ. ಕೊಂಬೆಗಳು ದಪ್ಪವಾಗಿಯೂ ಬಲಿಷ್ಠವಾಗಿಯೂ ಇರುವಂತಿದೆ.

**ಕಬ್ಬು :** ಹೊಯ್ಸಳ ದೇವಾಲಯಗಳಲ್ಲಿ ಮನ್ಮಥನನ್ನು ಪ್ರತಿನಿಧಿಸಿರುವ ಕಡೆಗಳಲ್ಲೆಲ್ಲ ಸಾಮಾನ್ಯವಾಗಿ ಕಬ್ಬನ್ನು ಚಿತ್ರಿಸಲಾಗಿದೆ. ಕಬ್ಬಿನ ಜಲ್ಲೆಯ ಉದ್ದನೆಯ ಆಕಾರವನ್ನು ಮತ್ತು ಮಧ್ಯ ಮಧ್ಯ ಇರುವ ಗಿಣ್ಣನ್ನು ಬಹಳ ಸುಂದರವಾಗಿ ಚಿತ್ರಿಸಲ್ಪಟ್ಟಿದೆ. ಕಬ್ಬಿನಿಂದ ತಯಾರಾದ ಬೆಲ್ಲ ಇಂದಿಗೂ ಸುಪ್ರಸಿದ್ಧವಾಗಿದೆ. ಭಾರತದ ಎಲ್ಲೆಡೆಗಳಲ್ಲಿ ಇವರ ಕೃಷಿ ಆಗುತ್ತಿದೆ.

**ಪಾರಿಜಾತ ವೃಕ್ಷ :** ಪೌರಾಣಿಕ ಸಂಬಂಧ ಪಡೆದಿರುವ ಈ ಪವಿತ್ರ ವೃಕ್ಷವನ್ನು ಕೇಶವ ದೇವಾಲಯದ ಬೃಹದ್ ಭಿತ್ತಿಶಿಲ್ಪಗಳಲ್ಲಿ ಸುಂದರವಾಗಿ ಕೆತ್ತಲಾಗಿದೆ. ಕೃಷ್ಣ ಸತ್ಯಭಾಮೆಯರನ್ನು ತನ್ನ ಭುಜಗಳ ಮೇಲೆ ಹೊತ್ತಿರುವ ಗರುಡನ ಕೈಯಲ್ಲಿ ಹೂವಿನಿಂದ ಕೂಡಿದ ಈ ಮರದ ಕೊಂಬೆಯೊಂದನ್ನು ಸುಂದರವಾಗಿ ಕೆತ್ತಲಾಗಿದೆ. ಸುವಾಸನೆಯಿಂದ ಕೂಡಿದ ಈ ಹೂವುಗಳು ದೇವ-ದೇವತೆಯರ ಪೂಜೆಗೆ ಪರಮಯೋಗ್ಯವಾಗಿವೆ.

**ತೋಪುಗಳು ಮತ್ತು ವನಗಳು :** ಹೊಯ್ಸಳ ದೇವಾಲಯಗಳಲ್ಲಿ, ರಾಮಾಯಣ, ಭಾಗವತ ಮತ್ತು ಮಹಾಭಾರತ ಕಥೆಗಳನ್ನು ಪ್ರತಿನಿಧಿಸುವ ಭಿತ್ತಿಶಿಲ್ಪಗಳು ಹಾಗೂ ಪಟ್ಟಿಕೆಗಳಲ್ಲಿ ಸಸ್ಯಸಂಪದಕ್ಕೆ ಪ್ರಾಮುಖ್ಯ ನೀಡುವ ತೋಪುಗಳು ಹಾಗೂ ವನಗಳನ್ನು ಚಿತ್ರಿಸಲಾಗಿದೆ. ದೇವಾಲಯದ ಶಿಲ್ಪಗಳಲ್ಲಿ ಚಿತ್ರಿತವಾಗಿರುವ ಈ ತೋಪು-ವನಗಳಲ್ಲಿ ಅಡಿಕೆ, ಕಲ್ಲತ್ತಿ, ತುಗ್ಗಿಲ,ಬಂಬು, ತೇಗ, ಹೊಂಗೆ, ಕಗ್ಗಲಿ, ನೇರಳೆ, ಹಲಸು, ಶ್ರೀಗಂಧ, ಮತ್ತಿ, ಬೀಟೆ, ಜೇಲದಮರ ಮೊದಲಾದುವು ಇದ್ದಿರಬೇಕು. ಅವನ್ನು ಅಷ್ಟು ಸೂಕ್ಷ್ಮವಾಗಿ ಕೆತ್ತದಿರುವುದರಿಂದ ಅವುಗಳ ಪ್ರಭೇದವನ್ನು ಸುಲಭವಾಗಿ ಗುರುತಿಸಲಾಗುವುದಿಲ್ಲ. ಹೊಯ್ಸಳರ ಕಾಲದಲ್ಲಿ ವಿವಿಧ ಗಿಡಮರಗಳಿಂದ ಕೂಡಿದ ತೋಪುಗಳು ಹಾಗೂ ವನಗಳು ಸಾಕಷ್ಟಿದ್ದವು ಎಂಬುದಕ್ಕೆ ಇವು ಸಾಕ್ಷ್ಯಾಧಾರಗಳಾಗಿವೆ.

**ಫಲ-ಪುಷ್ಪಗಳು :** ಹೊಯ್ಸಳ ದೇವಾಲಯದ ಪಟ್ಟಿಕೆಗಳಲ್ಲಿನ ಶಿಲ್ಪಗಳಲ್ಲಿ ದೇವ-ದೇವತೆಯರ ಕೈಗಳಲ್ಲಿ ಹಲವು ಬಗೆಯ ಫಲ–ಪುಷ್ಪಗಳಿರುವಂತೆ ಚಿತ್ರಿತವಾಗಿದೆ. ಬಾಳೆ, ಮಾವು, ಅಡಿಕೆ, ನೈದಿಲೆ, ಮಲ್ಲಿಗೆ, ಪಾರಿಜಾತ, ತಾವರೆ ಮೊದಲಾದ ಫಲ–ಪುಷ್ಪಗಳು ಇದರಲ್ಲಿ ಸೇರಿವೆ. ಅನೇಕ ಶಿಲ್ಪಗಳಲ್ಲಿ ಮಾಲೆಗಳನ್ನು ಕಡೆಯಲಾಗಿದೆ. ಈ ಪಟ್ಟಿಕೆಗಳು ಹಾಗೂ ಶಿಲ್ಪಗಳು ಹೊಯ್ಸಳರ ಕಾಲದಲ್ಲಿನ ಸಸ್ಯಸಂಪದದ ವಿಪುಲ ಚಿತ್ರಣವನ್ನು ನೀಡುತ್ತವೆ. ಮರ–ಗಿಡಗಳು, ತರು–ಲತೆ–ಗುಲ್ಮಗಳ ವೈವಿಧ್ಯಕ್ಕೆ ಇವು ಪ್ರತೀಕವಾಗಿವೆ.

ಎಂ. ಪಿ. ಮಹಾದೇವಯ್ಯ

# ಕರ್ನಾಟಕ ಆಡಳಿತದಲ್ಲಿ ಸರ್ವಾಧಿಕಾರಿ

ಕರ್ನಾಟಕದ ಪ್ರಾಚೀನ ಮತ್ತು ಮಧ್ಯಕಾಲೀನ ಶಾಸನಗಳನ್ನು ಪರಿಶೀಲಿಸಿದರೆ, ಸರ್ವಾಧಿಕಾರಿ ಎನ್ನುವ ಅಧಿಕಾರಿಗಳು ಪದೇ ಪದೇ ನಮ್ಮ ಗಮನವನ್ನು ಸೆಳೆಯುತ್ತಾರೆ. ಪದದ ಅರ್ಥವು ತಿಳಿಸುವಂತೆ ಇವರು ಇಂಗ್ಲಿಷ್ ಭಾಷೆಯ 'ಆಟೋಕ್ರ್ಯಾಟ್' ಅಲ್ಲ, ಅಥವಾ ಸರ್ವ ಅಧಿಕಾರವನ್ನು ಪಡೆದವರೂ ಅಲ್ಲ. ಆದರೂ ಕೂಡ ಹೆಚ್ಚಿನ ಸಂಖ್ಯೆಯಲ್ಲಿ ಈ ಅಧಿಕಾರವನ್ನು ಹೊಂದಿರುವವರು ಕಾಣಸಿಗುತ್ತಾರೆ. ಇವರ ಅಧಿಕಾರವೇನು, ಇವರು ಯಾವ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರು, ಇವರ ಸ್ಥಾನಮಾನವೇನು ಎಂಬ ವಿಷಯದಲ್ಲಿ ಇತಿಹಾಸಕಾರರು ಖಚಿತವಾದ ಅಭಿಪ್ರಾಯವನ್ನು ಹೊಂದಿಲ್ಲದಿರುವುದು ನಮ್ಮ ಗಮನವನ್ನು ಸೆಳೆಯುತ್ತದೆ.

ಇದು ಕರ್ನಾಟಕಕ್ಕೇ ಸೀಮಿತವಾದ ಅಧಿಕಾರವೇ ಅಥವಾ ಇತರ ಭಾಗಗಳಲ್ಲಿಯೂ ಇದು ಇತ್ತೇ ಎಂಬುದನ್ನೂ ನಿರ್ಧರಿಸುವುದು ಕಷ್ಟಕರವಾದ ಸಂಗತಿ. ಮಹಾಲಿಂಗಂ ಅವರು ತಮ್ಮ ಗ್ರಂಥದಲ್ಲಿ ಈ ಪದವನ್ನು ಕೊಟ್ಟಿಲ್ಲ.[1] ಈ ಪದ ಸಂಸ್ಕೃತ ಮೂಲದಿಂದ ಬಂದಿದ್ದು ಎನ್ನುವುದಾದರೆ, ಅದಕ್ಕೆ ಪೂರಕವಾಗಿ ಸರ್ವಾಧ್ಯಕ್ಷ ಎನ್ನುವ ಪದವನ್ನು ಕಾಣುತ್ತೇವೆ. ಸರ್ವಾಧ್ಯಕ್ಷ ಎಂದರೆ ರಾಜನಿಗೆ ಬಲು ಸಮೀಪವಾಗಿದ್ದು, ಅರಮನೆಯಲ್ಲಿಯೂ ಅಧಿಕಾರವನ್ನು ಹೊಂದಿದ್ದ ಅಧಿಕಾರಿ ಎಂದು ಡಾ॥ ಮಹಾಲಿಂಗಂ ಅರ್ಥಮಾಡುತ್ತಾರೆ.[2] ಜೊತೆಗೆ ಈ ಪದಕ್ಕೆ ಸಂವಾದಿಯಾಗಿ ಸರ್ವನಾಯಕ, ಮಾನೆಯ ಅಧಿಕಾರಿ, ಮಾನೆಯ ಪ್ರಧಾನ ಎನ್ನುವ ಪದಗಳನ್ನೂ ಕೊಡುತ್ತಾರೆ. ಈ ಅಧಿಕಾರಿಯು ರಾಜನೊಡನೆ ಭೇಟಿ ಮಾಡಲು ಬಂದ ಅಧಿಕಾರಿಗಳನ್ನು ನಿಯಂತ್ರಿಸುತ್ತಿದ್ದನೆಂದೂ ಸಂಜಾನ್ ಶಾಸನದ ಪ್ರಕಾರ ರಾಷ್ಟ್ರಕೂಟ ದೊರೆಯನ್ನು ಕಾಣಲು ಇತರ ಅಧಿಕಾರಿಗಳು ಸರದಿಗಾಗಿ ಕಾಯುತ್ತಾ ಕುಳಿತಿರುತ್ತಿದ್ದರೆಂದೂ ಈ ಕೆಲಸವನ್ನು ಸರ್ವಾಧ್ಯಕ್ಷನು ಮಾಡುತ್ತಿದ್ದನೆಂದೂ ಅವರು ಅಭಿಪ್ರಾಯಪಡುತ್ತಾರೆ.

ಅಳತೇಕರ್ ಅವರ ಪ್ರಕಾರ ಸರ್ವಾಧಿಕಾರಿಗೆ ಎಲ್ಲ ವಿಷಯಗಳಲ್ಲಿಯೂ ಅಧಿಕಾರವಿತ್ತು.[3] ಶುಕ್ರನೀತಿ ಎಂಬ ಗ್ರಂಥದಲ್ಲಿ ಬರುವ ಸರ್ವದರ್ಶಿನ್ ಎಂಬ ಉಚ್ಚ ಅಧಿಕಾರಿಯೇ ಸರ್ವಾಧಿಕಾರಿ ಎನ್ನುವ ಅರ್ಥ ಬರುವಂತೆ ಅವರು ಬರೆಯುತ್ತಾರೆ. ಕ್ರಿ. ಶ. ಆರನೆಯ ಶತಮಾನದ ಶಾಸನದ ಆಧಾರದ ಮೇಲೆ ಸರ್ವಸ್ಯ ಅನುಷ್ಠಾತಾ, ಅಂದರೆ ಎಲ್ಲ ವಿಭಾಗಗಳಲ್ಲಿಯೂ ಅಧಿಕಾರ ಚಲಾಯಿಸಬಲ್ಲ ಶ್ರೇಷ್ಠ ಅಧಿಕಾರಿ ಎಂದೂ ಅವರು ತಿಳಿಸುತ್ತಾರೆ.[4]

1. T. V. Mahalingam : South Indian Polity
2. Ibid., p. 60
3. A. S. Altekar : The Rashtrakutas and Their Times, p. 165
4. Indian Antiquary, Vol. IV, p. 24

ಸಾಮಾನ್ಯವಾಗಿ ಇಂತಹ ಶ್ರೇಷ್ಠ ಅಧಿಕಾರವು ಪ್ರಧಾನಿಗೆ ಇದ್ದುದರಿಂದ, ಸರ್ವಾಧಿಕಾರಿಯು ಪ್ರಧಾನಾಮಾತ್ಯ ಅಥವಾ ಮುಖ್ಯಮಂತ್ರಿಯೇ ಆಗಿದ್ದಿರಬೇಕೆಂದು ಅವರು ಊಹೆ ಮಾಡಿ, ಒಂದಿಬ್ಬರು ಪ್ರಧಾನರನ್ನೂ ಹೆಸರಿಸುತ್ತಾರೆ. ಆದರೆ ಈ ಅಧಿಕಾರಿಯ ಸ್ಪಷ್ಟ ರೂಪರೇಷೆಗಳನ್ನು ತಿಳಿಸುವುದಿಲ್ಲ.

ಡೆರಟ್ ಅವರು ಈ ಪದವನ್ನು ವಿಶ್ಲೇಷಿಸುತ್ತಾ, ಸರ್ವಾಧಿಕಾರಿ ಮತ್ತು ದಂಡನಾಯಕ ಎನ್ನುವ ಪದಗಳು ಒಂದು ರೀತಿಯ ಬಿರುದುಗಳು ಎನ್ನುತ್ತಾರೆ.[5] ಹತ್ತಾರು ವಿಭಾಗಗಳಲ್ಲಿ ಕೆಲಸ ಮಾಡಿ ಅಗಾಧವಾದ ಅನುಭವವನ್ನು ಸಂಪಾದಿಸಿದ ಮತ್ತು ರಾಜರುಗಳ ಕೃಪಾಕಟಾಕ್ಷಕ್ಕೆ ಪಾತ್ರರಾದ ಈ ಅಧಿಕಾರಿಗಳಿಗೆ ಸರ್ವಾಧಿಕಾರಿ ಎನ್ನುವ ಬಿರುದನ್ನು ಕೊಡುತ್ತಿದ್ದರು. ಇದು ಬಿರುದು ಮಾತ್ರವಲ್ಲದೆ, ಆ ಅಧಿಕಾರಿಗಳ ಅಧಿಕಾರ ಮತ್ತು ಪ್ರತಿಷ್ಠೆಯ ದ್ಯೋತಕವೂ ಆಗಿದ್ದಿತು. ಸಾಮಾನ್ಯವಾಗಿ ಇಂತಹ ಅಧಿಕಾರಿಗಳನ್ನು ಉನ್ನತ ಹುದ್ದೆಗಳಿಗೆ ನೇಮಿಸಿಕೊಳ್ಳುತ್ತಿದ್ದರು. ಇವರುಗಳನ್ನು ವರ್ಗಾವಣೆ ಮಾಡುವಾಗಲೂ ಉನ್ನತ ಹುದ್ದೆಗಳಿಗೇ ವರ್ಗಾಯಿಸುತ್ತಿದ್ದರು. ಸಾಮಾನ್ಯವಾಗಿ ಸರ್ವಾಧಿಕಾರಿಗಳಂತಹ ಅಧಿಕಾರಿಗಳನ್ನು ದಂಡನಾಯಕ, ರಾಯದಂಡನಾಥ, ಪರಮವಿಶ್ವಾಸಿ, ಮಹಾಪಾಶಾಯಿತ, ಮಹಾಪ್ರಧಾನ, ಸೇನಾಧಿಪತಿ ಮುಂತಾದ ಹುದ್ದೆಗಳಿಗೆ ಮಾತ್ರ ನೇಮಕ ಮಾಡುತ್ತಿದ್ದರು.

ದೇವಗಿರಿಯ ಸೇವುಣರ ಇತಿಹಾಸವನ್ನು ಗಮನಿಸುವಾಗ ಡಾ॥ ನರಸಿಂಹಮೂರ್ತಿಯವರು, ಸರ್ವಾಧಿಕಾರಿಯು ಹಣದ ವಿಷಯದಲ್ಲಿ ಕಾಣಬರುವ ಶಾಸನಗಳಲ್ಲಿ ವಿಶೇಷವಾಗಿ ಉಲ್ಲೇಖಿತನಾಗಿರುವನೆಂಬ ಅಂಶವನ್ನು ಮುಂದೆ ಇಡುತ್ತಾರೆ.[6] ಅಂದರೆ ಭೂಮಿಯನ್ನು ಮಾರುವ ಇಲ್ಲವೇ ಕೊಳ್ಳುವ ವಿಷಯವನ್ನು ಹೇಳುವ ಶಾಸನಗಳಲ್ಲಿ ಮತ್ತು ದೇವಾಲಯಗಳಿಗೆ ದತ್ತಿಗಳನ್ನು ಕೊಡುವಾಗ ಹೊರಡಿಸುವ ಶಾಸನಗಳಲ್ಲಿ ಸರ್ವಾಧಿಕಾರಿಯ ಪಾತ್ರ ಹೆಚ್ಚು ಎಂಬ ವಿಷಯವನ್ನು ಹೇಳುತ್ತಾರೆ. ಅಂದರೆ ಸರ್ವಾಧಿಕಾರಿಯು ದ್ರವ್ಯಶಾಖೆಯಲ್ಲಿ ಕೆಲಸ ನಿರ್ವಹಿಸುವ ಉನ್ನತ ಅಧಿಕಾರಿಯಿರಬಹುದು ಎನ್ನುವ ಅಂಶವನ್ನು ಈ ಮೂಲಕ ಸೂಚಿಸುತ್ತಾರೆ. ಆದರೆ ಎಲ್ಲಿಯೂ ಇದನ್ನು ಸ್ಪಷ್ಟವಾಗಿ ಹೇಳಿಲ್ಲ. ಅಷ್ಟೇ ಅಲ್ಲದೇ ಸರ್ವಾಧಿಕಾರಿಯು ರಾಜ್ಯದ ವಿವಿಧ ಭಾಗಗಳ ಆಡಳಿತಗಾರರಾಗಿಯೂ ಕಾಣಬರುತ್ತಾರೆ ಎನ್ನುವ ಮಾತನ್ನೂ ಅವರು ತಿಳಿಸಿದ್ದಾರೆ.[7] ಇದರಿಂದ ಸರ್ವಾಧಿಕಾರಿಯು ದ್ರವ್ಯಶಾಖೆಗೆ ಮಾತ್ರ ಸೀಮಿತನಾದ ಅಧಿಕಾರಿ ಎಂದು ಅವರು ಭಾವಿಸಿದಂತೆ ಕಾಣಬರುವುದಿಲ್ಲ. ಅಂದರೆ ಅದರ ಜೊತೆಗೆ ಇತರ ಬೇರೆ ಬೇರೆ ಶಾಖೆಗಳಲ್ಲಿಯೂ ಸರ್ವಾಧಿಕಾರಿಯು ಅಧಿಕಾರ ಚಲಾಯಿಸುತ್ತಿದ್ದನ್ನು ಎಂದು ತಿಳಿಯುತ್ತದೆ.

ಸರ್ವಾಧಿಕಾರಿಯು ದ್ರವ್ಯಶಾಖೆಯ ಅಧಿಕಾರಿ ಎನ್ನುವ ಮಾತನ್ನು ಹೇಳುವ ಮತ್ತೊಬ್ಬ ವಿದ್ವಾಂಸರೆಂದರೆ ದಿನಕರ ದೇಸಾಯಿಯವರು. ಇವರು ಮಾತ್ರ ಸ್ಪಷ್ಟವಾಗಿ, ಸರ್ವಾಧಿಕಾರಿಯು ದ್ರವ್ಯಶಾಖೆಯ ಅಧಿಕಾರಿ ಎಂದು ತಿಳಿಸುತ್ತಾರೆ.[8] ದ್ರವ್ಯಶಾಖೆಯ ಸಹಾಯವಿಲ್ಲದೆ ಅಥವಾ ಸಂಪರ್ಕವಿಲ್ಲದೆ ಸರಕಾರದ ಯಾವ ಕೆಲಸವೂ ಸಾಗುವುದಿಲ್ಲ. ಆದುದರಿಂದ ದ್ರವ್ಯಶಾಖೆಯ ಅಧಿಕಾರಿಗೆ ಎಲ್ಲ ಶಾಖೆಗಳಲ್ಲಿಯೂ ಅಧಿಕಾರವಿದ್ದಿರಬೇಕು. ಆದುದರಿಂದ ಅವನನ್ನು ಸರ್ವಾಧಿಕಾರಿ ಎನ್ನುವ ಪದದಿಂದ ಕರೆದಿರಬೇಕು.

ಡಾ॥ ಪರಬ್ರಹ್ಮಶಾಸ್ತ್ರಿಯವರು ಕಾಕತೀಯರ ಇತಿಹಾಸವನ್ನು ಕುರಿತಂತೆ, ಸರ್ವಾಧಿಕಾರಿಯು ರಾಜನ ನಿಯೋಗಿ (ಏಜೆಂಟ್) ಎಂದಿದ್ದಾರೆ.[9] ಅಂದರೆ ರಾಜನ ಪರವಾಗಿ ಆಡಳಿತದಲ್ಲಿ ಕಾರ್ಯಭಾರ ನಡೆಸುವವನು

5. Duncan Derratt : The Hoysalas, p. 191
6. A. V. Narasimha Murthy : The Sevunas of Devagiri, p. 147
7. Ibid.
8. Dinakar Desai : Mahamandalesvaras under the Chalukyas of Kalyana, p. 331
9. P. V. Parabrahma Sastri : The Kakatiyas, p. 251

ಎಂಬುದೇ ಅವರ ಅಭಿಪ್ರಾಯ. ಕಾಕತೀಯ ಗಣಪತಿ ದೇವರ ತ್ರಿಪುರಾಂತಕಂ ಶಾಸನವನ್ನು ಆಧಾರವಾಗಿಟ್ಟು ಕೊಂಡು, ರಾಜನ ಸರ್ವಾಧಿಕಾರಿಯಾದ ಪೋಚಣ ಗಣಪಯನು, ಒಂದು ದಾನವನ್ನು ಕೊಟ್ಟನು ಎಂದೂ ಹೇಳುತ್ತಾರೆ. ಇವನು ರಾಜನ ನಿಯೋಗಿಯಾದುದರಿಂದ, ಅಂದರೆ ರಾಜನ ಪ್ರತಿನಿಧಿಯಾದುದರಿಂದ, ಇವನಿಗೆ ಆಡಳಿತದ ಎಲ್ಲ ವಿಭಾಗಗಳಲ್ಲಿಯೂ ಪ್ರವೇಶ ಉಂಟು. ಪ್ರವೇಶ ಮಾತ್ರವಲ್ಲ, ಅಧಿಕಾರವನ್ನು ನಡೆಯಿಸುವ ಹಕ್ಕೂ ಉಂಟು. ಆ ಅಧಿಕಾರವನ್ನು ತೋರಿಸುವುದಕ್ಕಾಗಿಯೇ ಇವನಿಗೆ ಸರ್ವಾಧಿಕಾರಿ ಎನ್ನುವ ಬಿರುದು ಬಂದಿರಬೇಕು. ಆದರೆ ಎನ್. ವೆಂಕಟರಮಣಯ್ಯನವರು ಈ ವಾದವನ್ನು ಒಪ್ಪುವುದಿಲ್ಲ.[10] ಅವರ ಪ್ರಕಾರ ಕೇವಲ ಅಧಿಕಾರವನ್ನು ಹೊಂದಿರುವವರಿಗೆ ಈ ಬಿರುದನ್ನು ಕೊಡಲಾಗುತ್ತಿದ್ದಿತ್ತು. ಜೊತೆಗೆ ಈ ಬಿರುದನ್ನು ಪಡೆಯುವವರು ಉನ್ನತ ದರ್ಜೆಯ ಅಧಿಕಾರಿಗಳೇ ಆಗಿರಬೇಕೆಂಬ ನಿಯಮವೂ ಇರಲಿಲ್ಲ. ಮಹಾಪ್ರಧಾನ ಪೋಚಿರಾಜುವಿಗೆ ಸರ್ವಾಧಿಕಾರಿ ಎನ್ನುವ ಬಿರುದು ಇರುವುದು ಸಹಜವೇ ಸರಿ. ಆದರೆ ಮಂತ್ರಿಗಳ ಮಟ್ಟಕ್ಕೂ ಏರದಿದ್ದ ಎಲ್ಲಯ್ಯರೆಡ್ಡಿ, ತಮ್ಮಯ್ಯ ಪೆರ್ಗಡೆ ಮುಂತಾದವರೂ ಕಾಕತೀಯ ರಾಜ್ಯದಲ್ಲಿ ಸರ್ವಾಧಿಕಾರಿಗಳಾಗಿದ್ದರು ಎನ್ನುವ ಮಾತನ್ನು ಹೇಳುತ್ತಾರೆ.

ವಿಜಯನಗರ ಕಾಲದಲ್ಲಿ ಈ ಅಧಿಕಾರಿ ಅಷ್ಟೊಂದು ಪ್ರಾಮುಖ್ಯನಾಗಿದ್ದಂತೆ ಕಾಣಬರುವುದಿಲ್ಲ. ಈ ಪದದ ಉಲ್ಲೇಖ ಈ ಕಾಲದ ಶಾಸನಗಳಲ್ಲಿ ಕಾಣಸಿಗುವುದೂ ಬಲುಕಷ್ಟ. ಆದರೆ ಹದಿನೆಂಟು–ಹತ್ತೊಂಬತ್ತನೆಯ ಶತಮಾನಗಳಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಮಠಗಳು ಮತ್ತು ದೇವಾಲಯಗಳಲ್ಲಿ ಸರ್ವಾಧಿಕಾರಿ ಎನ್ನುವ ಅಧಿಕಾರಿಯ ಉಲ್ಲೇಖ ಕಾಣಬರುತ್ತದೆ. ಮಠವಾದರೆ ಸ್ವಾಮಿಗಳ ಪರವಾಗಿ ಪೂರ್ಣ ಅಧಿಕಾರವನ್ನು ನಡೆಸುವ ಅಧಿಕಾರಿಯೇ ಸರ್ವಾಧಿಕಾರಿ. ದೇವಾಲಯವಾದರೂ ಅಷ್ಟೆ. ದೇವಾಲಯದ ಪೂರ್ಣ ಆಡಳಿತವನ್ನು ಹೊಂದಿರುವ ಅಧಿಕಾರಿಯೇ ಸರ್ವಾಧಿಕಾರಿ. ಹೀಗೆ ಈ ಅಧಿಕಾರಿ ಪ್ರಾಚೀನ ಕರ್ನಾಟಕದಲ್ಲಿ ಪ್ರಾರಂಭವಾಗಿ ಇಂದಿನವರೆಗೂ ಅಧಿಕಾರವನ್ನು ನಡೆಸುತ್ತ ಬಂದಿದ್ದಾನೆ. ಆದರೆ ಖಚಿತವಾಗಿ ಅವನ ಅಧಿಕಾರವೇನೆಂಬುದು ತಿಳಿದು ಬಂದಿಲ್ಲ. ಆದರೆ ಅವನು ಉನ್ನತ ಮಟ್ಟದ ಅಧಿಕಾರಿ, ಎಲ್ಲ ವಿಭಾಗಗಳಲ್ಲಿಯೂ ಅಧಿಕಾರವನ್ನು ಹೊಂದಿರುವವನು, ರಾಜನ ನಿಯೋಗಿ, ರಾಜನ ಪರವಾಗಿ ಆಡಳಿತ ನಡೆಸುವವನು, ಅವನೊಬ್ಬ ದ್ರವ್ಯಶಾಖೆಯ ಅಧಿಕಾರಿ ಎನ್ನುವ ವಿವಿಧ ಅಭಿಪ್ರಾಯಗಳನ್ನು ವಿದ್ವಾಂಸರು ವ್ಯಕ್ತಪಡಿಸುತ್ತಾ ಬಂದಿದ್ದಾರೆ. ಒಟ್ಟಿನಲ್ಲಿ ಸರ್ವಾಧಿಕಾರಿಯೂ ಕರ್ನಾಟಕ ಆಡಳಿತದಲ್ಲಿ ಪ್ರಮುಖ ಪಾತ್ರ ವಹಿಸಿದ್ದನೆಂಬುದು ಮಾತ್ರ ಸ್ಪಷ್ಟವಾದ ಸಂಗತಿ.

---

10. Yazdani (Ed): Early History of the Deccan, p. 662

ಸಿ. ಮಹದೇವ

# ಶ್ರೀ ಚಾಮುಂಡೇಶ್ವರಿ ದೇವಾಲಯಕ್ಕೆ ಮೈಸೂರು ಒಡೆಯರಿಂದ ಆಭರಣಗಳು ಮತ್ತು ಉಡುಗೊರೆಗಳು

---

ಮೈಸೂರು ಕರ್ನಾಟಕದ ಸಾಂಸ್ಕೃತಿಕ ಪರಂಪರೆಯುಳ್ಳ ನಗರ. ಈ ನಗರದ ನೆನಪಾದೊಡನೆ ಸ್ಮೃತಿಪಟಲದಲ್ಲಿ ಚಾಮುಂಡಿಬೆಟ್ಟದ ಚಿತ್ರ ಮೂಡುವುದು ಸ್ವಾಭಾವಿಕ. ಇಲ್ಲಿ ಶಕ್ತಿದೇವತೆಯಾದ ಶ್ರೀ ಚಾಮುಂಡಾಂಬೆಯು ನೆಲೆಸಿದ್ದು ಆ ಬೆಟ್ಟವನ್ನು ಅವಳ ಹೆಸರಿನಿಂದಲೇ ಕರೆಯಲಾಗುತ್ತಿದೆ. ಚಾಮುಂಡಿಬೆಟ್ಟವು ಮೈಸೂರು ಅರಮನೆಯ ಆಗ್ನೇಯ ದಿಕ್ಕಿನಲ್ಲಿದ್ದು, ಸಮುದ್ರ ಮಟ್ಟದಿಂದ ಸುಮಾರು ೩೪೮೯ ಅಡಿಗಳ ಎತ್ತರವನ್ನು ಹೊಂದಿದೆ.

ಹೊಯ್ಸಳರ ಕಾಲದ ಶಾಸನಗಳಲ್ಲಿ ಈ ಕ್ಷೇತ್ರವನ್ನು ಮಾಬ್ಬ್ರಳತೀರ್ಥವೆಂದು,[1] ಮಬ್ಬೆಲದ ತೀರ್ಥವೆಂದು[2] ಕರೆಯಲಾಗಿದೆ. ಸ್ಕಾಂದಪುರಾಣದಲ್ಲಿ ಇದನ್ನು ತ್ರಿಮುಕುಟಕ್ಷೇತ್ರವೆಂದು ಕರೆಯಲಾಗಿದೆ. ಸ್ಥಳಪುರಾಣವು ಇದನ್ನು ಮಹಾಬಲಕ್ಷೇತ್ರ ಅಥವಾ ಮಹಾಬಲಾದ್ರಿ ಎಂದು ಕರೆಯುತ್ತದೆ. ಈ ಮೇಲಿನ ಎಲ್ಲಾ ಹೆಸರುಗಳು ಇಲ್ಲಿ ಗಂಗರ ಕಾಲದಲ್ಲಿ ನಿರ್ಮಿತವಾದ ಮಹಾಬಲೇಶ್ವರ ದೇವಾಲಯದೊಂದಿಗೆ ಸಂಬಂಧಿಸುತ್ತವೆ. ಆದರೆ ಮೈಸೂರಿನಲ್ಲಿ ಒಡೆಯರ ಆಳ್ವಿಕೆ ಪ್ರಾರಂಭವಾದ ಮೇಲೆ ಅವರು ಶ್ರೀ ಚಾಮುಂಡಾಂಬೆಯನ್ನು ತಮ್ಮ ಮನೆದೇವತೆಯಾಗಿ ಸ್ವೀಕಾರಮಾಡಿ, ಆ ದೇವಾಲಯದ ಸಕಲ ಅಭಿವೃದ್ಧಿಗೆ ಅವರು ನೀಡಿದ ಪ್ರೋತ್ಸಾಹ, ಆಸಕ್ತಿಗಳಿಂದಾಗಿ ಶ್ರೀ ಚಾಮುಂಡಾಂಬೆಯ ದೇವಾಲಯ ಬೆಟ್ಟದ ಮೇಲಿನ ಪ್ರಧಾನ ದೇವಾಲಯವಾಗಿ ಜನಜೀವನದಲ್ಲಿ ಗೋಚರವಾಗತೊಡಗಿತ್ತು. ಈ ಕಾರಣದಿಂದ ಬೆಟ್ಟವು ತನ್ನ ಪೂರ್ವದ ಹೆಸರುಗಳಾದ ಮಾಬ್ಬ್ರಳದ ತೀರ್ಥ, ಮಬ್ಬೆಲದತೀರ್ಥ, ಮಹಾಬಲಕ್ಷೇತ್ರ ಹೆಸರುಗಳನ್ನು ಕಳೆದುಕೊಂಡು ಚಾಮುಂಡಿಬೆಟ್ಟವೆಂದು ಹೆಸರಾಯಿತು. ಈ ಒಂದು ಬದಲಾವಣೆಗೆ ಮೈಸೂರು ಒಡೆಯರು ನೀಡಿದ ಅಗಾಧವಾದ ಪ್ರೋತ್ಸಾಹ ಮತ್ತು ಕೊಡುಗೆಗಳೇ ಕಾರಣ. ಅಲ್ಲದೆ ಇದು ಜನನುಡಿಯಲ್ಲಿ ಅತ್ಯಂತ ಸರಳ ಉಚ್ಚಾರಣೆಯು ಕೂಡ ಆಗಿದೆ.

ಶ್ರೀ ಚಾಮುಂಡೇಶ್ವರಿ ದೇವಿಗೆ ಮೈಸೂರು ಅರಸರು ಭಕ್ತಿಪೂರ್ವಕವಾಗಿ ಸಲ್ಲಿಸಿದ ಆಭರಣಗಳು ಮತ್ತು ಉಡುಗೊರೆಗಳನ್ನು ಪರಿಶೀಲಿಸುವ ದಿಸೆಯಲ್ಲಿ ಶಾಸನಗಳು ನಮಗೆ ಹೆಚ್ಚಿನ ಸಹಾಯವನ್ನು ಮಾಡುತ್ತವೆ. ಮೈಸೂರು ಅರಸರು ಅಧಿಕ ಸಂಖ್ಯೆಯಲ್ಲಿ ಬೆಲೆಬಾಳುವ ಆಭರಣಗಳನ್ನು ಮತ್ತು ವಿವಿಧ ಉಡುಗೊರೆಗಳನ್ನು ನೀಡಿದ್ದಾರೆ. ಈ ಆಭರಣಗಳು ಚಿನ್ನ ಮತ್ತು ವಜ್ರ ವೈಢೂರ್ಯಗಳಿಂದ ಮಾಡಲ್ಪಟ್ಟಿದ್ದು ಅತ್ಯಂತ ಬೆಲೆಬಾಳುವುದಾಗಿವೆ.

---

1 ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೫, ಶಾಸನ ಸಂಖ್ಯೆ ೧೩೫, ಮೈಸೂರು ತಾಲ್ಲೂಕು
2 ಅದೇ, ಸಂಖ್ಯೆ ೧೮೨

ಶಾಸನಾಧಾರದ ಮೇಲೆ ಕೆಲವು ಪ್ರಮುಖ ಆಭರಣಗಳು ಮತ್ತು ಉಡುಗೊರೆಗಳ ಬಗ್ಗೆ ಈ ಕೆಳಗಿನಂತೆ ವಿವರಗಳು ತಿಳಿದುಬರುತ್ತವೆ :

ಮೊದಲನೆಯದಾಗಿ, ಕ್ರಿ.ಶ. ೧೮೫೭ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಶ್ರೀ ಚಾಮುಂಡೇಶ್ವರಿ ದೇವಿಗೆ ನಕ್ಷತ್ರ ಮಾಲಿಕವೆಂಬ ಬಂಗಾರದ ಕಂಠಹಾರವನ್ನು ಅರ್ಪಿಸಿದರು. ಇದು ಅತ್ಯಂತ ಬೆಲೆಯುಳ್ಳದಾಗಿದ್ದು, ೩೦ ಬಂಗಾರದ ತುಣುಕುಗಳನ್ನು (ತಳಕು) ಹೊಂದಿದೆ. ಪ್ರತಿಯೊಂದು ಬಂಗಾರದ ತುಣುಕು ಸಹ ಒಂದೊಂದು ಸಂಸ್ಕೃತದ ಶ್ಲೋಕಗಳನ್ನು ಹೊಂದಿದೆ. ಈ ಪ್ರತಿಯೊಂದು ಶ್ಲೋಕವು ಸಹ "ಚಾಮುಂಡಾಂಬ ಗತಿರ್ಮಮ"[3] ಎಂದು ಕೊನೆಯಾಗುತ್ತದೆ. ಮಧ್ಯದ

---

3 ಅದೇ, ಸಂಖ್ಯೆ ೧೫೭೨

1 ಶ್ರೀಮತ್ಕಾಮೇ
2 ಶ್ವರೀದೇವೀ । ಶ್ರೀಮತ್ಸಿಂ
3 ಹಾಸನೇಶ್ವರೀ । ಶ್ರೀ ವಿದ್ಯಾವೇದ್ಯ
4 ಮಹಿಮಾ । ಶ್ರೀಚಾಮುಂ
5 ಡಾ ಗತಿರ್ಮಮ ॥ ೧ ॥
6 ಪಂಚವಿಂಶತಿ
7 ಸಾಲಾಢ್ಯ । ಶ್ರೀ ಚಕ್ರಪು
8 ರವಾಸಿನೀ । ಲಲಿತಾ ಬಿಂದು
9 ಪೀಠಸ್ಥಾ । ಚಾಮುಂಡಾಂ
10 ಬಾ ಗತಿರ್ಮಮ ॥೨॥
11 ಚಿರಗ್ನಿಕುಂಡಸಂ
12 ಭೂತಾ । ಕಾಮೇಶ್ವರಕು
13 ಟುಂಬಿನೀ । ಮನೋನ್ಮನೀ
14 ಯೋಗನಿದ್ರಾ । ಚಾಮುಂ
15 ಡಾಂಬಾ ಗತಿರ್ಮಮ ॥
16 ॥೩॥
17 ಮಹಾಕಾಳೀ ಮ
18 ಹಾಲಕ್ಷ್ಮೀ ಮಹಾವಾ
19 ಣೀಸ್ವರೂಪಿಣೀ । ವಾರಾಹೀ
20 ಶ್ಯಾಮಳಾ ಬಾಲಾ । ಚಾಮು
21 ಡಾಂಬಾ ಗತಿರ್ಮಮ
22 ॥ ೪ ॥
23 ಜ್ವಲಜ್ಜಿಹ್ವಾ ಕಾ
24 ಳರಾತ್ರಿ । ಮಹಿಷಾಸು
25 ರಮರ್ದಿನೀ । ವನದುರ್ಗಾ
26 ಭದ್ರಕಾಳೀ ಚಾಮುಂ
27 ಡಾಂಬಾ ಗತಿರ್ಮಮ
28 ॥೫॥
29 ಬ್ರಾಹ್ಮ್ಯಾದಿ ಮಾತೃ
30 ಕಾರೂಪಾ ಭಂಡಾಸು
31 ರವಿಮರ್ದಿನೀ । ಸರ್ವಚೈತನ್ಯ
32 ರೂಪಾಢ್ಯಾ । ಚಾಮುಂ
33 ಡಾಂಬಾ ಗತಿರ್ಮಮ
34 ॥ ೬ ॥
35 ಚಂಡಮುಂಡಶಿ
36 ರಶ್ಛೇತ್ರೀ । ಕದಂಬವನ
37 ವಾಸಿನೀ । ನಿಶುಂಭಕುಂಭ
38 ದಮನೀ । ಚಾಮುಂಡಾ
39 ಂಬಾ ಗತಿರ್ಮಮ ॥
40 ॥ ೭ ॥
41 ರಕ್ತಬೀಜಪ್ರಮಥಿ
42 ನೀ ॥ ಮಹಾತ್ರಿಪುರ ಸುಂ
43 ದರೀ । ಪ್ರತ್ಯಂಗಿರಾ ಮಹಾಮಾ
44 ಯಾ ಚಾಮುಂಡಾಂ
45 ಬಾ ಗತಿರ್ಮಮ ॥
46 ॥ ೮ ॥
47 ಉಗ್ರತಾರಾವಶ್ಯ
48 ಮುಖೀ । ಶೂಲಿನೀ ವಿಂ
49 ಧ್ಯವಾಸಿನೀ । ದೇಹಚಕ್ರಸ್ಥ
50 ದೇವ್ಯಾತ್ಮ ಚಾಮುಂಡಾ
51 ಂಬಾ ಗತಿರ್ಮಮ ॥
52 ॥ ೯ ॥
53 ಅನ್ನಪೂರ್ಣಾ ಚ
54 ತುಷ್ಟು ಷ್ಟಿ । ಯೋಗಿನೀಗ
55 ಣಸೇವಿತಾ । ಶತ್ರುವಿಧ್ವಂಸಿನೀ
56 ಗೌರೀ । ಚಾಮುಂಡಾಂ
57 ಬಾ ಗತಿರ್ಮಮ ॥ ೧೦ ॥
58 ಲೋಪಾಮುದ್ರಾ ಸ
59 ರ್ವಮುದ್ರಾ । ಶ್ರೀದೇವೀ
60 ಭುವನೇಶ್ವರೀ । ವಾಗ್ದೇಶ್ವರೀಪ್ರಾ

ಪದಕದಲ್ಲಿ ಮುಮ್ಮುಡಿ ಕೃಷ್ಣರಾಜ ಒಡೆಯರ ಹೆಸರಿದ್ದು, ತಾವು ದೇವಿಯ ಪರಮಭಕ್ತರೆಂದು ಹೇಳಿಕೊಂಡಿದ್ದಾರೆ.

ಇದೇ ದೇವಾಲಯದಲ್ಲಿರುವ ಅಷ್ಟದಳ ಪದಕವನ್ನು ಬೊಕ್ಕಸತೊಟ್ಟಿ ಸನ್ನಿಧಾನದ ಸಂಜಪ್ಪೆಯು ಉತ್ತನ

---

61 ಣಶಕ್ತಿ । ಚಾಮುಂಡಾಂ
62 ಬಾ ಗತಿರ್ಮಮ ॥ ೧೧ ॥
63 ಕಾತ್ಯಾಯಿನೀ ಹೈ
64 ಮವತೀ । ಶಿವದೂತೀ
65 ಭೈರವೀ । ಗಾಯತ್ರೀ ಚೈವ
66 ಸಾವಿತ್ರೀ । ಚಾಮುಂಡಾಂ
67 ಬಾ ಗತಿರ್ಮಮ ॥
68 ॥ ೧೨ ॥
69 ಉಮಾಸರಸ್ವತೀಂ
70 ದ್ರಾಕ್ಷೀ । ಕಂಕಾಳೀ ಚಾಪ
71 ರಾಜಿತಾ । ದಾಕ್ಷಾಯಣೀ
72 ಶಾಂಭವೀ ಚ । ಚಾಮು
73 ಂಡಾಂಬಾ ಗತಿರ್ಮಮ
74 ॥ ೧೩ ॥
75 ಮೂಲಪ್ರಕೃತಿ ರೂ
76 ಪಾರ್ಯಾ । ಪಾರ್ವತೀ ಸಿಂ
77 ಹವಾಹಿನೀ । ವಜ್ರೇಶೀ ಭಗ
78 ಮಾಲಾ ಚ । ಚಾಮುಂ
79 ಡಾಂಬಾ ಗತಿರ್ಮಮ
80 ॥ ೧೪ ॥
81 ಶ್ರೀಚಕ್ರಾಖ್ಯ ರಥಾ
82 ರೂಢಾ । ಚಿಂತಾಮಣಿ
83 ಗೃಹಸ್ಥಿತಾ । ವಿಷ್ಣು ಬ್ರಹ್ಮಾದಿ
84 ಸಂಸೇವ್ಯಾ । ಚಾಮುಂ
85 ಡಾಂಬಾ ಗತಿರ್ಮಮ ॥
86 ॥ ೨೧ ॥
87 ನವಾವರಣರಾ
88 ಜ್ಯಾಂಗ । ವಿಶ್ವಶಕ್ತಿಸ
89 ಮಾವೃತಾ । ಯುಗನಾಥಾದಿ
90 ಸಂಪೂಜ್ಯಾ । ಚಾಮುಂ
91 ಡಾಂಬಾ ಗತಿರ್ಮಮ ॥
92 ॥ ೨೨ ॥
93 ಸಪ್ತಕೂಟ ಮಹಾ
94 ಮಂತ್ರ । ಪ್ರತಿಪಾದಿತವೈ
95 ಭವಾ । ಹಯಗ್ರೀವಾಗಸ್ತ್ಯ
96 ಪೂಜ್ಯಾ । ಚಾಮುಂಡಾ
97 ಂಬಾ ಗತಿರ್ಮಮ ॥
98 ॥ ೨೩ ॥
99 ವೇದವೇದ್ಯಾ ಮಂತ್ರ
100 ತಂತ್ರ । ಯಂತ್ರಾದಿಷ್ಯಾನ
101 ರೂಪಿಣೀ । ಸಹಸ್ರಾರಾಂಬು
102 ಜಾರೂಢಾ । ಚಾಮುಂ
103 ಡಾಂಬಾ ಗತಿರ್ಮಮ
104 ॥ ೨೪ ॥
105 ಕರಾಂಗುಳಿನಖೋ
106 ತ್ಪನ್ನ । ನಾರಾಯಣದ
107 ಶಾಕೃತಿಃ । ತಂತ್ರೋಪಚಾರಸು
108 ಪ್ರೀತಾ । ಚಾಮುಂಡಾಂ
109 ಬಾ ಗತಿರ್ಮಮ ॥
110 ॥ ೨೫ ॥
111 ಸದಾನಂದಾ ಸದಾ
112 ರಾಧ್ಯಾ ಸದಾ ಸಂತೋ
113 ಪಕಾರಿಣೀ । ಸದಾ ಜಯಪ್ರ
114 ದಾ ಸೌಮ್ಯಾ ಚಾಮುಂಡಾಂ
115 ಂಬಾ ಗತಿರ್ಮಮ
116 ॥ ೨೬ ॥
117 ಶಿವಾ ಭವಾನಿ ವಿ
118 ಜಯಾ ಸರ್ವಶಕ್ತಿ ಸ್ವ
119 ರೂಪಿಣೀ । ತ್ರಿಕಂಟಕೀ ಚ
120 ದೇವೇಶೀ । ಚಾಮುಂಡಾಂ
121 ಬಾ ಗತಿರ್ಮಮ ॥ ೧೪ ॥
122 ಚಂದ್ರರೇಖಾವತಂ
123 ಸಾಢ್ಯಾ ಭೇರುಂಡಾ ಸ
124 ರ್ವಮಂಗಳಾ । ದ್ವಾತ್ರಿಂಶಧಾ
125 ಯುದೋಪೇತಾ ಚಾಮುಂ
126 ಡಾಂಬಾ ಗತಿರ್ಮಮ
127 ॥ ೧೯ ॥
128 ಅಣೋರಣೀಯ
129 ಸೀ ಚಂಡೀ । ಮಹತೋಽಪಿ
130 ಮಹೀಯಸೀ । ಜ್ವಾಲಾಮುಖೀ
131 ಚಬಗಳಾ । ಚಾಮುಂ
132 ಡಾಂಬಾ ಗತಿರ್ಮಮ
133 ॥ ೨೦ ॥
134 ಪಂಚಪ್ರೇತಾಸ
135 ನಾರೂಢಾ । ಪಂಚಕಾ
136 ರ್ಯಧುರಂಧರಾ । ಪಂಚಸಾಯು
137 ಕಜೀವಾತು । ಶ್ಚಾಮುಂಡಾ
138 ಂಬಾ ಗತಿರ್ಮಮ

ಹಳ್ಳಿಯ ಜ್ವಾಲಾಮುಖಿ ದೇವಿಗೆ ನೀಡಿದ್ದಾಳೆ.[4] ಆದರೆ ಈಗ ಅದನ್ನು ಚಾಮುಂಡೇಶ್ವರಿ ದೇವಾಲಯದಲ್ಲಿ ಉಪಯೋಗಿಸಲಾಗುತ್ತಿದೆ. ನಂಜಮ್ಮನ್ನೆಯು ಮೈಸೂರು ರಾಜಮನೆತನಕ್ಕೆ ಸಂಬಂಧಿಸಿದ ವ್ಯಕ್ತಿ ಎಂದು ತಿಳಿಯಬಹುದಾಗಿದೆ.

ಒಂದು ವಿಶೇಷ ಸಂದರ್ಭವೊಂದರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಶ್ರೀ ಚಾಮುಂಡೇಶ್ವರಿ ದೇವಿಗೆ ಕೆಲವು ಬೆಳ್ಳಿಯ ವಸ್ತುಗಳನ್ನು ನೀಡಿದ್ದಾರೆ.[5] ಅವುಗಳೆಂದರೆ ಬೆಳ್ಳಿಯ ಗಂಟೆ, ಬೆಳ್ಳಿಯ ಬಟ್ಟಲು, ಬೆಳ್ಳಿಯ ತಟ್ಟೆ, ಬೆಳ್ಳಿಯ ಚೊಂಬು. ಇವುಗಳ ಮೇಲೆ ಕೃಷ್ಣರಾಜ ಒಡೆಯರ ಸೇವಾರ್ಥ ಎಂದು ಅಕ್ಷರಗಳನ್ನು ಕೊರೆಯಲಾಗಿದೆ. ಆದರೆ ಅವುಗಳನ್ನು ಯಾವ ವರ್ಷ ನೀಡಲಾಯಿತು ಎಂಬುದನ್ನು ನಮೂದಿಸಿಲ್ಲ.

ಮತ್ತೊಂದು ವಿಶೇಷ ಸಂದರ್ಭದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಶ್ರೀ ಚಾಮುಂಡೇಶ್ವರಿ ಮಂದಿರಕ್ಕೆ ದೊಡ್ಡ ಬೆಳ್ಳಿತಟ್ಟೆ, ಬೆಳ್ಳಿ ಅಡ್ಡಣಿಗೆ (ಊಟದ ತಟ್ಟೆ ಮುಂತಾದವುಗಳನ್ನು ಇಡುವ ಪೀಠ ಅಥವಾ ಮುಕ್ಕಾಲು ಮಣೆ) ಮತ್ತು ಬೆಳ್ಳಿಯ ಬಟ್ಟಲು ನೀಡಿದ್ದಾರೆ.[6] ಇವರ ಮತ್ತೊಂದು ಪ್ರಮುಖ ಉಡುಗೊರೆ ಎಂದರೆ ಬೆಳ್ಳಿಯ ಮಂಟಪ. ಇದನ್ನು ಉತ್ಸವಮೂರ್ತಿಯನ್ನಿಡಲು ಉಪಯೋಗಿಸುತ್ತಾರೆ ಮತ್ತು ಈ ಬೆಳ್ಳಿಮಂಟಪವನ್ನು ತೋಷಿಖಾನೆಯಲ್ಲಿ ತಯಾರು ಮಾಡಲಾಯಿತು ಎಂದು ಅದರ ಪೀಠದಲ್ಲಿರುವ ಬರಹವು ತಿಳಿಸುತ್ತದೆ.[7] ಮುಮ್ಮಡಿ ಕೃಷ್ಣರಾಜ ಒಡೆಯರ ಧರ್ಮಪತ್ನಿಯಾದ ಲಿಂಗಾಜಮ್ಮಣ್ಣಿಯವರು ಚಾಮುಂಡಾಂಬೆಯ ಅಪ್ರತಿಮ ಭಕ್ತೆ. ಇವರು ಇದೇ ದೇವಾಲಯದ ಅಂತರಾಳ ಮತ್ತು ನವರಂಗದ ಬಾಗಿಲುವಾಡಕ್ಕೆ ಹಿತ್ತಾಳೆ ತಗಡಿನ ಹೊದಿಕೆಯನ್ನು ಹಾಕಿಸಿದ್ದಾರೆ.[8] ಈ ಹಿತ್ತಾಳೆ ಹೊದಿಕೆಯ

---

139 ॥ ೧೬ ॥
140 ಅಪ್ರಾಕೃತವಿಭೂ
141 ಷಾಡ್ಯಾ । ತೇಜಸ್ತ್ರಯವಿ
142 ಲೋಚನಾ । ಕಾಮಕೋಟಿಸು
143 ಪೀಠಸ್ಥಾ । ಚಾಮುಂಡಾಂ
144 ಬಾ ಗತಿರ್ಮಮ ॥ ೧೭ ॥
145 ಕಾಮೇಶಬದ್ಧಮಾಂ
146 ಗಲ್ಯ । ಸೂತ್ರಶೋಭಿತಕಂ
147 ಧರಾ । ಈಶ್ವರೋಡ್ಯಾಣಪೀ
148 ಠಸ್ಥಾ । ಚಾಮುಂಡಾಂ
149 ಬಾ ಗತಿರ್ಮಮ
150 ॥ ೧೮ ॥
151 ಶ್ರೀ ಮದ್ರಾಜಾಧಿರಾ
152 ಜೇಂದ್ರ ಕುಲಾಂಭೋನಿ
153 ಧಿಚಂದ್ರಿಕಾ । ಸಾಂಬ್ರಾ.ಜದಾ
154 ಮಹಾದೇವಿ । ಶ್ರೀ ಚಾಮುಂ
155 ಡಾಂಬಾ ಗತಿರ್ಮಮ
156 ॥ ೨೩ ॥

ಪದಕದಲ್ಲಿ

157 ಶ್ರೀ ಚಾಮುಂ
158 ಡಾ ಪದಾಂಭೋಜ । ಧ್ಯಾನಸೇವಾ
159 ಪರಾಯಣಃ । ತದ್ಭಕ್ತ ಶ್ರೀ ಕೃಷ್ಣಭೂಪೋ
160 ದೇವಿ ನಕ್ಷತ್ರಮಾಲಿಕಾಂ ॥ ೨೮ ॥ ರಚಯಿ
161 ತ್ವಾರ್ಪಯಾಮಾಸ । ಶ್ರೀ ಚಾಮುಂಡಾ ಪದಾಬ್ಜ
162 ಯೋಃ । ತ್ರಿಸಂಧ್ಯಂ ಯಃ ಪಠೇದ್ಭಕ್ತ್ಯಾ ದೇವೀಸಾಯುಜ್ಯ
163 ಮಾಪ್ನುಯಾತ್ ॥ ೨೯ ॥ ಕುಸುಮಿತಲತಾ ವೇಲ್ಲಿತಾ
164 ವೃತ್ತಂ ರತ್ನಾದ್ರಿದ್ವೀಪಧ್ರುವಮಿತ ಶಕೇಽಕ್ಷ್ಣಾ ಶರಾ
165 ಬ್ದೇಹಿ ಮಾಸೇ । ಚಂದ್ರಾಖ್ಯೇ ಪಕ್ಷೇ ನಿಧಿದಿನಯುತೇ
166 ಭೂಜವಾರೇತಿ ಭಕ್ತ್ಯಾ ಶ್ರೀ ಚಾಮುಂಡಾಂಬಾ
167 ಚರಣಕಮಲೇ ಕೃಷ್ಣಭೂಪಸ್ಸಹ
168 ಸ್ರೇ । ತ್ರೈರ್ವರ್ಣ್ಯ ಶ್ರೀದಿಕ್ಪರಿಮಿತಪ
169 ದಾಂ ಸ್ವರ್ಣಮಾಲಾ
170 ಮತಾನೀತ್ ॥ ೩೦ ॥

4. ಅದೇ, ಸಂಖ್ಯೆ ೧೫೮
5. ಅದೇ, ಸಂಖ್ಯೆ ೧೫೬
6. ಅದೇ, ಸಂಖ್ಯೆ ೧೫೫
7. ಅದೇ, ಸಂಖ್ಯೆ ೧೫೪
8. ಅದೇ, ಸಂಖ್ಯೆ ೧೫೨

ಬಾಗಿಲುವಾಡಗಳನ್ನು ಇಂದಿಗೂ ಸಹ ನಾವು ನೋಡಬಹುದಾಗಿದೆ.

ಮತ್ತೊಂದು ಮೌಲ್ಯವಾದ ಉಡುಗೊರೆ ಎಂದರೆ ಮುಮ್ಮಡಿ ಕೃಷ್ಣರಾಜ ಒಡೆಯರು ಚಾಮುಂಡಾಂಬೆಗೆ ಮಾಡಿಸಿಕೊಟ್ಟ ಬೆಳ್ಳಿಯ ಸಿಂಹವಾಹನ.[9] ಇದನ್ನು ದೇವಿಯ ಉತ್ಸವ ಮತ್ತು ವಿಶೇಷ ಸಂದರ್ಭಗಳಲ್ಲಿ ಉಪಯೋಗಿಸುತ್ತಾರೆ. ಇದನ್ನು ಡಿಸೆಂಬರ್ ೧೨, ೧೮೨೮ರಲ್ಲಿ ನೀಡಿದರು.

ಇದಲ್ಲದೆ, ಈ ಮೊದಲು ತಿಳಿಸಿದ ಸಿಂಹವಾಹನಕ್ಕೆ ಮಾಡಿಸಿಕೊಟ್ಟ ಅಲಂಕಾರದ ಆಭರಣ ಮೊದಲಾದ ಸಾಮಾನುಗಳ ವಿವರವನ್ನು ಸಿಂಹವಾಹನದ ಕೆಳಭಾಗದ ತಗಡಿನ ಮೇಲಿರುವ ಬರಹದಿಂದ ತಿಳಿಯಬಹುದು.[10]

---

9. ಅದೇ, ಸಂಖ್ಯೆ ೧೫೦
10. ಅದೇ, ಸಂಖ್ಯೆ ೧೫೧

1 ಶ್ರೀ ಚಾಮುಂಡೇಶ್ವರಿ ಸಂನಿಧಿಗೆ ಶ್ರೀ ಕೃಷ್ಣರಾಜಕಂಠೀರ
2 ವರು ಮಾಡಿಶಿ ವಪ್ಪಿಶಿದ ಮಹಾಸಿಂಹವಾಪನದ ಆಭರಣ ಮೊದಲಾದ ಸಾಮಾ
3 ನಿಸ ಲೆಖ್ಖದ ತಗಡು ಕೀಲಕ ಸಂ॥ರದ ಮಾರ್ಗಶಿರ ಬಹುಳ ೨ ಮಂಗಳವಾರದಲ್ಲು

೧ { ಬೆಳ್ಳಿ ಮುಲಾವಿನ ಸಿಂಹ / ಚಿಂನದ ಮುಲಾವಿನದು }
೧ ವಿಲಾಸ ಕೆತ್ತಿದ ದೊಡ್ಡ ಪದಕ
೨೦ ಸಂಣ ತಾಲೀಪದಕಗಳು
೨ ಇದಕ್ಕೆ ಹಗ್ಗದ ಮುರಿ
೨ ಗಡ್ಡದ ತುಂಡು
೧ ನಾಲಿಗೆ
೨ ಮುಂಗಾಲಿಗೆ ದೊಡ್ಡ ಯಲೆ
೨ ಯಿದರ ಪಕ್ಕದಲ್ಲಿ ಚಿಕ್ಕ ಯಲ
೨ ದೊಡ್ಡ ತಳಕು ಯಲೆ
೪ ಯಿದರ ಕೆಳಗೆ ಸಂಣ ಯಲೆ
೨ ಮುಂಗಾಲಿನ ಕೆಳಗಣ ಪಟ್ಟಿ
೨ ಕಾಲಿಗೆ ಸಂಣ ಕಮಲ ಹುವು
೨ ಮುಂಗಾಲಿಗೆ ಕಡಗ
೬ ಯದೆ ಮೇಲೆ ಜ್ವಾಲೆಪಟ್ಟಿ ೩ ದೊಡ್ಡ ತಳಕು
೧ ಸಂಣ ಹುವು ೧ ಯಲೆ ೨ ಸಹ ನಗ
೨ ಸಣ್ಣ ಕಂಕಳ ಪಟ್ಟಿ
೧ ಪೆಕ್ಕತ್ತಿನ ಮೇಲೆ ದೊಡ್ಡ ಹುವು

ಹಿಂದಣ ಸಾಮಾನು ವಿವರಾ

೪ ಕಾಲ ಕಡಗ ೨ಬೀಜ ೨ ಸಹಾ
೧ ಬಾಲದ ಕೊನೆ ತಳಕು
೨ ಕಾಲಿನ ಹಿಂದೆ ಪಟ್ಟಿ
೨ ಗಿಣಿಗೆ ಕಮಲದ ಹುವು
೧ ಪುಠ್ಠಾ ಮೇಲೆ ದೊಡ್ಡ ಅರಳೆಲೆ
೪ ಕಾಲಿಗೆ ದೊಡ್ಡ ಅರಳೆಲೆ

ಈ ಎಲ್ಲಾ ಉಡುಗೊರೆಗಳಿಗೆ ಕಳಶವಿಟ್ಟಂತೆ ಮಹಾಕೊಡುಗೆ ಎಂದರೆ ಮುಮ್ಮಡಿ ಕೃಷ್ಣರಾಜ ಒಡೆಯರು ಕ್ರಿ.ಶ. ೧೮೨೭ರಲ್ಲಿ ಮಾಡಿಸಿದ ಮಹಾದ್ವಾರ ಗೋಪುರ.[11] ಇದು ದ್ರಾವಿಡ ಶೈಲಿಗೆ ಉತ್ತಮ ಉದಾಹರಣೆಯಾಗಿದೆ. ಈ ಗೋಪುರವು ಚಾಮುಂಡಿಬೆಟ್ಟದ ಮೇಲಿನ ಸ್ಮಾರಕಗಳ ಇತಿಹಾಸದಲ್ಲಿ ಒಂದು ಶಾಶ್ವತವಾದ ಸ್ಥಾನವನ್ನು ಪಡೆದುಕೊಂಡಿದೆ. ಇನ್ನೊಂದು ಸಂದರ್ಭದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಇದೇ ದೇವಾ

---

೪ ಯೀ ಬಾಬ್ತು ಚಿಕ್ಕ ಯಲೆ
೧ ಬಾಲದ ಕೆಳಗೆ ಸಂಣ ಹುವು
೨ ವಳತೊಡೆ ಸಂಣ ಪಟ್ಟಿ
೨ ಹೊಟ್ಟೆ ಪಕ್ಕದ ಬಾಜೂ ಪಟ್ಟಿ
೨ ತೊಡೆ ಮೇಲಣ ದೊಡ್ಡ ತಳಕು
೩ ನವದುರ್ಗೀರ ತಗಡು
೧ ಮುಂಪಾರ್ಶ್ವದ ಸಾದಾ ತಗಡು
೩ ಕಮಲದ ಪಟ್ಟಿ
೧ ಹಲಿಗೆ ಮೇಲೆ ಪೀಠದ ತಗಡು
೫ ದೊಡ್ಡಗೋಲು ತುಂಡು
೬ ಸಂಣಗೋಲು ತುಂಡು
೧ ಸಿಂಹದ ಕೆಳಗೆ ಸದರ ಮೊರು
೨೦ ಪ್ರಭಾವಳಿ ಮುಂದಣ ತಗಡು
೫ ಹಿಂದಣ ತಗಡು ೫ ಮೊಗ್ಗುಲು ಪಟ್ಟಿ ಚಿಂನದ ಮುಲಾವಿನ ಗುಬ್ಬಿ ಕಲಶ ೧ ಸಹಾ
೧೫೮ ಛತ್ರಿ ೧ ಕ್ಕೆ ನಗ ಚಿಂನದ ಮುಲಾವಿನ ಪಂಚಕಲಶ ೧ ಮುತಾಕಲು ಪಟ್ಟಿ ೨ ಗೆಜ್ಜೆ ೧೫೦ ಮೇಲಣ ಬೆಳ್ಳಿ ಬಿಲ್ಲೆ ೧ ಕೆಳಗಣ ಕಡ್ಡಿಗಳು ೧ ಕೊಳವೆ ೧ ದೊಡ್ಡ ಸಲಾಕಿ ೧ ನವಿಲುಗರಿ ಚೌರಿದಂಡಿಗೆ ಚಿಂನದ ಮುಲಾವು ಬಾಬ್ತು ೨ ಬೊಂಬೆ ಕೈಗೆ ಕೊಳವೆ ೨ ಸಹಾ ೪

ಹಿತ್ತಾಳೆ ಕಂಚು ವಗೈರೆ ಸಾಮಾನು
೪ ಮುತಾಕಲು ಮೂಲೆಗೆ ಮೋತೆ ಮಾವಿನದು
೧೦೨ ಘಂಟೆಗೆ ಮೇಲಣ ಮುತಾಕಲೆಗೆ ದೊಡ್ಡ ಘಂಟೆ ೮ ಕಮಾನು ಕಂಭಕ್ಕೆ ಸಂಣ ಘಂಟೆ ೩೬ ಕೆಳಗಣ ಜಗತಿಗೆ ದೊಡ್ಡದು ಸಂಣದು ಸಹಾ ೪೮ ಕೆಳಗಣ ಮೋತೆಗೆ ದೊಡ್ಡ ಗಂಟೆ ೮ ಸಹಾ
೧೪೪ ಗಾಲಿಚಕ್ರಕ್ಕೆ ಸಂಣ ಅಷ್ಟದಳ ಹುವು ೪೮ ಅರಳೆಲೆ ೯೬ ಸಹಾ ೫೦ ಕೆಳಗಣ ತೊಲೆಗೆ ಯೇಳು ವರಸೆ ಕಮಲ ಹುವು ೧ ದೊಡ್ಡ ಅಷ್ಟದಳದ ಹುವು ೧೭ ಸಂಣ ಅಷ್ಟದಳದ ಹುವು ೧೬ ಆರು ದಳದ ಹುವು ೧೬ ಸಹಾ
೪ ಗಾಲಿಚಕ್ರಕ್ಕೆ ಹಿತ್ತಾಳೆ ಗುಬ್ಬಿ

ಮರದ ಸಾಮಾನು ಮೊದಲಾದದ್ದು
೪ ಸಿಂಹದ ಬಾಜ ದೊಡ್ಡಗೊಂಬೆ ೨ ಯಿದರ ಭುಜಕ್ಕೆ ಗಿಣಿ ೨ ಸಹಾ

ರಥಕ್ಕೆ ಸಾಮಾನು ವಿವರಾ
೪ ಗಾಲಿಚಕ್ರ
೮ ಮೋತೆಗಳು
೨೨ ದೊಡ್ಡ ಕಟ್ಟಕಟ್ಟೆ ತುಂಡು
೩೪ ಸಂಣ ಕಟಕಟೆ ತುಂಡುಗಳು
೨೪ ತರಾತರಾ ಬೊಂಬೆಗಳು
೬ ಕೆಳಗಣ ತೊಲೆ ಮೋಟಿಗೆ ಕಮಲ ೨ ಮೋತೆ ಸುಮಾ ೪ ಸಹಾ
೪ ಹುರಬೆಗೆ ಕಬ್ಬಿಣದ ಬಳೆ
೨ ನೂಲು ಹಗ್ಗದ ಹುರಬೆಗಳು
೧ ತಾರ್ಪೆ ಛುರಕಿ
೧ ಮೊಮುಚಾಮೆ ಛುರಕಿ

11. ಅದೇ, ಸಂಖ್ಯೆ ೧೪೮

ಲಯಕ್ಕೆ ಬೆಳ್ಳಿಯ ಸಹಸ್ರಧಾರಾ ಪಾತ್ರೆಯನ್ನು ಉಡುಗೊರೆಯಾಗಿ ನೀಡಿದ್ದಾರೆ.[12] ಈಗ ಇದು ಪಕ್ಕದಲ್ಲಿನ ಮಹಾಬಲೇಶ್ವರ ದೇವಸ್ಥಾನದಲ್ಲಿದ್ದು ಲಿಂಗದ ಅಭಿಷೇಕದ ಸಮಯದಲ್ಲಿ ಉಪಯೋಗಿಸುತ್ತಾರೆ.

ದಿವಂಗತ ಜಯಚಾಮರಾಜ ಒಡೆಯರು ಸಹ ಚಾಮುಂಡೇಶ್ವರಿ ದೇವಿಯ ಪರಮ ಭಕ್ತರಾಗಿದ್ದರು. ಅವರು ಸಹ ಅನೇಕ ಆಭರಣಗಳನ್ನು ದೇವಿಗೆ ನೀಡಿದ್ದಾರೆ. ಅವುಗಳಲ್ಲಿ ಮುಖ್ಯವಾದದ್ದು ಕಿರೀಟ. ಇದರಲ್ಲಿ ಬೆಲೆಬಾಳುವ ವಜ್ರದ ಹರಳುಗಳನ್ನು ಅಳವಡಿಸಲಾಗಿದೆ. ಇದನ್ನು ಪ್ರತಿದಿನ ದೇವಿಗೆ ಧರಿಸುತ್ತಾರೆ. ಮತ್ತೊಂದು ಪ್ರಮುಖ ಆಭರಣವೆಂದರೆ ಬಂಗಾರದಿಂದ ಮಾಡಿದ ಗಂಡಭೇರುಂಡ ಚಿತ್ರವನ್ನು ಹೊಂದಿರುವ ಪದಕವುಳ್ಳ ಕಂಠಹಾರ. ಪದಕವನ್ನು ಬೆಲೆಬಾಳುವ ವಜ್ರದಹರಳುಗಳಿಂದ ರಚಿಸಲಾಗಿದೆ. ಇದನ್ನು ಪ್ರತಿದಿನ ದೇವಿಗೆ ಧರಿಸುತ್ತಾರೆ. ಇದರಿಂದ ದೇವಿಯ ಸೌಂದರ್ಯ ಇಮ್ಮಡಿಸುತ್ತದೆ. ಇವರ ಅವಿಸ್ಮರಣೀಯ ಕೊಡುಗೆ ಎಂದರೆ ೧೯೫೨ರಲ್ಲಿ ಚಾಮುಂಡೇಶ್ವರಿ ದೇವಾಲಯದ ಮಹಾದ್ವಾರದ ಬಾಗಿಲುವಾಡ ಮತ್ತು ಬಾಗಿಲುಗಳಿಗೆ ಬೆಳ್ಳಿಯ ತಗಡಿನ ಹೊದಿಕೆಯನ್ನು ಹಾಕಿಸಿರುವುದು. ಈ ಬಾಗಿಲಿನ ಮೇಲೆ ಸುಂದರವಾಗಿ ಮತ್ತು ಕಲಾತ್ಮಕವಾಗಿ ದೇವಿಯ ವಿವಿಧ ರೂಪದ ಸೂಕ್ಷ್ಮ ವಿಗ್ರಹಗಳನ್ನು ಮತ್ತು ಲತಾಬಳ್ಳಿಗಳನ್ನು ಬಿಡಿಸಲಾಗಿದೆ. ಸೂಕ್ಷ್ಮ ವಿಗ್ರಹಗಳನ್ನು ಹೊಂದಿರುವ ಈ ಬೆಳ್ಳಿಯ ಬಾಗಿಲುಗಳು ಅಪರೂಪವೆಂದು ಹೇಳಬಹುದು. ಈ ಬೆಳ್ಳಿಯ ವಿಗ್ರಹಗಳು ಮೈಸೂರು ಶಿಲ್ಪ ಕಲೆಗಾರಿಕೆಯ ಒಳ್ಳೆಯ ಮಾದರಿಗಳಂತಿವೆ. ಇವುಗಳು ಎಂತಹ ಮನೋಭಾವದ ವ್ಯಕ್ತಿಯನ್ನಾದರೂ ಆಕರ್ಷಿಸುವುದರಲ್ಲಿ ಸಂದೇಹವೇ ಇಲ್ಲ. ಇವು ಮತ್ತು ಇವುಗಳ ಕಲೆಗಾರಿಕೆ ನಮ್ಮ ಪ್ರಾಚೀನ ಪರಂಪರೆಯ ಉತ್ಕೃಷ್ಟತೆಗೆ ನಿದರ್ಶನಗಳಂತಿವೆ. ಈ ಬಾಗಿಲುಗಳ ಮೇಲೆ ಹೊದಿಸಿರುವ ಬೆಳ್ಳಿಯ ತಗಡು ಮತ್ತು ಬಿಡಿಸಿರುವ ದೇವಿಯ ೨೭ ರೂಪದ ಸೂಕ್ಷ್ಮ ವಿಗ್ರಹಗಳು ಮೂರ್ತಿಶಿಲ್ಪಶಾಸ್ತ್ರ ದೃಷ್ಟಿಯಿಂದ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿವೆ.

ಈ ರೀತಿ ಮೈಸೂರು ಒಡೆಯರ ಉದಾರವಾದ ಭಕ್ತಿಪೂರ್ವವಾದ ಕೊಡುಗೆಗಳಿಂದ ಚಾಮುಂಡೇಶ್ವರಿ ದೇವಾಲಯವು ದಕ್ಷಿಣ ಕರ್ನಾಟಕದ ಜನಜೀವನದಲ್ಲಿ ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಹಾಸುಹೊಕ್ಕಾಗಿದೆ. ಐತಿಹಾಸಿಕವಾಗಿ ಒಂದು ನೆಲೆಗಟ್ಟಿನ ಮೇಲು ನಿಲ್ಲಲು ಅವಕಾಶವಾಗಿದೆ. ಪ್ರಸ್ತುತ ಶಾಸನಗಳಿಂದ ವ್ಯಕ್ತವಾಗುವ ಮುಖ್ಯ ಅಂಶವೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಅಸಾಧಾರಣವಾದ ದೈವಭಕ್ತಿ. ಇದು ಒಡೆಯರ ಧರ್ಮಶ್ರದ್ಧೆಯ ಉನ್ನತಮಟ್ಟವನ್ನು ತಿಳಿಸುತ್ತದೆ. ಒಡೆಯರ ಧಾರ್ಮಿಕಶ್ರದ್ಧೆಗೆ ಚಾಮುಂಡೇಶ್ವರಿ ದೇವಾಲಯವು ಒಳಗೊಂಡಂತೆ ನಾಡಿನ ನೂರಾರು ದೇವಾಲಯಗಳು ಜೀವಂತ ಸಾಕ್ಷಿಗಳಾಗಿವೆ.

---

12 ಅದೇ, ಸಂಖ್ಯೆ ೧೪೬

ಕಮಲಾ ಸಂಪಳ್ಳಿ

# ಸ್ವಾತಂತ್ರ್ಯ ಸಂಗ್ರಾಮದಲ್ಲಿ ವೀರವನಿತೆಯರ ಪಾತ್ರಕ್ಕೆ ಪ್ರೇರಣೆ

ಮಹಾತ್ಮರಿಂದಲೇ ಪ್ರಥಮ ಪ್ರೇರಣೆ ಪ್ರಾರಂಭವಾದದ್ದು ಎನ್ನುವುದು ಸಂಗ್ರಾಮದ ಸಂದರ್ಭಕ್ಕೆ ಅತ್ಯಂತ ಸಮಂಜಸವಾಗಿದೆ. "ಈ ಮಾಂತ್ರಿಕನ ಮಾತಿನಿಂದ ನಾವು ಮರುಳಾದೆವು, ಆ ಮಹಾತ್ಮ ನಮ್ಮಿಂದ ಯೋಚಿಸಲೂ ಸಾಧ್ಯವಿಲ್ಲದ ಕೆಲಸವನ್ನು ಮಾಡಿಸಿದ್ದಾನೆ" ಎನ್ನುತ್ತಾರೆ ಈ ವೀರವನಿತೆಯರು. ಭಾರತೀಯ ವನಿತೆಯನ್ನು ತನ್ನ ಸಾಮರ್ಥ್ಯದ ಕಡೆಗೆ ಗಮನ ಹರಿಸುವಂತೆ ಮಾಡಿ ತನ್ನ ಶಕ್ತಿಯಲ್ಲಿ ನಂಬಿಕೆ ಮೂಡಿಸಿದವರು ಮಹಾತ್ಮರೇ. ಗಾಂಧೀಜಿ ಇಟ್ಟ ಹೆಜ್ಜೆಯಲ್ಲಿ ನಡೆಯುವಂತಾದುದಕ್ಕೆ, ಹೆಣ್ಣಿನ ಆತ್ಮಶಕ್ತಿಯಲ್ಲಿ ಗಾಂಧೀಜಿಯವರಿಗಿದ್ದ ನಂಬಿಕೆಯೇ ಕಾರಣ.

ಗೃಹಕೃತ್ಯದಲ್ಲೇ ಇಡೀ ಜೀವನವನ್ನು ಕಳೆಯಬೇಡಿ, ನಿಮ್ಮ ಜೀವನದ ಗುರಿ ಅಷ್ಟೇ ಅಲ್ಲ, ಎಂದು ಎಚ್ಚರಿಸಿದ ಮಹಾತ್ಮರ ಮಾತು ಪ್ರತಿ ಹೆಣ್ಣಿನ ಮನಸ್ಸನ್ನು ನಾಟಿತು. ಸ್ವತಂತ್ರವೆಂದರೆ ಬ್ರಿಟಿಷರೊಡನೆ ಹೋರಾಡುವುದು ಎಂದರ್ಥವಲ್ಲ. ಭಾರತದ ಸಂಪೂರ್ಣ ಪ್ರಗತಿಯೇ ಸ್ವಾತಂತ್ರ್ಯದ ಸತ್ಯ ಸಾರಾಂಶ. ಆದ್ದರಿಂದ ಪುರುಷನಷ್ಟೇ ಸ್ತ್ರೀಯರೂ ಇಲ್ಲಿ ಸಾಧಿಸಬೇಕಾದ ಕೆಲಸವಿದೆ ಎಂದು ಗಾಂಧೀಜಿ ಪದೇ ಪದೇ ಹೇಳುತ್ತಿದ್ದುದು ಹೆಣ್ಣನ್ನು ದೇಶಸೇವೆಗೆ, ಸಂಗ್ರಾಮದ ಚಳವಳಿಗೆ ಪ್ರೇರೇಪಿಸಿತು.

ಗಾಂಧೀಜಿಯವರ ಭಾವನೆಯಲ್ಲಿ ಸ್ತ್ರೀ–ಪುರುಷರು ಒಂದೇ. ಸಂಗ್ರಾಮಕ್ಕೆ ಮಹಿಳೆಯರು ಹೊರಡುವುದೇ ಎಂದು ಹಾಸ್ಯ ಮಾಡಿದ ಸಮಾಜವನ್ನು ಸಮಾಧಾನಗೊಳಿಸಿ ಹೀಗೆಂದರು ಗಾಂಧಿ : 'ಬುದ್ಧಿರ್ಯಸ್ಯ ಬಲಂ ತಸ್ಯ'. ಬುದ್ಧಿವಂತನೇ ಶಕ್ತಿವಂತನು. ಮನೋ ಬಲ ಎಲ್ಲಿದೆಯೋ ಅಲ್ಲಿ ನಿಜವಾದ ಶಕ್ತಿ ಇದೆ, ಸತ್ವವಿದೆ. ಸ್ತ್ರೀ ಸ್ವರಕ್ಷಿತೆ, ಪರಾವಲಂಬಿಯಲ್ಲ. ಸ್ವಾತಂತ್ರ್ಯ ಸಂಗ್ರಾಮಕ್ಕೆ ನನ್ನ ತತ್ವವಾದ ಅಹಿಂಸಾ ಮಾರ್ಗದಲ್ಲಿ ಪುರುಷರಿಗಿಂತ ಸ್ತ್ರೀಯರಿಗೇ ಹೆಚ್ಚು ಪಾತ್ರವಿದೆ" ಎಂದು ವನಿತೆಯರನ್ನು ಉತ್ತೇಜಿಸಿದರು.

ಅಸಹಕಾರ ಚಳವಳಿ ದುರ್ಬಲರ ಅಸ್ತ್ರವೆಂದು ತಿಳಿಯುವುದು ತಪ್ಪು. ಹಿಂಸೆಯನ್ನು ವಿರೋಧಿಸಿ ನಿಲ್ಲಲು ದೃಢತೆ ಬೇಕು. ಆತ್ಮಶಕ್ತಿ, ತಾಳ್ಮೆ, ಕಷ್ಟ ಸಹಿಷ್ಣುತೆ, ನಿಸ್ವಾರ್ಥತೆ ಬೇಕು, ಇಂತಹ ತ್ಯಾಗಕ್ಕೆ ಬಲಹೀನರಾಗುವುದಿಲ್ಲ. ಶಕ್ತಿವಂತರೇ ದೇಶದ ಬಂಧನ ಬಿಡುಗಡೆಗೆ ಬೇಕಾದರೂ, ನಾನು ಹೇಳುವ ಮಾರ್ಗ ಕಷ್ಟ ಸಹಿಷ್ಣುತೆ ಮತ್ತು ಬಲಿದಾನ. ಆದ್ದರಿಂದ ಈ ಅಸ್ತ್ರ ಮಹಿಳೆಯರಿಗೆ ಹೆಚ್ಚು ಅನ್ವಯಿಸುತ್ತದೆ ಎಂದರು ಮಹಾತ್ಮರು. ಅವರ ಮುನ್ನಾಲೋಚನೆಯಲ್ಲಿ, ಮುನ್ನಡೆಯ ಮಾರ್ಗಕ್ಕೆ ತಡೆಯಾಗಿರುವುದು ಮಹಿಳೆಯರ ಅಂದಿನ ಹೀನ ಸ್ಥಿತಿ. ಸ್ತ್ರೀ ಪುರುಷರಿಬ್ಬರೂ ಸಾಧನೆಗೆ ಪರಸ್ಪರ ಸಹಾಯಕರೆಂದು ತಿಳಿಯುವ ತನಕ ದಾರಿ ದುರ್ಗಮವೇ.

ಭಾರತಮಾತೆಯನ್ನು ದಾಸ್ಯದಿಂದ ಬಿಡಿಸುವುದರ ಜೊತೆಗೆ ಗಾಂಧೀಜಿ ದೀನದಲಿತರ, ಅಸ್ಪೃಶ್ಯರ ಉದ್ಧಾರ

ವನ್ನು ಧ್ಯೇಯವಾಗಿಟ್ಟುಕೊಂಡಿದ್ದರು. ಮಹಿಳೆಯರಿಗಿದ್ದ ತೊಂದರೆ ತೊಡಕುಗಳನ್ನು ನಿವಾರಿಸಿ ಸ್ತ್ರೀ ವಿಮೋಚನೆ ಯಾದ ಹೊರತು ಸ್ವಾತಂತ್ರ್ಯ ಸಾಧ್ಯವಾಗದೆಂದು ನಂಬಿದ್ದರು. ರಾಜಕುಮಾರಿ ಅಮೃತ್ ಕೌರ್, ಸುಚೇತಾಕೃಪಲಾನಿಯವರ ಮಾತಿನಲ್ಲಿ, "ಬಾಪು ಪಿತೃವರ್ಯರು ಮಾತ್ರವಲ್ಲ, ಮಾತೃ ಸದೃಶರೂ ಆಗಿದ್ದರು. ಮಾತೃಪ್ರೇಮದ ವಿಶಾಲ ಸಾಗರದ ವೈಶಾಲ್ಯತೆಯಲ್ಲಿ ಅವರ ಪ್ರೇಮ ವಾತ್ಸಲ್ಯಗಳ ಪಾಶದಲ್ಲಿ ಭಯ ಅಂಜಿಕೆಗಳು ಮಾಯವಾದವು."

ಮಹಾತ್ಮರ ಸತ್ಯಶೋಧನೆಯ ನಿರೂಪಣೆಯಿಂದ ಭಾರತೀಯ ಹೆಣ್ಣು ಎಚ್ಚೆತ್ತಳು. ಗೃಹಿಣಿಯೂ ಆಗಿದ್ದು ಸಮಾಜಸೇವಾ, ದೇಶಸೇವಾ ಕರ್ತವ್ಯವನ್ನು ನಿರ್ವಹಿಸಬಹುದೆಂದು ಸಂಕಲ್ಪಿಸಿದಳು. ರಾಜಕೀಯವಾಗಿ ತನ್ನ ಜನ್ಮಭೂಮಿ ಅನುಭವಿಸುತ್ತಿರುವ ಪರತಂತ್ರವನ್ನು ಕಂಡೂ, ಸಾಮಾಜಿಕ ಸಮಸ್ಯೆಗೆ ಸಿಕ್ಕಿಕೊಂಡಿದ್ದೂ, ಆರ್ಥಿಕವಾಗಿ ಸವೆಯುತ್ತಿರುವ ಸಂಗತಿಯನ್ನು ಅರಿತೂ ಸುಮ್ಮನೆ ಅವಳಿಂದ ಮನೆಯೊಳಗೆ ಕೂರಲಾಗಲಿಲ್ಲ.

ತನ್ನ ಅಹಿಂಸಾ ಸೇನೆಯಲ್ಲಿ ಮಹಿಳೆಯರೂ ಇರಬೇಕೆಂದು ಬಯಸಿದ ಮಹಾತ್ಮರ ಅಭೀಷ್ಟ ಮಹಿಳೆಯರನ್ನು ಸ್ವಾತಂತ್ರ್ಯ ಸಂಗ್ರಾಮಕ್ಕೆ ಸೆಳೆಯಿತು. ಹೆಣ್ಣು ಸಮಯ ಸಂಜೀವಿನಿಯಾದಳು, ಶಕ್ತಿಸ್ವರೂಪಿಣಿಯಾದಳು, ಸಿಂಹಿಣಿಯಂತೆ ಬ್ರಿಟಿಷರತ್ತ ಘರ್ಜಿಸಿದಳು. ತಾಯಿ ತಂದೆ ಗಂಡ ಮಕ್ಕಳು ಬಂಧು ಬಳಗ ಸುಖ ಜೀವನವನ್ನು ತೊರೆದು ಸ್ತ್ರೀಯರು ಜೈಲುವಾಸ ಅನುಭವಿಸಿದರು. ಇಂತಹ ದೇಶಭಕ್ತಿಗೆ ಮಹಾತ್ಮರ ಚಿಂತನೆಯ ಪ್ರಭಾವ ಪ್ರಮುಖವಾಗಿದೆ.

ಹೀಗಿದ್ದರೂ ಇಲ್ಲಿ ಒಂದು ಮಾತು ಸತ್ಯ. ಹೆಂಗಸರನ್ನು ಸಂಗ್ರಾಮಕ್ಕೆ ಮಹಾತ್ಮರು ತಾವಾಗಿ ಕರೆಯಲಿಲ್ಲ. ಉಪ್ಪಿನ ಸತ್ಯಾಗ್ರಹ ಕಾರ್ಯಕ್ರಮವನ್ನು ಹಾಕಿಕೊಂಡಾಗ ಮಹಾತ್ಮರ ಸ್ವಭಾವವನ್ನು ಶಂಕಿಸಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಗಾಂಧಿಯವರನ್ನೇ ಹೀಗೆ ಕೇಳಿದರು: "ನೀವೇಕೆ ಮಹಿಳೆಯರಿಗೆ ವಿಶೇಷವಾಗಿ ಪ್ರತ್ಯೇಕವಾಗಿ ಕರೆಯನ್ನು ಕೊಡುವುದಿಲ್ಲ ? ಉಪ್ಪಿನ ಸತ್ಯಾಗ್ರಹ ಮಹಿಳೆಯರನ್ನು ಸೇರಿಸಿಕೊಳ್ಳಲು ಅತ್ಯಂತ ಅಗತ್ಯವಾದ ಒಂದು ಸಂದರ್ಭನಲ್ಲವೇ ? ಈ ಸಮಯವನ್ನು ಬಿಟ್ಟರೆ ಮಹಿಳೆಯರು ಮತ್ತೇನು ಮಾಡಬಲ್ಲರು?" ಇದಕ್ಕೆ ಮಹಾತ್ಮರ ಉತ್ತರವಿದು; "ನಿಮ್ಮ ಸಹೋದರಿಯರ ಸಾಮರ್ಥ್ಯ ನಿಮಗೇ ಗೊತ್ತಿಲ್ಲವೆಂದಾಯಿತು."

ಈ ಮಾತಿನ ಸತ್ಯಾಂಶದ ಫಲ ಪ್ರತ್ಯಕ್ಷವಾಗಿ ಕಂಡಿತು. ಮನೆಯ ಹೊಸಿಲಿನಿಂದ ಹೊರಕ್ಕೆ ಬಾರದವರು, ಪರದೆ ಧರಿಸಿ ಒಳಗೆ ಕೂತುವರು, ಓದುಬರಹ ಬಾರದ ಗ್ರಾಮೀಣ ಹೆಂಗಸರು, ವಿದ್ಯಾವಂತ ಆಗರ್ಭ ಶ್ರೀಮಂತರು, ವಿದ್ಯಾರ್ಥಿನಿಯರು ಅಗಣಿತವಾಗಿ ಬಂದು ತಮ್ಮ ಶಕ್ತಿಗೆ ಅನುಸಾರವಾಗಿ ಆಂದೋಲನದಲ್ಲಿ ಭಾಗ ವಹಿಸಿ ಸೇವೆ ಸಲ್ಲಿಸಿದರು. ಉಪ್ಪಿನ ಸತ್ಯಾಗ್ರಹದಲ್ಲಿ ಅಸಂಖ್ಯಾತ ಮಹಿಳೆಯರು ಪಾಲ್ಗೊಂಡರು. ಕರನಿರಾಕರಣ ಚಳವಳಿ ವಿದೇಶೀವಸ್ತ್ರ ಬಹಿಷ್ಕಾರ, ಪಾನನಿರೋಧ, ಅಸ್ಪೃಶ್ಯತಾ ನಿವಾರಣೆ ಮುಂತಾದ ಈ ಕಾರ್ಯಕ್ರಮಗಳಲ್ಲಿ ಸ್ತ್ರೀಯರು ಭಾಗವಹಿಸಬೇಕೆಂದು ಮಹಾತ್ಮರ ಅಪೇಕ್ಷೆ ಇತ್ತು. ಮಹಾತ್ಮರ ಆದೇಶದಂತೆ ಈ ಎಲ್ಲಾ ಕಾರ್ಯಕ್ರಮಗಳನ್ನೂ ವೀರವನಿತೆಯರು ಯಶಸ್ವಿಗೊಳಿಸಿದರು.

ಮಹಾತ್ಮರಿಂದ ಎಚ್ಚೆತ್ತ ಮಹಿಳೆಯರಿಗೆ ಅಂದಿನ ದೇಶಸ್ಥಿತಿಯ ಪರಿಸರದ ಪ್ರಭಾವವಾಗಿ ದೇಶಕ್ಕಾಗಿ ಹೋರಾಡಲು ಪ್ರೇರೇಪಣೆಯಾಯಿತು. ಮನೆಯ ವಾತಾವರಣವೂ ಕಾರಣವಾಯಿತು. ಮುಖಂಡರನ್ನು ಸೆರೆಹಿಡಿದು ಜೈಲಿಗೆ ಹಾಕಿದಾಗ ಮಹಿಳೆಯರು ತಮ್ಮ ಪಾಲಿನ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕಾಯಿತು. ಚಳವಳಿಯ ಚುರುಕು ಇಡೀ ರಾಷ್ಟ್ರವನ್ನು ಮುಟ್ಟಿದಾಗ ಮಹಿಳೆಯರು ಹೊರತಾಗಿರಲು ಸಾಧ್ಯವಾಗಲಿಲ್ಲ. ಸೇವೆಗೆ ಸಿದ್ಧತೆ ಮಾಡಿಕೊಂಡರು. ತರಬೇತಿ ಕೇಂದ್ರ, ಸೇವಾ ಶಿಬಿರಗಳನ್ನು ಏರ್ಪಡಿಸಿದುದು ಆಂದೋಲನಕ್ಕೆ ಧುಮುಕಲು ಮತ್ತಷ್ಟು ಪ್ರೋತ್ಸಾಹ ಕೊಟ್ಟಿತು. ಮುಖಂಡರಾದ ಡಾ॥ ಹರ್ಡೀಕರ್, ಹುಕ್ಕೇರಿಕರ್, ಕರಮರ್‌ಕರ್, ಕಬ್ಬೂರರು, ಗಂಗಾಧರ ದೇಶಪಾಂಡೆ, ಶ್ರೀನಿವಾಸ ಕೌಜಲಗಿ, ರಂಗನಾಥ ದಿವಾಕರರು, ಸದಾಶಿವ ರಾಯರು, ವೆಂಕಟರಾಮಯ್ಯನವರು, ಸಿ. ರಾಜಗೋಪಾಲಾಚಾರಿ, ಟಿ. ಪ್ರಕಾಶಂ ಇವರ ಜೊತೆಗೆ ಮಹಿಳಾ ಮುಖಂಡರಾದ ಉಮಾಬಾಯಿ ಕುಂದಾಪುರ, ಕಮಲಾದೇವಿ ಚಟ್ಟೋಪಾಧ್ಯಾಯ, ಕೃಷ್ಣಬಾಯಿ ಪಂಜಿಕರ್, ರಮಾಬಾಯಿ ಯಾಳಗಿ, ನಾಗಮ್ಮ

ಪಾಟೀಲ, ಲೀಲಾವತಿ ಮಾಗಡಿ, ಯಶೋಧರಮ್ಮ ದಾಸಪ್ಪ ಮುಂತಾದವರ ಮಾರ್ಗದರ್ಶನ ಕರ್ನಾಟಕದಲ್ಲಿ ಪ್ರಭಾವಶಾಲಿಯಾಯಿತು.

ಗಂಡನು ಜೈಲಿನಲ್ಲಿದ್ದಾಗ ಮನೆಯಲ್ಲಿ ಕುಳಿತು ಹಬ್ಬದೂಟ ಮಾಡಿ ತಿನ್ನಲು ಮನಸ್ಸು ಬರುವುದೇ ? ಅವರೊಡನೆ ನಾವೂ ಚಳವಳಿಯಲ್ಲಿ ಭಾಗವಹಿಸಬೇಕೆನ್ನಿಸುತ್ತದೆ. ಇದಕ್ಕೆ ತಕ್ಕ ಸಾಮರ್ಥ್ಯ ತಾನಾಗಿ ಬರುತ್ತದೆ ಎಂಬ ಗೌರಮ್ಮನವರ ಮಾತು, ಮದುವೆಯಾದ ಮೊದಲ ವರ್ಷ. ಗೌರಿ ಹಬ್ಬಕ್ಕೆ ತೌರೂರಿಗೆ ಹೋಗಬೇಕಾದ ಸಂದರ್ಭ. ಆದರೆ ನನ್ನ ಪತಿಯ ದಸ್ತಗಿರಿಯಾದಾಗ ನನಗೂ ಸೆರವಾಸವೇ ಹಬ್ಬಕ್ಕಿಂತ ಹೆಚ್ಚೆಂದು ತೋರಿತು ಎಂಬ ಭಾಗೀರತಮ್ಮನವರ ಮಾತು, ಮನೆಯ ವಾತಾವರಣ ಮಹಿಳೆಯರನ್ನು ಹೇಗೆ ಪ್ರೇರಣೆ ಮಾಡಿತು ಎನ್ನುವುದಕ್ಕೆ ನಿದರ್ಶನವಾಗಿವೆ. ಕಾಮಾಕ್ಷಮ್ಮನವರಂತಹ ವಿದ್ಯಾವಂತ ತರುಣಿಯರು ವೀರವನಿತೆಯರ ಭಾಷಣಗಳಿಂದ ಪ್ರೇರಿತರಾದೆವು ಎನ್ನುತ್ತಾರೆ. ಉಮಾಬಾಯಿ ಕುಂದಾಪುರರವರ ಮಾತನ್ನು ಕೇಳಿಯೇ ನಾವೇಕೆ ಸುಮ್ಮನೆ ಹೀಗೆ ಕುಳಿತಿರುವುದು ? ದೇಶಕ್ಕಾಗಿ ಸೇವೆ ನಮ್ಮ ಕರ್ತವ್ಯವಲ್ಲವೇ ? ಎಂದು ತೀರ್ಮಾನಿಸಿ ಸಂಗ್ರಾಮದ ಬಿಸಿಯಲ್ಲಿ ಬೇಯಲು ಬಯಸಿ ಬಂದರು.

ಉಮಾಬಾಯಿ ಕುಂದಾಪುರರವರು ಪ್ರೇರಣೆ ಪಡೆದದು ಗಾಂಧೀಜಿ ಮತ್ತು ಸುಭಾಸ್‌ಚಂದ್ರ ಬೋಸ್‌ರವರಿಂದ. ಲೋಕಮಾನ್ಯ ತಿಲಕರ ಮರಣ ಪ್ರಸಂಗದಲ್ಲಿ ಭಾಗವಹಿಸಿ ಚಳವಳಿಗೆ ಧುಮುಕಿದರು. ಅನಂತರ ಡಾ॥ ಹರ್ಡೀಕರ್‌ರಿಂದ ಪ್ರೇರಿತರಾಗಿ ಭಗಿನಿ ಮಂಡಳಿಯನ್ನು ಸ್ಥಾಪಿಸಿ ರಾಷ್ಟ್ರೀಯ ಚಳವಳಿಯ ಕಾರ್ಯೋನ್ಮುಖರಾದರು. ರಾಷ್ಟ್ರೀಯ ಆಂದೋಲನದಲ್ಲಿ ದೀರ್ಘ ಶಿಕ್ಷೆ ಅನುಭವಿಸಿದ ಕರಮರಕರ್‌ರವರ ಪತ್ನಿ ಶಾಂತಾಬಾಯಿ ಆಂದೋಲನ ಸೇರಿದ್ದು ೧೯೩೦ರ ಉಪ್ಪಿನ ಸತ್ಯಾಗ್ರಹ ಕಾಲದಲ್ಲಿ. ಅನಂತರ ರಂಗನಾಥ ದಿವಾಕರ, ಕೃಷ್ಣಾಬಾಯಿ ಪಂಜಿಕರ್ ಮುಂತಾದವರ ಪ್ರಭಾವದಿಂದ ಕಾರ್ಯಕ್ರಮದಲ್ಲಿ ಪ್ರೇರಿತರಾದರು. ಲೀಲಾವತಿ ಮಾಗಡಿಯವರು ತಮ್ಮ ತಾಯಿ ನಾಗಮ್ಮನವರಿಂದ ಸ್ಫೂರ್ತಿಗೊಂಡರು. ಹುಬ್ಬಳ್ಳಿಯಲ್ಲಿ ಸ್ಥಾಪಿಸಿದ ಹರಿಜನ ಬಾಲಕಾಶ್ರಮದ ಸೇವೆಯು ದೇಶಸೇವೆಗೆ ಮಾರ್ಗ ಕೊಟ್ಟಿತು.

ಜೈಲುಜೀವನ ರಾಷ್ಟ್ರೀಯ ವಿಚಾರಗಳ ಮಂಥನಕ್ಕೆ ಅವಕಾಶಮಾಡಿಕೊಟ್ಟಿತು.

ಮಹಿಳೆಯ ಕೆಲಸ ಗೃಹಿಣಿಯಾಗಿರುವುದು ಮಾತ್ರ ಎಂದು ವಾದಿಸಿದ ಸುಬ್ಬಮ್ಮ ಜೋಯಿಸ್‌ರವರ ಕಣ್ಣು ತೆರೆಸಿ ಆಂದೋಲನಕ್ಕೆ ಕರೆಕೊಟ್ಟವರು ತಗಡೂರು ರಾಮಚಂದ್ರರಾಯರು. ಸಂಪಾದಿಸಬೇಕು, ಚಳವಳಿಗೆ ಸೇರಕೂಡದೆಂದು ಪತಿಯನ್ನು ತಡೆಯುತ್ತಿದ್ದ ಸುಬ್ಬಮ್ಮನವರಿಗೆ ಹೊರಗಿನ ಪರಿಸ್ಥಿತಿಯ ಅರಿವಾಗಿ, ಸಮಾಜದಲ್ಲಿ ತಾನೂ ಒಬ್ಬರೆಂಬ ಕಟುಸತ್ಯದ ತಿಳುವಳಿಕೆಯಿಂದ ಚಳವಳಿಯ ಮುಖಂಡರೇ ಆದರು. ಬ್ರಿಟಿಷ್ ಸಾಮ್ರಾಜ್ಯದ ಬುಡ ಕತ್ತರಿಸಲು ಪಣತೊಟ್ಟರು. ಬಾಲವಿಧವೆಯರಾದ ಮಹಾದೇವಿ ತಾಯಿ, ಕೃಷ್ಣಾಬಾಯಿ ಇಂತಹ ಮಹಿಳೆಯರು ತಮ್ಮ ಜೀವನದಲ್ಲಿ ಸಾರ್ಥಕವಾದ ಕೆಲಸವನ್ನು ಮಾಡಬೇಕೆಂದು ಹೊರಟು, ದೇಶದ ಸ್ಥಿತಿಯ ಕಡೆಗೆ ಗಮನ ಹರಿಸಿ ಆಂದೋಲನಕ್ಕೆ ಸೇರಿಕೊಂಡರು.

ಮದುವೆಯಾದರೂ ಬ್ರಹ್ಮಚಾರಿಣಿಯರಂತೆ ಇರಲು ಸಂಕಲ್ಪ ಮಾಡಿದ ಪ್ರಭಾವತಿದೇವಿ, ಸುನಂದಮ್ಮ ಇವರುಗಳು ಸ್ವಾತಂತ್ರ್ಯ ಬರುವವರೆಗೂ ಸುಖಜೀವನವನ್ನು ತ್ಯಜಿಸಿದರು. ಪತಿಯ ಕಷ್ಟದೆಸೆಯಲ್ಲಿ ತಾವೂ ಪಾಲ್ಗೊಳ್ಳುವ ಇವರ ಇಚ್ಛೆ ಪ್ರಭಲವಾಗಿ ಇವರನ್ನು ಆಂದೋಲನಕ್ಕೆ ಪ್ರೇರಣೆಮಾಡಿತು. ಗಂಡಸರು ಬಂಧಿಯಾದಾಗ ಅಥವಾ ಭೂಗತರಾಗಿ ತಲೆ ಮರೆಸಿಕೊಂಡು ಕೆಲಸ ಮಾಡುತ್ತಿದ್ದಾಗ ಮಹಿಳೆಯರ ಪಾತ್ರ ಪ್ರಮುಖವಾಗಿತ್ತು. ಈ ಸಂದರ್ಭದ ಪ್ರೇರಣೆಯಿಂದ ಉತ್ತೇಜಿತರಾದ ಹೆಣ್ಣುಮಕ್ಕಳು ಮಧ್ಯರಾತ್ರಿಯಲ್ಲಿ ಹೊರಟು ಕಾಗದ ಪತ್ರಗಳನ್ನು ತಲುಪಿಸುವ ಕೆಚ್ಚೆದೆಯ ಸಾಹಸವನ್ನೂ ಮಾಡಿದ್ದಾರೆ. ಸೀತಮ್ಮ, ದೇವಕ್ಕೆ ಇವರಂತಹ ಸಮಾಜಸೇವಾಕರ್ತರು ಮಹಾತ್ಮರ ಮಾರ್ಗದರ್ಶನದಲ್ಲಿ ತಮ್ಮ ತಮ್ಮ ಸ್ಥಳದಲ್ಲಿ ಸಮಾಜ ಪ್ರಗತಿಯ ಕೆಲಸವನ್ನು ಕೈಗೊಂಡರು. ಸ್ವಾತಂತ್ರ್ಯ ಧ್ವಜವನ್ನು ಏರಿಸಿ ಕಾರ್ಯ ಪ್ರಾರಂಭ ಮಾಡುತ್ತಿದ್ದುದರಿಂದ ಇವರ ಚಟುವಟಿಕೆಗೂ ಸರ್ಕಾರ ಅಡ್ಡಿ ಬರುತ್ತಿತ್ತು. ಸುಧಾರಣಾ ಮಾರ್ಗವೇ ಹಿತವೆನಿಸಿದ್ದ ಎಂ. ಆರ್. ಲಕ್ಷ್ಮಮ್ಮ, ಜಯಲಕ್ಷ್ಮಮ್ಮ ಇವರುಗಳಿಗೆ ಮಹಿಳಾ ಸಂಘಟನೆಯ ಅಗತ್ಯ ಪ್ರೇರಣೆಯಾಗಿ ಸ್ವಯಂ ಸೇವಿಕೆಯರನ್ನು ತಯಾರು ಮಾಡಿ ಚಳವಳಿಗೆ ಬೆಂಬಲವಾಗಿ ನಿಂತರು.

ಇಡೀ ರಾಷ್ಟ್ರದಲ್ಲಿ ಸಂಚಾರ ಮಾಡಿ ಬ್ರಿಟಿಷರ ಆಳ್ವಿಕೆಯ ಪರಮಾವಧಿಯನ್ನು ಗ್ರಹಿಸಿದ್ದ ಅರುಣಾ, ಕಮಲಾದೇವಿ, ಸುಶೀಲಾ ನಯ್ಯಾರ್, ವಿಜಯಲಕ್ಷ್ಮಿ ಪಂಡಿತ್, ಸರೋಜಿನಿ ನಾಯ್ಡು ಮುಂತಾದವರು ಕಸ್ತೂರಿಬಾ ಅವರ ಆದರ್ಶದಿಂದ ಪ್ರೇರಿತವಾಗಿ ಆಂದೋಲನದ ನಾಯಕಿಯರಾದರು. ಬ್ರಿಟಿಷ್ ಸೈನಿಕನ ಛಾವಟಿಯ ಏಟನ್ನು ತಿಂದ ಸರಸ್ವತಿ ಚಿಕ್ಕ ಹುಡುಗಿಯಿಂದಲೇ ಚಳವಳಿಯ ಛಲ ಹಿಡಿಯಲು ಕಾರಣ ಆಕೆಯ ಚಿಕ್ಕಂದಿನ ಘಟನೆ.

ಖಾದಿ ಪ್ರಸಾರ ಮತ್ತು ಅಸ್ಪೃಶ್ಯತಾ ನಿವಾರಣೆಯಲ್ಲೂ ಮಹಿಳೆಯ ಪಾತ್ರ ಪ್ರಮುಖವಾಗಿತ್ತು ಎಂದು ಮಹಾತ್ಮರು ಅಭಿಪ್ರಾಯಪಟ್ಟಿದ್ದಾರೆ.

ಎಂ. ಬಿ. ಪಾಟೀಲ

# ಕರ್ನಾಟಕದಲ್ಲಿ ಸಹಕಾರಿ ಚಳುವಳಿಯ ಆರಂಭ ಮತ್ತು ಸ್ವರೂಪ

ಸಹಕಾರವು ನಾಗರಿಕ ಜೀವನದ ಆರಂಭದಿಂದಲೂ ವ್ಯಕ್ತಿ ಮತ್ತು ಸಾಮಾಜಿಕ ಜೀವನದ ಒಂದು ಅವಿಭಾಜ್ಯ ಅಂಗವಾಗಿದ್ದು, ಇಂದು ಸಹಕಾರಿ ಸಂಜೀವಿನಿ ಪ್ರವಹಿಸಿದ ಕ್ಷೇತ್ರವೇ ಇಲ್ಲ ಎನ್ನಬಹುದು. ಸಹಕಾರಿ ಆಂದೋಲನವು ನಮ್ಮ ಆರ್ಥಿಕ ವ್ಯವಸ್ಥೆಯೊಂದಿಗೆ ತನ್ನದೇ ಆದ ವಿಶೇಷತೆಯಿಂದ ಬೆರೆತು ಸರಕಾರದ ಪ್ರೋತ್ಸಾಹದಿಂದ ಜನತಾ ಚಳುವಳಿಯಾಗಿ ರೂಪಗೊಂಡು, ಕಾನೂನಿನ ನಿಬಂಧನೆಗಳಿಗೆ ಒಳಪಟ್ಟು ತನ್ನದೇ ಆದ ವೈಶಿಷ್ಟ್ಯಪೂರ್ಣ ಎಂಟು ದಶಕಗಳ ಇತಿಹಾಸವನ್ನು ಭಾರತ-ಕರ್ನಾಟಕದಲ್ಲಿ ಹೊಂದಿದೆ.

**ಸಹಕಾರಿ ತತ್ವದ ಉದಯ :** ಇಂಗ್ಲೆಂಡಿನಲ್ಲಿ ೧೮೪೪ರಲ್ಲಿ 'ರಾಕ್‌ಡೇಲ' ನಗರದ ೨೮ ಜನ ನೇಕಾರರಿಂದ ಬೀಜಾಂಕುರವಾದ ಈ ಚಳುವಳಿ ೧೮೪೯ ಗಲ್ಲಿ ಜರ್ಮನಿಯ ಫ್ರೆಡರಿಕ್ ವಿಲಿಯಂ ರೆಫೀಸನ್ ಅವರಿಂದ ರೂಪಾಂತರ ಹೊಂದಿ (ವ್ಯವಸಾಯ ಸಹಕಾರಿ ಸಂಘಗಳು) ನಂತರ ಯೂರೋಪದ ಇತರ ದೇಶಗಳೊಂದಿಗೆ ಭಾರತಕ್ಕೆ ಹರಡಿದಾಗ ಇಲ್ಲಿಯ ಆರ್ಥಿಕ, ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳು, ಬಹುಸಂಖ್ಯಾಂತರ ಮನೋಭಾವನೆ ಅದನ್ನು ಸ್ವೀಕರಿಸಿ ಬೆಳೆಸಲು ಹದಗೊಂಡಿದ್ದವು. ಇದಕ್ಕೆ ಪೂರಕವಾಗಿ ಸರ್ಕಾರ ನಿಯಮಿಸಿದ್ದ ವಿವಿಧ ಆಯೋಗಗಳು, ಈ ಮೊದಲೇ ಭಾರತದ ಬಡರೈತರ ಸ್ಥಿತಿಗತಿಗಳನ್ನು ಸುಧಾರಿಸಲು ಜಾರಿಯಲ್ಲಿ ತಂದಿದ್ದ ತಕಾವಿ ಸಾಲಗಳ ಕಾನೂನು (೧೮೭೬), ಡೆಕ್ಕನ್ ರೈತರ ಪರಿಹಾರ ಕಾನೂನು (೧೮೭೯), ಭೂ ಸುಧಾರಣಾ ಸಾಲಗಳ ಕಾನೂನು (೧೮೮೩), ರೈತರ ಸಾಲಗಳ ಕಾನೂನು (೧೮೮೪) ಮುಂತಾದವು ಜಾರಿಯಲ್ಲಿ ಇದ್ದರೂ ಅವುಗಳಿಂದ ನಿರೀಕ್ಷಿಸಿದ ಮಟ್ಟದಲ್ಲಿ ಪರಿಸ್ಥಿತಿ ಸುಧಾರಿಸಿರಲಿಲ್ಲ. ಅಂದಿನ ಪರಿಸ್ಥಿತಿಯಲ್ಲಿ ಬಡರೈತರ, ಕಾರ್ಮಿಕರ, ಅಸಂಘಟಿತರ, ಶೋಷಿತ ವರ್ಗಗಳ ಆರ್ಥಿಕ ಮುಗ್ಗಟನ್ನು ನಿವಾರಿಸಲು ಸಹಕಾರಿ ಸಂಸ್ಥೆಗಳು ವರದಾನವಾಗಿ ಪೂರ್ಣ ಮಟ್ಟದಲ್ಲಿ ರೈತರ ಸಂಕಷ್ಟಗಳನ್ನು ದೂರಮಾಡದಿದ್ದರೂ ತಕ್ಕ ಪ್ರಮಾಣದಲ್ಲಿ ಉಪಯೋಗಕಾರಿಯಾದವು. ಈ ದಿಶೆಯಲ್ಲಿ ಭಾರತದ ವಿವಿಧ ಭಾಗಗಳಲ್ಲಿ ರೈತರ ಸ್ಥಿತಿಗತಿಯನ್ನು ಸುಧಾರಿಸಲು ಪ್ರಯತ್ನಗಳು ನಡೆದವು. ಉದಾ: ಮಹಾರಾಷ್ಟ್ರದ ಪುರಂದರೆಯಲ್ಲಿ ನ್ಯಾಯಮೂರ್ತಿ ರಾನಡೆ ಮತ್ತು ವಿಲಿಯಂ ವೇಡರ್‌ಬರ್ನ್ ಅವರಿಂದ ವ್ಯವಸಾಯ ಬ್ಯಾಂಕುಗಳು ಪ್ರಾರಂಭವಾದವು. ಅಂದಿನ ಮಾದರಿ ಮೈಸೂರು ರಾಜ್ಯದಲ್ಲಿ ೧೮೯೪ರಲ್ಲಿ ಚಿಕ್ಕ ಹಿಡುವಳಿದಾರರನ್ನು ಸಂಘಟಿಸಿ ವ್ಯವಸಾಯ ಬ್ಯಾಂಕುಗಳನ್ನು ಸಹಕಾರಿ ತತ್ವದ ಮೇಲೆ ಪ್ರಾರಂಭಿಸಲಾಯಿತು. ಶ್ರೀರಂಗಪಟ್ಟಣ ತಾಲ್ಲೂಕಿನ ಪಲಹಳ್ಳಿಯಲ್ಲಿ ಮೊದಲನೆಯ ಬ್ಯಾಂಕು ಪ್ರಾರಂಭವಾಯಿತು. ಅಂದಿನ ಮೈಸೂರು ರಾಜ್ಯದಲ್ಲಿ ೧೯೦೧ರ ಸುಮಾರಿಗೆ ವಿವಿಧ ಭಾಗಗಳಲ್ಲಿ ಸುಮಾರು ೬೪ ಇಂತಹ ಬ್ಯಾಂಕಿಂಗ್ ಸಂಸ್ಥೆಗಳು ಇದ್ದವು. ಆದರೆ ಮುಂದೆ ೧೯೧೭ರ ಸುಮಾರಿಗೆ ಈ ಸಂಸ್ಥೆಗಳನ್ನು ಸರ್ಕಾರ ಬಹು ವಿಷಾದದಿಂದ ಮುಚ್ಚಿತು. ಇದಕ್ಕೆ ಮುಖ್ಯ ಕಾರಣ, ಈ ಸಂಸ್ಥೆಗಳ ಮೂಲಕ ಕಡಿಮೆ ಬಡ್ಡಿಯಲ್ಲಿ ದೊರೆಯುತ್ತಿದ್ದ

ಸಾಲವನ್ನು ಶ್ರೀಮಂತ ಹಾಗೂ ದೊಡ್ಡ ರೈತರು ಹೆಚ್ಚಿನ ಬಡ್ಡಿಯ ತಮ್ಮ ಲೇವಾದೇವಿ ಕೆಲಸಕ್ಕೆ ಉಪಯೋಗಿಸಿ ಕೊಂಡಿದ್ದು ಮತ್ತು ಸಕಾಲಕ್ಕೆ ಸಾಲ ಮರುಪಾವತಿ ಮಾಡದೇ ಇದ್ದುದು. ಈ ಸಂಸ್ಥೆಗಳು ರಚನೆಯಲ್ಲಿ ಜಾಯಿಂಟ್ ಸ್ಟಾಕ್ ಕಂಪನಿ ತತ್ವಗಳನ್ನು ಆಡಳಿತ ಮತ್ತು ಬಡ್ಡಿ ಆಕರಣೆಯಲ್ಲಿ ಸಹಕಾರಿ ತತ್ವಗಳನ್ನು ಅಳವಡಿಸಿ ಕೊಂಡಿದ್ದವು.

**ಸಹಕಾರಿ ಸಂಸ್ಥೆಗಳ ಉದಯ :** ಅಂದಿನ ಮದ್ರಾಸ್ ಸರ್ಕಾರದ ಪರವಾಗಿ ಫ್ರೆಡಿರಿಕ್ ನಿಕೋಲಸನ್ ಅವರು ಜರ್ಮನಿ ಮತ್ತು ಇತರ ಯೂರೋಪ ದೇಶಗಳಲ್ಲಿ ಕೈಗೊಂಡ ಅಧ್ಯಯನದ ಫಲಶ್ರುತಿಯಾಗಿ, ಭಾರತದಲ್ಲಿ ರೈಫೀಸಿಯನ್ ಮಾದರಿಯ ಸಹಕಾರಿ ಸಂಸ್ಥೆಗಳನ್ನು ಸ್ಥಾಪಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿದ್ದರು. ಆದರೆ ಇಂತಹ ಸಂಸ್ಥೆಗಳನ್ನು ಪ್ರಾರಂಭಿಸಲು ಅಂದಿನ ಕಂಪನಿ ಕಾನೂನು (೧೮೬೦)ಸೂಕ್ತವಲ್ಲದ್ದರಿಂದ ಸಹಕಾರಿ ಸಂಸ್ಥೆಗಳ ರಚನೆಗೆ ಅಗತ್ಯವಾದ ಕಾನೂನನ್ನು ರಚಿಸಲು ೧೯೦೧ರಲ್ಲಿ ಸರ್ ಎಡ್‌ವರ್ಡ ಲಾ ಎಂಬುವರ ಹಿರಿತನದಲ್ಲಿ ಭಾರತದ ಅಂದಿನ ಗೌರ್‍ನರ್ ಲಾರ್ಡ್ ಕರ್ಜನ್ ಒಂದು ಆಯೋಗವನ್ನು ರಚಿಸಿದರು. ಅದರ ಅನ್ವಯ ಭಾರತದಲ್ಲಿ ಮೊದಲನೆಯ ಸಹಕಾರಿ ಕಾನೂನು ೧೯೦೪ರಲ್ಲಿ ಜಾರಿಗೆ ಬಂದಿತು. ಇದು ಕೇಂದ್ರ ಸರ್ಕಾರದ ಕಾನೂನಾಗಿದ್ದರೂ ಆಡಳಿತ ವ್ಯಾಪ್ತಿಯನ್ನು ಪ್ರಾಂತೀಯ ಸರ್ಕಾರಗಳಿಗೂ ವಿಸ್ತರಿಸಲಾಗಿತ್ತು. ಆದರೆ ಈ ಕಾನೂನು ಅಂದು ವಿವಿಧ ಆಡಳಿತಕ್ಕೆ ಒಳಪಟ್ಟಿದ್ದ ಕರ್ನಾಟಕದ ಇಂದಿನ ವಿವಿಧ ಭಾಗಗಳಲ್ಲಿ ಬೇರೆ ಬೇರೆ ಅವಧಿಯಲ್ಲಿ ಕಾರ್ಯರೂಪದಲ್ಲಿ ತರಲಾಯಿತು. ಅಂದಿನ ಮೈಸೂರು ರಾಜ್ಯವು ೧೯೦೫ರಲ್ಲಿ ತನ್ನದೇ ಆದ ಸ್ವತಂತ್ರ ಸಹಕಾರಿ ಸಂಘಗಳ ರೆಗ್ಯೂಲೇಷನ್ ೨ ರಚಿಸಿ ಬಳಕೆಯಲ್ಲಿ ತಂದಿತು. ಇದು ಭಾರತದ ೧೯೦೪ರ ಸಹಕಾರಿ ಕಾನೂನಿಗಿಂತಲೂ ಪ್ರಗತಿಪರವಾಗಿತ್ತು. ಅಲ್ಲದೆ ೧೯೦೫ ಸೆಪ್ಟಂಬರ್‌ನಲ್ಲಿ ರಿಜಿಸ್ಟ್ರಾರ್ ಆಫ್ ಕೋ-ಆಪರೇಟಿವ್ ಸೊಸೈಟೀಸ್ ನಿಯುಕ್ತರಾದರು. ಬೊಂಬಾಯಿ ಮತ್ತು ಕೊಡಗು ಪ್ರದೇಶಗಳಲ್ಲಿ ಇದೇ ಅವಧಿಯಲ್ಲಿ ಸಹಕಾರಿ ಆಂದೋಲನ ಪ್ರಾರಂಭವಾದರೆ, ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ೧೯೧೪ರಲ್ಲಿ ಸಹಕಾರಿ ಕಾನೂನು ರಚನೆ ಆಯಿತು. ಮದ್ರಾಸ್ ಕರ್ನಾಟಕದ ಭಾಗದಲ್ಲೂ ೧೯೦೫ರ ಕಾನೂನಿನ ಅನ್ವಯ ೧೯೦೯ರಲ್ಲಿ ಮಂಗಳೂರಿನಲ್ಲಿ ಮೊದಲನೆಯ ಸಹಕಾರಿ ಸಂಘ ನೋಂದಾಯಿಸಲ್ಪಟ್ಟಿತು. ಲಭ್ಯ ಇರುವ ದಾಖಲೆಗಳ ಅನ್ವಯ, ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನ ಕಣಗಿನಹಾಳದಲ್ಲಿ ೧೯೦೫ ಮೇ ತಿಂಗಳಲ್ಲಿ ಪ್ರಾರಂಭವಾದ ವ್ಯವಸಾಯ ಪತ್ತಿನ ಸಂಘವನ್ನು ಅಂದಿನ ಬೊಂಬಾಯಿ ಪ್ರಾಂತ್ಯದಲ್ಲಿ ಪ್ರಥಮ ಸಹಕಾರಿ ಸಂಸ್ಥೆಯೆಂದು ಪರಿಗಣಿಸಲಾಗಿದೆ. ಅದೇ ವರ್ಷದ ಕೊನೆಯಲ್ಲಿ ಬೆಂಗಳೂರು ಸಿಟಿ ಸೊಸೈಟಿ ಪ್ರಾರಂಭವಾಯಿತು. ಕರ್ನಾಟಕದ ವಿವಿಧ ಭಾಗಗಳಲ್ಲಿ ಬೇರೆ ಬೇರೆ ಸಂಘಗಳು ಮೂಡಿ ಬಂದವು. ಉದಾ : ಬೆಲ್ಲದಬಾಗೇವಾಡಿ (೧೯೦೫). ಚಿಕ್ಕಮಗಳೂರು ಜಿಲ್ಲೆಯ ತರಿಕೆರೆ ತಾಲ್ಲೂಕಿನ ಕೂಡಲೂರುನಲ್ಲಿ ೧೯೦೫ರಲ್ಲಿ ರಚಿತವಾದ ಆದಿಕರ್ನಾಟಕ ಸಹಕಾರ ಸಂಘವು ರಾಜ್ಯದ ಮೊದಲನೆಯ ಹಿಂದುಳಿದವರ ಸಹಕಾರಿ ಸಂಸ್ಥೆ ಎಂದು ಹೇಳಬಹುದು. ಆದರೆ ಇದು ಹೆಚ್ಚು ಕಾಲ ಮುಂದುವರೆಯಲಿಲ್ಲ. ಬೆಂಗಳೂರು ನಗರದ ಪ್ರಮುಖ ಹಳೆಯ ಸಹಕಾರಿ ಸಂಸ್ಥೆಗಳೆಂದರೆ ಬಸವನಗುಡಿ ಗ್ರಾಹಕರ ಸಂಘ (೧೯೦೮) ಮತ್ತು ಮಲ್ಲೇಶ್ವರಂ ಸಹಕಾರಿ ಸಂಘ (೧೯೧೧).

**ಸ್ವದೇಶಿ ಚಳುವಳಿ :** ೧೯೦೫ರ ಸ್ವದೇಶಿ ಆಂದೋಳನವು ಅನೇಕ ಸಾಮಾಜಿಕ ಕಾರ್ಯಕರ್ತರನ್ನು ಸಹಕಾರಿ ರಂಗಕ್ಕೆ ತಂದು ಸಹಕಾರಿ ಆಂದೋಳನವು ಮುನ್ನಡೆಯಲು ಮತ್ತು ಸಹಕಾರಿ ನಾಯಕತ್ವ ಬೆಳೆಯಲು ಸಹಾಯಕವಾಯಿತು. ಸಹಕಾರಿ ಸಂಸ್ಥೆಗಳು ಆರ್ಥಿಕ ರಂಗದ ಒಂದು ಪ್ರಮುಖ ಅಂಗವಾಗಿ ಬೆಳೆಯುವಂತೆ ಅನೇಕ ವಾಣಿಜ್ಯ ಸಂಸ್ಥೆಗಳು ಸಹಕಾರಿ ರಂಗದಲ್ಲಿ ಮೂಡಿ ಬಂದವು.

**ಹೊಣೆಗಾರಿಕೆ :** ಇಂದು ಎಲ್ಲಾ ಸಹಕಾರಿ ಸಂಸ್ಥೆಗಳು ನಿಯಮಿತ ಹೊಣೆಗಾರಿಕೆಯಿಂದ ಕೂಡಿದ್ದರೆ, ಮೊದಲಿಗೆ ಗ್ರಾಮಾಂತರ ಪ್ರದೇಶದ ವ್ಯವಸಾಯ ಸಂಘಗಳು ಅಪರಿಮಿತ ಹೊಣೆಗಾರಿಕೆಯಿಂದ, ನಗರ ಪ್ರದೇಶದ ಸಾಲ ನೀಡುವ ಸಂಘಗಳು (ಅರ್ಬನ್ ಕ್ರೆಡಿಟ್ ಸೊಸೈಟಿ) ಪರಿಮಿತ ಹೊಣೆಗಾರಿಕೆಯಿಂದ ಕೂಡಿದ್ದವು. ಅನಿಯಮಿತ ಹೊಣೆಗಾರಿಕೆ ಕೆಲಮಟ್ಟಿಗೆ ಸಹಕಾರಿ ಸಂಸ್ಥೆಗಳು ವಿಪುಲವಾಗಿ ಬೆಳೆಯಲು ಸಹಾಯಕವಾದರೂ ಅದರೊಂದಿಗೆ,

ದುರ್ಬಲ ಸಂಸ್ಥೆಗಳೂ ಹೆಚ್ಚಾಗಿ ಬೆಳೆದವು ಮತ್ತು ಕೂಡಲೇ ಅವಸಾನ ಹೊಂದಿದವು. ೧೯೧೨ರ ಸಹಕಾರಿ ಕಾನೂನಿನ ನಂತರ ಈ ತಾರತಮ್ಯವನ್ನು ತೆಗೆದು ಹಾಕಲಾಯಿತು. ಎಲ್ಲಾ ಬಗೆಯ ಸಂಸ್ಥೆಗಳು ಮಿತ ಹೊಣೆಗಾರಿಕೆಯಿಂದ ಕೂಡಿದವು. ಇದರಿಂದ ಸಹಕಾರಿ ಸಂಸ್ಥೆಗಳು ಗುಣಮಟ್ಟದಲ್ಲಿ ಅಲ್ಲದಿದ್ದರೂ ಸಂಖ್ಯಾಬಲದಿಂದ ಸಹಕಾರಿ ಚಳುವಳಿ ವೃದ್ಧಿಸಿತು. ೧೯೧೨ರ ಕಾನೂನು ವ್ಯವಸಾಯ ಸಾಲದ ಸಹಕಾರಿಗಳನ್ನು ಪ್ರೋತ್ಸಾಹಿಸುವದಲ್ಲದೇ, ನಗರ ಪ್ರದೇಶಗಳಲ್ಲಿ ಕ್ರೆಡಿಟ್ ಸೊಸೈಟಿ, ಸಾಲ ಹಂಚದ ಇತರೆ ಸೊಸೈಟಿ, ವ್ಯವಸಾಯೇತರ ಇತರೇ ಜನೋಪಯೋಗಿ ಅಂದರೆ ಗೃಹನಿರ್ಮಾಣ, ಹಾಲು ಪೂರೈಕೆ, ನೀರಾವರಿ ಸೌಲಭ್ಯ, ಬ್ಯಾಂಕಿಂಗ್ ಯೂನಿಯನ್ ಸಹಕಾರಿ ಸಂಸ್ಥೆಗಳು ಬೆಳೆಯಲು ಸಹಾಯಕವಾಯಿತು. ಇದರಿಂದ ಸ್ಥಳೀಯ ಜನರು ಪರಿಸರಕ್ಕೆ ಅವಶ್ಯವಿದ್ದ, ಜನಸಾಮಾನ್ಯರ ಸ್ಥಿತಿಗತಿ, ಉದ್ಯೋಗ, ದಂಧೆಗಳು ಸುಧಾರಿಸಲು ಸಹಾಯಕವಾಗುವ ಸಂಸ್ಥೆಗಳನ್ನು ರಚಿಸಿಕೊಂಡರು. ಉದಾ : ಗ್ರಾಹಕರ ಸಂಘ, ಕೈಗಾರಿಕಾ ಸಂಸ್ಥೆಗಳು, ಉತ್ಪಾದಕರ ಸಂಘ, ಕುಶಲ ಕರ್ಮಿಗಳ ಸಂಘ, ನೇಕಾರರ ಸಂಘ, ಗೃಹ ನಿರ್ಮಾಣ, ಮಾರಾಟ ಸಂಸ್ಕರಣ ಮುಂತಾದುವುಗಳು. ೧೯೦೮-೧೨ರ ಅವಧಿಯಲ್ಲಿ ರಾಜ್ಯದ ಪ್ರಮುಖ ನಗರಗಳಲ್ಲಿ ನಗರ ಸಹಕಾರಿ ಬ್ಯಾಂಕುಗಳು (ಅರ್ಬನ್ ಬ್ಯಾಂಕುಗಳು) ಮೂಡಿ ಬಂದವು. ೧೯೦೬ರಲ್ಲಿ ಬೆಳಗಾವಿ, ಮೈಸೂರು, ಹುಬ್ಬಳ್ಳಿ, ಧಾರವಾಡ ಮತ್ತು ಸಿರಾಗಳಲ್ಲಿ ಪ್ರಾರಂಭವಾದವುಗಳು ರಾಜ್ಯದ ಪ್ರಥಮ ಸಹಕಾರಿ ಬ್ಯಾಂಕುಗಳು. ಬೆಂಗಳೂರು (೧೯೦೭), ಕೋಲಾರ (೧೯೦೯), ಮಂಗಳೂರು, ಕುಮಟಾ, ಬಿಜಾಪುರ ಮತ್ತು ಶಿವಮೊಗ್ಗೆಗಳಲ್ಲಿ ೧೯೧೨ರಲ್ಲಿ ನಗರ ಬ್ಯಾಂಕುಗಳು ಪ್ರಾರಂಭವಾದವು. ಈ ಬ್ಯಾಂಕುಗಳಲ್ಲಿ ಬಹುಪಾಲು ಚಳುವಳಿಯ ಪ್ರಾರಂಭದ ವರ್ಷಗಳಲ್ಲಿ 'ಕ್ರೆಡಿಟ್ ಸೊಸೈಟಿ' ಎಂದು ನೋಂದಾಯಿಸಲ್ಪಟ್ಟು ಹಲವಾರು ವರ್ಷಗಳ ನಂತರ 'ಅರ್ಬನ್ ಬ್ಯಾಂಕುಗಳು' ಎಂದು ರಚನೆಗೊಂಡವುಗಳು ಆಗಿರುತ್ತವೆ.

**ಫೆಡರಲ್ ಬ್ಯಾಂಕಿಂಗ್ ಯೂನಿಯನ್ಸ್:** ೧೯೧೨-೧೩ರ ಅವಧಿಯಲ್ಲಿ ಮೈಸೂರು ಪ್ರದೇಶದಲ್ಲಿ ಒಂದು ಅಥವಾ ಎರಡು ತಾಲ್ಲೂಕುಗಳಿಗೆ ಅನ್ವಯವಾಗುವಂತೆ ಚಿಕ್ಕ ಚಿಕ್ಕ ಬ್ಯಾಂಕಿಂಗ್ ಸಂಸ್ಥೆಗಳು (ಫೆಡರಲ್ ಬ್ಯಾಂಕಿಂಗ್ ಯೂನಿಯನ್ಸ್) ಪ್ರಾರಂಭಿಸಲ್ಪಟ್ಟವು. ಇವುಗಳ ಮೂಲ ಉದ್ದೇಶ, ತಾಲ್ಲೂಕಿನಲ್ಲಿದ್ದು ಸಹಕಾರಿ ಸಂಸ್ಥೆಗಳಿಗೆ ಹಣ ಕಾಸಿನ ನೆರವು ನೀಡುವುದಲ್ಲದೇ ಅವುಗಳ ಮೇಲ್ವಿಚಾರಣೆ ಸಹ ಆಗಿತ್ತು. ಮುಂದೆ ಈ ಸಂಸ್ಥೆಗಳು ಸರಿಯಾಗಿ ಕೆಲಸ ಮಾಡದ್ದರಿಂದ ೧೯೨೧ರ ಸುಮಾರಿಗೆ ಇವುಗಳನ್ನು ವಿಲೀನಗೊಳಿಸಿ ಜಿಲ್ಲಾ ಸಹಕಾರಿ ಬ್ಯಾಂಕುಗಳು ಸ್ಥಾಪಿಸಲ್ಪಟ್ಟವು. ಆದರೆ ಸಹಕಾರಿ ಸಂಘಗಳಿಗೆ ಉತ್ತಮ ಚಾಲನೆ ನೀಡಲು ೧೯೧೫ರಲ್ಲಿ ಮೈಸೂರು ಪ್ರಾಂತೀಯ ಸಹಕಾರಿ ಅಪೆಕ್ಸ್ ಬ್ಯಾಂಕ್ (ಇಂದಿನ ಅಪೆಕ್ಸ್ ಬ್ಯಾಂಕ್) ಪ್ರಾರಂಭಿಸಲ್ಪಟ್ಟಿತು.

೧೯೧೪ರ ನಂತರ ಅಂದರೆ ೧೯೧೫ರಲ್ಲಿ ಹೈದರಾಬಾದಿನಲ್ಲಿ ಸೆಂಟ್ರಲ್ ಸಹಕಾರಿ ಬ್ಯಾಂಕನ್ನು ಪ್ರಾರಂಭಿಸಿದ ನಂತರ ಹೈದರಬಾದ್‌ಪ್ರದೇಶದಲ್ಲಿ ಸಹಕಾರಿ ಚಳುವಳಿಯ ವೇಗದಿಂದ ಮುಂದುವರೆಯಿತು. ನಂತರ ೧೯೩೮ರ ಸುಮಾರಿಗೆ ಖಾಸಗಿ ಲೇವಾದೇವಿಗಾರರ ಪ್ರಭಾವ ತಗ್ಗಿಸಲು ಗ್ರಾಮೀಣ ಬ್ಯಾಂಕುಗಳು ಪ್ರಾರಂಭಿಸಲ್ಪಟ್ಟವು. ಆದರೆ ಪ್ರಾರಂಭದಲ್ಲಿ ಬೊಂಬಾಯಿಯಲ್ಲಿ, ಇದಕ್ಕೂ ಮೊದಲೇ ೧೯೧೬ರಲ್ಲಿ ಧಾರವಾಡದಲ್ಲಿ, ೧೯೧೮ರಲ್ಲಿ ಬೆಳಗಾವಿಯಲ್ಲಿ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳನ್ನು ಪ್ರಾರಂಭಿಸಲಾಯಿತು. ಭರದಿಂದ ಬೆಳೆಯುತ್ತಿದ್ದ ಸಹಕಾರಿ ಸಂಘಗಳ ಗುಣಮಟ್ಟ ಏರಿಸಲು, ಅವು ದೀರ್ಘಕಾಲ ಬಾಳುವಂತಾಗಲು, ಆರ್ಥಿಕ ಸ್ಥಿರತೆ ಹೊಂದಲು ೧೯೧೪-೧೫ರಲ್ಲಿ ಮೆಕ್ಲೆಗನ್ ಸಮಿತಿಯು ಮೂರು ಹಂತದ ಸಂಸ್ಥೆಗಳನ್ನು ಸೂಚಿಸಿತು: ಪ್ರಾಥಮಿಕ, ಜಿಲ್ಲಾಮಟ್ಟದಲ್ಲಿ ಮತ್ತು ರಾಜ್ಯಮಟ್ಟದಲ್ಲಿ ಅಪೆಕ್ಸ್ ಸಂಸ್ಥೆಗಳು.

**ಹೊಸ ತಿರುವು :** ೧೯೧೯ರ ಸುಮಾರಿಗೆ ಬ್ರಿಟಿಷ್ ಆಡಳಿತ ಪ್ರಾಂತ್ಯಗಳಲ್ಲಿ ಸಹಕಾರಿ ಚಳುವಳಿಗೆ ಹೊಸ ತಿರುವು ಮೂಡಿತು. ಅದುವರೆಗೆ ಕೇಂದ್ರದ ಪಟ್ಟಿಯಲ್ಲಿ ಇದ್ದ ಸಹಕಾರಿ ಕಾನೂನು ನೀತಿ ನಿರೂಪಣೆ ಸಂಪೂರ್ಣವಾಗಿ ಪ್ರಾಂತೀಯ ಸರ್ಕಾರಗಳ ಪಟ್ಟಿಗೆ ಸೇರಿಸಲ್ಪಟ್ಟು, ಪ್ರಾಂತ್ಯಗಳಲ್ಲಿ ಸಹಕಾರಕ್ಕೆ ಪ್ರತ್ಯೇಕವಾದ ಮಂತ್ರಿ ಖಾತೆಯನ್ನು ಹೊಂದುವಂತಾಗಿ ಚಳುವಳಿಯು ಹೊಸ

ಆಯಾಮುವನ್ನು ಪಡೆಯಿತು. ರಾಜ್ಯ ಸರ್ಕಾರಗಳು ತಮ್ಮದೇ ಆದ ಸಹಕಾರಿ ಕಾನೂನುಗಳನ್ನು ರಚಿಸಿ ಕೊಂಡವು. ಉದಾ : ಮುಂಬಯಿ (೧೯೨೫), ಮೈಸೂರು (೧೯೨೮), ಮದ್ರಾಸ್ (೧೯೩೨) ಮತ್ತು ಕೂರ್ಗ (೧೯೩೬) ಇದರ ಅನ್ವಯ ಬೊಂಬಾಯಿ ಪ್ರಾಂತ್ಯದಲ್ಲಿ ಸ್ಥಳೀಯ ಅವಶ್ಯಕತೆಗಳನ್ನು ಪೂರೈಸಲು ಹೊಸ ಬಗೆಯ ಸಂಘಗಳು ಅಂದರೆ ಪಶುಸಂಗೋಪನೆ(೧೯೧೮)–ಸದಲಗಾ, ಕುಕ್ಕುಟ (೧೯೨೮)–ಬೆಳಗಾವಿ, ತಾಲ್ಲೂಕು ಅಭಿವೃದ್ಧಿ ಸಂಘಗಳು (೧೯೨೦)–ಅಥಣಿ ರಚಿಸಲ್ಪಟ್ಟವು. ಉತ್ತರಕನ್ನಡ ಜಿಲ್ಲೆಯಲ್ಲಿ ಬೆಳೆಗಳನ್ನು ಕಾಡುಮೃಗ ಗಳಿಂದ, ಕೋತಿಗಳಿಂದ ರಕ್ಷಿಸಲು ಬೆಳೆ ರಕ್ಷಣಾ ಸಂಘ, ಗದ್ದೆಗಳಿಗೆ ಬೇಲಿ ಹಾಕುವ ಸಂಘ, ಒಡ್ಡು ಹಾಕುವ ಸಂಘ ಮುಂತಾದವು ರಚನೆಗೊಂಡವು. ಸಿರಸಿ ತಾಲ್ಲೂಕಿನ ಪುಟ್ಟನಮನೆಯಲ್ಲಿ ಬೆಳೆ ರಕ್ಷಣಾ ಸಂಘ ಹಾಗೂ ಹುನಗುಂದ (ಮುಂಡಗೋಡ) ಬೇಲಿ ಸಂಘ ರಚನೆಗೊಂಡವು. ಈ ಸಂಘಗಳಿಗೆ ಜಿಲ್ಲಾ ಬೋರ್ಡುಗಳು ಅವುಗಳುಕೊಂದ ಪ್ರಾಣಿಗಳ ಬಾಲದ ಆಧಾರದ ಮೇಲೆ (ಬಾಲಕ್ಕೆ ಒಂದು ರೂಪಾಯಿಯಂತೆ) ಸಹಾಯಧನ ನೀಡುತ್ತಿದ್ದವು. ಕಾರವಾರದಲ್ಲಿ ೧೯೧೫ರ ಸುಮಾರಿಗೆ ಮೊದಲನೆಯ ಮೀನುಗಾರರ ಸಂಘ ರಚನೆ ಆಯಿತು. ೧೯೧೩ರ ಸುಮಾರಿಗೆ ಸಿರಸಿಯಲ್ಲಿ ತೋಟದ ಬೆಳೆಗಾರರು ಮಾರಾಟ ಸಂಘ ರಚಿಸಿ ಕೊಂಡರು. ತಾಲ್ಲೂಕು ಅಭಿವೃದ್ಧಿ ಸಂಘಗಳು ೧೯೨೦–೩೦ರ ಅವಧಿಯಲ್ಲಿ ರಚನೆಗೊಂಡು, ಅವುಗಳ ಮುಖ್ಯ ಉದ್ದೇಶ ಹೆಚ್ಚು ಆಹಾರ ಬೆಳೆಯಿರಿ ಎಂದು ಪ್ರಚಾರ ಮಾಡುವುದೇ ಆಗಿತ್ತು.

**ದೀರ್ಘಾವಧಿ ಸಾಲ :** ೧೯೨೬ರಲ್ಲಿ ಬೊಂಬಾಯಿಯಲ್ಲಿ ಜರುಗಿದ ಸಹಕಾರಿ ಸಂಘಗಳ ರಿಜಿಸ್ಟ್ರಾರುಗಳ ಸಮ್ಮೇಳನದಲ್ಲಿ ಮೊದಲಿಗೆ ರೈತರಿಗೆ ವ್ಯವಸಾಯ ಅಭಿವೃದ್ಧಿಗೆ ಪೂರಕವಾಗಲು ದೀರ್ಘಾವಧಿ ಅವಧಿಯ ಸಾಲದ ಮಹತ್ವವನ್ನು ಕುರಿತಂತೆ ಚರ್ಚಿಸಿ ಒಂದು ನಿರ್ಣಯ ಕೈಗೊಳ್ಳಲಾಯಿತು. ಅದರ ಅನ್ವಯ ೧೯೨೬ರಲ್ಲಿ ಬೊಂಬಾಯಿ ಕರ್ನಾಟಕ ಭಾಗದಲ್ಲಿ ಧಾರವಾಡದಲ್ಲಿ ಮೊದಲಿಗೆ ಜಮೀನು ಅಡಮಾನ ಬ್ಯಾಂಕನ್ನು ಪ್ರಾರಂಭಿಸಲಾಯಿತು. ಮುಂದೆ ೧೯೫೪ರಲ್ಲಿ ಇವುಗಳನ್ನು ಜಮೀನು ಅಭಿವೃದ್ಧಿ ಬ್ಯಾಂಕ್ ಎಂದು ಕರೆದರೆ, ೧೯೮೫ ರಿಂದ ಇವುಗಳನ್ನು ವ್ಯವಸಾಯ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಎಂದು ಕರೆಯಲಾಗುತ್ತಿದೆ. ಇವುಗಳು ಹಳೇ ಮೈಸೂರು ಭಾಗದಲ್ಲಿ ಮೊದಲಿಗೆ ಮಲೆನಾಡಿನ ಜಿಲ್ಲೆಗಳಲ್ಲಿ ಅಂದರೆ ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಯ ಕೊಪ್ಪ, ತೀರ್ಥಹಳ್ಳಿ, ಸಾಗರ ತಾಲ್ಲೂಕುಗಳಲ್ಲಿ ೧೯೨೯–೩೦ರ ಅವಧಿಯಲ್ಲಿ ಪ್ರಾರಂಭವಾದವು. ಇವುಗಳಿಗೆ ಹಣಕಾಸು ಒದಗಿಸುವ ಕೇಂದ್ರೀಯ ಜಮೀನು ಅಭಿವೃದ್ಧಿ ಬ್ಯಾಂಕು ೧೯೨೯ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭವಾಯಿತು.

**ವಿವಿಧ ಉದ್ದೇಶ ಸಂಘಗಳು :** ೧೯೨೯–೩೦ರ ಜಾಗತಿಕ ಆರ್ಥಿಕ ಮುಗ್ಗಟ್ಟಿನ ಅವಧಿಯಲ್ಲಿ ವ್ಯವಸಾಯ ಮತ್ತು ಇತರೆ ಸಹಕಾರಿ ಸಂಘಗಳ ಒಟ್ಟಾರೆ ಬೆಳವಣಿಗೆ ಕುಂಠಿತವಾಗಿತ್ತು. ಪರಿಸ್ಥಿತಿಯನ್ನು ಸುಧಾರಿಸಲು ಹಲವಾರು ಸಮಿತಿಗಳನ್ನು ರಚಿಸಲಾಯಿತು. ಉದಾ : ಮೈಸೂರು (ಚಂದ್ರಶೇಖರ ಅಯ್ಯರ ಸಮಿತಿ), ಮುಂಬಯಿ (ಮೆಹತಾ ಸಮಿತಿ), ಮದ್ರಾಸ್ (ರಾಘವಾಚಾರಿ ಸಮಿತಿ). ಎರಡನೆಯ ಮಹಾಯುದ್ಧದ ಕಾಲದಲ್ಲಿ ಏರಿಕೆಯಲ್ಲಿದ್ದ ವ್ಯವಸಾಯ ಉತ್ಪನ್ನಗಳ ಬೆಲೆಗಳು ಸಹಕಾರಿ ಸಂಘಗಳ ಆರ್ಥಿಕಚೇತರಿಕೆಗೆ ಸಹಾಯವಾದವು. ಸುಸ್ತಿ ಉಳಿದ ಅನೇಕ ಹರ್ಷಗಳ ಸಾಲ ಬಾಕಿ ವಸೂಲಾಯಿತು. ಅನೇಕ ವ್ಯವಸಾಯ ಸಾಲ ಸಂಘಗಳು ತಮ್ಮ ಕಾರ್ಯ ಚಟುವಟಿಕೆಗಳನ್ನು ಮಾರಾಟ ಸಂಸ್ಕರಣ ಮುಂತಾದ ಚಟುವಟಿಕೆಗಳಿಗೂ ವಿಸ್ತರಿಸಿದವು. ಉತ್ತರ ಕನ್ನಡ ಜಿಲ್ಲೆಯಲ್ಲಿ, ಅದರಲ್ಲಿಯೂ ವಿಶೇಷವಾಗಿ ಸಿರ್ಸಿ ಅರ್ಬನ್ ಬ್ಯಾಂಕು ತಾನು ರೈತರಿಂದ ಸುಸ್ತಿ ಸಾಲಕ್ಕೆ ಪ್ರತಿಯಾಗಿ ಖರೀದಿಸಿದ ಉತ್ತಮ ಜಮೀನುಗಳನ್ನು ಪುನಃ ಹಿಂದಿನ ಕೊಂಡ ಬೆಲೆಗೆ ವರ್ಗಾಯಿಸುವ ಮೂಲಕ ರೈತರ ಪ್ರೀತಿ ವಿಶ್ವಾಸಕ್ಕೆ ಪಾತ್ರವಾಯಿತು. ಇದೇ ಕಾಲದಲ್ಲಿ (೧೯೩೯) ಮಲೆನಾಡಿನ ಮುಖ್ಯ ಬೆಳೆಗಳಲ್ಲಿ ಒಂದಾದ ಅಡಿಕೆಯ ಮಾರಾಟಕ್ಕೆ (ಶಿವಮೊಗ್ಗ ಮತ್ತು ಚಿಕ್ಕಮಗಳೂರು) ಶಿವಮೊಗ್ಗೆಯಲ್ಲಿ (ಮಾಮಕೋ) ಪ್ರಾರಂಭಿಸಲ್ಪಟ್ಟಿತು. ಇದಕ್ಕೂ ಮೊದಲೇ ಉತ್ತರಕನ್ನಡದ ಸಿರ್ಸಿಯಲ್ಲಿ ತೋಟದ ಬೆಳೆಗಾರರ ಸಂಘವು ೧೯೧೩ರಲ್ಲಿ ಪ್ರಾರಂಭವಾಗಿತ್ತು.

**ಹಿಂದುಳಿದವರ ಮತ್ತು ದುರ್ಬಲರ ಸಂಘಗಳು :** ೧೯೩೩ರಲ್ಲಿ ಮದ್ರಾಸ್ ಕರ್ನಾಟಕದಲ್ಲಿ ಕಾರ್ಮಿಕ

ಇಲಾಖೆಯು ಹಿಂದುಳಿದವರ ಮತ್ತು ದುರ್ಬಲರ ಸಹಾಯಕ್ಕೆ ಅವರದೇ ಆದ ಸಹಕಾರಿ ಸಂಘಗಳನ್ನು ತೆರೆಯಲು ಮುಂದೆ ಬಂದಿತು. ೧೯೨೬ರಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಅಂತಹ ೮೦ ಸಂಘಗಳು ಕೆಲಸ ಮಾಡುತ್ತಿದ್ದವು.

**ಬ್ಯಾಂಕೇತರ ಚಟುವಟಿಕೆಗಳು :** ಬೊಂಬಾಯಿ–ಕರ್ನಾಟಕದಲ್ಲಿ ಅನೇಕ ಜಿಲ್ಲಾಮಟ್ಟದ ಮತ್ತು ತಾಲ್ಲೂಕು ಮಟ್ಟದ ಸಹಕಾರಿ ಸಂಸ್ಥೆಗಳು, ನಗರ–ಪಟ್ಟಣ ಸಹಕಾರಿ ಬ್ಯಾಂಕುಗಳು ಎರಡನೆಯ ಯುದ್ಧದ ಕಾಲದಲ್ಲಿ ಮತ್ತು ಅದರ ನಂತರದ ಅವಧಿಯಲ್ಲಿ ಸರ್ಕಾರದ ಆದೇಶದಂತೆ ಜೀವನಾವಶ್ಯಕ ವಸ್ತುಗಳನ್ನು ನ್ಯಾಯಬೆಲೆಗೆ ವಿತರಿಸುವ ಕಾರ್ಯದಲ್ಲಿಯೂ ಮಗ್ನವಾಗಿದ್ದವು. ಇದು ೧೯೪೯ರ ಬ್ಯಾಂಕಿಂಗ್ ಕಂಪನಿ ನಿಯಂತ್ರಣ ಅಧಿನಿಯಮ ೧೯೬೬ರಲ್ಲಿ ಸಹಕಾರಿ ಬ್ಯಾಂಕುಗಳಿಗೆ ಅನ್ವಯಿಸುವವರೆಗೂ ಜಾರಿಗೆ ಬರುವವರೆಗೂ ಮುಂದುವರೆದಿತ್ತು. ಅದರಂತೆ ರೈತರಿಗೆ ಸಹಾಯಕವಾಗಲು ಇದೇ ಅವಧಿಯಲ್ಲಿ ಬೊಂಬಾಯಿ ಮತ್ತು ಹೈದರಾಬಾದ್ ಪ್ರದೇಶಗಳಲ್ಲಿ 'ಗ್ರೇನ್ ಬ್ಯಾಂಕ್' ಎಂಬ ಸಂಸ್ಥೆಗಳು ಪ್ರಾರಂಭಿಸಲ್ಪಟ್ಟವು. ಈ ಸಂಸ್ಥೆಗಳು ಹಣಕ್ಕೆ ಬದಲಾಗಿ ಧಾನ್ಯಗಳನ್ನು ಠೇವಣಿರೂಪದಲ್ಲಿ ಸಂಗ್ರಹಿಸಿ ಅವುಗಳನ್ನು ಅವಶ್ಯ ಇದ್ದವರಿಗೆ ಮಾರುತ್ತಿದ್ದವು. ರೈತರಿಗೆ ಬಿತ್ತನೆಗೆ ಉತ್ತಮ ಬೀಜಗಳನ್ನು ಒದಗಿಸುತ್ತಿದ್ದವು. ೧೯೪೮ರಲ್ಲಿ ಬೆಳಗಾವಿ ಜಿಲ್ಲೆಯ ಖಾನಾಪುರದಲ್ಲಿ ದೀಪ ಮತ್ತು ನೀರಾವರಿಗೆ ವಿದ್ಯುತ್ ಉತ್ಪಾದಿಸಿ ಅದನ್ನು ವಿತರಿಸಲು ಸಹಾಯಕವಾಗುವಂತೆ ಸಹಕಾರಿ ರಂಗದಲ್ಲಿ ಒಂದು ಸಂಘ ರಚನೆಯಾಗಿತ್ತು. ಅದು ೧೯೬೪ರಲ್ಲಿ ವಿಸರ್ಜನೆಯಾಯಿತು.

ನೂತನ ರಾಜ್ಯ ರಚನೆಗೆ ಮುಂಚೆ ವಿವಿಧ ಕನ್ನಡ ಪ್ರದೇಶಗಳಲ್ಲಿ ಆಯಾ ರಾಜ್ಯದ ಸಹಕಾರಿ ಕಾನೂನು ಜಾರಿಯಲ್ಲಿ ಇದ್ದವು. ಒಂದೊಂದು ಪ್ರದೇಶದಲ್ಲಿ ಒಂದೊಂದು ಬಗೆಯ ಸಹಕಾರಿ ಸಂಘಗಳು ಮುಂದುವರೆದಿದ್ದವು. ಹಳೇ ಮೈಸೂರಿನಲ್ಲಿ ಜಮೀನು ಅಡಮಾನ ಬ್ಯಾಂಕುಗಳು ಮತ್ತು ವಿವಿದೋದ್ದೇಶ ಸಂಘಗಳು ಬೆಳೆದಿದ್ದರೆ, ಮುಂಬಯಿ, ಮದ್ರಾಸ್, ಕೊಡಗುಗಳಲ್ಲಿ ವ್ಯವಸಾಯ ಸಾಲ ಸಂಘಗಳು, ಅರ್ಬನ್ ಬ್ಯಾಂಕುಗಳು, ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು ಬೆಳೆದಿದ್ದವು. ಹೈದರಾಬಾದ್–ಕರ್ನಾಟಕದಲ್ಲಿ ಧಾನ್ಯದ ಬ್ಯಾಂಕುಗಳು ಬಹಳ ಪ್ರಗತಿ ಸಾಧಿಸಿದ್ದವು.

**ಬೃಹತ್ ಪ್ರಮಾಣದ ಕೈಗಾರಿಕೆಗಳು :** ಸ್ವಾತಂತ್ರ್ಯ ನಂತರದ ದಶಕಗಳಲ್ಲಿ, ಅದರಲ್ಲಿಯೂ ರಾಜ್ಯ ಪುನರ್ ಸಂಘಟನೆಯ ನಂತರ ವಿಪುಲ ಹಣಕಾಸು ಬೇಕಾಗುವ ಕೈಗಾರಿಕೆಗಳಾದ ಸಕ್ಕರೆ ಕೈಗಾರಿಕೆ, ಹತ್ತಿಬಟ್ಟೆ, ನೂಲು, ಆಹಾರ ವಸ್ತುಗಳ ಸಂಸ್ಕರಣ, ಹೆಂಚು ತಯಾರಿಕೆ ಮುಂತಾದ ಕೈಗಾರಿಕೆಗಳು ಸಹಕಾರಿ ವಲಯದಲ್ಲಿ ಮೂಡಿ ಬಂದವು.

೧೯೩೩ರಲ್ಲಿ ಮಂಡ್ಯದಲ್ಲಿ ಪ್ರಾರಂಭವಾದ ಸಕ್ಕರೆ ಕಾರಖಾನೆ ನಮ್ಮ ರಾಜ್ಯದಲ್ಲಿ ಮೊದಲನೆಯದು. ಮುಂದಿನ ವರ್ಷ (೧೯೩೪) ಹೊಸಪೇಟೆಯಲ್ಲಿ ಮತ್ತೊಂದು ಕಾರಖಾನೆ ಪ್ರಾರಂಭವಾಯಿತು. ಆದರೆ ಸಹಕಾರಿ ವಲಯದಲ್ಲಿ ಪ್ರಾರಂಭವಾದ ಮೊದಲನೆಯ ಸಕ್ಕರೆ ಕಾರಖಾನೆ ಸಂಕೇಶ್ವರದ ಹಿರಣ್ಯಕೇಶಿ (೧೯೫೬), ನಂತರ ಕಂಪಲಿ (೧೯೫೮). ಇಂದು ಸಂಕೇಶ್ವರದ ಕಾರಖಾನೆಯು ಭಾರತದಲ್ಲಿಯೇ ರೈತರಿಗೆ ಕಬ್ಬಿಗೆ ಅತಿ ಹೆಚ್ಚಿನ ಬೆಲೆಯನ್ನು ಕೊಡುವ ಕೈಗಾರಿಕೆ ಎಂದು ಪ್ರಸಿದ್ಧವಾಗಿದೆ.

**ಗೃಹ ನಿರ್ಮಾಣ :** ರಾಜ್ಯದಲ್ಲಿಯೇ ೧೯೦೯ರಲ್ಲಿ ಮೊದಲಿಗೆ ಗೃಹನಿರ್ಮಾಣ ಸಹಕಾರಿ ಸಂಘ ಪಡೆದ ನಗರದ ಕೀರ್ತಿ ಬೆಂಗಳೂರಿನದಾಗಿದೆ. ೧೯೫೦ರಷ್ಟು ಹಿಂದೆಯೇ ಅಂದಿನ ಮೈಸೂರು ಸಂಸ್ಥಾನದಲ್ಲಿ ವಸತಿ ಸಹಕಾರ ಸಂಘಗಳ ಕೇಂದ್ರ ಒಕ್ಕೂಟ ಸಂಸ್ಥೆಯಾಗಿ ಹೌಸಿಂಗ್ ಕಾರ್ಪೊರೇಷನ್ ರಚಿಸಿಕೊಂಡವು.

**ಕರ್ನಾಟಕದ ಹಿರಿಮೆ :** ಇಂದು ಭಾರತದಲ್ಲಿ ಸಹಕಾರಿ ಚಳುವಳಿಯು ಆಳವಾಗಿ ಮತ್ತು ವಿಸ್ತಾರವಾಗಿ ಬೇರೂರಿದ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ನಮ್ಮಲ್ಲಿ ಸುಮಾರು ೩೮ ವಿವಿಧ ಬಗೆಯ ಸಹಕಾರಿ ಸಂಸ್ಥೆಗಳು, ೨೦ಕ್ಕಿಂತ ಹೆಚ್ಚು ರಾಜ್ಯಮಟ್ಟದ ಸಹಕಾರಿ ಒಕ್ಕೂಟಗಳು, ಕರ್ನಾಟಕವಲ್ಲದೆ ನೆರೆಯ ರಾಜ್ಯಗಳಿಗೂ ಕಾರ್ಯವ್ಯಾಪ್ತಿಯನ್ನು ಹೊಂದಿದ ಎರಡು ಮಲ್ಟಿ ಯುನಿಟ್‌ಗಳು ಹಿರಣ್ಯಕೇಶಿ ಮತ್ತು CAMPCO (೧೯೭೩) ಇರುವವು. ಒಟ್ಟು ಸಹಕಾರಿ ಸಂಘಗಳ ಸಂಖ್ಯೆ ೨೩,೨೦೦, ಸದಸ್ಯರ ಸಂಖ್ಯೆ ೯೭ ಲಕ್ಷ, ತೊಡಗಿಸಿದ ಷೇರು ಹಣ ಸುಮಾರು ೨೦೦ ಕೋಟಿ. ಅದರಲ್ಲಿ ಸರ್ಕಾರದ ಹಣ ಸುಮಾರು ೭೫ಕೋಟಿ ಆದರೆ ಗಾತ್ರದಲ್ಲಿ ಬೆಳೆದಷ್ಟು ಗುಣಮಟ್ಟದಲ್ಲಿ ಸಹಕಾರಿ

ವ್ಯವಸ್ಥೆಯು ಬೆಳೆದಿಲ್ಲ ಎಂಬ ಕೊರಗು ಮೊದಲಿನಿಂದಲೂ ಉಂಟು. ಅದಕ್ಕೆ ತನ್ನದೇ ಆದ ಬಹು ಕಾರಣಗಳು ಉಂಟು.

ಕರ್ನಾಟಕವು ಪ್ರಾರಂಭದಿಂದಲೂ ಸಹಕಾರಿ ಚಳುವಳಿಯಲ್ಲಿ ದೇಶದಲ್ಲಿ ತನ್ನದೇ ಆದ ಹಲವು ವೈಶಿಷ್ಟ್ಯಗಳನ್ನು ಹೊಂದಿದೆ. ದೇಶದಲ್ಲಿಯೇ ಮೊದಲನೆಯದಾದ 'ರೈತರ ಸೇವಾ ಸಹಕಾರಿ ಸಂಘ' ಎಂಬ ಹೊಸ ಬಗೆಯ ಸಂಸ್ಥೆಗಳು ೧೯೭೩ರಲ್ಲಿ ಮೊದಲು ಪ್ರಾರಂಭವಾದದ್ದು ಬೆಂಗಳೂರು ಜಿಲ್ಲೆಯ ಬಿಡದಿಯಲ್ಲಿ. ನಗರ ಸಹಕಾರಿ ಬ್ಯಾಂಕುಗಳಲ್ಲಿ ಕರ್ನಾಟಕದ ಸ್ಥಾನ ಮೂರನೆಯದು. ನಮ್ಮ ರಾಜ್ಯದಲ್ಲಿ ೧೯೮೫ರಲ್ಲಿ ಇದ್ದ ನಗರ ಸಹಕಾರಿ ಬ್ಯಾಂಕುಗಳ ಸಂಖ್ಯೆ ೨೪೧. ಅಲ್ಲದೇ ಸುಮಾರು ೧೫೧೮ ರಷ್ಟು ನೌಕರರ ಸಾಲ ಸಹಕಾರಿ ಸಂಘಗಳಿವೆ. ದೇಶದಲ್ಲಿಯೇ ನಗರ ಸಹಕಾರಿ ಬ್ಯಾಂಕುಗಳ ಮಹಾಮಂಡಳ ಮೊದಲು ರಚನೆಯಾದದ್ದು ಕರ್ನಾಟಕದಲ್ಲಿ (೧೯೬೫ ರಲ್ಲಿ ದಾವಣಗೆರೆಯಲ್ಲಿ. ಸದ್ಯ ಬೆಂಗಳೂರಿನಲ್ಲಿ ಇರುವದು) ದೇಶದಲ್ಲಿಯೇ ಮೊದಲನೆಯ ಸಹಕಾರಿ ಪಲಂಯುದ ಆಸ್ಪತ್ರೆಯು (ಹುಬ್ಬಳ್ಳಿಯ ಸಹಕಾರಿ ಆಸ್ಪತ್ರೆಯು) ಪ್ರಾರಂಭವಾದದ್ದು ೧೯೧೬ರಲ್ಲಿ. ಅದರಂತೆ ಮೊದಲನೆಯ ಹತ್ತಿ ಮಾರಾಟ ಸಹಕಾರಿ ಸಂಘ ೧೯೧೫ ರಲ್ಲಿ ಹುಬ್ಬಳ್ಳಿಯಲ್ಲಿಯೇ ಪ್ರಾರಂಭವಾಯಿತು. ಸಂಕೇಶ್ವರ ಸಹಕಾರಿ ಸಕ್ಕರೆ ಕಾರಖಾನೆಯು ದೇಶದಲ್ಲಿಯೇ ಅತ್ಯುತ್ತಮ ಸಹಕಾರಿ ಎಂದು ಪ್ರಸಿದ್ಧವಾಗಿದೆ. ಹುಕ್ಕೇರಿ ತಾಲ್ಲೂಕು ಗ್ರಾಮೀಣ ವಿದ್ಯುತ್ ಸಹಕಾರಿ ಸಂಘ (೧೯೬೯) ದೇಶದ ಹಲವು ಇಂತಹ ಸಂಘಗಳಲ್ಲಿ ಒಂದಾಗಿದೆ. ಇಂದು ಕರ್ನಾಟಕ ಸಹಕಾರಿ ಚಳುವಳಿಯು ದೇಶದಲ್ಲಿ ಐದನೆಯ ಸ್ಥಾನದಲ್ಲಿ ನಿಂತಿರುವದು.

## ಗ್ರಂಥ ಋಣ


1. ಡೈರೆಕ್ಟರಿ ಆಫ್ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್—೧೯೮೫, ಬೆಂಗಳೂರು
2. ಕರ್ನಾಟಕ ಸಹಕಾರಿ ಕೈಪಿಡಿ, ಭಾರತಿ ಪ್ರಕಾಶನ, ಬೆಂಗಳೂರು, ೧೯೭೨
3. ಮೂರನೆಯ ಕರ್ನಾಟಕ ರಾಜ್ಯ ಸಹಕಾರಿ ಸಮ್ಮೇಳನ (ಸ್ಮರಣ ಸಂಚಿಕೆ), ಸಹಕಾರಿ ಯೂನಿಯನ್, ಬೆಂಗಳೂರು, ೧೯೭೯
4. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ಒಂದು, ಬೆಂಗಳೂರು, ೧೯೮೨
5. ಬೊಂಬಾಯಿ ಸರ್ಕಾರದ ಸಹಕಾರಿ ಸಂಘಗಳ ವಾರ್ಷಿಕ ಆಡಳಿತ ವರದಿ, ಪೂನಾ, ೧೯೫೬
6. ಸ್ಟಾಟಿಸ್ಟಿಕಲ್ ಅಬಸ್ಟ್ರಾಕ್ಟ್ ಆಫ್ ಮೈಸೂರು ಸ್ಟೇಟ್, ೧೯೧೫
7. ಜಿಲ್ಲಾ ಗ್ಯಾಸೆಟಿಯರ್‌ಗಳು

ಸಿ. ವ್ಹಿ. ಮಠದ

# ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಾಂಡಲೀಕ ಪದ್ಧತಿಯ ಸಂಬಂಧ-ಕೆಲವು ನೆನಪುಗಳು

ಕ್ರಿಸ್ತಶಕ ೧೭೯೯ರಲ್ಲಿ ನಡೆದ ನಾಲ್ಕನೆಯ ಇಂಗ್ಲೀಷ್–ಮೈಸೂರು ಯುದ್ಧದಲ್ಲಿ ಟಿಪ್ಪುವಿಗಾದ ಸೋಲು, ಬ್ರಿಟಿಷರು ಭಾರತದಲ್ಲಿ ಭದ್ರವಾಗಿ ನೆಲೆಯೂರಲು ಕಾರಣವಾಯಿತು ಎಂದು ಅನೇಕ ಇತಿಹಾಸಕಾರರ ಅಭಿಪ್ರಾಯವಾಗಿದೆ. ಬ್ರಿಟಿಷ್ ಆಡಳಿತವನ್ನು ವಿರೋಧಿಸಲು ಮಾಂಡಲಿಕ ರಾಜ್ಯಗಳು ಶಕ್ತವಾಗಿರಲಿಲ್ಲವಾದರೂ ವಿರೋಧ ಸುಪ್ತವಾಗಿತ್ತು. ಸುಪ್ತವಿರೋಧವು ಸ್ಫೋಟವಾದುದನ್ನು ಭಾರತೀಯ ಕೆಲ ಇತಿಹಾಸಕಾರರು ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದೂ, ಪಾಶ್ಚಾತ್ಯ ಇತಿಹಾಸಕಾರರು 'ಸಿಪಾಯಿ' ದಂಗೆ ಎಂದೂ ಕರೆದಿದ್ದಾರೆ. ಎಲ್ಲ ಪಾಶ್ಚಾತ್ಯ ಇತಿಹಾಸಕಾರರು ನಿಷ್ಪಕ್ಷಪಾತ ದೃಷ್ಟಿಯಿಂದ ಇತಿಹಾಸ ನಿರೂಪಿಸಿರುತ್ತಾರೆಂದು ಹೇಳಲಾಗದು. ಆಳರಸರ ಮನೋಭೀಷ್ಟ, ಇಂಗಿತ ಅರಿತು ಅವರನ್ನು ಸಂತೃಪ್ತಿ ಪಡಿಸುವಂತೆ ಇತಿಹಾಸ ವಿಕೃತಗೊಳಿಸುವದು, ಸತ್ಯಾಂಶ–ಮರೆಮಾಚುವದು ಸರ್ವಸಾಮಾನ್ಯ. ಗತ ಕಾಲದಲ್ಲಿ ಬರೆಯುವ ಇತಿಹಾಸದ ಸ್ವರೂಪವೇ ಬೇರೆ ರೀತಿಯಾಗಿತ್ತು. ಅಂದು ಚರಿತ್ರೆ ಕೇವಲ ರಾಜರ ವಂಶಾವಳಿ, ಅವರು ಗಳಿಸಿದಜಯ, ಮಾಡಿದ ಉಪಕಾರ ಇವುಗಳ ಕಥೆಯಾಗುತ್ತಿತ್ತು. ಹೀಗಾಗಿ ಅವರು ಅನುಭವಿಸಿದ ಅಪಜಯಗಳೂ, ಲೋಪದೋಷಗಳೂ ಮರೆಯಾಗುತ್ತಿದ್ದವು. ಆದರೆ ಆ ಕಾಲದ ದೇಶದ ಪರಿಸ್ಥಿತಿ, ಜನಸಾಮಾನ್ಯರ ಸ್ಥಿತಿಗತಿ, ಸಾಮಾಜಿಕ ಪರಿಸ್ಥಿತಿ, ದೇಶದ ಅವನತಿಯ ಕಾರಣ ಮೊದಲಾದವು ಗೌಣವಾಗಿರುತ್ತಿದ್ದವು.

ಪರದಾಸ್ಯದಿಂದ ಪಾರಾಗಲು ರಾಜಮಹಾರಾಜರು ಮಾತ್ರವಲ್ಲದೆ, ಮಾಂಡಲೀಕರು, ಅಗಣಿತ ದೇಶಭಕ್ತರು ಸ್ವಾತಂತ್ರ್ಯಪ್ರಿಯರು ವೈಯುಕ್ತಿಕವಾಗಿಯೂ ಸಾಮೂಹಿಕವಾಗಿಯೂ ಹೋರಾಡಿರುತ್ತಾರೆ. ಅನೇಕರು ಹುತಾತ್ಮರಾಗಿರುತ್ತಾರೆ. ಅನೇಕ ಸಲ ಇಂಥ ಸಣ್ಣ ಪುಟ್ಟ ಮಾಂಡಲೀಕರ ಸಾಹಸದ ಕತೆಗಳು ಇತಿಹಾಸಕಾರರ ದೃಷ್ಟಿಗೆ ಬಾರದೆ ಮರೆಮಾಚಿಹೋಗಿವೆ. ೧೮೦೦ ರಿಂದ ೧೮೫೭ರ ಅವಧಿಯಲ್ಲಿ ನಡೆದ ಸ್ವಾತಂತ್ರ್ಯ ಬಂಡಾಯ ಅಸಂತೃಪ್ತಿಯ ಕಾರಣದಿಂದಲೇ ನಡೆದುದಾಗಿದ್ದು, ಉತ್ತರ ಮತ್ತು ದಕ್ಷಿಣ ಹಿಂದುಸ್ತಾನಗಳಲ್ಲಿ ಯಾವ ತಾರತಮ್ಯವೂ ಇರಲಿಲ್ಲ. ಇಷ್ಟೇ ಅಲ್ಲ, ವೆಲ್ಲೂರು, ನಂದಿದುರ್ಗ, ಕಿತ್ತೂರು, ಮಂಗಳೂರು, ಕೊಡಗುಗಳಲ್ಲಿ ಜನರು ಬ್ರಿಟಷರಿಗೆ ತಮ್ಮ ವಿರೋಧಿ ಅಭಿಪ್ರಾಯವನ್ನು ಚೆನ್ನಾಗಿ ತಿಳಿಸಿಕೊಟ್ಟಿದ್ದರು. ಭಾರತದ ಚರಿತ್ರೆ ಅಂದರೆ ಉತ್ತರಭಾರತದ ಚರಿತ್ರೆ ಮಾತ್ರ ಎಂಬ ಅಭಿಪ್ರಾಯಗಳನ್ನು ಈ ಘಟನೆಗಳು ಸುಳ್ಳಾಗಿಸಿದವು. ಮಂಗಳೂರು, ಅಮರಸೂಳ್ಯ ಮತ್ತು ಕಿತ್ತೂರುಗಳಲ್ಲಿ ೧೮೫೭ಕ್ಕಿಂತ ಇಪ್ಪತ್ತು ವರುಷಗಳಷ್ಟು ಹಿಂದೆಯೇ ಇಂಗ್ಲಿಷರ ವಿರುದ್ಧ ನಡೆದ ಬಂಡಾಯಗಳನ್ನು ನೋಡಿದರೆ ಕರ್ನಾಟಕದ ಜನತೆ

ಬಂಡಾಯದ ಭಾಷೆಯನ್ನು ಚೆನ್ನಾಗಿ ಬಲ್ಲವರಾಗಿದ್ದ ರೆಂಬುದು ಸಿದ್ಧವಾಗುತ್ತದೆ.

ಅಧಿಕಾರದ ಆಶೆಗಾಗಿ ನಮ್ಮವರೇ ಆದ ಅನೇಕ ರಾಷ್ಟ್ರದ್ರೋಹಿಗಳು ಬ್ರಿಟಿಷರ ಜೊತೆಗೂಡಿ ಒಳಸಂಚು ನಡೆಸಿ, ಬ್ರಿಟಿಷರ ವಿರುದ್ಧ ಕೈಕೊಳ್ಳುವ ಅನೇಕ ಕಾರ್ಯ ಗಳಿಗೆ ತಡೆಯೊಡ್ಡಿದ ಘಟನೆಗಳೂ ಸಾಕಷ್ಟಿವೆ. ಹಾಗೆಯೇ ಕ್ರಿಶ್ಚನ್ ಮಿಷನರಿಗಳೂ ಜನರೊಂದಿಗೆ ಬೆರೆತು ಅವರ ಧೋರಣೆಗಳನ್ನು ತಿಳಿದುಕೊಂಡು, ಅವುಗಳನ್ನು ಬ್ರಿಟಿಷ್ ಅಧಿಕಾರಿಗಳಿಗೆ ಮುಟ್ಟಿಸುವ ಕಾರ್ಯ ಕೂಡ ಅನೇಕ ಸಲ ನಡೆದಿವೆ. ಗದಗ-ಬೆಟಗೇರಿಯಲ್ಲಿ ಆಗಿನ ಕಾಲಕ್ಕೆ ಒಂದು ಜರ್ಮನ್ ಮಿಷನರಿ ಸಂಸ್ಥೆ ಇದ್ದು, ಮಿ॥ ವರ್ಥ್ ಎಂಬ ಓರ್ವ ಜರ್ಮನ್ ಮಿಶನರಿಯು ಕಲೆಕ್ಟರನಿಗೆ ಪತ್ರ ಬರೆದು ಗದಗ-ಬೆಟಗೇರಿಯ ಮುಸಲ್ಮಾನರು ಮೊಹರ ಮ್ಮಿನ ದಿವಸ ಬಂಡಾಯವನ್ನು ಹೂಡಬೇಕೆಂದು ಸಂಚು ನಡೆಸಿದ್ದಾರೆಂದು ತಿಳಿಸಿದನು. ಅದೇರೀತಿ ಧಾರವಾಡ ದಲ್ಲಿದ್ದ ಕಾಫ್‌ಮನ್ ಎಂಬ ಜರ್ಮನ್ ಮಿಶನರಿಯು, ಅಲ್ಲಿಯ ಕಲೆಕ್ಟರರಿಗೆ ಒಂದು ಪತ್ರಬರೆದು, ದಕ್ಷಿಣ ಭಾರ ತದ ಬ್ರಾಹ್ಮಣರು ಮತ್ತು ಮುಸಲ್ಮಾನರು ಬ್ರಿಟಿಷರ ವಿರುದ್ಧ ಕ್ರಾಂತಿಯ ಒಳಸಂಚೊಂದನ್ನು ಹೂಡಿರುವ ರೆಂದು ಪತ್ರ ಬರೆದು ತಿಳಿಸಿದನು. ಇಂಥ ಪತ್ರಗಳಿಂದ ಜನತೆಯಲ್ಲಿ ಬ್ರಿಟಿಷ್ ಆಳಿಕೆಯ ಬಗ್ಗೆ ವಿರೋಧವಿದ್ದಿ ತೆಂಬುದು ಸ್ಪಷ್ಟವಾಗುತ್ತದೆ.

೧೮೫೭ರ 'ಸಿಪಾಯಿ ಬಂಡಾಯ'ವು ಭಾರತದ ಚರಿತ್ರೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದ ಮಹತ್ವ ಪೂರ್ಣ ಘಟನೆಯಾಗಿದೆ. ಈ ಘಟನೆಯ ಪೂರ್ವದಲ್ಲಿ ಕೂಡ ಸ್ವಾಯತ್ತತೆಗಾಗಿ ಹೋರಾಟ ನಡೆದೇ ಇತ್ತು. ೧೮೨೪ರ ಕಿತ್ತೂರ ಕ್ರಾಂತಿ, ೧೮೩೦ರ ಸಾಮಾನ್ಯ ಮನೆ ತನದವನಾದ ಸಂಗೊಳ್ಳಿ ರಾಯಣ್ಣನ ಹೋರಾಟ ಇವು ಮಹತ್ವ ಪಡೆದಿವೆ. ಜನಜಾಗೃತಿಯ ಸೂಕ್ಷ್ಮ ವಿಚಾರ ತಿಳಿದ ಬ್ರಿಟಿಷರು ಅನೇಕ ಬಿರುಸಿನ ಕಾಯ್ದೆಗಳನ್ನು ಜಾರಿ ಗೊಳಿಸಿದರು. ಆದರೂ ಬ್ರಿಟಿಷ ವಿರೋಧ ನೀತಿ ಸಾವ ಕಾಶವಾಗಿ ದೇಶದೆಲ್ಲೆಡೆ ಹಬ್ಬತೊಡಗಿತು. ೧೮೪೧ರಲ್ಲಿ ಬಾದಾಮಿ ನರಸಿಂಗರಾವ (ನರಸಪ್ಪ) ಎಂಬುವವನು ಕೊಹೆರೆನ್ ಎಂಬ ಅರೇಬಿಯನ್‌ನ ಜೊತೆಗೂಡಿ ಬ್ರಿಟಿಷರ ವಿರುದ್ಧ ಬಂಡೆದ್ದನು. ಜಾತಿ ಮತ ಪಂಥ ಗಳನ್ನೆಣಿಸದೆ ಹಿಂದೂ-ಮುಸಲ್ಮಾನರು ಒಂದಾಗಿ ಕೆಲಸ ಮಾಡುತ್ತಿದ್ದುದೇ ಇಲ್ಲಿನ ವಿಶೇಷವೆನ್ನಬೇಕು. ಇದನ್ನರಿತ ಬ್ರಿಟಿಷರು ಹಿಂದೂ-ಮುಸಲ್ಮಾನರಲ್ಲಿ ಒಡಕಿನ ನೀತಿಯ ಪ್ರಚೋದನೆಗೆ ಸನ್ನದ್ಧರಾದರು.

ಉತ್ತರ ಕರ್ನಾಟಕದಲ್ಲಿ ಬೇಡರ ಜನಾಂಗ ಯುದ್ಧ ಕಲೆಯಲ್ಲಿ ಒಳ್ಳೆಯ ಪರಿಣತರಾಗಿದ್ದರಲ್ಲದೆ ಧೈರ್ಯದಿಂದ ಕಾದುವವರಾಗಿದ್ದರು. ಇದನ್ನರಿತ ಬ್ರಿಟಿಷರು 'ನಿಶಸ್ತ್ರೀ ಕರಣ' ಕಾಯ್ದೆ (Dis-armament Act) ಯನ್ನು ೧೮೫೭ನೆಯ ಸೆಪ್ಟಂಬರ ೧೧ರಂದು ಜಾರಿಯಲ್ಲಿ ತಂದರು. ಈ ಕಾಯ್ದೆಯನ್ವಯ "ಬ್ರಿಟಿಷರನ್ನು ಹೊರತುಪಡಿಸಿ ಯಾರೂ ಆಯುಧಗಳನ್ನು ಹೊಂದಬಾರದು" ಎಂದು ಘೋಷಿಸಿದರು. ಇದರಿಂದ ಭಾರತೀಯರಲ್ಲಿ ಇನ್ನೂ ಹೆಚ್ಚಿನ ಅಸಂತುಷ್ಟಿಗೆ ಕಾರಣವಾಯಿತು. ಸುರಪುರದ ವೆಂಕಟಪ್ಪನಾಯಕನು ಇಂಥ ಅಸಂತುಷ್ಟರಲ್ಲೊಬ್ಬನಾಗಿ ದ್ದನು. ಇವನು ಕೈಕಟ್ಟಿ ಕುಳಿತುಕೊಳ್ಳದೆ ತನ್ನಂತೆ ಸ್ವಾತಂತ್ರ್ಯದ ಬಗ್ಗೆ ಕಳಕಳಿ ಇದ್ದ ಕರ್ನಾಟಕದ ಅನೇಕ ಮುಖಂಡರ ಜೊತೆ ಪತ್ರವ್ಯವಹಾರ ನಡೆಸಿದನು. ಇಂಥವ ರಲ್ಲಿ ಮುಖ್ಯವಾದವರೆಂದರೆ ನರಗುಂದದ ಬಾಬಾ ಸಾಹೇಬ, ಮುಂಡರಗಿಯ ಭೀಮರಾಯ, ಹಮ್ಮಿಗೆಯ ಕೆಂಚನಗೌಡ, ಸೊರಟೂರ ಹಾಗೂ ಸಿರಸಂಗಿ ದೇಸಾಯರು.

ಬ್ರಿಟಿಷರು ವೆಂಕಟಪ್ಪನಾಯಕನ ಚಟುವಟಿಕೆಗಳ ಬಗ್ಗೆ ಸಂಶಯ ತಾಳಿ,ಅವನನ್ನು ಮುಗಿಸುವ ಸನ್ನಾಹದಲ್ಲಿ ದ್ದರು. ನಗನಗೇರಿಯ ಭೀಮರಾಯನಿಂದ ಅವನ ಕಾರ್ಯಗಳ ಬಗ್ಗೆ ಮಾಹಿತಿ ಸಂಗ್ರಹಿದ್ದರು. ಹಾಗೆಯೇ ಸುರಪುರದ ಕೋಟೆಯೊಳಗೆ ಹೋಗುವ ಗುಪ್ತಮಾರ್ಗ ವನ್ನು ಅರಿತುಕೊಂಡರು. ಆದರೆ ನಗನಗೇರಿಯ ಭೀಮರಾಯನಿಗೆ ತನ್ನ ತಪ್ಪಿನ ಅರಿವಾಗಿ ವೆಂಕಟಪ್ಪ ನಾಯಕನಿಗೆ ಬ್ರಿಟಿಷರ ವಿಚಾರದ ಬಗ್ಗೆ ತಿಳಿಸಿ ಊರು ಬಿಡುವಂತೆ ಎಚ್ಚರಿಸಿದನು. ಮೆಡೋಜ ಟೇಲರ ಕೂಡ ವೆಂಕಟಪ್ಪನಾಯಕನಿಗೆ ಊರು ಬಿಡುವಂತೆ ಉಪ ದೇಶಿಸಿದನು. ಆದರೆ ಉಜ್ವಲ ದೇಶಪ್ರೇಮಿಯಾದ ವೆಂಕಟಪ್ಪನಾಯಕ ಈ ರೀತಿ ಉತ್ತರಿಸಿದನು :"I desire to die for what I did and I will not ask to live like a coward, nor will I betray my

people.'' ಕೊನೆಗೆ ಬ್ರಿಟಿಷರಿಂದ ಸೋಲನ್ನಪ್ಪುವದು ಖಚಿತವಾದ ನಂತರ ಅವರಿಗೆ ಶರಣಾಗತನಾಗದೆ ಸ್ವತಃ ಗುಂಡು ಹೊಡೆದುಕೊಂಡನೆಂಬುದು ಐತಿಹಾಸಿಕ ಸತ್ಯಸಂಗತಿ. ಸುರಪುರದ ಪತನ ಸ್ವಾತಂತ್ರ್ಯಪ್ರಿಯ ಭಾರತೀಯರಿಗೆ ಆಘಾತವನ್ನುಂಟುಮಾಡಿತಲ್ಲದೆ ಬ್ರಿಟಿಷರ ವಿರೋಧನೀತಿಯನ್ನು ಇನ್ನೂ ಬಲಗೊಳ್ಳುವಂತೆ ಮಾಡಿತು.

ಸುರಪುರ ಪತನದ ನಂತರ ಬ್ರಿಟಿಷರ ದೃಷ್ಟಿ ನರಗುಂದದ ಮೇಲೆ ಬಿದ್ದಿತು. ಇದು ಕೂಡಾ ಸ್ವಾತಂತ್ರ್ಯಪ್ರಿಯ ಸಂಸ್ಥಾನವಾಗಿದ್ದಿತು. ಇಲ್ಲಿ ಪೇಶ್ವೆ ಸಂಬಂಧಿ ಬಾಬಾಸಾಹೇಬ (ಭಾಸ್ಕರರಾವ್ ಭಾವೆ) ಆಳುತ್ತಿದ್ದನು. ಇವನು ತನ್ನ ನ್ಯಾಯಯುತ ಬೇಡಿಕೆಗಳಿಗಾಗಿ ಬ್ರಿಟಿಷರ ವಿರುದ್ಧ ಹೋರಾಡಲು ನಿರ್ಧರಿಸಿದನು. ಇವನು ಕೂಡ ಕರ್ನಾಟಕದ ಪ್ರತಿಷ್ಠಿತ ಮಾಂಡಲೀಕರ ಸಂಪರ್ಕ ಹೊಂದಿದ್ದನು. ಎಲ್ಲರೂ ತಮ್ಮ ತಮ್ಮ ಪ್ರದೇಶಗಳಲ್ಲಿ ಒಮ್ಮೆಲೇ ಬಂಡೇಳಬೇಕೆಂದು ನಿರ್ಧರಿಸಲಾಯಿತು. ಬ್ರಿಟಿಷರು ತಮ್ಮ ಉತ್ಪನ್ನ ಹೆಚ್ಚಿಸಿಕೊಳ್ಳಲು ಇನಾಮ ಜಮೀನುಗಳ ಕ್ರಮಬದ್ಧತೆಯನ್ನು ವಿಚಾರಿಸಲು ಉದ್ಯುಕ್ತವಾಯಿತು. ಪೇಶ್ವೆಯವರಿಂದ ಜಮೀನು ಪಡೆದ ಇನಾಮದಾರರೇ ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿದ್ದುದರಿಂದ ಅವರಿಗೆಲ್ಲ ಈ 'ಇನಾಮು ಕಮಿಶನ್ನಿ'ನ ಕಾರ್ಯ ಒಪ್ಪದಾಯಿತು. ಇನಾಮ ಜಮೀನು ಹೊಂದಿದ ಎಲ್ಲ ಮುಖಂಡರಿಗೆ ಈ ಕಾಯ್ದೆಯಿಂದ ಭಯ ಉಂಟಾಯಿತು. ತಮ್ಮ ಜಮೀನಿನ ರಕ್ಷಣೆಗಾಗಿ ಬ್ರಿಟಿಷರ ವಿರುದ್ಧ ಹೋರಾಡಲು ಶಸ್ತ್ರಾಸ್ತ್ರ ಸಂಗ್ರಹಣೆ ಮಾಡಿಕೊಳ್ಳಹತ್ತಿದರು. ಈ ಮಾಹಿತಿ ಸಂಗ್ರಹಿಸಿದ ಬ್ರಿಟಿಷರು ಅಂಥ ಜಮೀನುದಾರರ 'ಝಡತಿ' ಮಾಡಲಾರಂಭಿಸಿದರು. ಇದರಿಂದಾಗಿ ೧೮೫೭ರ ಆಗಸ್ಟ್ ತಿಂಗಳಿನಿಂದ ೧೮೫೮ರ ಮೇ ತಿಂಗಳವರೆಗೆ ಧಾರವಾಡ ಜಿಲ್ಲೆಯ ವಾತಾವರಣವು ಪ್ರಕ್ಷುಬ್ಧವಾಗುತ್ತ ನಡೆಯಿತು. ಈಗ ಈ ಮಾಂಡಲೀಕರಿಗೆ ಬ್ರಿಟಿಷ್ ಇಂಗಿತ ತಿಳಿಯಿತು. ಹಾಗೆಯೇ ಸ್ವಾಭಿಮಾನ ಹೆಚ್ಚಿತು.

ಈಗ ನರಗುಂದದ ಬಾಬಾಸಾಹೇಬ ಬ್ರಿಟಿಷ್ ಧೋರಣೆಯನ್ನು ಬಹಿರಂಗವಾಗಿಯೇ ವಿರೋಧಿಸಿದನು. ಇದನ್ನರಿತ ಬ್ರಿಟಿಷರು ಅವನ ಚಲನವಲನಗಳ ಮೇಲೆ ಕಣ್ಣಿಟ್ಟರು. ಮೇ ೨೯ಕ್ಕೆ ದಕ್ಷಿಣ ಮರಾಠಾ ಭಾಗಕ್ಕೆ ಪೊಲಿಟಿಕಲ್ ಏಜೆಂಟ್ ಎಂದು ನಿಯಮಕವಾದ ಚಾರ್ಲ್‌ಸ್ ಮಾನ್ಸನ್ ನರಗುಂದದತ್ತ ನಡೆದನು. ಅದಕ್ಕೂ ಮೊದಲು ರಾಮದುರ್ಗಕ್ಕೆ ಭೆಟ್ಟಿಕೊಟ್ಟನು. ಬಾಬಾಸಾಹೇಬ ಈಗ ಪೂರ್ಣ ಬಂಡಾಯರಲ್ಲಿ ತೊಡಗಿರುವ ಸಂಗತಿ ತಿಳಿಯಿತು. ಮಾನ್ಸನ್ ತನ್ನ ಜೊತೆ ಪೂರ್ಣಸಿಂಗ್ ಎಂಬ ಸ್ವಾಮಿನಿಷ್ಠ ಸೇವಕ ಹಾಗೂ ಹತ್ತೆಂಟು ಸವಾರರನ್ನೊಳಗೊಂಡು ನರಗುಂದದತ್ತ ನಡೆದನು. ಸುರೇಬಾನಕ್ಕೆ ತಲುಪುವಷ್ಟರಲ್ಲಿ ಕತ್ತಲಾದುದರಿಂದ ಅಲ್ಲಿಯೇ ತಂಗಿದನು. ಬಾಬಾಸಾಹೇಬನು ಮಧ್ಯರಾತ್ರಿಯ ಸಮಯಕ್ಕೆ ನೂರಿನ್ನೂರು ಜನರೊಡನೆ ಮಾನ್ಸನ್ ಸಾಹೇಬನ ಶಿಬಿರದ ಮೇಲೆ ದಾಳಿಮಾಡಿದನಲ್ಲದೆ ಮಾನ್ಸನ್‌ನ ಕೊಲೆ ಮಾಡಿ ದತ್ತಕಕ್ಕೆ ಅಡ್ಡಿಬಂದ ಆತನ ಮೇಲಿನ ಸೇಡು ತೀರಿಸಿಕೊಂಡನು. ಈ ಸುದ್ದಿ ತಿಳಿದ ಕರ್ನಲ್ ಮಾಲ್ಕಮ್ ತನ್ನ ಸೈನ್ಯದೊಡನೆ ನರಗುಂದದೆಡೆ ಧಾವಿಸಿದನು. ಇದನ್ನರಿತ ಬಾಬಾಸಾಹೇಬ ಕೆಂಚನಗೌಡರಿಗೆ ಹಾಗೂ ಭೀಮರಾಯನಿಗೆ ಸಹಾಯಕ್ಕಾಗಿ ಕೋರಿದನು. ಆದರೆ ಮೊದಲೇ ತೀರ್ಮಾನವಾದಂತೆ ಅವರೆಲ್ಲ ಕೊಪ್ಪಳ ಭಾಗದಲ್ಲಿ ತಮ್ಮ ಕಾರ್ಯಾಚರಣೆ ನಡೆಸಿದ್ದರು. ದುರ್ದೈವದಿಂದ ಅವರ ಸಹಾಯ ಸಮಯಕ್ಕೆ ಸಿಗದಾಯಿತು. ಬಾಬಾಸಾಹೇಬ ತನ್ನ ಅನುಯಾಯಿಗಳೊಂದಿಗೆ ತೊರಗಲ್ ಅರಣ್ಯದಲ್ಲಿ ಗುಪ್ತವಾಗಿ ಓಡಿಹೋದನು. ಈ ಸಂಗತಿ ನಮ್ಮವರಿಂದಲೆ ಬ್ರಿಟಿಷರಿಗೆ ತಿಳಿಯಿತು. ಬಾಬಾಸಾಹೇಬನು ಬ್ರಿಟಿಷರ ಕೈಗೆ ಸಿಕ್ಕಿಹಾಕಿಕೊಂಡನು. ಅವನನ್ನು ಜೂನ್ ೧೨ಕ್ಕೆ ಬೆಳಗಾವಿಯಲ್ಲಿ ಗಲ್ಲಿಗೇರಿಸಲಾಯಿತು. ದತ್ತಕ ರದ್ದತಿ, ನಿಶ್ಶಸ್ತ್ರೀಕರಣ ಕಾಯ್ದೆ ಹಾಗೂ ಇನಾಮ ಕಮೀಶನ್‌ಗೆ ಬೇಸತ್ತು ಬಂಡೆದ್ದ ಬಾಬಾಸಾಹೇಬ ಬ್ರಿಟಿಷರಿಗೆ ಬಲಿಯಾದನು.

ನಂತರ ಮುಂಡರಗಿ ಭೀಮರಾಯ ಹಾಗೂ ಹಮ್ಮಿಗೆಯ ಕೆಂಚನಗೌಡರ ಸರದಿಯೂ ಬಂದಿತು. ನಾನಾ ಸಾಹೇಬರ ಪತ್ರದ ವಿಚಾರಗಳಿಂದ ಪ್ರೇರೇಪಿತನಾದ ಭೀಮರಾಯ ಎಲ್ಲ ಮಾಂಡಲೀಕರಿಗೂ ಈ ವಿಷಯವಾಗಿ ತಿಳಿಸಿ ಅವರು ಬ್ರಿಟಿಷರ ವಿರುದ್ಧ ಬಂಡೇಳುವಂತೆ ಪ್ರಚೋದಿಸಿದನು. ಧಾರವಾಡದ ಆಗಿನ ಪೊಲೀಸ್ ಸೂಪರಿಂಟೆಂಡೆಂಟನಾದ ಥಾಮಸ್ ಎಂಬುವನು ಭೀಮರಾಯನ ಕಾರ್ಯಾಚರಣೆಗಳ ಮೇಲೆ ದೃಷ್ಟಿ ಇಡಲು

ಧಾರವಾಡದ ಮ್ಯಾಜಿಸ್ಟ್ರೇಟರಿಗೆ ತಿಳಿಸಿದನು (೧೦-೫-೧೮೫೭). ಧಾರವಾಡ ಕಲೆಕ್ಟರರಿಗೆ ಭೀಮರಾಯನ ಕಾರ್ಯಕ್ರಮಗಳ ಸುಳುಹು ಹತ್ತಿದುದರಿಂದಾಗಿ ಭೀಮರಾಯ ತನ್ನ ಕಾರ್ಯಕ್ಷೇತ್ರವನ್ನು ಬಳ್ಳಾರಿ ಜಿಲ್ಲೆಗೆ ವರ್ಗಾಯಿಸಿದನು. ಹೂವಿನಹಡಗಲಿ ಪೊಲೀಸರು ಭೀಮರಾಯನ ಕಾರ್ಯಾಚರಣೆಗಳ ಬಗ್ಗೆ ಬಳ್ಳಾರಿ ಕಲೆಕ್ಟರರಿಗೆ ತಿಳಿಸಿದರು. ಭೀಮರಾಯ, ಕೆಂಚನಗೌಡ ಹಾಗೂ ಸೊರಟೂರ ದೇಸಾಯರು ಆ ಭಾಗದಲ್ಲಿ ಬಂಡೇಳುವ ಒಳಸಂಚು ನಡೆಸಿದರು. ಇದರಲ್ಲಿ ಮಹತ್ವದ ಪಾತ್ರವನ್ನಾಡಿದ ಹಮ್ಮಿಗೆಯ ಕೆಂಚನಗೌಡರು ತಮ್ಮ ಮನೆಯಲ್ಲಿ ಮದ್ದುಗುಂಡಿನ ಸಂಗ್ರಹಣೆ ಮಾಡಿದರು. ಇದನ್ನು ತಿಳಿದ ಡಂಬಳದ ಫೌಜುದಾರನು ಕಳಸಕ್ಕೆ ಸುದ್ದಿ ತಿಳಿಸಿದನು. ಇದು ನಿಜವೆಂದು ತಿಳಿದಾಗ ಹಮ್ಮಿಗೆಯ ಕೋಟೆಯನ್ನು ಝಡತಿ ಮಾಡುವಂತೆ ಫೌಜುದಾರನಿಗೆ ಡಿ. ಎಸ್. ಪಿ. ಅಪ್ಪಣೆಕೊಟ್ಟನು. ಮೇ ೨೩ಕ್ಕೆ ಹಮ್ಮಿಗೆಯ ಕೋಟೆಯನ್ನು ಝಡತಿ ಮಾಡಿ, ಇದಕ್ಕೆ ಬೀಗ ಮುದ್ರೆಹಾಕಿ, ಕಾವಲಿರಿಸಿ, ಪೊಲೀಸ ಸಾಹೇಬನಿದ್ದ ಕಳಸಕ್ಕೆ ಸುದ್ದಿ ತಲುಪಿಸಿದನು. ಆದರೆ ಭೀಮರಾಯ, ಕೆಂಚನಗೌಡ ಹಾಗೂ ಸೊರಟೂರ ದೇಸಾಯರು ಹಮ್ಮಿಗೆಯ ಕಾವಲುಗಾರರ ಮೇಲೆ ದಾಳಿಮಾಡಿ ಅವರನ್ನು ಕೊಂದು ತಮಗೆ ಬೇಕಾದಷ್ಟು ಮದ್ದುಗುಂಡುಗಳನ್ನು ತೆಗೆದುಕೊಂಡು ಡಂಬಳದ ಕಡೆ ಹೊರಟರು. ಡಂಬಳದಲ್ಲಿ ಟ್ರೆಝರಿ ಲೂಟಿ ಮಾಡಿ ತೆರಿಗೆ ಹಣವನ್ನು ದೋಚಿಕೊಂಡು ಹೋದರು. ನಂತರ ಗದುಗಿಗೆ ಹೋಗಿ ಅಲ್ಲಿ ಪೋಸ್ಟ್ ಹಾಗೂ ಟೆಲಿಗ್ರಾಫ್ ಆಫೀಸನ್ನು ಮುತ್ತಿ ಆಸ್ತಿ-ಪಾಸ್ತಿಯನ್ನು ದೋಚಿದರು. ದಾರಿಯುದ್ದಕ್ಕೂ ಜನರು ಭೀಮರಾಯನಿಗೆ ಹಾಗೂ ಕೆಂಚನಗೌಡರಿಗೆ ಎಲ್ಲ ರೀತಿಯ ಸಹಾಯ ಸಹಕಾರವನ್ನು ನೀಡಿದರು ಹಾಗೂ ಅವರನ್ನು ಪ್ರೋತ್ಸಾಹಿಸಿದರು ಎಂದು ಥಾಮಸ್ ತಿಳಿದುಕೊಂಡನು.

ಭೀಮರಾಯ ಹಾಗೂ ಕೆಂಚನಗೌಡರು ಕೊಪ್ಪಳ ಕೋಟೆಯನ್ನು ಆಕ್ರಮಿಸಿದರು. ಬಳ್ಳಾರಿಯಿಂದ ಹ್ಯೂಜೆಸ್ ಎಂಬ ಸೈನ್ಯಾಧಿಕಾರಿಯು ಹೊಸಪೇಟೆ ಮಾರ್ಗವಾಗಿ ಕೊಪ್ಪಳಕ್ಕೆ ಹೊರಟನು. ಅಲ್ಲದೆ ಅವನ ಸೈನ್ಯವೆಲ್ಲ ಕೊಪ್ಪಳದ ಕೋಟೆಯನ್ನು ಸುತ್ತುವರೆಯಿತು. ಹರಿಹರದಿಂದ ಮೈಸೂರು ಸಿಲೇದಾರರೂ, ಲಿಂಗಸುಗೂರಿನಿಂದ ಹೈದರಾಬಾದದ ನಾಲ್ಕೂ ನಂಬರ ಪಡೆಯೂ, ಕರ್ನೂಲಿನಿಂದ ಕೆಲವು ಪಡೆಗಳೂ ಬಂದು ಕೂಡಲು ಹ್ಯೂಜೆಸ್‌ನು ಜೂನ್ ಒಂದನೆಯ ತಾರೀಖು ಮುಂಜಾನೆ ದಾಳಿಯ ಸಿದ್ಧತೆಯನ್ನು ನಡೆಸಿದನು. ಭೀಮರಾಯನ ಜನರಿಗೆ ಕೊಪ್ಪಳ ಕೋಟೆಯನ್ನು ಹ್ಯೂಜೆಸ್ ತೋಪುಗಳಿಂದ ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಮಧ್ಯಾಹ್ನ ಮೂರು ಗಂಟೆಯ ಸುಮಾರಿಗೆ ಭೀಮರಾಯ ಮತ್ತು ಕೆಂಚನಗೌಡರು ಕೋಟೆಯ ಎರಡು ಬಾಗಿಲುಗಳ ನಡುವೆ ಕಾದುತ್ತ ಮಡಿದರು.

ಇಷ್ಟೆಲ್ಲ ನಡೆದು ಹೋದ ಘಟನೆಗಳ ವಿವರಣೆಯಾಯಿತು.

ಮೇಲಿನ ಘಟನೆಗಳ ನಿಚ್ಚಳ ಪರಿಣಾಮ, ಇಪ್ಪತ್ತನೆಯ ಶತಮಾನದಲ್ಲಿ ಗಾಂಧೀಜಿಯವರ ಮುಖಂಡತ್ವದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಗಾರರ ಮೇಲೆ ಆದುದು ಸ್ಪಷ್ಟ. ಬ್ರಿಟಿಷರ ವಿರುದ್ಧ ಅವರು ಕೈಗೊಂಡ ಕಾರ್ಯಾಚರಣೆಗಳನ್ನೇ ಇವರೂ ಮುಂದುವರೆಸಿಕೊಂಡು ಬಂದುದ್ದು ಸ್ಪಷ್ಟವಾಗಿದೆ. ರೇಲ್ವೆ ಸ್ಟೇಶನ್, ಪೋಸ್ಟ್ ಆಫೀಸ್ ಸುಡುವುದು ಹಾಗೂ ಟ್ರೆಝರಿಗಳನ್ನು ಲೂಟಿ ಮಾಡುವುದು ಮುಂತಾದ ವಿಚಾರಗಳು ಅಲ್ಲದೆ ವೇಷ ಮರೆಸಿಕೊಂಡು ತಿರುಗುವದು, ಇವೆಲ್ಲ ಮರುಕಳಿಸಿದವು. ಗಾಂಧೀಯುಗದ ಚಳವಳಿ ಕೂಡ ಹೆಚ್ಚಾಗಿ ಮೂಂಡಲೀಕರೂ ಬ್ರಿಟಿಷರ ವಿರುದ್ಧ ಬಂಡೆದ್ದ ರೀತಿಯನ್ನೇ ಅನುಸರಿಸಿದುದು ಇಲ್ಲಿ ಗಮನಾರ್ಹ. ಅವರ ಪ್ರಭಾವ ಹೆಚ್ಚಿನ ರೀತಿಯಲ್ಲಿ ೨೦ನೆಯ ಶತಮಾನದ ಸ್ವಾತಂತ್ರ್ಯ ಹೋರಾಟಗಾರರ ಮೇಲಾದುದು ಸುಸ್ಪಷ್ಟವಾಗಿದೆ.

ಮೇಲಿನ ಘಟನೆಗಳಿಂದ ಇನ್ನೊಂದು ಅಂಶ ಸ್ಪಷ್ಟವಾಗಿ ಕಾಣುವದೆಂದರೆ, ಅನೇಕ ಘಟನೆಗಳಲ್ಲಿ ಮಹತ್ವದ ಪಾತ್ರಗಳನ್ನಾಡಿ ಜನಾನುರಾಗಿಗಳಾಗಿದ್ದರೂ, ಅವರ ಚಿತ್ರ ಇತಿಹಾಸದ ಪುಟಗಳಲ್ಲಿ ಸ್ಪಷ್ಟವಾಗಿ ಮೂಡದೇ ಇರುವುದು. ಅಂಥವರಲ್ಲೊಬ್ಬರಾದ ಹಮ್ಮಿಗೆಯ ಕೆಂಚನಗೌಡರನ್ನು ಇಲ್ಲಿ ಉದಾಹರಿಸಬಹುದು. ಕೊಪ್ಪಳ, ಹಮ್ಮಿಗೆ, ಡಂಬಳ ಭಾಗದಲ್ಲಿ ಕೆಂಚನಗೌಡರು ಬಹಳೇ ಪ್ರಭಾವ ಹೊಂದಿದ ವ್ಯಕ್ತಿಯಾಗಿದ್ದರು. ಇವರ ಆಳ್ವಿಕೆಯ ಕಾಲ ಆ ಭಾಗದ ಜನರಿಗೆ ಸುವರ್ಣಯುಗವಾಗಿ

ಪರಿಣಮಿಸಿತ್ತು. ಹಮ್ಮಿಗೆಯ ಕೆಂಚನಗೌಡರ ಜನಪ್ರಿಯತೆಯ ಬಗ್ಗೆ ಮರಾಠಿ ದಫ್ತರಗಳಲ್ಲಿ ಉಲ್ಲೇಖವಿರುವ ಸಂಗತಿಯನ್ನು ಡಾ॥ ಕೆ. ಎನ್. ಚಿಟ್ನೀಸ ಕೂಡ ಒಪ್ಪಿಕೊಂಡಿರುವರು. ಆದರೆ ಭೀಮರಾಯರ ವ್ಯಕ್ತಿತ್ವವೇ ಹೆಚ್ಚು ಪ್ರಭಾವಶಾಲಿಯಾದುದೆಂಬಂತೆ ಇತಿಹಾಸದ ಪುಟಗಳಲ್ಲಿ ಚಿತ್ರಿತವಾಗಿದೆ. ಹೀಗೆಂದಾಕ್ಷಣ ಭೀಮರಾಯರ ವ್ಯಕ್ತಿತ್ವ ಕಡಿಮೆ ಎಂದೇನಲ್ಲ. ಆದರೆ ಕೆಂಚನಗೌಡರಿಗೆ ಇತಿಹಾಸದಲ್ಲಿ ದೊರೆಯಬೇಕಾದ ಸ್ಥಾನ ದೊರೆತಿಲ್ಲವೆಂಬುದು ಮಾತ್ರ ಸ್ಪಷ್ಟ. ಬರೆದಿಡಲ್ಪಟ್ಟ ಸ್ಥಾನಿಕ ದಾಖಲೆಗಳು, ಹೊತ್ತಿಗೆಗಳು ಕೆಂಚನಗೌಡರ ಹಿರಿಮೆಯನ್ನು ಎತ್ತಿಹಿಡಿದಿವೆಯಾದರೂ ಆಧುನಿಕ ಇತಿಹಾಸಕಾರರು ಇವರ ಕಾರ್ಯಾಚರಣೆಯ ಬಗ್ಗೆ ಹೆಚ್ಚು ಗಮನ ಹರಿಸಿದಂತಿಲ್ಲ. ಭೀಮರಾಯರು ಶಿಕ್ಷಣ ಪಡೆದವರಾಗಿದ್ದರು. ಅಂತೆಯೇ ನಾನಾಸಾಹೇಬ ಪೇಶ್ವೆ ಅವರಿಗೆ ಓಲೆ ಬರೆದು ಈ ವಿಷಯವನ್ನು ಆ ಭಾಗದ ಎಲ್ಲ ದೇಸಾಯರು, ಜಮೀನುದಾರರು ಹಾಗೂ ಪ್ರಮುಖರಿಗೆ ತಿಳಿಸುವಂತೆ ಕೇಳಿಕೊಂಡಿದ್ದರು, ಭೀಮರಾಯರು ಈ ಸಂದರ್ಭದ ಸರಿಯಾದ ಪ್ರಯೋಜನ ಪಡೆದು ಆ ಭಾಗದ ಪ್ರಭಾವಶಾಲಿ ವ್ಯಕ್ತಿಗಳಾದ ಕೆಂಚನಗೌಡರ ಸ್ನೇಹ ಬೆಳೆಸಿ ಅವರ ಜನಪ್ರಿಯತೆಯ ಲಾಭವನ್ನು ತಮ್ಮ ಕಾರ್ಯಾಚರಣೆಗಾಗಿ ಬಳಸಿಕೊಂಡುದು ಸ್ಪಷ್ಟವಾಗಿದೆ. ಉಜ್ವಲ ದೇಶಪ್ರೇಮಕ್ಕಾಗಿ ತಮ್ಮ ದೇಶಗತಿಯನ್ನೇ ತ್ಯಾಗಮಾಡಿ ಭೀಮರಾಯರಿಗೆ ಸಂಪೂರ್ಣ ಸಹಾಯ ಹಸ್ತ ನೀಡಿದ ಕೆಂಚನಗೌಡರ ವ್ಯಕ್ತಿತ್ವದ ಚಿತ್ರಣ ಇತಿಹಾಸದ ಪುಟಗಳಲ್ಲಿ ಗೌಣವಾಗಿದೆ ಎಂಬುದು ನಿರ್ವಿವಾದ. ಆದರೆ ಅವರ ಜನಪ್ರಿಯತೆಯ ಲಾಭ ಪಡೆದು ಈ ಹೋರಾಟದಲ್ಲಿ ಮುಂಚೂಣಿಯಲ್ಲಿ ನಿಂತ ಭೀಮರಾಯರ ಚರಿತ್ರೆಯೇ ಇತಿಹಾಸದ ಪುಟಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದಿವೆ.

ಇತಿಹಾಸಕಾರರು ಕೂಡ ಸತ್ಯಾಸತ್ಯತೆಯ ನಿಷ್ಕರ್ಷೆ ಮಾಡದೆ ತಮ್ಮ ಒಲವಿನ ವಿಚಾರಗಳತ್ತ ಗಮನ ಹರಿಸಿ ಸತ್ಯ ಸಂಗತಿಗಳನ್ನು ಮರೆಮಾಚಿ ಚರಿತ್ರೆಗೆ ಅಪಚಾರ ಮಾಡಿರುವ ಸಾಧ್ಯತೆಯೂ ಇಲ್ಲದಿಲ್ಲ. ಅಂತೆಯೇ ಸರಿಯಾದ ಸಂಗತಿಗಳನ್ನು ತಿಳಿದು ಯೋಗ್ಯರಾದವರ ವ್ಯಕ್ತಿತ್ವದ ಹಿರಿಮೆಯನ್ನು ಕುಗ್ಗಿಸದೆ, ಸತ್ಯ ಸಂಗತಿಗಳನ್ನು ಸ್ಪಷ್ಟವಾಗಿ ಹೇಳುವ ಇತಿಹಾಸಕಾರರ ಅವಶ್ಯಕತೆ ಇಂದು ಬಹಳವಾಗಿದೆ. ಸಂಕುಚಿತ ಮನೋಭಾವನೆಯಿಂದ, ಒಂದೇ ದೃಷ್ಟಿ ಇಟ್ಟುಕೊಂಡು, ತಮ್ಮ ವಿಚಾರವೇ ಸತ್ಯ ಎಂದು ತಿಳಿದುಕೊಂಡು ಬರೆದ ಇತಿಹಾಸ ಜನತೆಗೆ ನಿಷ್ಪಕ್ಷಪಾತ ಚರಿತ್ರೆ ಒದಗಿಸಲಾರದು. ಇಪ್ಪತ್ತನೆಯ ಶತಮಾನದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಚರಿತ್ರೆಯನ್ನು ಈಗಾಗಲೇ ಅನೇಕ ವಿದ್ವಾಂಸರು ಬರೆದಿದ್ದಾರೆ. ಆದರೆ ಅವುಗಳನ್ನು ಓದಿದಾಗ, ಕೆಲವು ವ್ಯಕ್ತಿಗಳ ಬಗ್ಗೆ ಇನ್ನೂ ಹೆಚ್ಚು ಬರೆಯಬೇಕಿತ್ತು ಎಂಬ, ಕೆಲವು ವ್ಯಕ್ತಿಗಳ ಬಗ್ಗೆ ಸುಮ್ಮನೆ ಬೆಳೆಸಿದ್ದಾರೆ ಎಂಬ ಹಾಗೂ ಇನ್ನೂ ಕೆಲವರ ಹೆಸರುಗಳು ಕೂಡ ನಮೂದಿತವಾಗಲೇ ಇಲ್ಲ ಎಂಬ ಅಭಿಪ್ರಾಯ ಬಾರದಿರದು. ಹೀಗಾಗದೆ ನಿಷ್ಪಕ್ಷಪಾತ, ಸ್ಪಷ್ಟ ಹಾಗೂ ಸತ್ಯಾಂಶಗಳನ್ನೊಳಗೊಂಡ ಚರಿತ್ರೆ ರಚಿತವಾಗಬೇಕು.

ಮಾಂಡಲೀಕರು ದೇಶಕ್ಕಾಗಿ ಮಾಡಿದ ತ್ಯಾಗ ಹಾಗೂ ಬಲಿದಾನಗಳ ಚರಿತ್ರೆಯನ್ನು ಇನ್ನೂ ಸ್ಪಷ್ಟವಾಗಿ ರಾಷ್ಟ್ರೀಯಮಟ್ಟದಲ್ಲಿ ಅವರ ವ್ಯಕ್ತಿತ್ವದ ಹಿರಿಮೆ-ಗರಿಮೆಗಳು ನಿಚ್ಚಳವಾಗಿ ತೋರುವಂತೆ ಬರೆದರೆ ಅದರಿಂದ ಚರಿತ್ರೆಗೆ ಉಪಕಾರ ಮಾಡಿದಂತಾಗುತ್ತದೆ. ಕೆಂಚನಗೌಡರಂಥ ಅನೇಕ ವ್ಯಕ್ತಿಗಳು ಎಲೆಮರೆ ಕಾಯಿಯಂತೆ ಇತಿಹಾಸದ ಪುಟಗಳಲ್ಲಿ ಗೌಣವಾಗಿ ಉಳಿದಿದ್ದು, ಈ ಮಾಂಡಲೀಕರನ್ನು ಕುರಿತು ಆಧುನಿಕ ಇತಿಹಾಸಕಾರರು ಈ ದಿಶೆಯಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ನಡೆಸುವಂತಾದರೆ ಅದಕ್ಕಿಂತ ಹೆಚ್ಚಿನ ಮಹತ್ವದ ಕಾರ್ಯ ಬೇರೊಂದಿಲ್ಲವೆಂದೇ ಹೇಳಬೇಕು.

ಜೆ. ವಿ. ಗಾಯತ್ರಿ

# ಬೆಂಗಳೂರಿನಲ್ಲಿ ಇಂಗ್ಲೀಷ್ ಶಿಕ್ಷಣದ ಆರಂಭ

೧೮೫೪ರ ಪ್ರಸಿದ್ಧ 'ಹ್ಯಾಲಿಫಾಕ್ಸ್ ಡಿಸ್ಪಾಚ್' ನಂತೆ ಪಾಶ್ಚಾತ್ಯ ಮಾದರಿಯ ವಿದ್ಯಾಭ್ಯಾಸ ಅತ್ಯಂತ ಸೂಕ್ತವಾದುದೆಂದು ಪರಿಗಣಿಸಲ್ಪಟ್ಟಿದ್ದರೂ ಭಾರತದ ಇತರ ಪ್ರಾಂತ್ಯಗಳಂತೆ ಮೈಸೂರಿನಲ್ಲಿ ಬ್ರಿಟಿಷ್ ಕಮಿಷನರ್‌ಗಳ ಆಡಳಿತದಲ್ಲಿ ವ್ಯವಸ್ಥಿತ ರೀತಿಯ ವಿದ್ಯಾಭ್ಯಾಸದ ಪದ್ಧತಿಯಿರಲಿಲ್ಲ. ಇಂಗ್ಲೀಷ್ ಭಾಷೆ ಉನ್ನತಮಟ್ಟದ ವಿದ್ಯಾಸಂಸ್ಥೆಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದಿದ್ದರೂ ಸಹ ಕೆಳಗಿನ ತರಗತಿಗಳಲ್ಲಿ ದೇಶೀಯ **(Vernacular)** ಭಾಷೆ ಬಳಕೆಯಲ್ಲಿತ್ತು. ಐರೋಪ್ಯ ಕೃತಿಗಳನ್ನು ಆಯಾಯ ಸ್ಥಳೀಯ ಭಾಷೆಗಳಿಗೆ ಭಾಷಾಂತರಿಸಿದ್ದರಿಂದ ಅಂದಿನ ಸಮಾಜದ ಎಲ್ಲಾ ವರ್ಗದ ಜನಗಳಿಗೂ ಇಂಗ್ಲೀಷ್ ಭಾಷೆಯ ಪ್ರಜ್ಞೆ ಮಾಡಿತು. ಬ್ರಿಟಿಷ್ ಇಂಡಿಯಾದಲ್ಲಿ ಇಂಗ್ಲೀಷ್ ಶಿಕ್ಷಣವಿಲ್ಲದ ವ್ಯಕ್ತಿ ಸರ್ಕಾರದ ಉನ್ನತ ಹುದ್ದೆಗೆ ಹೋಗಲು ಸಾಧ್ಯವಿಲ್ಲವೆನ್ನುವಷ್ಟು ಇಂಗ್ಲೀಷ್ ವಿದ್ಯಾಭ್ಯಾಸದ ಬಗ್ಗೆ ಜನಗಳಿಗೆ ಅರಿವುಂಟಾಯಿತು.

ಮೈಸೂರಿನಲ್ಲಿ ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ೧೮೩೨ರಲ್ಲಿ ಇಂಗ್ಲೀಷನ್ನು ಪರಿಚಯಿಸಿದ ಮೊದಲಿಗರು. 'ರಾಜಾ ಉಚಿತ ಶಾಲೆ' ಎಂದು ಸ್ಥಾಪಿಸಲ್ಪಟ್ಟ ಈ ಸಂಸ್ಥೆ ಮಿಷನರಿ ಟಿ. ಹಡ್ಸನ್ ರವರ ಮೇಲ್ವಿಚಾರಣೆಯಲ್ಲಿ ಮೈಸೂರಿನಲ್ಲಿ ನಡೆಯುತ್ತಿತ್ತು.

ಕ್ರೈಸ್ತಧರ್ಮ ಪ್ರಚಾರ ಮತ್ತು ಮತಾಂತರ ಮುಖ್ಯ ಧ್ಯೇಯವಾಗಿದ್ದಾಗ್ಯೂ ಪ್ರಾರಂಭದ ದಿಶೆಯಲ್ಲಿ (೧೮೪೦ ರಿಂದ ೧೮೫೪ರ ವರೆಗೆ) ಮೈಸೂರಿನಲ್ಲಿ ಮಿಷನರಿಗಳು ಮಾಡಿದ ಇಂಗ್ಲೀಷ್ ಪ್ರಚಾರಕಾರ್ಯ ಪ್ರಶಂಸನೀಯವಾದುದು. ದಿ ಲಂಡನ್ ಮಿಷನ್, ದಿ ಬೇಸಲ್ ಮಿಷನ್ ಮತ್ತು ದಿವೆಸ್ಲಿಯನ್ ಮಿಷನ್‌ಗಳು ಇಂಗ್ಲೀಷ್ ಭಾಷಾ ಪ್ರಚಾರಕಾರ್ಯದಲ್ಲಿ ಮುಂದಾಳತ್ವ ವಹಿಸಿದ್ದವು. ಇವುಗಳ ಪೈಕಿ ಲಂಡನ್ ಸೊಸೈಟಿ ಅತ್ಯಂತ ಹಳೆಯ ಮಿಷನ್ ಆಗಿದ್ದು, ೧೮೨೪ರಲ್ಲಿ ರೆವರೆಂಡ್ ಎಸ್. ಲಾಡ್ಲೆರ್ ಮತ್ತು ರೆವರೆಂಡ್ ಫೋರ್ಬ್ಸ್‌ರವರಿಂದ ಸ್ಥಾಪಿಸಲ್ಪಟ್ಟಿತು. ಇವರಿಬ್ಬರೂ ನುರಿತ ವಿದ್ವಾಂಸರು ಮತ್ತು ಐರೋಪ್ಯ ಪ್ರಾಧ್ಯಾಪಕರುಳ್ಳ ಒಂದು ಇಂಗ್ಲೀಷ್ ಕಾಲೇಜನ್ನು ಬೆಂಗಳೂರಿನಲ್ಲಿ ಸ್ಥಾಪಿಸಬೇಕೆಂಬ ಅಭಿಲಾಷೆ ಹೊಂದಿದ್ದು, ಈ ಯೋಜನೆ ಬೆಂಗಳೂರಿನ ಪ್ರಜೆಗಳಿಂದ ಸ್ವಾಗತಿಸಲ್ಪಟ್ಟರೂ ನಿರ್ದೇಶಕರ ಸಮಿತಿ **(Board of Directors)**ಯ ಮಂಜೂರಾತಿ ದೊರಕದೆ ಬೆಂಗಳೂರು ಅಂದೇ ಉನ್ನತ ಮಟ್ಟದ ವಿದ್ಯಾಸಂಸ್ಥೆಯೊಂದನ್ನು ಕಳೆದುಕೊಂಡಿತು.

ಬೆಂಜಮಿನ್ ಎಲ್. ರೈಸ್ (೧೮೧೪–೧೮೮೭) ಬೆಂಗಳೂರಿನಲ್ಲಿ ನೆಲಸಿದ ಮತ್ತೊಬ್ಬ ಮಿಷನರಿಯಾಗಿದ್ದು, ವಿದ್ಯಾಭ್ಯಾಸದ ಪ್ರಗತಿಗೆ ಶ್ರಮಿಸಿದವನಾಗಿದ್ದ. ಬೆಂಗಳೂರಿನ ಲಂಡನ್ ಮಿಷನ್‌ನಲ್ಲಿ ಮೂರು ತಮಿಳು ದಿನದ ಶಾಲೆಗಳಲ್ಲದೆ ಇಂಗ್ಲೀಷ್ ಮತ್ತು ಕನ್ನಡ ಬೋಧಿಸುತ್ತಿದ್ದ ಅನಾಥ ಬಾಲಕರ ಕೇಂದ್ರವೊಂದಿತ್ತು. ಅಲ್ಲದೆ ಶ್ರೀಮತಿ ರೈಸ್ ಮತ್ತು ಶ್ರೀಮತಿ ಸ್ಯೂವೆಲ್‌ರವರ ಮೇಲ್ವಿಚಾರಣೆಯಲ್ಲಿ ಬಾಲಕಿಯರ ಬೋರ್ಡಿಂಗ್

ಶಾಲೆಯೊಂದು ೧೮೪೧ರಲ್ಲಿದ್ದು ಇಂಗ್ಲೀಷ್ ಮತ್ತು ತಮಿಳಿನಲ್ಲಿ ಬೋಧನೆ ನಡೆಯುತ್ತಿತ್ತು.

**ವೆಸ್ಲಿಯನ್ ಸೊಸೈಟಿ ;** ಬೆಂಗಳೂರಿನ ದಂಡಿನಲ್ಲಿ ೧೮೩೪ರಲ್ಲಿ ಹಡ್ಸನ್‌ರಿಂದ ಸ್ಥಾಪಿಸಲ್ಪಟ್ಟಿದ್ದ ಇಂಗ್ಲೀಷ್ ಶಾಲೆಯ ವಿದ್ಯಾರ್ಥಿಗಳ ಪ್ರಗತಿಯ ಬಗ್ಗೆ ಕಮೀಷನರ್ ಸರ್ ಮಾರ್ಕ್ ಕಬ್ಬನ್‌ರವರು ಸಂತುಷ್ಟರಾಗಿದ್ದರು ಮತ್ತು ಶಾಲೆಗೆ ಗೌರ್ನರ್ ಜನರಲ್ ಲಾರ್ಡ್ ಬೆಂಟಿಂಕರು ಮೂರುನೂರು ರೂಪಾಯಿಗಳ ಸಹಾಯಧನ ಕೊಟ್ಟಿದ್ದರು.[1] ೧೮೪೦ರಲ್ಲಿ ಈ ಮಿಷನರಿಯು ಬೆಂಗಳೂರಿನಲ್ಲಿ ಪಠ್ಯ ಪುಸ್ತಕಗಳ ಪ್ರಕಟಣೆಗಾಗಿ ಒಂದು ಪ್ರೆಸ್ ಪ್ರಾರಂಭಿಸಿತು. ವೆಸ್ಲಿಯನ್ ಮಿಷನರಿಯವರು ಪ್ರಾರಂಭಿಸಿದ ದೇಶೀಯ ವಿದ್ಯಾಸಂಸ್ಥೆ (**Native Educational Institution**)ಗೆ ಕಮೀಷನರ್‌ರವರಿಂದ ಮಾಹೆಯಾನ ೫೦ ರೂ.ಗಳ ಭತ್ಯೆ ಸಿಗುತ್ತಿತ್ತು. ೧೮೫೧ರಲ್ಲಿ ಈ ದೇಶೀಯ ವಿದ್ಯಾಸಂಸ್ಥೆಯು ಪ್ರೌಢಶಾಲೆಯಾಗಿ ಮಾರ್ಪಾಟಾಗಿ ಪ್ರಾಂತ್ಯದ ಇತರ ವಿದ್ಯಾಸಂಸ್ಥೆಗಳಿಗೆ ಮಾದರಿಯಾಯಿತು. ಈ ಶಾಲೆಯಲ್ಲಿ ಬೈಬಲ್ ಬಗ್ಗೆ ಶಿಕ್ಷಣ ನೀಡುತ್ತಿದ್ದರು; ಹಾಜರಿ ಐಚ್ಛಿಕವಾಗಿರುತ್ತಿತ್ತು. ೧೮೫೨ರಲ್ಲಿ ಈ ಸಂಸ್ಥೆಯಲ್ಲಿ ೪೦೦ ಬಾಲಕರಿಗೆ ಸ್ಥಳಾವಕಾಶವಿದ್ದು ೨೦೦ ಬಾಲಕರು ಒಳ್ಳೆಯ ಇಂಗ್ಲೀಷ್ ಶಿಕ್ಷಣ ಪಡೆಯುತ್ತಿದ್ದರು. ಒಬ್ಬ ಇನ್‌ಸ್ಪೆಕ್ಟರನ್ನು ನೇಮಿಸಿ, ಈ ಸಂಸ್ಥೆಗೆ ಭೇಟಿ ನೀಡಿ ವರದಿ ಸಲ್ಲಿಸುವಂತೆ ಮತ್ತು ವಿದ್ಯಾರ್ಥಿಗಳು ಸಾರ್ವಜನಿಕ ಸೇವೆಗೆ ಅರ್ಹರಾಗಲು ತಕ್ಕ ವಿಷಯಗಳ ಅಭ್ಯಾಸದ ಬಗ್ಗೆ ದೇಶೀಯ ಮತ್ತು ಐರೋಪ್ಯರನ್ನೊಳಗೊಂಡ ವಿದ್ಯಾಸಮಿತಿ (**Education Board**) ಯೊಂದನ್ನು ರಚಿಸುವಂತೆ ವಿದ್ಯಾಸಮಿತಿಯ ಕಾರ್ಯದರ್ಶಿಗಳಾದ ಜೆ. ಗ್ಯಾರೆಟ್ ಮತ್ತು ಕೃಷ್ಣಂನಾಯ್ಡುರವರು ೧೯ನೇ ಮಾರ್ಚ್ ೧೮೫೨ರಲ್ಲಿ ಸರ್ಕಾರಕ್ಕೆ ನೀಡಿದ್ದ ಸಲಹೆಗೆ ೧ನೇ ಜುಲೈ ೧೮೫೨ರಲ್ಲಿ ಕಬ್ಬನ್‌ರ ಮಂಜೂರಾತಿ ದೊರಕಿತು.[2]

ಈ ಶಾಲೆಗಳು ೩೦೦–೪೦೦ ವಿದ್ಯಾರ್ಥಿಗಳಿಗೆ ಇಂಗ್ಲೀಷ್ ಭಾಷೆಯ ಬಗ್ಗೆ ಅರೆ ತಿಳುವಳಿಕೆ ನೀಡಿ ಉನ್ನತ ಹುದ್ದೆಗೂ ಅವಕಾಶವಿಲ್ಲದೆ, ಜನಗಳಿಗೆ ಉಪಯೋಗವಾಗದಿರುವುದಕ್ಕೆ ಶಿಕ್ಷಕರ ಅಲ್ಪವೇತನ, ತರಬೇತಿಯಿಲ್ಲದಿರುವುದೇ ಕಾರಣವೆಂದು ಭಾವಿಸಿದ ರೆವರೆಂಡ್ ಗ್ಯಾರೆಟ್‌ರವರು ೧೧ನೇ ಅಕ್ಟೋಬರ್ ೧೮೫೩ರಲ್ಲಿ ಬೆಂಗಳೂರು ದೇಶೀಯ ವಿದ್ಯಾಸಂಸ್ಥೆಯಲ್ಲಿ ನಾರ್ಮಲ್ ತರಬೇತಿ ತರಗತಿಯೊಂದನ್ನು ಪ್ರಾರಂಭಿಸುವಂತೆಯೂ ಬೆಂಗಳೂರು ಪೇಟೆ ಮತ್ತು ಬೆಂಗಳೂರು ದಂಡು ಇಲ್ಲಿ ತಲಾ ಒಂದೊಂದು ಇಂಗ್ಲೀಷ್ ಶಾಲೆಯನ್ನು ಪ್ರಾರಂಭಿಸಿದಲ್ಲಿ ಭಾಷಾ ಪ್ರಚಾರಕ್ಕೆ ಸಹಾಯಕವಾಗುವುದೆಂದೂ ಸಲಹೆ ಮಾಡಿರುತ್ತಾರೆ.[3] ವಿದ್ಯಾರ್ಥಿವೇತನ ಪಡೆಯುವ ವಿದ್ಯಾರ್ಥಿಗಳಿಗೆ ಬೆಂಗಳೂರಿನ ಕೇಂದ್ರೀಯ ಸಂಸ್ಥೆಗೆ ಉನ್ನತ ತರಗತಿಗೆ ಭರ್ತಿ ಮಾಡುವಂತೆ ಸಲಹೆ ನೀಡಿದ್ದುದಲ್ಲದೆ, ೫೦೦ ರೂ.ಗಳನ್ನು ಈ ಕೆಳಗಿನಂತೆ ವಿನಿಯೋಗಿಸಲು ಸೂಚಿಸಿರುತ್ತಾರೆ :

| | |
|---|---|
| ಬೆಂಗಳೂರು ದಂಡಿನ ನೂತನ ಶಾಲೆಗೆ | ರೂ. ೨೦೦ |
| ನಾರ್ಮಲ್ ತರಬೇತಿ ತರಗತಿಯ ಇಂಗ್ಲೀಷ್ ಶಿಕ್ಷಕರಿಗೆ | ರೂ. ೧೮೦ |
| ನಾರ್ಮಲ್ ತರಬೇತಿ ತರಗತಿಯ ದೇಶೀಯ ಶಿಕ್ಷಕರಿಗೆ ಪುಸ್ತಕ, ಉಪಕರಣಗಳ ಖರೀದಿಗೆ | ರೂ. ೧೨೦ |

೧೮೫೭ರಲ್ಲಿ ದೇಶೀಯ ವಿದ್ಯಾಸಂಸ್ಥೆಗೆ ನೀಡುತ್ತಿದ್ದ ಭತ್ಯ ೮೦೦ರೂ ; ಶಾಲೆಯ ೧೫೦ ರೂ. ಬೆಲೆಯ ಕಟ್ಟಡ ವೆಸ್ಲಿಯನ್ ಮಿಷನ್‌ಗೆ ಸೇರಿತ್ತು.[4] ಈ ಸಂಸ್ಥೆಯಲ್ಲಿದ್ದ ವೈಜ್ಞಾನಿಕೋಪಕರಣ ಸಾವಿರ ಪೌಂಡ್ ಬೆಲೆಯದಾಗಿತ್ತು ೧೮೫೮–೧೮೫೯ರಲ್ಲಿ ಮಿಷನರಿಯಿಂದ ಬೇರ್ಪಟ್ಟ ಈ ಶಾಲೆಯು ಮದ್ರಾಸ್ ವಿಶ್ವವಿದ್ಯಾನಿಲಯಕ್ಕೆ ಸೇರಿದ ಸಂಪೂರ್ಣ ಸರ್ಕಾರಿ ಸಂಸ್ಥೆಯಾಯಿತು.

**ಬೆಂಗಳೂರು ಪ್ರೌಢಶಾಲೆ :** ಬೆಂಗಳೂರು

1. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ, ಪು. ೭೯
2. Education File 1 of 1854, Sl. 1–2
3. Education File 1 of 1854, Sl. 1–2
4. Education File 1 of 1856, Sl. 1

ಪ್ರೌಢಶಾಲೆಯು ೧೮೭೫ರಲ್ಲಿ 'ಸೆಂಟ್ರಲ್ ಕಾಲೇಜು' ಎಂದು ಕರೆಯಲ್ಪಟ್ಟು ಮದ್ರಾಸ್ ವಿಶ್ವವಿದ್ಯಾನಿಲಯಕ್ಕೆ ಸೇರಿದ ಪ್ರಥಮದರ್ಜೆ ಕಾಲೇಜಾಯಿತು. ರೆವರೆಂಡ್ ಜೆ. ಗ್ಯಾರೆಟ್‌ರವರು ಈ ಕಾಲೇಜಿನ ಪ್ರಥಮ ಪ್ರಾಂಶುಪಾಲರಾಗಿಯೂ ಸೇವೆ ಸಲ್ಲಿಸಿದರು. ಅಲ್ಲಿನ ವಿದ್ಯಾರ್ಥಿಯಾಗಿದ್ದ ದಿವಂಗತ ಡಾ॥ ಆರ್. ನರಸಿಂಹಾಚಾರ್ಯರು ತಮ್ಮ ನೆನಪುಗಳನ್ನು ತಿಳಿಸುತ್ತಾ, "ಪ್ರೌಢಶಾಲೆಯೆಂದು ಕರೆಯಲ್ಪಟ್ಟರೂ ಇಲ್ಲಿ ಬಿ. ಎ. ಪದವಿ ತರಗತಿಯವರೆಗೆ ಕಲಿಸಲಾಗುತ್ತಿತ್ತು. ನಾನು ೧೮೭೮ರಲ್ಲಿ ಸೆಂಟ್ರಲ್ ಕಾಲೇಜನ್ನು ಸೇರಿದಾಗ ಅಲ್ಲಿ ಬಿ. ಎ., ಎಫ್.ಎ. ತರಗತಿಗಳಲ್ಲದೆ ಚಿಕ್ಕ ಅಂದರೆ ಅಕ್ಷರಾಭ್ಯಾಸದ ತರಗತಿಯೂ ನಡೆಯುತ್ತಿತ್ತು. ಎಲ್ಲವೂ ಇಂದಿನ ಗ್ರಂಥಭಂಡಾರವಿರುವ ಮಧ್ಯದ ಬ್ಲಾಕಿನಲ್ಲಿ ನಡೆಯುತಿತ್ತು"[5] ಎಂದು ಸ್ಮರಿಸಿಕೊಂಡಿದ್ದಾರೆ. ೧೮೭೯ರಲ್ಲಿ ಪ್ರಾಂಶುಪಾಲರಾಗಿದ್ದ ಚಾರ್ಲ್ಸ್ ವಾಟರ್ಸ್‌ರವರು ಆರ್. ನರಸಿಂಹಾಚಾರ್ಯರು ಎಫ್. ಎ. ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲಿ ಉತ್ತೀರ್ಣರಾದಾಗ ಸಂತೋಷ ತಡೆಯಲಾರದೆ ತರಗತಿಯಲ್ಲಿ ತಮ್ಮ ಟೊಪ್ಪಿಗೆಯನ್ನು ಎಸೆದು ಕುಣಿದಾಡಿದರಂತೆ. ಅಂದಿನ ಕಾಲದಲ್ಲಿ ಐರೋಪ್ಯ ಪ್ರಾಧ್ಯಾಪಕರೊಬ್ಬರು ತಮ್ಮ ವಿದ್ಯಾರ್ಥಿಯೊಬ್ಬನ ವಿದ್ಯಾಪ್ರಗತಿಯ ಬಗ್ಗೆ ವಹಿಸುತ್ತಿದ್ದ ಆಸ್ಥೆ, ಕಾಳಜಿಯನ್ನು ಇಲ್ಲಿ ನಾವು ಗಮನಿಸಬಹುದು.

ಈ ಸಂಸ್ಥೆಯ ವಿದ್ಯಾರ್ಥಿಗಳು ೧೮೬೩ರಲ್ಲಿ ಪ್ರಥಮವಾಗಿ ಮೆಟ್ರಿಕ್ಯುಲೇಷನ್ ಮತ್ತು ೧೮೬೬ರಲ್ಲಿ ಬಿ.ಎ. ಪರೀಕ್ಷೆಗೆ ಹಾಜರಾಗಿದ್ದು, ಮೂವರು ಐರೋಪ್ಯ ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದರು. ೧೮೬೧ರಲ್ಲಿ ಒಂದು ನಾರ್ಮಲ್ ಶಾಲೆಯು ಮತ್ತು ೧೮೬೨ರಲ್ಲಿ ಒಂದು ಇಂಜಿನಿಯರಿಂಗ್ ಶಾಲೆಯು ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟವು.

ಇವೆಲ್ಲವೂ ಇಂಗ್ಲೀಷ್ ಶಿಕ್ಷಣದ ಬಗ್ಗೆ ಜನಗಳಿಗಿದ್ದ ಉತ್ಸಾಹ ಪ್ರತಿಕ್ರಿಯೆಯನ್ನು ಸ್ಪಷ್ಟಪಡಿಸಿದರೂ ಇದು ಕೇವಲ ಸಮಾಜದ ಒಂದು ವರ್ಗದ ಜನಗಳಿಗೆ ಮತ್ತು ಹೆಚ್ಚಾಗಿ ಪಟ್ಟಣವಾಸಿಗಳಿಗೆ ಸೀಮಿತವಾಗಿತ್ತು. ಬಹಳ ಜನ ಮತಾಂತರದ ಭಯದಿಂದ ತಮ್ಮ ಮಕ್ಕಳನ್ನು ಇಂಗ್ಲೀಷ್ ಶಾಲೆಗಳಿಗೆ ಕಳುಹಿಸಲು ಇಚ್ಛಿಸುತ್ತಿರಲಿಲ್ಲ. ಇಂಗ್ಲೀಷ್ ವಿದ್ಯಾಭ್ಯಾಸ ಪಟ್ಟಣದಲ್ಲಾದರೂ ಹೆಚ್ಚಾಗಿ ಉಚ್ಚ ಜಾತಿಯ ಹೆಣ್ಣುಮಕ್ಕಳಿಗೆ ಲಭ್ಯವಿರುತ್ತಿತ್ತು.

---

5. Central College, 1875-1935, Old Boys Association Souvenir, 1935

ಎಂ. ಎನ್. ಪ್ರಭಾಕರ್

# ಔತ್ತರೇಯ ದ್ರಾವಿಡ: ವಾಸ್ತುಶಾಸ್ತ್ರಗಳಲ್ಲಿ ಲಕ್ಷಣಗಳು

ಇಂಡೋ ಆರ್ಯ ಅಥವಾ ಔತ್ತರೇಯ ದೇವಾಲಯಗಳನ್ನು ವಿವರಿಸುವಾಗ ವಿದ್ವಾಂಸ ಪರ್ಸಿಬ್ರೌನ್ ಆರು ಪ್ರಾದೇಶಿಕ ಶೈಲಿಗಳನ್ನು ಗುರುತಿಸುತ್ತಾರೆ.[1] ಭುವನೇಶ್ವರ, ಗುಜರಾತ್, ರಾಜಪುಟಾಣ ಮುಂತಾದ ಪ್ರದೇಶಗಳಲ್ಲಿ ಗುಂಪುಗಳಾಗಿ ಕಾಣಿಸಿಕೊಂಡ ದೇವಾಲಯ ಸಂಕೀರ್ಣಗಳನ್ನು ಪರ್ಸಿಬ್ರೌನ್‌ರಂತೆ, ವಿದ್ವಾಂಸ ಬೆಂಜಮಿನ್ ರೋಲೆಂಡ್ ಸಹ ಗುರುತಿಸಿ ಪ್ರತ್ಯೇಕವಾಗಿ ಅಧ್ಯಯನ ನಡೆಸಿದ್ದಾರೆ. ಪಾಶ್ಚಾತ್ಯ ವಿದ್ವಾಂಸರ, ಔತ್ತರೇಯ ದೇವಾಲಯಗಳ, ಈ ರೀತಿಯ ವರ್ಗೀಕರಣ ಪ್ರಾಚೀನ ರೀತಿಯ ಸಂಪ್ರದಾಯಕ್ಕೆ ಕೊಂಚ ಸಮೀಪದಲ್ಲಿದೆ ಎಂದು ಗುರುತಿಸಬಹುದು. ವಾಸ್ತುಗ್ರಂಥಗಳು ಔತ್ತರೇಯ ಸಂಪ್ರದಾಯವನ್ನು ಎರಡು ಕವಲುಗಳಾಗಿ ಪ್ರತ್ಯೇಕಿಸಿದ್ದು ಒಂದೆಡೆ ನಾಗರ, ಕಳಿಂಗ, ಲತಿನ, ಸಾಂಧಾರ, ಮಿಶ್ರಕಾದಿಗಳನ್ನೂ, ಮತ್ತೊಂದೆಡೆಯಲ್ಲಿ ದ್ರಾವಿಡ, ಭೂಮಿಜಾದಿಗಳನ್ನೂ ಗುರುತಿಸಿದೆ. ಪಾಶ್ಚಾತ್ಯರ ಪ್ರಕಾರ, ಔತ್ತರೇಯ ದೇವಾಲಯಗಳಲ್ಲಿ ದ್ರಾವಿಡವೆನ್ನುವ ಶೈಲಿಯ ಕಲ್ಪನೆ, ಊಹೆಗೂ ನಿಲುಕಲಾರದ ವಸ್ತು. ಹೊಯ್ಸಳರ ಕಾಲದ ವಾಸ್ತುಶೈಲಿಯನ್ನು ಗುರುತಿಸುವಾಗ ಪರ್ಸಿಬ್ರೌನ್ ಔತ್ತರೇಯ ಪ್ರಭಾವವನ್ನು ನಿರಾಕರಿಸುತ್ತಾ ದಾಕ್ಷಿಣಾತ್ಯ ಮೂಲವೆಂಬ ಅಂಶವನ್ನು ಸಮರ್ಥಿಸುತ್ತಾರೆ.[2]

ನಾಗರಾದಿ ಶೈಲಿಗಳಿಂದ, ಕಳಿಂಗ ಶೈಲಿಯನ್ನು ಪ್ರತ್ಯೇಕಿಸಿ, ಒರಿಸ್ಸಾದಲ್ಲಿ ಲಭ್ಯವಿರುವ ಪ್ರಾಚೀನ ಗ್ರಂಥಗಳಿಂದ ಕಳಿಂಗ ಶೈಲಿಯನ್ನು ಕರಾರುವಾಕ್ಕಾಗಿ ಅಭ್ಯಸಿಸಬಹುದು.[3] ಭುವನೇಶ್ವರ ದೇವಾಲಯಗಳ ಬಗ್ಗೆ ಪುರಾತತ್ವ ಇಲಾಖೆಯವರು ಪ್ರಕಟಿಸಿರುವ ಕಿರುಹೊತ್ತಿಗೆಯಲ್ಲಿ ಡಿ. ಮಿತ್ರಾ ಕಳಿಂಗ ಶೈಲಿಗೆ ಸಂಬಂಧಿಸಿದಂತೆ ಈ ರೀತಿ ಬರೆಯುತ್ತಾರೆ :[4]

**"The student of Orissan architecture is singularly fortunate in that the arichitectural canon as evolved in Orissa has survived in a few texts, where in each temple type and each individual member there of, however small has been given a distinct name and measurements of the components invariably operating under there precise law of proposition laid down in cryptic terms."**

ನಾಗರಾದಿ ಶೈಲಿಗಳಿಗೂ ಈ ರೀತಿಯ ಅಧ್ಯಯನ ಸೌಲಭ್ಯವಿದೆ. ಈಗ ಲಬ್ಧವಿರುವ ಸಮರಾಂಗಣ ಸೂತ್ರಧಾರ, ಅಪರಾಜಿತಪೃಚ್ಛಾ ಹಾಗೂ ಈ ಗ್ರಂಥಗಳ ಪ್ರಭಾವದಿಂದ ರಚಿತವಾದ ಪ್ರಾಸಾದಮಂಡನ, ಪ್ರಾಸಾದಮಂಜರಿ, ದೀಪಾರ್ಣವ ಇತ್ಯಾದಿ ಗ್ರಂಥಗಳಿಂದ ಹಾಗೂ ಈ ವಾಸ್ತುಶಾಸ್ತ್ರಗಳನ್ನು ಬಲ್ಲ ಸ್ಥಪತಿ

1. ಪರ್ಸಿಬ್ರೌನ್, ಇಂಡಿಯನ್ ಆರ್ಕಿಟೆಕ್ಚರ್ (ಬುದ್ಧಿಸ್ಟ್ ಅಂಡ್ ಹಿಂದೂ), ಬಾಂಬೆ, ೧೯೬೬, ಪುಟ ೧೦೧
2. ಅದೇ, ಪುಟ ೧೩೮
3. ಬೆಂಜಮಿನ್ ರೋಲೆಂಡ್, ದಿ ಆರ್ಟ್ ಅಂಡ್ ಆರ್ಕಿಟೆಕ್ಚರ್ ಆಫ್ ಇಂಡಿಯಾ, ೧೯೭೦, ಪುಟ ೨೮೦
4. ದೇಬಲ ಮಿತ್ರಾ, ಭುವನೇಶ್ವರ್, ಆರ್ಕಿಯೋಲಾಜಿಕಲ್ ಸರ್ವೇ ಆಫ್ ಇಂಡಿಯಾ, ನ್ಯೂಡೆಲ್ಲಿ, ೧೯೭೮, ಪುಟ ೧೩

ಗಳ ಪರಂಪರೆ ಉಳಿದಿರುವುದರಿಂದ ಈ ಸಂಪ್ರದಾಯ ಶೈಲಿಗಳೂ ಉಳಿದಿವೆ.

ದ್ರಾವಿಡಾದಿ ಶೈಲಿಗಳಿಗೆ ಈ ರೀತಿಯ ಗ್ರಂಥ ಸೌಲಭ್ಯವಿಲ್ಲ. ಪ್ರತ್ಯೇಕ ಗ್ರಂಥಗಳು ರಚನೆ ಗೊಂಡವೋ ಇಲ್ಲವೋ ಹೇಳಲು ಬರುವಂತಿಲ್ಲ. ರಚನೆ ಗೊಂಡು ಕಾಲಗರ್ಭದಲ್ಲಿ ಹುದುಗಿರಬಹುದಾದರೂ ಈ ವರೆವಿಗೆ ಬೆಳಕಿಗೆ ಬಂದಿಲ್ಲ.

ಔತ್ತರೇಯ ದ್ರಾವಿಡ ಶೈಲಿಯ ಕಲ್ಪನೆ ದೊರೆ ತದ್ದು ದೊಡ್ಡಗದ್ದವಳ್ಳಿ ಶಾಸನದಿಂದ. ಅಸ್ಪಷ್ಟವಾಗಿ ಮೂಡಿದ ಕಲ್ಪನೆಗೆ ಸಮರಾಂಗಣ ಸೂತ್ರಧಾರ ಹಾಗೂ ಅಪರಾಜಿತಪೃಚ್ಛಾ ಗ್ರಂಥಗಳು ಪುಷ್ಟಿ ನೀಡಿದ್ದು, ಔತ್ತ ರೇಯ ದ್ರಾವಿಡ ಶೈಲಿಯ ಅಧ್ಯಯನಕ್ಕೆ ಚಾಲನೆ ದೊರೆ ಯಿತು. ನಾಗರಾದಿ ಶೈಲಿಗಳನ್ನು ವಿವರಿಸುವಲ್ಲಿ ದ್ರಾವಿ ಡಾದಿ ಶೈಲಿಗಳ ವಿವರಣೆ ಕ್ವಚಿತ್ತಾಗಿ ಸುಳಿದಿದ್ದು ಈ ವಿವರಗಳ ಆಧಾರದಿಂದ ಗುರುತಿಸಬೇಕಾಗಿದೆ. ಈ ವಿವರ ಗಳನ್ನು ಸಂಪೂರ್ಣವಾಗಿ ಅರ್ಥೈಸಲು ಸಾಧ್ಯವಾಗಿಲ್ಲ. ಆದರೂ ಖಚಿತವಾಗಿ ಅರ್ಥೈಸಬಲ್ಲ ವಿವರಗಳಿಂದ ಒಂದು ಸಮಗ್ರರೂಪವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿದೆ. ಈ ವಿವರಗಳನ್ನು ಗ್ರಹಿಸಿ ವ್ಯವಸ್ಥಿತವಾಗಿ ಇರಿಸಿದಲ್ಲಿ ಔತ್ತ ರೇಯ ದ್ರಾವಿಡ ಶೈಲಿಯ ಅಧ್ಯಯನಕ್ಕೆ ನಾಂದಿಯಾಗ ಬಹುದು. ಅಂತಹ ಮೊದಲ ಪ್ರಯತ್ನವೇ ಈ ಲೇಖನದ ಉದ್ದೇಶ. ಕರ್ನಾಟಕದ ಔತ್ತರೇಯ ದೇವಾಲಯಗಳ ಗುರುತಿಸುವಿಕೆ ಆಮಲಕವುಳ್ಳ ಶಿಖರಗಳಿಂದ ಪ್ರಾರಂಭ ಎಂದು ಸ್ಥೂಲವಾಗಿ ಗುರುತಿಸಬಹುದು. ಪಟ್ಟದಕಲ್ಲಿನ ಪಾಪನಾಥ, ಗಳಗನಾಥ, ಮಹಾಕೂಟದಲ್ಲಿರುವ ಸಂಗ ಮೇಶ್ವರ ದೇವಾಲಯಗಳು, ಐಹೊಳೆಯ ಹುಚ್ಚಮಲ್ಲಿ ಗುಡಿ, ತದನಂತರ ಆಮಲಕಗಳು ಕಾಣೆಯಾದ ಪಟ್ಟದ ಕಲ್ಲಿನ ಕಾಶಿವಿಶ್ವೇಶ್ವರ, ಐಹೊಳೆಯ ತಾರಪ್ಪನ ಗುಡಿ ಇತ್ಯಾದಿ ದೇವಾಲಯಗಳನ್ನೂ ಬಾಗಿದ ಶಿಖರದಿಂದಾಗಿ ಗುರುತಿಸಬಹುದು. ಐಹೊಳೆಯ ಮಲ್ಲಿಕಾರ್ಜುನ, ಮಹಾ ಕೂಟದಲ್ಲಿನ ಪುಷ್ಕರಿಣಿಯ ಹಿಂಬದಿಯ ಕೆಲವು ಗುಡಿಗಳೂ ಆಮಲಕದಿಂದಾಗಿ ಔತ್ತರೇಯವೆಂದು ವರ್ಗೀಕೃತ ಗೊಂಡಿವೆ.

ವಾಸ್ತುಶಾಸ್ತ್ರಗಳು ಆಮಲಕವುಳ್ಳ ನಾಗರಾದಿ ಶೈಲಿಗಳನ್ನು ಕವುಚಿದ ಬೋಗುಣಿಯಾಕಾರದ, ಘಂಟಾ ಕಾರದ ಶಿಖರಗಳುಳ್ಳ ದ್ರಾವಿಡಾದಿ ಶೈಲಿಗಳಿಂದ ಪ್ರತ್ಯೇಕ ವಾಗಿ ಗುರುತಿಸಿವೆ.

ದ್ವಯೋಃ ಪ್ರರಥಯೋರ್ಮಧ್ಯೇ ವೃತ್ತಮಲ ಸಾರಕಂ
ನಾಗರೇ ಲತಿನೋ ಕುರ್ಯಾತ್ ಸಾಂಧಾರೇ ಚೈವ ಮಿಶ್ರಕೇ
ವಿಮಾನನಾಗರ ಛಂದೇ ವಿಮಾನಪುಷ್ಪಕೇ ತಥಾ[5]

ಆಮಲಸಾರವು ನಾಗರ, ಲತಿನ, ಸಾಂಧಾರ, ಮಿಶ್ರಕ, ವಿಮಾನನಾಗರ, ವಿಮಾನಪುಷ್ಪಕ ಶೈಲಿಯ ದೇವಾಲಯಗಳ ಶಿಖರಗಳನ್ನು ಅಲಂಕರಿಸುತ್ತದೆ.

ವಿಮಾನೇ ಭೂಮಿಜೇ ಚೈವ ವೃತ್ತೇಚ ಕರ್ಣಕಾಂತಕೇ
ದ್ರಾವಿಡೇತು ತಥಾ ಚೈವಂ ತಂತು ರೇಖಾನುಪೂರ್ವಕಂ
ವರಾಟೇ ತು ಭವೇತ್ ಘಂಟಾ ಯಾದೃಕ್ ಮಂದಾರಪುಷ್ಪಕಃ[6]

ಭೂಮಿಜ, ದ್ರಾವಿಡ, ವರಾಟ ಇತ್ಯಾದಿ ಶೈಲಿ ಗಳಲ್ಲಿ ಘಂಟಾಕಾರದ ಶಿಖರವಿದ್ದು ವರಾಟ ಶೈಲಿಯಲ್ಲಿ 'ಮಂದಾರ ಪುಷ್ಪಕ'ವೆನಿಸಿದೆ. ದ್ರಾವಿಡ ಶೈಲಿಯ ದೇವಾ ಲಯಗಳ ಘಂಟಾಕಾರದ ಶಿಖರವನ್ನು 'ದ್ರಾವಿಡೀ' ಎಂದು ಹೆಸರಿಸಿರುವುದುಂಟು :

ದ್ರಾವಿಡೀ ಚ ಭವೇದ್ ಘಂಟಾ ನಾಸಿಕೋ ಪಾಂಗ ಶೋಭಿತಾ[7]

---

5. ಪಿ. ಎ. ಮಂಕಡ್ (ಸಂ), ಅಪರಾಜಿತಪೃಚ್ಛಾ, ಓರಿಯೆಂಟಲ್ ಇನ್ಸ್ಟಿಟ್ಯೂಟ್, ಬರೋಡ, ೧೯೫೦, ಪುಟ ೩೪೭, ಅಧ್ಯಾಯ ೧೩೯, ಶ್ಲೋಕ ೩೧-೩೨
6. ಅದೇ, ಅಧ್ಯಾಯ ೧೩೯, ಶ್ಲೋಕ ೩೩–೩೪
7. ಅದೇ, ಪುಟ ೩೫೨, ಅಧ್ಯಾಯ ೧೪೨, ಶ್ಲೋಕ ೧೦

ಚತುರಾಶ್ರಾಕಾರದ ಔತ್ತರೇಯ ದ್ರಾವಿಡ ದೇವಾಲಯಗಳಲ್ಲಿ ಘಂಟಾ ಶಿಖರವನ್ನು ಸುಲಭವಾಗಿ ಗುರುತಿಸಬಹುದು. ನಕ್ಷತ್ರಾಕಾರದ, ಹಲವು ಕೋನಗಳ ಶಿಖರದಲ್ಲಿ ಘಂಟಾಕಾರವು ಪುಷ್ಪಾಕಾರವನ್ನು ಹೋಲುತ್ತದೆ. ಈ ಆಕಾರವು ವರಾಟ ಶೈಲಿಯ ಮಂದಾರಪುಷ್ಪಾಕಾರವೇ ಎಂಬ ಸಂಶಯಕ್ಕೆ ಎಡೆಮಾಡಿಕೊಡುತ್ತದೆ. ವರಾಟ ಶೈಲಿಯನ್ನು ಗುರುತಿಸಲು ಇನ್ನೂ ಸಾಧ್ಯವಾಗಿಲ್ಲ. ಈ ರೀತಿಯ ಸಂದೇಹಗಳು ಅರಸೀಕೆರೆಯ ಶಿವಾಲಯ, ಸೋಮನಾಥಪುರದ ಕೇಶವ ದೇವಾಲಯ ಮುಂತಾದೆಡೆಯಲ್ಲಿ ಹಲವು ಕೋನಗಳ ಶಿಖರಗಳನ್ನು ಕಂಡಾಗ ಕಾಡುತ್ತದೆ.

ದಾಕ್ಷಿಣಾತ್ಯ ಸಂಪ್ರದಾಯದ ನಾಗರ ಶೈಲಿಯ ದೇವಾಲಯಗಳೂ ಚತುರಶ್ರಾಕಾರದ ಕವುಚಿದ ಬೋಗುಣಿ ಆಕಾರದ ಘಂಟಾ ಶಿಖರವನ್ನು ಹೋಲುವ ಶಿಖರವನ್ನು ಹೊಂದಿದ್ದು, ಉದಾಹರಣೆಯಾಗಿ ಪಟ್ಟದಕಲ್ಲಿನ ವಿಜಯೇಶ್ವರ, ಬಾದಾಮಿಯ ಮೇಗುತಿ ಶಿವಾಲಯಗಳ ನಾಗರ ಶಿಖರಗಳನ್ನು ಗಮನಿಸಬಹುದು. ವಿಜಯೇಶ್ವರ ದೇವಾಲಯದ ಹಾರ ಹಾರಾಂತರಗಳ ಜೋಡಣೆಯಿಂದ ದಾಕ್ಷಿಣಾತ್ಯವೆನ್ನುವ ಅಂಶ ಖಚಿತವಾಗುವುದು. ಬಾದಾಮಿಯ ಮೇಗುತಿ ಶಿವಾಲಯದ ಪ್ರಸ್ತರ ಭಾಗವು ಆರಂಭ ಶೈಲಿಯನ್ನು ಪ್ರತಿನಿಧಿಸಿರುವುದರಿಂದ ಹಾರ ಹಾರಾಂತರಗಳು ಖಚಿತತೆಯನ್ನು ಒದಗಿಸಲಾರದು. ಗರ್ಭಗೃಹದ ಹಾಗೂ ಪ್ರದಕ್ಷಿಣಾಪಥದ ರಚನೆಯಿಂದಾಗಿ ದಾಕ್ಷಿಣಾತ್ಯವೆಂಬ ನಿರ್ದಿಷ್ಟವಾದ ಅಂಶ ಗಮನಕ್ಕೆ ಬರುವುದು.

ದಾಕ್ಷಿಣಾತ್ಯ ದೇವಾಲಯಗಳ ಅಧ್ಯಯನದಲ್ಲಿ ದೇವಾಲಯದ ಭಾಗಗಳನ್ನು ಗುರುತಿಸುವಾಗ ಊರ್ಧ್ವ ಕ್ರಮ ಹಾಗೂ ತಿರ್ಯಕ್ರಮ ರೀತ್ಯಾ ಎಂದು ಗುರುತಿಸುತ್ತಾರೆ.[8]

ಊರ್ಧ್ವಕ್ರಮದಲ್ಲಿ, ಅಧಿಷ್ಠಾನ, ಸ್ತಂಭ, ಪ್ರಸ್ತರ, ಕಂಠ, ಶಿಖರ, ಸ್ತೂಪಿ ಎಂದು ಷಡ್ವರ್ಗಗಳನ್ನು ಗುರುತಿಸುವುದುಂಟು. ಔತ್ತರೇಯ ದ್ರಾವಿಡ ಪ್ರಾಸಾದಗಳನ್ನೂ ಸಹ ಇದೇ ರೀತಿ ಪೀಠ, ಜಂಘಾ, ಭೂಮಿಕಾ, ವೇದಿ, ಘಂಟಾ ಮತ್ತು ಕಲಶ ಎಂದು ಹಂತ ಹಂತವಾಗಿ ಗುರುತಿಸಬಹುದು.

ಅಪರಾಜಿತಪೃಚ್ಛಾ ಗ್ರಂಥದಲ್ಲಿ ದ್ರಾವಿಡ ಶೈಲಿಯ ಪ್ರಮುಖ ಲಕ್ಷಣಗಳನ್ನು ಈ ರೀತಿ ಗುರುತಿಸಿದ್ದಾರೆ :

ಪೀಠೋರ್ಧ್ವೇ ಕರ್ಣರೇಖಾಷ್ಟ ಭೂಮಿಕಾ
ಕ್ರಮ ಸಂಸ್ಥಿತಾಃ
ವಿಭಕ್ತಿ ದಲನಾ ಪೂರ್ಣಾ ಲತಾ ಶೃಂಗ
ಕ್ರಮೋದ್ಭವಾಃ
ಮೇಷ ಮಕರ ಕುಟಪ್ಯೈಃ ಕಂಟಕೈರಾವೃತಾಃ
ಶುಭಾಃ
ವೇದೀ ಘಂಟಾ ನಾಸಿಕಾದ್ಯೈಃ ದ್ರಾವಿಡಾಃ
ಶುಭ ಲಕ್ಷಣಾಃ[9]

ಈ ಶ್ಲೋಕಗಳನ್ನು ಸಂಪೂರ್ಣವಾಗಿ ಅರ್ಥೈಸಲಾಗದಿದ್ದರೂ ಕೆಲವು ಪ್ರಮುಖ ಲಕ್ಷಣಗಳನ್ನು ಗುರುತಿಸಬಹುದು. ದ್ರಾವಿಡ ಶೈಲಿಯಲ್ಲಿ ಪೀಠ ಮತ್ತು ಪೀಠದ ಮೇಲೆ ಕರ್ಣರೇಖ ಭಾಗದಿಂದ ಆವೃತವಾದ ಭೂಮಿಗಳಿಂದ ರಚಿಸಲ್ಪಟ್ಟ ಶಿಖರ ಎಂದು ಗುರುತಿಸಿದೆ.

ಅಪರಾಜಿತಪೃಚ್ಛಾ ಹಾಗೂ ಸಮರಾಂಗಣ ಸೂತ್ರಧಾರ ಗ್ರಂಥಗಳಲ್ಲಿ ದ್ರಾವಿಡ ಪೀಠವನ್ನು ವಿವರಿಸುವ ಪ್ರತ್ಯೇಕ ಅಧ್ಯಾಯಗಳಿವೆ. ಇವೆರಡೂ ಗ್ರಂಥಗಳಲ್ಲಿನ ವಿವರಣೆಗಳು ಒಂದೇ ಎನಿಸಿದೆ. ಈ ಗ್ರಂಥಗಳ ಪ್ರಕಾರ ದ್ರಾವಿಡ ಶೈಲಿಯಲ್ಲಿ ಛಾವಣಿಯವರೆಗೆ ಪೀಠವೇ ಸಂಪೂರ್ಣ ಆವರಿಸಿರುವಂತೆ ಶೈಲಿಯನ್ನು ರೂಪಿಸಿರಲು ಸಾಧ್ಯವಿದೆ. ಎತ್ತರವಾಗಿ ರಚಿಸಲ್ಪಟ್ಟ ದ್ರಾವಿಡ ಪೀಠವನ್ನು ಲಕ್ಷ್ಮೇಶ್ವರದ ಸೋಮೇಶ್ವರ ದೇವಾಲಯದ ದಕ್ಷಿಣದಿಕ್ಕಿನ ಪ್ರವೇಶದ್ವಾರದಲ್ಲಿ ಗುರುತಿಸಬಹುದು. ಚಾಲುಕ್ಯರ ಕಾಲದ ಕೆಲವು ದೇವಾಲಯಗಳಲ್ಲಿ ಹೆಚ್ಚು ಆಕರ್ಷಕವೆನಿಸದ ಎತ್ತರವಾದ ಭಿತ್ತಿ ರಚನೆಯನ್ನು ಕುರುವತ್ತಿಯ ಮಲ್ಲಿಕಾರ್ಜುನ, ಡಂಬಳದ ದೊಡ್ಡಬಸಪ್ಪ,

---

8. ಆಸೂರಿ ಶ್ರೀನಿವಾಸಯ್ಯಂಗಾರ್ಯ ಮತ್ತು ತಿರುಪತಿ ಶ್ರೀನಿವಾಸಯ್ಯಂಗಾರ್ಯ, ಭರತಖಂಡದ ದೇವಾಲಯಗಳು, ಬೆಂಗಳೂರು, ೧೯೭೮, ಪುಟ ೨೦
9. ಅಪರಾಜಿತಪೃಚ್ಛಾ, ಪುಟ ೨೬೭, ಅಧ್ಯಾಯ ೧೪೬, ಶ್ಲೋಕ ೩೬-೩೭

ದೇವಾಲಯಗಳಲ್ಲಿ ಕಾಣಬಹುದು. ಹೊಯ್ಸಳರ ಕಾಲದ ಬೆಳವಾಡಿಯ ವೀರನಾರಾಯಣ ದೇವಾಲಯದಲ್ಲಿ ಸಹ ಜೋಳಾದ ಭಿತ್ತಿಭಾಗವಿದೆ. ಹೊಯ್ಸಳರ ತದನಂತರದ ಕಾಲದ ದೇವಾಲಯಗಳಲ್ಲಿ ನಾಗರ ಶೈಲಿಯ ಪೀಠ ಹಾಗೂ ಭಿತ್ತಿಯನ್ನು ಮೈಗೂಡಿಸಿಕೊಂಡು ಔತ್ತರೇಯ ಶೈಲಿಗಳ ಮಿಶ್ರಣಕ್ಕೆ ಅವಕಾಶವಾಯಿತು ಹಾಗೂ ಈ ರೀತಿಯ ರಚನೆ ಶಾಸ್ತ್ರಸಮ್ಮತವೆನಿಸಿತು.

ಔತ್ತರೇಯ ದೇವಾಲಯಗಳಲ್ಲಿ ಶೃಂಗವೆಂದಲ್ಲಿ ದೇವಾಲಯದ ಮೂಲಶಿಖರಕ್ಕೆ ಅನ್ವಯಿಸುವಂಥದ್ದು. ಛಾವಣಿಯ ಮೇಲಿಂದ ಅಮಲಸಾರದವರೆಗೆ ನಿಂತ ಮೂಲಭಾಗಕ್ಕೆ ಶೃಂಗವೆಂದು ಗುರುತಿಸುತ್ತಾರೆ. ಈ ಮೂಲಶೃಂಗಕ್ಕೆ ಹೊಂದಿಕೊಂಡಂತೆ ಉರುಶೃಂಗಗಳು ವಿವಿಧ ರೀತಿಯಲ್ಲಿ ಆವರಿಸಿ ನಿಂತಾಗ ಔತ್ತರೇಯ ಶಿಖರದ ಪೂರ್ಣ ಕಲ್ಪನೆ ದೊರೆಯುವುದು. ಉರುಶೃಂಗಗಳ ಜೋಡಣೆಯನ್ನು ರೇಖಾ ಎಂಬ ಪಾರಿಭಾಷಿಕ ಪದದಿಂದ ಗುರುತಿಸುತ್ತಾರೆ. ಮೂಲತಃ ಈ ಜೋಡಣೆಯ ಅಳತೆ ಆಕಾರಗಳನ್ನು ತಲಚ್ಛಂದಕ್ಕೆ ಹೊಂದಿಕೊಂಡಂತೆ ರಚಿಸಿದ್ದು ಶಿಖರದ ತುದಿಯವರೆಗೆ ಅನುಸರಿಸುವುದುಂಟು.

ಉರುಶೃಂಗಂ ಯದಾಲುಪ್ತಂ ರೇಖಾಕರ್ಣ
ಜಲಾಂತರೈಃ[10]

ಔತ್ತರೇಯ ಸಂಪ್ರದಾಯದ ನಾಗರಾದಿ ಶೈಲಿಗಳಲ್ಲಿ ಉರುಶೃಂಗವೂ ದ್ರಾವಿಡಾದಿ ಶೈಲಿಗಳಲ್ಲಿ ಕರ್ಣಕೂಟ, ಜಲಾಂತರ, ಪಂಜರ, ಶಾಲಾ ಮುಂತಾದ ರಚನೆಯನ್ನು ಮೂಲ ಶಿಬಿರದ ಸುತ್ತ ಕಾಣುತ್ತೇವೆ. ಕರ್ಣಕೂಟ, ಹಾರಾಂತರಗಳಿಂದ ಕೂಡಿದ ಅಂಗರಚನೆಯನ್ನು ಲತಾಶೃಂಗ ಎಂದು ಶಾಸ್ತ್ರಗಳು ಗುರುತಿಸಿವೆ.

ಔತ್ತರೇಯ ದ್ರಾವಿಡ ಶಿಖರಗಳು ಕರ್ಣಕೂಟ ಹಾಗೂ ಹಾರಾಂತರಗಳಿಂದ ಕೂಡಿದ ಭೂಮಿಗಳನ್ನು ಹೊಂದಿದ್ದು ಹನ್ನೆರಡು ಭೂಮಿಗಳವರೆಗೆ ಶಾಸ್ತ್ರರೀತ್ಯಾ ರಚಿಸಬಹುದಾಗಿದೆ. ಭೂಮಿಗಳ ಜೋಡಣೆ ಪೀಠದ ಮೇಲಿಂದ (?) ಆರಂಭಗೊಂಡು ಕಿರಿದಾಗುತ್ತಾ ಘಂಟಾಕಾರ ಶಿಖರ ನಂತರ ಕಲಶದೊಡನೆ ಅಂತ್ಯಗೊಳ್ಳುತ್ತದೆ. ಈ ಭೂಮಿಗಳ ಜೋಡಣೆಯೂ ತಲಚ್ಛಂದವನ್ನು ಅನುಸರಿಸಿದೆ.

ಔತ್ತರೇಯ ದ್ರಾವಿಡ ಶೈಲಿಯಲ್ಲಿ ಐದು ಪ್ರಮುಖ ಪ್ರಭೇದಗಳು. ಭೂಮಿಗಳ ಕರ್ಣಕೂಟ, ಹಾರಾಂತರ, ಪಂಜರ, ಶಾಲಾ ಇವುಗಳ ಜೋಡಣೆಯ ಆಕಾರ ಅಳತೆಯನ್ನು ಅನುಸರಿಸಿ ಈ ಪ್ರಭೇದಗಳು ಗುರುತಿಸಲ್ಪಟ್ಟಿವೆ. ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಈ ಜೋಡಣೆಯನ್ನು ತಲಚ್ಛಂದ ಎಂದು ಗುರುತಿಸಲ್ಪಟ್ಟಿದೆ. ತಲಚ್ಛಂದ ಆಕಾರ ಅಳತೆಗಳು ಪೀಠದಿಂದ ಆರಂಭಿಸಿ ಕಡೆಯ, ಕಿರಿದಾದ ಭೂಮಿಯವರೆಗೆ ಏಕಪ್ರಕಾರವಾಗಿ ಮುಂದುವರೆಯುವುದುಃ

ತತ್ರ ಪದ್ಮೋ ಮಹಾಪದ್ಮೋ ವರ್ಧ
ಮಾನಃ ಸ್ತಥಾಪರಃ
ಸ್ವಸ್ತಿಕಃ ಸರ್ವತೋಭದ್ರಃ ಪ್ರಾಸಾದಾಃ
ಪಂಚಕೀರ್ತಿತಾಃ[11]

ಸಮರಾಂಗಣ ಸೂತ್ರಧಾರ ಹಾಗೂ ಅಪರಾಜಿತ ಪೃಚ್ಛಾಗಳಲ್ಲಿ ಈ ಪ್ರಭೇದಗಳ ಹೆಸರುಗಳು ಒಂದೇ ಎನಿಸಿವೆ.

ಸ್ವಸ್ತಿಕಾ ಸರ್ವತೋಭದ್ರಾ ವರ್ಧಮಾನಾ
ತೃತೀಯಕಾಃ
ಸೂತ್ರ ಪದ್ಮಾ ಮಹಾಪದ್ಮಾ ದ್ರಾವಿಡ್ಯೈಃ
ಕರ್ಮಜರ್ಚಿತಾ
ದ್ರಾವಿಡಾಖ್ಯೇ ಚ ಪ್ರಾಸಾದೇ ಇಷುಭೇದಾಃ
ಸಮಾರಿತಾಃ[12]

---

10. ಅದೇ, ಪುಟ ೩೪೩, ಅಧ್ಯಾಯ ೧೩೮, ಶ್ಲೋಕ ೨೬
11. ಪಿ. ಎಸ್. ಅಗರವಾಲ (ಸಂ), ಸಮರಾಂಗಣ ಸೂತ್ರಧಾರ, ಓರಿಯೆಂಟಲ್ ಇನ್ಸ್ಟಿಟ್ಯೂಟ್, ಬರೋಡ, ೧೯೬೬, ಪುಟ ೪೬೯, ಅಧ್ಯಾಯ ೬೧, ಶ್ಲೋಕ ೩೨–೩೩
12. ಅಪರಾಜಿತಪೃಚ್ಛಾ, ಪುಟ ೨೬೭, ಅಧ್ಯಾಯ ೧೦೫, ಶ್ಲೋಕ ೨-೩

'ಸೂತ್ರಪದ್ಮ' 'ತತ್ರಪದ್ಮಾ' ಎಂಬ ಪ್ರತ್ಯೇಕ ಗ್ರಂಥಪಾಠಗಳಿದ್ದರೂ, ಪ್ರಭೇದವನ್ನು ಗುರುತಿಸುವಲ್ಲಿ 'ಪದ್ಮ' ಎನ್ನುವುದನ್ನು ಉಳಿಸಿಕೊಳ್ಳಲಾಗಿದೆ. ಸೂತ್ರ ಪದ್ಮ ಎಂಬ ಪಾಠ ಬೇರೆಡೆಯಲ್ಲಿ ಬಂದಿರುವುದುಂಟು. ಸ್ವಸ್ತಿಕ, ಸರ್ವತೋಭದ್ರ, ವರ್ಧಮಾನ, ಪದ್ಮ, ಮಹಾ ಪದ್ಮ ಇವು ದ್ರಾವಿಡಶೈಲಿಯ ಐದು ಪ್ರಭೇದಗಳು. ಸ್ವಸ್ತಿಕ, ಸರ್ವತೋಭದ್ರ, ವರ್ಧಮಾನ ಪ್ರಭೇದಗಳು ಚತುರಶ್ರಾಕಾರ ದೇವಾಲಯಗಳೆನಿಸಿದ್ದು ಪದ್ಮ ಹಾಗೂ ಮಹಾಪದ್ಮ ಪ್ರಭೇದಗಳು ನಕ್ಷತ್ರಾಕಾರ ದೇವಾಲಯ ಗಳೆನಿಸಿವೆ. ಎಂಟು ಮತ್ತು ಹದಿನಾರು ಕೋನಗಳುಳ್ಳ ದೇವಾಲಯಗಳು ನಕ್ಷತ್ರಾಕಾರವೆನಿಸಿದ್ದು, ಇಪ್ಪತ್ನಾಲ್ಕು ಮತ್ತು ಮೂವತ್ತೆರಡು ಕೋನಗಳುಳ್ಳ ದೇವಾಲಯ ಗಳನ್ನು ವೃತ್ತಕವೆಂದೂ ಶಾಸ್ತ್ರಗಳು ಗುರುತಿಸಿವೆ.

ನಕ್ಷತ್ರಾಕಾರದ ದೇವಾಲಯಗಳ ವಿವರಣೆಯಲ್ಲಿ ಸಮರಾಂಗಣ ಸೂತ್ರಧಾರದ ಗ್ರಂಥಭಾಗಗಳು ಕ್ಲಿಷ್ಟ ವೆನಿಸಿದ್ದು ಅಪರಾಜಿತಪೃಚ್ಛಾ ಗ್ರಂಥವು ಕೆಲವಡೆಗಳಲ್ಲಿ ಸರಿಯಾಗಿ ಅರ್ಥೈಸುವಲ್ಲಿ ನೆರವಾಗಿದೆ. ಸ್ವಸ್ತಿಕಾದಿ ಗಳನ್ನು ವಿವರಿಸುವ ಶಾಸ್ತ್ರಭಾಗವು ತ್ರುಟಿತಗೊಂಡಿ ದ್ದರೂ ಸರಿಪಡಿಸಿಕೊಳ್ಳಲು ಸಾಧ್ಯವಿದೆ. ಈ ಪ್ರಭೇದ ಗಳ ಶಾಲಪಂಜರಾದಿ ಜೋಡಣೆಯು ದಾಕ್ಷಿಣಾತ್ಯ ಪರಂಪರೆಯ ದೇವಾಲಯಗಳ ಹಾರ ಹಾರಾಂತರಗಳಂತೆ ಕಾಣುವುದು ಸಹಜ. ಶಾಲಪಂಜರಾದಿ ಜೋಡಣೆ, ಘಂಟಾಕಾರದ ಶಿಖರ ಇತ್ಯಾದಿಗಳಿಂದ ಔತ್ತರೇಯ ದ್ರಾವಿಡ ಶೈಲಿಯನ್ನು ದಾಕ್ಷಿಣಾತ್ಯ ಪರಂಪರೆಯಿಂದ ಬೆಳೆ ದದ್ದು ಎಂದು ಗುರುತಿಸಲು ಸಾಧ್ಯವಿದೆ. ದಾಕ್ಷಿಣಾತ್ಯ ದೇವಾಲಯಗಳಲ್ಲಿ ಕಾಣುವ ಕರ್ಣಕೂಟ, ಪಂಜರ, ಶಾಲಾ ಹಾರಾಂತರ ಇತ್ಯಾದಿಗಳನ್ನು ಔತ್ತರೇಯ ಶಾಸ್ತ್ರ ಗಳೂ ಗುರುತಿಸಿವೆ. ಹಾರಾಂತರಕ್ಕೆ ಬದಲಾಗಿ ಸಲಿಲಾಂತರ, ಜಲಮಾರ್ಗ, ತೋಯಮಾರ್ಗ, ಜಲವತ್ಮಾ ಎಂಬ ಪದಗಳೂ ಬಳಸಲ್ಪಟ್ಟಿವೆ. ಈ ಗ್ರಂಥಗಳಲ್ಲಿನ ಕರ್ಣಕೂಟಾದಿ ಛಂದಾಲಂಕಾರಗಳ ಜೋಡಣೆ ಹಾಗೂ ಅಳತೆ ಕೆಳಕಂಡಂತೆ ಗುರುತಿಸಲ್ಪಟ್ಟಿದೆ.

ವರ್ಧಮಾನವೆನ್ನುವ ಪ್ರಭೇದದಲ್ಲಿ ಕ್ಷೇತ್ರವನ್ನು ಹದಿನೈದು ಭಾಗಗಳಾಗಿ ವಿಭಾಗಿಸಿ ಕರ್ಣಕೂಟ-೨ ಭಾಗ, ಸಲಿಲಾಂತರ-೧ ಭಾಗ, ಪಂಜರ- ೧ ೧/೨ ಭಾಗ, ಸಲಿಲಾಂತರ-೧ ಭಾಗ ಹಾಗೂ ಶಾಲಾ-೪ ಭಾಗ ಎಂದು ನಿಶ್ಚಯಿಸಲ್ಪಟ್ಟಿದೆ. 'ಕ್ಷೇತ್ರ'ವನ್ನು ಗರ್ಭಗೃಹದ ಭಿತ್ತಿ ಭಾಗವೂ ಸೇರಿದ ಒಟ್ಟು ವಿಸ್ತಾರ ಎಂದು ತಿಳಿಯ ಬಹುದು. ಈ ಅಳತೆಗಳನ್ನು ಗುರುತಿಸುವಾಗ ಚತುರ ಶ್ರಾಕಾರದ ಒಂದು ಪಾರ್ಶ್ವಭಾಗವನ್ನು ಗಮನಿಸಿ ಗುರುತಿ ಸಿಕೊಳ್ಳಬಹುದು.

ಇದಾನೀಂ ವರ್ಧಮಾನಸ್ಯ ತಲಚ್ಛಂದೋಽಭಿಧೀಯತೇ
ಚತುರಶ್ರಂ ಭಜೇತ್ ಪಂಚದಶಧಾ ಕ್ಷೇತ್ರಮಾದಿತಃ
ಕೂಟಂ ದ್ವಿಭಾಗಿಕಂ ಭಾಗಮೇಕಂ* ಸಲಿಲಾಂತರಂ
ಪಂಜರಂ ಸಾರ್ಧ ಭಾಗಂ* ಭಾಗಿಕಂ ಸಲಿಲಾಂತರಂ
ಚತುರ್ಭಾಗಾ ಭವೇತ್ ಶಾಲಾ...[13]

ಸ್ವಸ್ತಿಕ ಜಾತಿಯಲ್ಲಿ ಛಂದಾಲಂಕಾರಗಳ ಜೋಡಣೆ, ಅಳತೆಯಲ್ಲಿ ಮಾತ್ರ ವರ್ಧಮಾನ ಪ್ರಭೇದಕ್ಕಿಂತ ತುಸು ಭಿನ್ನವೆನಿಸಿದೆ. ಶಾಸ್ತ್ರ ರೀತ್ಯ ಸ್ವಸ್ತಿಕ ಪ್ರಭೇದದ ಕ್ಷೇತ್ರ ವನ್ನು ಇಪ್ಪತ್ತೆಂಟು ವಿಭಾಗಗಳಾಗಿ ಭಾಗಿಸಿ,ಕರ್ಣಕೂಟ-೪ ಭಾಗ, ಸಲಿಲಾಂತರ-೨ ಭಾಗ, ಪಂಜರ-೩ ಭಾಗ, ಸಲಿಲಾಂತರ-೨ ಭಾಗ ಮತ್ತು ಶಾಲಾ-೬ ಭಾಗ ಎನಿಸಿದೆ.

ಚತುರಶ್ರ ಸಮಂ ಕ್ಷೇತ್ರಂ ಅಷ್ಟಾವಿಂಶತಿಧಾ ಭಜೇತ್
ಕುರ್ಯಾತ್ ಕೂಟಂ ಚತುರ್ಭಾಗಂ ದ್ವಿಭಾಗಂ* ಸಲಿಲಾಂತರಂ
ತ್ರಿಭಾಗಂ ಪಂಜರಂ ತದ್ವತ್ ದ್ವಿಭಾಗಂ ಸಲಿಲಾಂತರಂ

---

* ತ್ರುಟಿತಭಾಗದಲ್ಲಿ ಲೇಖಕನ ಪಾಠಗಳು

13. ಸಮರಾಂಗಣ ಸೂತ್ರಧಾರ, ಪುಟ ೪೭೦, ಅಧ್ಯಾಯ ೬೧, ಶ್ಲೋಕ ೪೪-೪೬

ಶಾಲಾ ಷಷ್ಠಾಗಕೀಂ ಕುರ್ಯಾತ್ ಜಲಮಾರ್ಗಂ ದ್ವಿಭಾಗಿಕಂ
........
ಏವಂ ದಿಕ್ಷು ಸಮಸ್ತಾಸು ಸಪ್ತೈರ್ಭಾಗೈಃ ಪ್ರಕಲ್ಪಯೇತ್[14]

ಸರ್ವತೋಭದ್ರ ಪ್ರಾಸಾದಗಳಲ್ಲಿ ಪಂಜರಗಳ ಬದಲಿಗೆ ಕೂಟಗಳನ್ನೇ ಗುರುತಿಸಿದ್ದು ಕೂಟ-೩ ಭಾಗ, ಸಲಿಲಾಂತರ-೨ ಭಾಗ, ಪುನಃ ಕೂಟ-೩ ಭಾಗ, ಸಲಿಲಾಂತರ-೨ ಭಾಗ ಹಾಗೂ ಶಾಲಾ-೮ ಭಾಗಗಳಿಂದ ವಿಭಾಗಿಸಲ್ಪಟ್ಟಿದೆ. ಕರ್ಣಕೂಟಕ್ಕೆ ಪರ್ಯಾಯವಾಗಿ ರಥಿಕಾ ಎಂದು ಬಳಸಲ್ಪಟ್ಟಿದೆ.

ಇದಾನೀಂ ಸರ್ವತೋಭದ್ರ ತಲಚ್ಛಂದೋಽಭಿಧೀಯತೇ
ಚತುರಶ್ರೀಕೃತೇ ಕ್ಷೇತ್ರೇ ಗರ್ಭಂ ಕುರ್ಯಾತ್ ದ್ವಿಭಾಗಿಕಂ
ಕುರ್ಯಾದ್ ತ್ರಿಭಾಗಿಕಂ ಕೂಟಂ ಜಲಮಾರ್ಗಂ ದ್ವಿಭಾಗಿಕಂ
ತ್ರಿಭಾಗಿಂ ತತಃ ಕೂಟಂ ತೋಯಮಾರ್ಗಂ ದ್ವಿಭಾಗಿಕಂ
ಶಾಲಾಷ್ಟ ಭಾಗಿಕೀ ಕುರ್ಯಾತ್ ಜ್ವಲವತ್ಮ ದ್ವಿಭಾಗಿಕಂ[15]

ದ್ರಾವಿಡ ಜಾತಿಯ ದೇವಾಲಯಗಳಲ್ಲಿ ಸಾಂಧಾರ ಹಾಗೂ ನಿರಂಧಾರ ಎರಡು ರೀತಿಯ ದೇವಾಲಯಗಳೂ ಶಾಸ್ತ್ರ ಸಮ್ಮತವೆನಿಸಿವೆ. ಡಾ॥ ಶ್ರೀಕಂಠಶಾಸ್ತ್ರಿಗಳು ಗದುಗಿನ ಸರಸ್ವತೀ ದೇವಾಲಯದಲ್ಲಿ ಪ್ರದಕ್ಷಿಣ ಮಾರ್ಗ ಮುಚ್ಚಿದೆ ಎಂದು ಗುರುತಿಸುತ್ತಾರೆ.[16] ವಿದ್ವಾಂಸ ಪರ್ಸಿಬ್ರೌನ್ ಸಹ ಪ್ರದಕ್ಷಿಣ ಪಥವಿರುವುದನ್ನು ಅನುಮೋದಿಸುತ್ತಾರೆ.[17]

ಶಾಸ್ತ್ರ ರೀತ್ಯಾ ಸಾಂಧಾರ ದೇವಾಲಯಗಳ ಕ್ಷೇತ್ರವನ್ನು ಹನ್ನೆರಡು ಭಾಗಗಳಾಗಿ ವಿಭಾಗಿಸಿ, ಗರ್ಭಾಂಕಣವು ನಾಲ್ಕು ಭಾಗ, ಭಿತ್ತಿ ಒಂದು ಭಾಗ, ಅಂಧಾರಿಕಾ ಅಥವಾ ಪ್ರದಕ್ಷಿಣ ಮಾರ್ಗ ಒಂದು ಭಾಗ ಹಾಗೂ ಬಾಹ್ಯಭಿತ್ತಿ ಎರಡು ಭಾಗ ಎಂದು ಸಮರಾಂಗಣ ಸೂತ್ರಧಾರವು ಗುರುತಿಸುತ್ತದೆ.

ಏತೇ ಪ್ರೋಕ್ತಾ ನಿರಂಧರಾ ಸಾಂಧಾರಸ್ತು ಪ್ರಚಕ್ಷ್ಮಹೇ
ಚತುರಶ್ರೀ ಕೃತಂ ಕ್ಷೇತ್ರಂ ಭಜೇತ್ ದ್ವಾದಶಭಿಃ ಪದೈಃ
ಚತುರ್ಭಾಗೋ ಭವೇದ್ ಗರ್ಭೋ ಭಾಗಿಕ್ಯೋ ಭಿತ್ತಯಃ ಸ್ಮೃತಾಃ
ಭಾಗಿಕಾಂಧರಿಕಾ ತದ್ವತ್ ದ್ವಿಭಾಗಾ ಬಾಹ್ಯ ಭಿತ್ತಯ ಃ
ಏವಮೇತೇ ತಲಚ್ಛಂದಾ ಪದ್ಮಾದ್ಯಃ ಪರಿಕೀರ್ತಿತಾಃ[18]

ಪದ್ಮ ಹಾಗೂ ಮಹಾಪದ್ಮ ಪ್ರಭೇದಗಳಲ್ಲಿ ಸಾಂಧಾರ ರಚನೆಯನ್ನು ಮೇಲ್ಕಂಡಂತೆ ಗುರುತಿಸಿರುವುದು ಗಮನಾರ್ಹ. ಇದರಿಂದ ನಕ್ಷತ್ರಾಕಾರ ಪ್ರಭೇದದ ಆಕಾರ ರಚನೆಯಲ್ಲಿ ಪ್ರಮುಖವಾದ ಅಂಶ ವ್ಯಕ್ತವಾಗುತ್ತದೆ. ಗರ್ಭಗೃಹದ ಒಳಭಾಗವು ಚತುರಶ್ರಾಕಾರವಾಗಿದ್ದು ಬಾಹ್ಯಾಕಾರವು ಮಾತ್ರ ಹಲವು ಕೋನಗಳಾಗಿಸ್ಸೈತಳೆದು ನಕ್ಷತ್ರಾಕಾರವೆನ್ನಿಸಿರಲು ಸಾಧ್ಯವಿದೆ.

ಶಾಸ್ತ್ರ ಸಮ್ಮತಿಯಿಂದ ದ್ರಾವಿಡ ಶೈಲಿಯ ದೇವಾಲಯದಲ್ಲಿ ಪ್ರದಕ್ಷಿಣ ಮಾರ್ಗಕ್ಕೆ ಅವಕಾಶವಿದ್ದರೂ ಹೊಯ್ಸಳರ ಕಾಲದಲ್ಲಿ ಜಗತಿಯ ರಚನೆಯ ಔಚಿತ್ಯವನ್ನು ಪ್ರಶ್ನಿಸಬೇಕಾಗುತ್ತದೆ. 'ಜಗತಿಯ ರಚನೆ ಪ್ರದಕ್ಷಿಣೆಗಾಗಿ' ಎಂಬ ಪ್ರಚಲಿತ ನಿಲುವು ಶಾಸ್ತ್ರ ಸಮ್ಮತವೆನಿಸಿ

---

14. ಅದೇ, ಶ್ಲೋಕ ೫೦ ರಿಂದ ೫೨
15. ಅದೇ, ಪುಟ ೬೭೧, ಶ್ಲೋಕ ೫೬ ರಿಂದ ೫೮
16. ಡಾ॥ ಎಸ್. ಶ್ರೀಕಂಠಶಾಸ್ತ್ರಿ, ಹೊಯ್ಸಳ ವಾಸ್ತುಶಿಲ್ಪ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೫, ಪುಟ ೧೧
17. ಇಂಡಿಯನ್ ಆರ್ಕಿಟೆಕ್ಚರ್, ಪುಟ ೧೪೪
18. ಸಮರಾಂಗಣ ಸೂತ್ರಧಾರ, ಪುಟ ೪೭೭, ಅಧ್ಯಾಯ ೬೧, ಶ್ಲೋಕ ೬೧ ರಿಂದ ೬೩

ದ್ದರೂ ಮಿಶ್ರಕಾದಿ ಶೈಲಿಗಳಿಂದಾಗಿ ನಾಗರ ಶೈಲಿಯಿಂದ ಪಡೆದ ಬಳುವಳಿ ಎಂಬ ಅಂಶ ಖಚಿತಗೊಳ್ಳುತ್ತದೆ.

ನಿರಂಧಾರ ಚತುರಶ್ರಾಕಾರದ ದೇವಾಲಯಗಳ ಕ್ಷೇತ್ರವನ್ನು ನಾಲ್ಕು ಭಾಗಗಳಾಗಿ ವಿಭಾಗಿಸಿ ಗರ್ಭಾಂಕಣ ವನ್ನು ಎರಡು ಭಾಗಗಳಿಂದಲೂ, ಒಂದು ಭಾಗದಿಂದ ಭಿತ್ತಿಯನ್ನೂ ರಚಿಸಬೇಕು.

ಚತುರ್ಭಾಗೇ ತತಃಕ್ಷೇತ್ರೇ ಗರ್ಭಂಕುರ್ವೀತ ದ್ವಿಭಾಗಿಕಂ
ಸ್ವಸ್ತಿಕೇ ವರ್ಧಮಾನೇಚ ಭಾಗಿಕ್ಯೋಭಿತ್ತಯಃ ಸ್ಮೃತಾಃ[19]

ವರ್ಧಮಾನ ಪ್ರಾಸಾದಗಳಲ್ಲಿ ಸಹ ಈ ರೀತಿಯ ಅಳತೆಯಲ್ಲಿ ನಿರಂಧಾರ ದೇವಾಲಯವನ್ನು ರಚಿಸಬಹು ದೆಂದು ಶಾಸ್ತ್ರಗಳು ವಿಧಿಸಿವೆ.

ದ್ರಾವಿಡ ಶಿಖರದಲ್ಲಿ "ಏಕಭೂಮ್ಯಾದಿತೋ ವೃದ್ಧಿರಂತೇ ದ್ವಾದಶ ಭೂಮಿಕಂ"[20] ಎಂದು ಹನ್ನೆರಡು ಭೂಮಿಗಳವರೆಗೆ ರಚಿಸಲು ಅವಕಾಶವಿದ್ದರೂ ತಲಚ್ಛಂದವನ್ನು ಗುರುತಿಸುವಾಗ, ಅಪರಾಜಿತಪೃಚ್ಛಾ ಗ್ರಂಥವು, ಏಕಭೂಮಿ, ತ್ರಿಭೂಮಿ, ಪಂಚಭೂಮಿ, ಸಪ್ತಭೂಮಿ ಹಾಗೂ ವೃತ್ತಕಗಳನ್ನು ವಿಶೇಷವಾಗಿ ಹೆಸರಿಸಿದೆ. ಈ ಶಿಖರಗಳು ಕ್ರಮವಾಗಿ ತ್ರಯಂಗ, ಪಂಚಾಗ, ಸಪ್ತಾಂಗ, ನವಾಂಗ ಹಾಗೂ ನಕ್ಷತ್ರಾಕಾರ ರಚನೆಗಳು. ಈ ಅಂಗ ಹಾಗೂ ಉಪಾಂಗಗಳ ಜೋಡಣೆಯನ್ನು ಡಾ॥ ಶಿವರಾಮ ಕಾರಂತರು ಹಿಂಬೆಣೆ ಮುಂಬೆಣೆ ಎನ್ನುತ್ತಾರೆ. ಕರ್ಣ, ರಥ, ಪ್ರತಿರಥ, ಭದ್ರ ಇವು ಅಂಗಗಳೆನಿಸಿದ್ದು ಇವುಗಳ ಜೋಡಣೆಯಲ್ಲಿ ವೈವಿಧ್ಯತೆಯನ್ನು ಪ್ರದರ್ಶಿಸಲು ಅವಕಾಶವಿದೆ. ಅಪರಾಜಿತ ಪೃಚ್ಛಾ ಗ್ರಂಥವು ಇಪ್ಪತ್ತೈದು ವಿವಿಧಾಕಾರದ ದ್ರಾವಿಡ ಶಿಖರಗಳನ್ನು ಪಟ್ಟಿಮಾಡಿದೆ.[21] ಇವುಗಳ ನಿಶ್ಚಿತ ಸ್ವರೂಪವನ್ನು ಗುರುತಿಸಲು ಸಾಧ್ಯವಾಗಿಲ್ಲ.




---

19. ಅದೇ, ಶ್ಲೋಕ ೫೪-೫೫
20. ಅಪರಾಜಿತಪೃಚ್ಛಾ, ಪುಟ ೩೨೨, ಅಧ್ಯಾಯ ೧೨೮, ಶ್ಲೋಕ ೨೦
21. ಅದೇ, ಪುಟ ೪೪೬, ಅಧ್ಯಾಯ ೧೬೪, ಶ್ಲೋಕ ೨ ರಿಂದ ೬

ಈ ಗ್ರಂಥದ ಪ್ರಕಾರ, ತ್ರಯಂಗ ರಚನೆಯಿಂದ ನವಾಂಗ ರಚನೆಯವರೆಗೆ ಗುರುತಿಸಲ್ಪಟ್ಟಿರುವ ವಿವಿಧ ಅಂಗರಚನಾ ಮಾದರಿಗಳು ಚತುರಶ್ರಾಕಾರವೆನಿಸಿದ್ದು ಪದ್ಮ, ಮಹಾಪದ್ಮ ಮತ್ತು ಕೈಲಾಸ, ಮೇರುನಾಯಕ ಮಾದರಿಗಳು ಕ್ರಮವಾಗಿ ನಕ್ಷತ್ರಾಕಾರ ಮತ್ತು ವೃತ್ತಕವೆನಿಸಿವೆ. ಇವು ಕ್ರಮವಾಗಿ ಎಂಟು, ಹದಿನಾರು, ಇಪ್ಪತ್ತನಾಲ್ಕು ಮತ್ತು ಮೂವತ್ತೆರಡು ಕೋನಗಳನ್ನು ಹೊಂದಿವೆ.

ಅಷ್ಟಕೋಣಾಃ ಪಂಚಭೂಮಾ ಪದ್ಮನಾಮಾ ಚ ಕಾಮದಃ
ಪಂಚಭೂಮಾ ದ್ವಷ್ಟದಲಾ ಮಹಾಪದ್ಮ ಇತಿ ಸ್ಮೃತಃ
ಚತುರ್ವಿಂಶತಿಭಿಃ ವೃತ್ತಃ ಕೈಲಾಸಃ ಸಪ್ತ ಭೂಮಿಕಃ
ದ್ವಾತ್ರಿಂಶದ್ಭಿರ್ದಲೈರ್ವೃತ್ತಃ ಸ ಭವೇನ್ ಮೇರು ನಾಯಕಃ[22]

ಮೇಲ್ಕಂಡ ವಿವರಗಳಿಂದ ಔತ್ತರೇಯ ದ್ರಾವಿಡ ಶೈಲಿಯ ಸ್ಥೂಲರೂಪವನ್ನು ಗುರುತಿಸಲು ಸಾಧ್ಯವಾಗಿದೆ. ಇದಲ್ಲದೆ ಸೂಕ್ಷ್ಮಾತಿ ಸೂಕ್ಷ್ಮರೂಪದ ಅಳತೆ ಆಕಾರ ವಿವರಗಳು ಲಭ್ಯವಿದ್ದು ಗ್ರಂಥಗಳಲ್ಲಿನ ಅಸ್ಪಷ್ಟತೆಯನ್ನು ನಿವಾರಿಸಿ, ಕರಾರುವಾಕ್ಕಾಗಿ ಗುರುತಿಸಿ, ಲಕ್ಷ್ಯ ಲಕ್ಷಣಗಳ ಸಾಮರಸ್ಯ ಕಲ್ಪಿಸಿದಲ್ಲಿ ಔತ್ತರೇಯ ದ್ರಾವಿಡ ಶೈಲಿಯ ಅಧ್ಯಯನ ಹೆಚ್ಚು ಅರ್ಥಪೂರ್ಣವೆನಿಸುವುದು. ಈ ರೀತಿಯ ಅಧ್ಯಯನಕ್ಕೆ ಈ ಲೇಖನ ನಾಂದಿಯಾಗಿರುವುದೆಂದು ಭಾವಿಸುತ್ತೇನೆ.

22. ಅದೇ, ಪುಟ ೪೪೯, ಅಧ್ಯಾಯ ೧೭೪, ಶ್ಲೋಕ ೩೧-೩೨.

ಎಂ. ಜಿ. ನಾಗರಾಜ್

# ಕೊಡಗುಜಿಲ್ಲೆಯ ಸುಗ್ಗಿಕಟ್ಟೆಗಳು

ಸುಗ್ಗಿಕಟ್ಟೆಗಳು ಸುಗ್ಗಿದೇವರಗುಡಿ, ಸುಗ್ಗಿಕಂಬ, ಸುಗ್ಗಿಗುಡಿ, ಸುಗ್ಗಿಮಂಟಪ, ಸಬ್ಬಮ್ಮ, ಸುಜ್ಜಮ್ಮ, ಸುಗ್ಯಮ್ಮತಾಯಿ, ಸಬತಾಯಿ, ಸಪ್ತಾಯಿಕಟ್ಟೆ ಎಂದೆಲ್ಲ ವಾಡಿಕೆಯಲ್ಲಿ ಕರೆಸಿಕೊಂಡಿವೆ, ಪೂಜಿಸಲ್ಪಟ್ಟಿವೆ. ಫಲವಂತಿಕೆ, ಪಾವಿತ್ರ್ಯ, ಸಮೃದ್ಧಿ ಹಾಗೂ ಸಂತೋಷದ ಸಂಕೇತವಾಗಿಯೂ ಈ ಕಟ್ಟೆಗಳನ್ನು ಕಂಡಿರುವ ಜನಪದವು ಅನುಗುಣ ಕತೆಗಳನ್ನು ಪವಿತ್ರವಾಗಿಯೆ ಪೋಣಿಸಿಕೊಂಡಿದೆ.

ಶಿವ ಪಾರ್ವತಿಯನ್ನು ಮದುವೆಯಾಗಲು ಕೇಳಿದ. ತಪಸ್ಸಿಗೆ ಕುಳಿತಿದ್ದ ಪರ್ವತಪುತ್ರಿ ನುಡಿದಳು : 'ತಪಸ್ಸು ಮುಗಿಯುವ ಮುನ್ನ ಇಲ್ಲ ; ಹರಕೆ ಸಿದ್ಧಿಸುವವರಿಗೂ ಬೇರೆ ಮಾತಿಲ್ಲ'. ಶಿವ ಒಲಿದ. ಹರಕೆ ಫಲಿಸಿತು. ಪಾರ್ವತಿ ಶಿವಪತ್ನಿ ಆದಳು. ಹರಕೆಯ ಫಲಿತಕ್ಕೆ ಪಾರ್ವತಿ ತಪಸ್ಸಿಗೆ ಕುಳಿತ ತಾಣವೆ ಸುಗ್ಗಿಕಟ್ಟೆಯಂತೆ. ಅಂತಾಗಿ ದೇವರ ವರ ಪಡೆದ ಆ ದೇವೀರಮ್ಮ ತಮಗೂ ವರ ಕೊಡಲಿ ಎಂಬುದು ಜನಪದದ ಆಶಯ. ಆಕೆಯ ಛಲ ಕಂಡು ದೇವರ ಈರಮ್ಮನೂ ಆಗಿದ್ದಾಳೆಂಬ ನಂಬಿಕೆಯೂ ಉಂಟು. ಹಾಗಾಗಿ ಸಮೃದ್ಧಿಯ ಸುಗ್ಯಮ್ಮತಾಯಿಯೂ ಹೌದು ; ಸುಲಭ ಉಚ್ಚಾರಕ್ಕೆ ಗ್ರಾಮೀಣ ಜನತೆ ಅಳವಡಿಸಿಕೊಂಡ 'ಸಬತಾಯಿ'ಯೂ ಹೌದು.[1]

ಸಾಮಾನ್ಯವಾಗಿ ಸುಮಾರು ೧ ರಿಂದ ೩ ಅಡಿ ಎತ್ತರದ ಚತುರಸ್ರ ವೇದಿಯಂತಹ ಕಟ್ಟೆಯ ಮೇಲೆ ೧೦ ರಿಂದ ೨೦ ಅಡಿ ಎತ್ತರದ ಜೋಡಿ ಸ್ತಂಭಗಳಾಗಿ ನಿಂತು ಬೋದಿಗೆ ಹೊತ್ತು ಅದರ ಮೇಲೆ ಮೊಗ್ಗುತಾವರೆ–ಮೂರು ಶಿಲಾಕಳಶಗಳನ್ನೊಳಗೊಂಡ ಅಡ್ಡತೊಲೆಯನ್ನು ಹೊತ್ತಿರುತ್ತವೆ. ಆ ಕೆಳ ಕೇಂದ್ರದಲ್ಲಿ 'ಉ' ಆಕಾರದ ಕೊಕ್ಕೆಯನ್ನು ಹೊಂದಿರುತ್ತವೆ. ಒಂದು ರೀತಿಯಲ್ಲಿ ಬೃಹತ್ ಬಾಗಿಲುವಾಡದ ಭಾವವನ್ನು ತಂದು ಕೊಡುತ್ತವೆ. ಕೆಲವೆಡೆ ನಾಲ್ಕು ಬ್ರಹ್ಮಕಾಂತ ರಚನೆಯ ಸ್ತಂಭಗಳ ತೆರೆದ ಮಂಟಪವಾಗಿದ್ದು ಭುವನೇಶ್ವರಿ, ಗೋಪುರ ಹಾಗೂ ಕಳಶವನ್ನು ಹೊಂದಿರುತ್ತವೆ. ಇವು ದೇವರ ಉಯ್ಯಾಲೆಕಟ್ಟೆ ಎಂದೂ ಕರೆಸಿಕೊಂಡಿವೆ. ಶಾಸನಗಳಲ್ಲಿ 'ಗುಡಿಯ ಕಟಿಸಿ ಉಯಾಲೆ ಕಂಬವ ನಿಲಿಸಿದರು' ಎಂಬ ಸಾಲುಗಳು[2] ಕಾಣಬಂದು ಗ್ರಾಮದೇವತೆಯ

---

1 ಸುಗ್ಯಮ್ಮತಾಯಿ < ಸುಗ್ಗಮ್ಮತಾಯಿ < ಸುಬ್ಬಮ್ಮತಾಯಿ < ಸುಜತಾಯಿ < ಸಬತಾಯಿ < ಸಪ್ತಾಯಿ < ಸಪ್ತತಾಯಿ ಎಂದಾಗಿದ್ದರೆ ಮಾತೃಸಮಾಧಿ ಅಥವಾ ಸಪ್ತಮಾತೃಕೆಯರ ಆರಾಧನೆಯ ಜನಪದೀಕರಣದ ಮೂಲ ಸಂಕೇತವಿದ್ದು ನಂತರ 'ಪಾರ್ವತಿ'ಯ ಆವಾಹನೆಯನ್ನು ಮೇಳೈಸಿಕೊಂಡಿರಬೇಕು. ಅಂದರೆ ಜನತೆ ರೂಪಾಂತರೀಕೃತ ಆರಾಧನೆಯನ್ನು ಮೈಗೂಡಿಸಿಕೊಂಡಿರಬೇಕು.

2 ಎ. ಕ., ಸಂಪುಟ ೫, ಎಲ್. ರೈಸ್ (ಸಂ.) : ಚ.ರಾ.ಪ. ೧೬೦, ಕ್ರಿ. ಶ. ೧೫೮೭ ; ಚ.ರಾ.ಪ ೧೬೩, ಕ್ರಿ.ಶ. ೧೬೪೭ ; ಈ ಶಾಸನಗಳಲ್ಲಿ 'ಸುಗ್ಗಿಕಟ್ಟೆ ಅಥವಾ ಸುಗ್ಗಿಸ್ತಂಭ' ಶಬ್ದದ ಒಕ್ಕಣೆ ಇಲ್ಲದಿದ್ದರೂ ಸಂಬಂಧಿಸಿದ ಆಚಾರಗಳು ಗುಡಿಯ ಬಳಿಯಲ್ಲಿ ನಡೆಯುತ್ತವೆ.

ಪೂಜೆಯೊಡನೆ ಸುಗ್ಗಿಕಟ್ಟೆಯ ಉತ್ಸವಾಚರಣೆಗಳು ಮಿಳಿತವಾಗಿರುವುದನ್ನೂ ಹಾಗೂ ಅವುಗಳ ಪ್ರಾಚೀನತೆಯನ್ನೂ ತಿಳಿಸಲು ಸಹಕಾರಿ ಆಗಿವೆ. ವಸಂತೋತ್ಸವದ ಮಂಟಪ, ಕಲ್ಯಾಣ ಮಂಟಪ ಎಂಬ ಸಂಸ್ಕೃತೀಕರಣದ ಹೆಸರೂ ಇವಕ್ಕೆ ಅಂಟಿವೆ. ಕೆಲವೆಡೆ ಇವು ಒಂಟಿ ಕಂಬಗಳಾಗಿಯೂ ಇರುವುದುಂಟು. ಊರ ಹೊರಗೆ ಅಥವಾ ಗುಡಿಯ ಮುಂದೆ ಅಥವಾ ತಂಪು ವೃಕ್ಷಗಳ ನಡುವೆ ನಿರ್ಮಿತವಾಗಿರುತ್ತವೆ. ಸ್ತಂಭಗಳ ಬುಡ ಬ್ರಹ್ಮಕಾಂತ, ಮೇಲ್ಭಾಗದಲ್ಲಿ ವಿಷ್ಣುಕಾಂತ ರಚನೆಯನ್ನು ಹೊಂದಿರುತ್ತದೆ. ಶಿಲ್ಪಗಳನ್ನೂ ಹೊಂದಿರುವುದುಂಟು. ಊರ ಬಾಗಿಲವಾಡ ಅಥವಾ ಗೆದ್ದು ಬಂದ ವೀರರಿಗೆ ಊರ ಸ್ವಾಗತದ ಹೆಬ್ಬಾಗಿಲು ಆಗಿದ್ದಿರುವ ಉದಾ. ಉಂಟು. ಹೊಸ ಊರು ಸ್ಥಾಪಿತವಾದಾಗ 'ಊರುಸ್ಥಾಪನೆ ಕಲ್ಲು' ಎಂದೂ ಕರೆಸಿಕೊಂಡು ನಡೆಸಲ್ಪಟ್ಟಿವೆ.[3] ಗುಡಿಯ ದೇವತೆಯನ್ನೂ ತೂಗುವ ದೇವರ ಗುಡಿಯ ಮುಂದಿನ ಸ್ತಂಭಗಳಾಗಿಯೂ ಕಾಣಿಸಿಕೊಂಡಿವೆ.[4–5]

ಈ ಸ್ತಂಭಗಳಲ್ಲಿ ಅಥವಾ ನೆರೆಯಲ್ಲಿ ಶಾಸನಗಳಿದ್ದರೂ 'ಸುಗ್ಗಿಕಟ್ಟೆ ಅಥವಾ ಸುಗ್ಗಿಸ್ತಂಭ' ಎಂಬ ಶಬ್ದದ ಉಲ್ಲೇಖವಿಲ್ಲದಿರುವುದು ಸೋಜಿಗವೆ. ಈ ಶಾಸನಗಳು ಬಹುತೇಕ ದಾನಶಾಸನಗಳೋ ಅಥವಾ ವೀರಶಾಸನಗಳೋ ಆಗಿರುತ್ತವೆ. ಆದರೆ 'ಉಯ್ಯಾಲೆ ಕಂಬ' ಎಂಬ ಪರ್ಯಾಯ ಉಲ್ಲೇಖವೇ ಈ ಸ್ತಂಭಗಳಿಗೆ ಅನ್ವಯ ಎಂದು ಸದ್ಯಕ್ಕೆ ಸಮಾಧಾನ ಪಡಬಹುದು. ಈ ಸ್ತಂಭ ಅಥವಾ ಕಟ್ಟೆಯ ನಡುವೆ ಸದಾ ಹಣತೆ ಉರಿಯಬೇಕೆಂಬ ಕಟ್ಟಳೆ ಇದೆ. ಈ ಸ್ತಂಭಗಳ ಅಥವಾ ಮಂಟಪದ ಸ್ತಂಭಗಳ ಮೇಲೆ ಸ್ಥಾನಕ ಸ್ತ್ರೀ ಶಿಲ್ಪ, ಪುರುಷ ಶಿಲ್ಪ, ದಂಪತಿ ಶಿಲ್ಪ, ತಾವರೆ ಬಂಧ, ನಾಗಶಿಲ್ಪ (ನಾಗ–ನಾಗಿಣಿ) ಮತ್ಸ್ಯಶಿಲ್ಪ, ಹಾವು ಹಿಡಿದ ಹಂಸ ಶಿಲ್ಪ, ಮಿಥುನ ಶಿಲ್ಪ, ಭದ್ರಕಾಳಿ ಶಿಲ್ಪ, ಭೈರವ ಶಿಲ್ಪ, ಆನೆ, ಕುದುರೆ, ಹುಲಿ, ವೀರರು ಹಾಗೂ ರಾಜನ ಶಿಲ್ಪಗಳ ಕಂಡರಣೆ ಆಗಿರುತ್ತವೆ. ಕೆಲವೆಡೆ ಸಾದಾ ಸ್ತಂಭಗಳಾಗಿ ಕೆಲವೆಡೆ ತಾವರೆಯ ಬಿಡಾವಣೆಯುಳ್ಳ ಒಂಟಿ ಸ್ತಂಭಗಳಾಗಿವೆ. ಜೋಡಿ ಸ್ತಂಭಗಳಿರುವಲ್ಲಿ ಒಂದು ಹೆಣ್ಣು, ಒಂದು ಗಂಡು ಎಂಬ ರೂಢಿಯನ್ನೂ ಆಚರಣೆಗಳಿಗೆ ತಂದುಕೊಂಡಿದ್ದಾರೆ.

ಜನಪದ ಆಚರಣೆಗಳನ್ನೂ ಪುಷ್ಟಿಯಾಗಿ ತುಂಬಿಕೊಂಡು, ಸುಗ್ಗಿಕಟ್ಟೆಯ ಬಳಿ ಗ್ರಾಮದೇವತೆಯ ಹಬ್ಬವನ್ನೂ ಆಚರಿಸುವಲ್ಲಿ ಬಲಿ ಸಮರ್ಪಣೆ (ಕೆಲವೆಡೆ ಬಲಿ ಇಲ್ಲ), ಗ್ರಾಮದೇವತೆಯ ಮುಖವಾಡ ಅಥವಾ ಮುಖವಾಡಗಳನ್ನಿಟ್ಟು ವಾರ್ಷಿಕ ಸುಗ್ಗಿಹಬ್ಬವನ್ನು ಕಟ್ಟೆಯ ಆವರಣದಲ್ಲಿ ಗ್ರಾಮೀಣರು ಆಚರಿಸುತ್ತಾರೆ. ಐದರಿಂದ ಏಳು ಮುಖವಾಡಗಳನ್ನಿಡುವ ಇಲ್ಲಿನ ಸಂಪ್ರದಾಯ, ಬೇಟೆ ಆಡಿ ತಂದ ಪ್ರಾಣಿ ಬಲಿಯನ್ನು ಕಟ್ಟೆಯ ಮುಂದಿಟ್ಟು ನಂತರ ಗ್ರಾಮದವರಿಗೆ ಪಾಲಿನ ಹಂಚಿಕೆ, ಸುಗ್ಗಿಕಟ್ಟೆಗೆ ಜನಪದರು ಬಳಸುವ 'ಸಬತಾಯಿ' ಶಬ್ದ, ಈ ಹಬ್ಬದ ಸಮಯದಲ್ಲಿ ಹಾಯುವ ಕೆಂಡಕೊಂಡ, ಹರಿಸೇವೆ(ಹರಸೇವೆ ?)ಯ ರೂಪದಲ್ಲಿ ವೀರಭದ್ರನ ವಡಬುಗಳ ಉಗ್ಗಡಣೆ ಹಾಗೂ ಕಟ್ಟೆಯ ಸಮೀಪದ ಈಶ್ವರ ಗುಡಿಗೆ ಹೋಗಿ ಸಪ್ತಮಾತೃಕೆಯರ ಪೂಜೆ ಮುಂತಾದುವನ್ನು ಗಮನಿಸಿದರೆ, ಶಾಕ್ತ ಸಂಪ್ರದಾಯದ

---

3 ಕೊಡಗಿನ ಗಡಿಗ್ರಾಮಗಳಾದ ಹುಲುಕೋಡು ಹಾಗೂ ಕಿತ್ತೂರು ಗ್ರಾಮಗಳಲ್ಲಿ ಸುಗ್ಗಿಸ್ತಂಭಕ್ಕೆ ಸೇರಿದಂತೆ ೩ ಅಡಿ ಎತ್ತರದ ಕಲ್ಲುಸ್ತಂಭವಿದ್ದು ಊರುಸ್ಥಾಪನೆಕಲ್ಲು ಎನಿಸಿದೆ. ಆದರೆ ಕಿತ್ತೂರಿನಲ್ಲಿ ಸುಗ್ಗಿಕಂಬಗಳ ಬಾಗಿಲವಾಡಕ್ಕೆ ಅಭಿಮುಖವಾಗಿ ಕುಮಾರ ಲಿಂಗೇಶ್ವರ-ಕಿತ್ತೂರಯ್ಯನ ಗುಡಿಯ ಬಲಬದಿಯ ಮುಂಪಾರ್ಶ್ವದಲ್ಲಿ ಊರುಸ್ಥಾಪನೆ ಕಲ್ಲು ವೇದಿಕೆಯ ಮೇಲೆ ನಿಂತಿದೆ.

4 ಪಿರಿಯಾಪಟ್ಟಣ ತಾಲ್ಲೂಕು ಚಿಲ್ಕುಂದದ ದೇಗುಲದ ಮುಂದೆ, ಚನ್ನಪಟ್ಟಣ ತಾಲ್ಲೂಕು ಭೈರಾಪಟ್ಟಣದ ಪಾರ್ವತಿ ಗುಡಿಯ ಮುಂದೆ, ಅರಸೀಕೆರೆ ಕೋಡಿಮಠ(ಹಾರ್ನಹಳ್ಳಿ)ದ ಬಳಿಯ ಕೋಡಮ್ಮನ ದೇಗುಲದ ಮುಂದೆ ಇಂತಹ ಜೋಡಿ ಸ್ತಂಭಗಳನ್ನು ಕಾಣಬಹುದು.

5 ತುಳುದೇಶದಲ್ಲಿ ಬರಿಕಟ್ಟೆ ಅಥವಾ ತೂಗುಮಣೆಯನ್ನು ದೈವದ ಮಂಚವೆಂದು ಕರೆದು ಅದರ ಮೇಲೆ ಗುಡಿ ಕಟ್ಟುವುದುಂಟು : ಪರತಿಸಿರಿ (ಸಂ. : ಲಕ್ಷ್ಮಣ್ ತೆಲಗಾವಿ) : ಪರ್ತಿಕೋಟೆ, ೧೯೮೮, ಕೊಡಗಿನ ಕೊಲೆ ಕಲ್ಲುಗಳು, ಎಂ. ಜಿ. ನಾಗರಾಜ್, ಪು. ೭೧೬.

ಮೂಲವೊಂದು ಜನಪದದಲ್ಲಿ ಅಂತರ್ಗತವಾಗಿರುವ ಕುರುಹು ಕಾಣುತ್ತದೆ. ಸಪ್ತಮಾತೃಕೆಯರ ಜನಪದೀಯ ಆರಾಧ್ಯ ಮಾಧ್ಯಮವಾಗಿ ವೇದ, ಆಗಮ, ಪುರಾಣಗಳ ಸಂಸ್ಕೃತೀಕರಣ ವರ್ತುಲದಿಂದ ಹೊರಬಂದು ಸುಗ್ಗಿ ದೇವತೆ, ಸಬತಾಯಿಯ ಮೂರ್ತರೂಪವಾಗಿ ಸುಗ್ಗಿ ಕಟ್ಟೆಗಳು ತೋರಿಕೊಂಡಿವೆ ಎನಿಸುತ್ತದೆ. ಈ ಹಿನ್ನೆಲೆಯ ಜಾಡು ಹಿಡಿದು ಹೊರಟರೆ ಸಪ್ತಮಾತೃಕೆಯರು ಹಾಗೂ ಅವರ ರಕ್ಷಕನೆನಿಸಿರುವ ವೀರಭದ್ರನ ಸಂಬಂಧ, ಮಾತೃ ದೇವತಾ ಸಂಬಂಧಗಳ ಪ್ರಾಚೀನತೆಯ ವಿವರಗಳನ್ನು ಕೆದಕುವಂತಾಗುತ್ತದೆ. ಅಂದರೆ ಪ್ರಾಚೀನ ಇತಿಹಾಸದ ನೆಲಗಟ್ಟಿನ ಮೇಲೆ ಸುಗ್ಗಮ್ಮ ದೇವತೆಯ–ಸುಗ್ಗಿಕಟ್ಟೆಯ ಜೀವಂತ ವಿಕಾಸದ ಮಜಲುಗಳ ಪರಿಚಯವಾಗುತ್ತದೆ. ಅಂತಾಗಿ ಮುಂದಿನ ಸಂಕ್ಷಿಪ್ತ ವಿವೇಚನೆ.

ತಾಂತ್ರಿಕಾಚರಣೆಗಳ ಚೌಕಟ್ಟಿನಲ್ಲಿ ಶಿಲ್ಪಗಳನ್ನು ವೀಕ್ಷಿಸುವಲ್ಲಿ ಸಪ್ತಮಾತೃಕೆಯರ ಏಕಶಿಲಾಲಿಂಗರೂಪ ಗಳಲ್ಲಿ ಬ್ರಾಹ್ಮಿಯ ಬಲಮುಂಬದಿಯಲ್ಲಿ ವೀರಭದ್ರನ ತಾಂತ್ರಿಕ ಲಿಂಗರೂಪದ ಇರವು ಅವನ ಮುಂದಾಳ್ತನದ ಸಂಕೇತವೂ ಹೌದು. ವೀರಭದ್ರನ ಕಾಲ ಸೈಂಧವ ಸಂಸ್ಕೃತಿಯ ಕಾಲದ್ದು. ದಾಸೋಹ ಧರ್ಮಮಾತಗಳ ನಿರ್ವಹಣೆ ಅವನ ಕಾಲಕ್ಕೆ ಕೇವಲ ಪುರುಷರ ಗುತ್ತಿಗೆ ಆಗಿರಲಿಲ್ಲ. ರುದ್ರ ಕನ್ನಿಕೆಯರೆನಿಸಿದ್ದ ಸಪ್ತಮಾತೃಕೆ ಯರು ಕಳಾಮುಖಿಯರಾಗಿ ತೊಡಗುತ್ತಿದ್ದರು. ಶಿವೆಯ ಸೇವಕಿಯರು ಶೈವೀ ಸುಂದರಿಯರೂ ಆಗಿ ದ್ದರು. ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾ–ಈ ಕನ್ಯೆಯರು ತಾಂತ್ರಿಕ ಕಲೆಗಳಲ್ಲಿ, ತಾತ್ವಿಕ ಕಳೆಗಳಲ್ಲಿ ನಿಪುಣೆಯ ರಾಗಿದ್ದರು. ಪಾರ್ವತಿಯಂತೆ ಪವಿತ್ರಕುಲಶೀಲೆಯರೂ[6] ಹೌದು.

ಬ್ರಾಹ್ಮೀ ಮಾಹೇಶ್ವರೀ ಮುಖ್ಯಾ ರುದ್ರಕನ್ಯಾಃ ಕಳಾಮುಖಾಃ
ತವದೂತಾಃ ಕುಲಶೀಲೇ ದಧತಿ ತ್ವಯಿ ಪಾರ್ವತಿ ।
—ವೀರಾಗಮ.

ಇಂತಹವರ ಸೈಂಧವ ಸಂಸ್ಕೃತಿಯಷ್ಟು ಪ್ರಾಚೀನತೆಯ ಬಗ್ಗೆ ಅನುಮಾನ ವ್ಯಕ್ತಪಡಿಸುವ ಅಭಿ ಪ್ರಾಯಕ್ಕೆ ಮರುಮಾತು ಮುಂದಿನಂತಿದೆ.

ಸಿಂಧೂ ಸಂಸ್ಕೃತಿಯಲ್ಲಿನ ಮುದ್ರೆಯ ಬಗ್ಗೆ ವಿಶೇಷ ಅಧ್ಯಯನ ನಡೆಸಿರುವ ಡಾ॥ ಎಸ್. ಆರ್. ರಾವ್ ಅವರು ಮುದ್ರೆಯ ವ್ಯಕ್ತಿ ರಾಜ, ಅವನ ಹಿಂದೆ ಹೋತ, ಕೆಳಗಿನ ಏಳು ಜನರು ಯಜ್ಞದಲ್ಲಿ ಪಾಲ್ಗೊಂಡಿರುವ ಇತರ ರಾಜರು ಎಂದು ಹೇಳಿದ್ದಾರೆ. ಆದ್ದರಿಂದ ನಾಗರೀಕತೆಯ ಕಾಲದಲ್ಲಿ ಸಪ್ತಮಾತೃಕೆಯರು ಪ್ರಚಾರ ದಲ್ಲಿದ್ದರು ಎಂಬ ಬಗ್ಗೆ ಸೂಕ್ತ ಆಧಾರಗಳಿಲ್ಲ ಎನ್ನುವ ಮಾತಿದೆ.[7] ಆದರೆ ಡಾ॥ ಎಸ್. ಶ್ರೀಕಂಠಶಾಸ್ತ್ರಿ ಅವರು 'ಭಾರತೀಯ ಸಂಸ್ಕೃತಿ ದರ್ಶನ' ಸಂಪುಟದಲ್ಲಿ ಪಶ್ಚಿಮ, ವಿದ್ವಾಂಸರ ಅಭಿಪ್ರಾಯದಂತಹ ಆಶಯವನ್ನು ನಿರಾಕರಿಸಿ ಸೈಂಧವ ಸಂಸ್ಕೃತಿ ಕುರಿತು ಬರೆಯುತ್ತ, "ಆ ಸಂಸ್ಕೃತಿಯಲ್ಲಿ ದೊಡ್ಡ ಪಟ್ಟಣದಲ್ಲಿಯೂ ಒಂದಾದರೂ ಪ್ರಧಾನ ದೇವಾಲಯವಿದ್ದುದಕ್ಕೆ ಆಧಾರವಿಲ್ಲ. ಪ್ರತಿಯೊಂದು ಮನೆಯಲ್ಲಿಯೂ ಮಾತೃದೇವತಾ ಪೂಜೆಗೆ ಒಂದು ಕೋಣೆಯು ಮೀಸಲಾಗಿತ್ತು. ಮಾತೃದೇವತಾ ವಿಗ್ರಹ ಗಳಲ್ಲಿ ಕನ್ಯಾಯೋಧ, ಮಗುವನ್ನೆತ್ತಿಕೊಂಡ ತಾಯಿ, ನಗ್ನನೃತ್ಯ, ಸಪ್ತಮಾತೃಕಾ ದೇವತೆಗಳು ಮುಖ್ಯ ವಾದವು. ಮಾತೃದೇವತಾ ವಿಗ್ರಹಗಳಿರುವುದರಿಂದ ಶಾಕ್ತ, ತಾಂತ್ರಿಕ ಮತವೂ ಇದ್ದಿತೆಂದು ಹೇಳಬೇಕು" ಎಂದಿದ್ದಾರೆ.[8] ಆದ್ದರಿಂದ ಸೈಂಧವ ಸಂಸ್ಕೃತಿಯಲ್ಲಿ 'ಸಪ್ತಮಾತೃಕೆ'ಯರ ಅಸ್ತಿತ್ವ ಇರಲಿಲ್ಲ ಎನ್ನುವಮಾತನ್ನು

---

6 ಡಾ॥ ಶ್ರೀ ಜ. ಚ. ನಿ. : ರುದ್ರ–ಭದ್ರ–ರೇಣುಕ, ಶ್ರೀ ಜ.ಚ.ನಿ. ಅಧ್ಯಯನ ಪೀಠ, ೧೯೮೫, ಪು. ೬೮

7 ದೇವರ ಕೊಂಡಾರೆಡ್ಡಿ : 'ಸಪ್ತಮಾತೃಕೆಯರು', ಹರತಿಸಿರಿ, ಪು. ೮೫

8 ಎಂ. ಜಿ. ನಂಜುಂಡಾರಾಧ್ಯ (ಸಂ.) : ಶಿವಾಗಮ ಸೌರಭ, ಶ್ರೀ ಜ. ಚ. ನಿ, ಅಧ್ಯಯನ ಪೀಠ, ಬೆಂಗಳೂರು, ೧೯೮೬, ಪೀಠಿಕೆ ಪು. xx; ಅಚ್ಚರಿಯ ಅಂಶವೆಂದರೆ ಈ ಸಂಗತಿಗೆ ಸಂವಾದಿ ಉದಾಹರಣೆ ಎಂಬಂತೆ ಕೊಡವರ್ ಐನ್ ಮನೆಗಳಲ್ಲಿ 'ಕನ್ನಿ ಕೊಂಬರೆ' ಎಂಬ ಪ್ರತ್ಯೇಕ ಪ್ರಾರ್ಥನಾ ಕೋಣೆಯೊಂದು ಇರುವುದೇ ಆಗಿದೆ.

ಒಪ್ಪಲಾಗುವುದಿಲ್ಲ. ಜೊತೆಗೆ ಸಿಂಧೂ ಸಂಸ್ಕೃತಿಯ ಮುದ್ರಿಕೆಯಲ್ಲಿರುವ ರುದ್ರ ಪಶುಪತಿಯ 'ಯೋಗ ಮೂರ್ತಿ' ಪ್ರತಿಮಾ ಭಾವವನ್ನು ಡಾ॥ ಶ್ರೀ ಜ. ಚ. ನಿ. ಅವರು ಗುರುತಿಸಿ 'ಭಾಲಾಕ್ಷ' ಸಿದ್ಧಿಯ ಮುನಿವರೇಣ್ಯ ಸಿಂಧೂ ಸಂಸ್ಕೃತಿಯ ಜೀವನಾದರ್ಶ ಪ್ರತಿಮೆ ರುದ್ರ ದೇವ ಎಂದು ನಾಮನಿರ್ದೇಶನವನ್ನೂ ಮಾಡಿದ್ದಾರೆ.[9] ಅಂದರೆ ಸಪ್ತಮಾತೃಕೆಯರ ಪರಂಪರೆಯು ಸೈಂಧವ ಸಂಸ್ಕೃತಿಯಲ್ಲಿ ಉಗಮವಾಗಿ ರುದ್ರ-ಭದ್ರರ ಕಾಲದಲ್ಲಿ ಮತ್ತು ನಂತರ ವಿಕಸಿತವಾದುದನ್ನು ಕಾಣುತ್ತೇವೆ.

ವೀರಭದ್ರೋ ಮಹಾತೇಜಾ ಹಿಮಕುಂದೇಂದು ಸನ್ನಿಭಃ
ಭದ್ರಕಾಳೀ ಪ್ರಿಯೋ ನಿತ್ಯಂ ಮಾತೃಣಾಭಿರಕ್ಷಕಃ
—ವಾಯವೀಯ ಸಂಹಿತೆ ಮತ್ತು ಲಿಂಗಪುರಾಣ.

ವೀರಭದ್ರ ಕ್ರಾಂತಿ–ಶಕ್ತಿಗಳ ಸಂಕೇತವಾದಂತೆ ಸಪ್ತಮಾತೃಕೆಯರ ಸಂರಕ್ಷಕನೂ ಆಗಿದ್ದಾನೆ.[10] ಸಪ್ತ ಮಾತೃಕೆಯರಲ್ಲಿ ಬ್ರಾಹ್ಮಿಯ ಬಲಭಾಗದಲ್ಲಿ ವೀರಭದ್ರ ಚಾಮುಂಡಿಯ ಎಡಭಾಗದಲ್ಲಿ ಗಣೇಶನನ್ನು ಇರಿಸಿ ನಡುವೆ ಮಾತೃಗಣಗಳನ್ನು ಇರಿಸಬೇಕೆಂಬ ವಿಧಿ ಪ್ರಾಚೀನ ಶಿವಾಲಯದ ವ್ಯೂಹದಲ್ಲಿದೆ.[11] ಮಾತೃಮರ್ಯಾದಾ ಸಂಪ್ರದಾಯವು ವೈದಿಕ ಯುಗಕ್ಕಿಂತಲೂ ಪ್ರಾಚೀನ ವೆನ್ನುವುದು ನಿರ್ವಿವಾದ.[11–ಅ] ಶ್ರೀದೇವಿ ಖಡ್ಗ ಮಾಲಾ ಸ್ತೋತ್ರದಲ್ಲಿ ಸಪ್ತಮಾತೃಕೆಯರ ಸ್ತೋತ್ರವು ಮುಖ್ಯವಾಗಿ ರಕ್ಷಣಾರ್ಥಿಗಳಾಗಿ ಪ್ರಾರ್ಥಿಸುವುದಕ್ಕೇ ಆಗಿದೆ. ವೀರಭದ್ರಮಂತ್ರದಲ್ಲಿಯಾಗಲೀ ಆತನ ಸೋದರಿ ಚೌಡೇಶ್ವರಿಮಂತ್ರದಲ್ಲಿಯಾಗಲೀ ಸಪ್ತ ಮಾತೃಕೆಯರ ಹೆಸರುಗಳು ಕೂಡಿಕೊಂಡೇ ಬರುತ್ತವೆ.[12]

ಹೀಗೆ ಮಂತ್ರ, ತಂತ್ರಗಳಲ್ಲಷ್ಟೇ ಅಲ್ಲ, ಜನಪದ ಆಚರಣೆಗಳಲ್ಲಿ ವೀರಭದ್ರನ ವಡಬುಗಳನ್ನು 'ಹರ(ರಿ) ಸೇವೆ'ಯಲ್ಲಿ ಉಗ್ಗಡಿಸುವಲ್ಲಿ, ಸುಗ್ಗಿಕಟ್ಟೆಯ ಮೇಲೆ ಪೂಜೆಗಿಡುವ ಮಾತೃಕಾ ಮುಖವಾಡಗಳೊಡನಿರುವ ಸಂಯೋಜಿತ ಸಂಬಂಧದಲ್ಲಿ ನಾಗ–ಶಾಕ್ತ ಆರಾಧನಾ ಸಂಪ್ರದಾಯದ ಪಳೆಯುಳಿಕೆಯಾಗಿರುವ ಹೆದ್ದೇವರ (ಹುತ್ತ) ಪೂಜಾಚರಣೆಗಳಲ್ಲಿ, ಮಾತೃಸಮಾಧಿಯ ವಾರ್ಷಿಕ ದೀಪಾರಾಧನೆಯಲ್ಲಿ ಸಮನ್ವಯ ಮಾಡಿ ಕೊಂಡು ಜನಪದವು ಸಪ್ತಮಾತೃಕಾ ಆರಾಧನೆಯನ್ನೂ ತನ್ನ ವರ್ತಮಾನಕ್ಕನುಗುಣವಾಗಿ ಕಾಪಿಟ್ಟುಕೊಂಡು ಬಂದಿರುವುದು ಕಾಣುತ್ತದೆ. ಈ ಆರಾಧನೆಯಲ್ಲಿ ಮತ್ತಷ್ಟು ವೈವಿಧ್ಯಗಳೂ ಉಂಟು.

ಮೂಲತಃ ಮಾತೃದೇವತೆ, ಫಲವತ್ತತೆ, ಸಮೃದ್ಧಿ ಗಳನ್ನೂ ಪ್ರತಿಮೂಡಿಸುವ ಆರಾಧ್ಯದೇವತೆ ಆಗಿ ಆರಂಭಗೊಂಡಿತು. 'ಲಕ್ಷ್ಮಿ' ಕೂಡ ಪದ್ಮ, ಪೂರ್ಣ ಕಳಶ, ಆನೆಯೊಡನೆ ಸಂಯೋಜಿತವಾಗಿರುವುದೂ ಫಲ ವತ್ತತೆ ಸಮೃದ್ಧಿಯ ಸಂಕೇತ. ಅಂತಾಗಿ ಇವಳೂ ಕೂಡ ಜನಪದ ಮೂಲ ಕಲ್ಪನೆಯ ಮಾತೃ ದೇವತೆ, ಗ್ರಾಮದೇವಿ ಬಾದುಬ್ಬೆ, ಬನದುಬ್ಬೆ, ಗಡಿಲಕ್ಕವ್ವ, ಕಚ್ಛವತಿ ಎಂದಾಗಿ ನಾಮಾಂಕಿತಳಾಗಿದ್ದಾಳೆ. ಇದಲ್ಲದೆ ಅಭಿಷೇಕ ಲಕ್ಷ್ಮಿ ಅಥವಾ ಗಜಲಕ್ಷ್ಮಿಯ ಪರಿಕಲ್ಪನೆ ಸುಮಾರು ಕ್ರಿ. ಪೂ. ೩–೨ನೇ ಶತಮಾನದಿಂದಲೂ ಬೆಳೆದು ಬಂದಿದೆ. ಕಾಲಾನುಕ್ರಮದಲ್ಲಿ ಅಭಿಷೇಕ ಗಜಲಕ್ಷ್ಮಿ ಶಿಲ್ಪ ಫಲಕಗಳ ವೈಷ್ಣವ ಮಠೀಯ ಚೌಕಟ್ಟನ್ನು ಮೀರಿ ಅಥವಾ ಹಿಗ್ಗಿ ಶೈವ ಶಾಕ್ತ ಬೌದ್ಧ ಮಂದಿರ ಮುಂತಾದ ಎಡೆಗಳಲ್ಲಿ ರಾರಾಜಿಸತೊಡಗಿತು. ಕೆರೆ

9 ಡಾ॥ ಶ್ರೀ ಜ. ಚ. ನಿ. : ರುದ್ರ–ಭದ್ರ–ರೇಣುಕ, ಪು. ೧

10 ಡಾ॥ ಶ್ರೀ ಜ. ಚ. ನಿ. : ಚಿಗುರಿಟ್ಟ ಚಿಂತನ, ಶ್ರೀ ನಿಡುಮಾಮಿಡಿ ನಿವಾಸ, ೧೯೮೧, ಪು. ೩೧

11 ಮತ್ತು 11-ಅ, ಪ್ರೊ॥ ಎಸ್. ಕೆ. ರಾಮಚಂದ್ರರಾವ್ : ಮೂರ್ತಿಶಿಲ್ಪ, ನೆಲೆ–ಹಿನ್ನೆಲೆ, ಬೆಂಗಳೂರು, ೧೯೭೫, ಪು. ೧೬೨ ಮತ್ತು ೧೬೩. ಅಲ್ಲದೆ ನೆಲಮಟ್ಟದಿಂದ ತುಸು ವೇದಿಕೆಯ ಮೇಲೆ ಲಿಂಗರೂಪದಲ್ಲಿ ಕೊಡಗಿನ ಶಿವಾಲಯಗಳಾದ ಪಾಡಿ ಶ್ರೀ ಇಗ್ಗುತಪ್ಪ, ಪಾಲೂರು ಮಹಾಲಿಂಗೇಶ್ವರ, ಭಾಗಮಂಡಲದ ಭಗಂಡೇಶ್ವರ, ಗುಹ್ಯದ ಅಗಸ್ತ್ಯೇಶ್ವರ ದೇವಾಲಯ ಗಳಲ್ಲಿ ಇವು ಕಂಡುಬರುತ್ತವೆ. ಅಬ್ಬಿಮಠದ ಮಲ್ಲಿಕಾರ್ಜುನ ದೇಗುಲ, ಕಿತ್ತೂರಿನ ಸೋಮೇಶ್ವರ ದೇಗುಲಗಳಲ್ಲಿ ಏಕಶಿಲಾ ಫಲಕದ ಮೇಲೆ ಇವುಗಳ ಪ್ರತ್ಯೇಕ ವಿಗ್ರಹಗಳಿವೆ.

12 ಬಿ. ಆರ್. ಗೋವಿಂದರಾಜುಲು ನಾಯುಡು : ಹಿಂದು ಯುನಾನಿ ವೈದ್ಯ ಮಂತ್ರ ಸುಗಂಧ ಬೋಧಕ, ಬೆಂಗಳೂರು, ೧೯೮೪, ಪು. ೬೧, ೬೬

ತೂಬಿನ ಚೌಕಟ್ಟಿನ ಮೇಲೋ ಊರ ಅಗಸೆ ಬಾಗಿಲ ಮೇಲೋ ಇಂತಹ ಶಿಲ್ಪ ಫಲಕಗಳ ಶಾಸನಗಳಿರುವುದು ಕಂಡು ಬಂದಿದೆ. ಸಾಗರ ತಾಲ್ಲೂಕಿನ ಮಡೆಸೂರು ಗ್ರಾಮದ ಕಾಡಿನಲ್ಲಿ ಪತ್ತೆ ಆಗಿರುವ ಸಾಂತರಸ ಕಾಲದ ಶಿಲ್ಪ ಫಲಕ ಶಾಸನದಲ್ಲಿ ಮೂರು ಸಾಲುಗಳಿದ್ದು, ಮಂದ ಸೂರಿನ ಅಯ್ಯಣ್ಣನ ಮಗ ತೈಲ ಕಚ್ಚವೃತ್ತಿಯನ್ನು ಮಾಡಿಸಿದುದನ್ನು ತಿಳಿಸುತ್ತವೆ.[13] ಕೊಡಗಿನ ಯಡೂರು ಸುಗ್ಗಿಕಟ್ಟೆಯನ್ನು ಸುಗ್ಗಿಹಬ್ಬದ ಆರಂಭದ ಸಂದರ್ಭದಲ್ಲಿ ರಥ ತೂರಿಸಿದ ಸಮಾರಂಭದ ನಂತರ[14] ದೇವರ ವಡೆ ಕಾರರು ಬಟ್ಟೆಯಿಂದ ಎಣ್ಣೆ ಹಚ್ಚಿ 'ನೇರ' ಮಾಡುತ್ತಾರೆ. ಸ್ತಂಭಗಳು ಶುದ್ಧಿಯಾಗಲಿ, ಸೀಳದಿರಲಿ ಎಂಬ ಹಿನ್ನೆಲೆ ಈ ಕಚ್ಚವೃತ್ತಿಗೆ ಇರಬೇಕು ಎನಿಸುತ್ತದೆ.

ಬೆಂಗಳೂರು ಜಿಲ್ಲೆ ನೆಲಮಂಗಲ ತಾಲ್ಲೂಕಿನ ತ್ಯಾಮಗೊಂಡ್ಲುವಿನ ಬಳಿ 'ಬಿದಲೂರು ಗಂಗವ್ವ'ನ ಕೆರೆಯ ದಂಡೆಯ ಮುಂಬದಿಯಲ್ಲಿ ಕೆರೆಯ ತೂಬಿನ ಬಳಿ ಜೋಡಿ ಸ್ತಂಭ, ತುದಿ ಅಡ್ಡ ತೊಲೆಯ 'ಕೊಣ' ಇದೆ. ಗಜಲಕ್ಷ್ಮಿ ಶಿಲ್ಪವಿಲ್ಲದಿದ್ದರೂ ಕಮಲದ ಬಿಡಾವಣೆ ಇದೆ. ಕೊಣದ ಬುಡದಲ್ಲಿ ತೊಟ್ಟಿಲು ಇದೆ. 'ಬಿದಲೂರು ಗಂಗವ್ವ'ನಿಗೆ ಅಂಟಿರುವ ಏಳು ಕನ್ನಿಕೆಯರ ಕತೆ ಸಪ್ತ ಮಾತೃಕೆಯರ ಜನಪದ ಆರಾಧನೆಯ ಸಂಕೇತವಾಗಿದೆ. ಸುಗ್ಗಿಕಟ್ಟೆ ಹಬ್ಬದ ಕೆಲವು ಆಚರಣೆಗಳು ಇಲ್ಲಿಯೂ ಮೇಳೈಸಿದೆ. ಮೇ ತಿಂಗಳಲ್ಲಿ ಈಕೆಗೆ ಹಬ್ಬ. ಕೊಣದ ಹಿಂಬದಿಯ ಅಂಗಳದ ಸಿಮೆಂಟಿನ ತುಸು ವೇದಿಕೆಗಳ ಮೇಲೆ ಶುಕ್ರವಾರ, ಮಂಗಳವಾರ, ಹೆಂಗಳೆಯರು ಐದು ಅಥವಾ ಏಳು ಬೆನಕಗಳನ್ನಿಟ್ಟು ಎಳ್ಳುಂಡೆ ಹಾಗೂ ಧಾನ್ಯ ಗಳನ್ನು ನಿವೇದಿಸಿ ಸೀರೆ ಕುಪ್ಪಸಗಳೊಡನೆ ಪೂಜಿಸು ತ್ತಾರೆ. ಮೇ ತಿಂಗಳಲ್ಲಿ ೭ ಅಥವಾ ೧೫ ದಿನಗಳ ಹಬ್ಬ ಹಾಗೂ ಜಾತ್ರೆ. ಜಾತ್ರೆಗೆ ಮುನ್ನ ಹಬ್ಬದ 'ಸಾರಿಡುವುದು' (ಸಾರುವೆ) ಉಂಟು. ಮೈನೆರೆಯದ ಹೆಣ್ಣು ಕಳಶ ಹೊತ್ತು ಬಿದಲೂರಿನಿಂದ ಬಂದು ನಡೆಮುಡಿಯ ಮೇಲೆ ತ್ಯಾಮಗೊಂಡ್ಲುವಿನ ಗಂಗವ್ವನ ಗುಡಿಗೆ ಸಾಗುತ್ತದೆ.

ಕೊಡಗಿನ ಏಳುನೆಲೆ ಭದ್ರಕಾಳಿಯರ ಆರಾಧನೆ[15] ಸಪ್ತಮಾತೃಕೆಯರ ಪರ್ಯಾಯ ದೇವತಾ ಪೂಜೆಗೆ ಸಮೀ ಕರಣವೆನಿಸುತ್ತದೆ. ಉಗಾದಿಯ ಹಿಂಚು ಮುಂಚಿನಲ್ಲಿ ಈ ದೇವತೆಗೆ ವಾರ್ಷಿಕ ಹಬ್ಬ, ಜನಪದ ಆಚರಣೆಗಳು ನಡೆಯುತ್ತವೆ.

ಈ ವಿವೇಚನೆಯಿಂದ ಸುಗ್ಗಿಕಟ್ಟೆಯ 'ಸಬ ತಾಯಿ'ಗೂ ಸಪ್ತಮಾತೃಕೆಯರಿಗೂ ಇರುವ ಜನಪದ ಸಂಬಂಧವು ಸಾಬೀತಾಗುತ್ತದೆ.

ಸಾಮಾನ್ಯವಾಗಿ ಉಗಾದಿ ಕಳೆದ ೧೫ ದಿನಗಳ ಮೇಲೆ ಸುಗ್ಗಿಕಟ್ಟೆಯ ಹಬ್ಬವು ನಡೆಯುತ್ತದೆ. ಆದರೆ ಕೆಲವೆಡೆ ಸಂಕ್ರಾಂತಿ ಹಬ್ಬದ ಸಮಯದಲ್ಲಿ ಸುಗ್ಗಿಹಬ್ಬದ ಆಚರಣೆ ಉಂಟು.[16] ಹಬ್ಬದ ಸಮಯದಲ್ಲಿ ಸ್ತಂಭಗಳ

---

13 ಹೆಚ್. ಆರ್. ರಘುನಾಥ ಭಟ್ ಅವರು ತಮ್ಮ 'ಅಭಿಷೇಕಲಕ್ಷ್ಮಿ ಶಿಲ್ಪಶಾಸನ ಶೋಧನೆ' ಪ್ರಬಂಧವನ್ನು ಕರ್ನಾಟಕ ಇತಿಹಾಸ ಅಕಾದೆಮಿಯ ಪ್ರಥಮ ವಾರ್ಷಿಕ ಸಮ್ಮೇಳನ (ಮೇ, ೧೯೮೭)ದಲ್ಲಿ ಮಂಡಿಸಿದಾಗ ತಿಳಿದ ವಿಷಯ.

14 ರಥ ತೂರಿಸುವುದು : ದೇವರ ಉಯ್ಯಾಲೆ ಸರಪಳಿ-ಮಣೆಯನ್ನು ಸ್ತಂಭಗಳ ಕೊಕ್ಕೆಯಿಂದ ಇಳಿಬಿಡುವ ಸಮಾರಂಭ; ತೈಲಕಚ್ಚವೃತ್ತಿ : ಶಿಲಾಫಲಕ ಸ್ತಂಭಗಳಿಗೆ ಎಣ್ಣೆಬಟ್ಟೆಯಿಂದ ಒರೆಸಿ ಶುದ್ಧ ಮಾಡುವಿಕೆ.

15 ಕಾಟಕೇರಿ, ಗಾಳಿಬೀಡು, ಮಕ್ಕಂದೂರು, ಮುವತ್ತೊಕ್ಕಲು, ಹಾಲೇರಿ, ಕೆಟಕಲ್, ಇಬ್ಬನಿ ವಳವಾಡಿ–ಈ ಏಳು ನೆಲೆಗಳಲ್ಲಿ ಭದ್ರಕಾಳಿಯ ಹಬ್ಬ ಜನಪದ ವೈಭವದಿಂದ ನಡೆಯುತ್ತದೆ. ಅದೇ ಯಡೂರಿನ ಸುಗ್ಗಿಕಟ್ಟೆ ಹಬ್ಬ ವಾರ್ಷಿಕವಾಗಿ ನಡೆದರೂ ಐದು ವರ್ಷಕ್ಕೊಮ್ಮೆ ಅಲ್ಲಿರುವ ಏಳು ಗ್ರಾಮದೇವತಾ ಬನಗಳಲ್ಲಿ ಪೂಜೆ ಮತ್ತು ಬಲಿ ಉಂಟು.

16 ಆದರೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಹೋಳಿಹಬ್ಬದ ಸಮಯದಲ್ಲಿ ಸುಗ್ಗಿಹಬ್ಬ ನಡೆಯುತ್ತದೆ. ಆಗ ನದೀ ತೀರದಲ್ಲಿ ಮರದ ಕಂಬ ನೆಟ್ಟು ಸಮೀಪದಲ್ಲಿ ಒಣಗಿದ ತೆಂಗಿನ ಗರಿಯಲ್ಲಿ ಹಿಡಿದ ಮೀನನ್ನು ಸುಟ್ಟು ಬಲಿ ಅರ್ಪಿಸುತ್ತಾರೆ. ದಕ್ಷಿಣಕನ್ನಡ ಜಿಲ್ಲೆಯ ಗೌಡ ಜನಾಂಗದವರು ದೀವಳಿಗೆಯಲ್ಲಿ ನೇಗಿಲು, ನೊಗ, ನೇರು, ಕೆಲಸಗಳನ್ನು ಪೂಜಿಸುವುದಲ್ಲದೆ, ಹಾಲೆಮರದ ಎರಡು ಗೂಟಗಳನ್ನು ನೆಟ್ಟು ಹೂ ಅಲಂಕರಿಸಿ ಬಲೀಂದ್ರ ಮೂರ್ತಿ ಎಂದು ಪೂಜಿಸುವರು : ಎಂ. ಜಿ. ನಾಗರಾಜ್ : 'ಕೊಡಗಿನ ಕೊಲೆ ಕಲ್ಲುಗಳು', ಹರತಿಸಿರಿ, ಪು. ೭೧೮-೧೯.

ಅಷ್ಟತೊಲೆಯ ಕೇಂದ್ರದ ಕೊಕ್ಕೆಯಿಂದ ಇಳಿಬಿಟ್ಟ ತೂಗುಮಣೆಯಾದ 'ಸೊಡ್ಲುಮಣೆ'ಯಲ್ಲಿ (ಸೊಡರಿಟ್ಟ ಮಣೆ, ದೇವತೆ ಸಹಿತ ಅಥವಾ ರಹಿತವಾಗಿ ದೀಪಗಳನ್ನಿಟ್ಟು ತೂಗುತ್ತಾರೆ. ಮಣೆಯ ಅಕ್ಕಪಕ್ಕ ಹಾಗೂ ಕೆಳಗೆ ಸುಗ್ಗಿಬೆಳೆಯನ್ನು ಸಾಂಕೇತಿಕವಾಗಿ ರಾಶಿ ಹಾಕಿ ಪೂಜಿಸುವ ಹರುಷದ ವಾರ್ಷಿಕ ಹಬ್ಬದ ಕಟ್ಟೆಗಳಾಗಿ ಸುಗ್ಗಿ ಕಟ್ಟೆಗಳಿವೆ ; ವೀರ ವಿಜಯದ ಪ್ರತೀಕಗಳಾದ ಜಯ ಸ್ತಂಭಗಳೂ ಆಗಿವೆ. ಕಾಳಗದ ಮುನ್ನ ಮತ್ತು ನಂತರ ಇವುಗಳಿಗೆ ವೀರಪೂಜೆ ಸಲ್ಲಿಸುವ ರೂಢಿಯೂ ಈ ಕಟ್ಟೆಗಳ ಮುಂದೆ ಇತ್ತು. ವಿಜಯದ ಹುಮ್ಮಸ್ಸು, ಸುಗ್ಗಿಯ ಸಂತೋಷ ಇವುಗಳೊಡನೆ ದೇವಮೌಲ್ಯವೂ ಒದಗಿ ಜನಪದ ಈ ಕಟ್ಟೆಗಳನ್ನು ಪರಂಪರಾಗತವಾಗಿ ಕಾಪಾಡಿಕೊಂಡು ಬಂದಿದೆ.

ಹೆಚ್ಚಾಗಿ ಗೌಡ ಜನಾಂಗದ ನೇತೃತ್ವದಲ್ಲಿ ಉಗಾದಿಯ ಆಸುಪಾಸಿನಲ್ಲಿ ಬಳಕೆ ಇರುವ ಸುಗ್ಗಿಕಟ್ಟೆಯ ಹಬ್ಬ ಕೊಡಗಿನಲ್ಲಿ ಅದರ ಉತ್ತರಭಾಗಕ್ಕೆ ಅಂದರೆ ಸೋಮವಾರಪೇಟೆ ತಾಲೂಕಿಗೆ ಸೀಮಿತಗೊಂಡಿರುವಂತಿದೆ. ಅದೇ ಕೊಡಗಿನ ಉತ್ತರಗಡಿಯ ಕೆಲವು ಗ್ರಾಮಗಳಲ್ಲಿ ವೀರಶೈವರ ನೇತೃತ್ವದಲ್ಲಿ ನಡೆಯುತ್ತದೆ. ಆದರೆ ದಕ್ಷಿಣ ಕೊಡಗಿನಲ್ಲಿ ಹೆಚ್ಚುಕಡಿಮೆ ಇದೇ ಸಮಯದಲ್ಲಿ ಹಿರಿಯರ ಸ್ಮಾರಕ ಕಟ್ಟಡವಾದ 'ಕೈಮಡ' ಅಥವಾ 'ಬೀರಕೋಟ'(ವೀರ ಹಿರಿಯರ ಸ್ಮಾರಕ ಕೋಣೆ)ದ ಬಳಿ 'ಮೇಲೇರಿಕೊಂಡ' (ರಾಶಿಯಾಗಿ ಹಾಕಿದ ಕೊಂಡ) ಹಾಗೂ 'ತೆರೆ'ಗಳನ್ನೂ ಕಟ್ಟಿಸುವ ಭದ್ರಕಾಳಿ ಹಬ್ಬ ಆಚರಿಸುವ ಮೂಲಕ ಜನಪದ ಹಬ್ಬ ನಡೆಯುತ್ತದೆ. ದಕ್ಷಿಣ ಕೊಡಗಿನಲ್ಲಿ ಸುಗ್ಗಿ ಸ್ತಂಭ ಅಥವಾ ಸುಗ್ಗಿಕಟ್ಟೆಗಳು ಕಾಣಬರುವುದಿಲ್ಲ ಎಂದರೂ ಅಪವಾದವೂ ಇರುವಂತಿದೆ. ಬೆಕ್ಕೆಸೊಡ್ಲೂರಿನ ಮಂದತವ್ವೆ ಇದಕ್ಕೆ ಒಂದು ಸಾಕ್ಷಿ ಆಗಬಹುದು.[17] ಕೊಡವ ಮಾದರಿಯ ಕುಣಿತಗಳು, ಸುಗ್ಗಿ ಕೋಲಾಟಗಳು, ಬಿಲ್ಲಾಟಗಳು, ಬೇಟೆಯ ಅಣಕು ಆಟಗಳು, ಹಾಸ್ಯರೂಪಕಗಳು ಸುಗ್ಗಿಕೋಟೆಗಳ ಮುಂದೆ ಅಣವ ಸನಿಹದ ಮೈದಾನಗಳಲ್ಲಿ ಪ್ರದರ್ಶಿತವಾಗುತ್ತವೆ.

ಒಂದು ಕಾಲಕ್ಕೆ ಕೊಡಗಿನ ಭಾಗವೂ ಆಗಿದ್ದ ಸಕಲೇಶಪುರ ತಾಲೂಕಿನ (ಹಳೆ ಮಂಜರಾಬಾದು ಪ್ರದೇಶ) ಅನೇಕ ಗ್ರಾಮಗಳಲ್ಲಿ ಸುಗ್ಗಿದೇವರಕಟ್ಟೆ ಮಂಟಪ, ಕಂಬಗಳಿವೆ. ಅಲ್ಲಿ ಸುಗ್ಗಿದೇವರ ಹಬ್ಬವು ಕೆಲವೆಡೆ ವಾರ್ಷಿಕವಾಗಿ, ಕೆಲವೆಡೆ ತ್ರೈವಾರ್ಷಿಕವಾಗಿ ನಡೆಯುತ್ತಿದೆ. ಗೌಡ ಜನಾಂಗ,ವೀರಶೈವ ಹಾಗೂ ಬ್ರಾಹ್ಮಣರು ನೇತೃತ್ವ ವಹಿಸಿ ಇತರರು ಅಂದರೆ ಸರ್ವಮತೀಯರೂ ಮುಂದಾಗಿ ಬಂದು ಆ ಹಬ್ಬವನ್ನು ಸಾರ್ವತ್ರಿಕವಾಗಿ ಆಚರಿಸುತ್ತಾರೆ. ಮುಖ್ಯವಾಗಿ ಭದ್ರಕಾಳಿ, ದುರ್ಗೆ, ಪಾರ್ವತಿ , ದೇವೀರಮ್ಮ, ವಳಗರಮ್ಮ , ಮಾರಮ್ಮ , ಕೆಂಚಮ್ಮ , ಚೌಡಮ್ಮ ಮುಂತಾದ ಸ್ತ್ರೀದೇವತಾ ಹೆಸರುಗಳಲ್ಲಿ ಪೂಜೆ, ಹಬ್ಬ ನಡೆಯುತ್ತದೆ. ಅದೇ ಬೆಂಗಳೂರು ಜಿಲ್ಲೆಯ ಗ್ರಾಮವೊಂದರಲ್ಲಿ ಗಂಡುದೇವತೆ ಇದೇ ರೀತಿ ಆರಾಧ್ಯ ದೈವವಾಗಿದ್ದಾನೆ.[18] ಹೀಗೆಯೇ ಕೊಡಗಿನ ಹುಲುಕೋಡು ಹಾಗು ಕಿತ್ತೂರು ಗ್ರಾಮಗಳಲ್ಲಿ ಕುಮಾರಲಿಂಗೇಶ್ವರ ಸುಗ್ಗಿದೇವರ ಹಬ್ಬದಲ್ಲಿ ಮುಖ್ಯ ದೇವರಾಗಿ ಸಂಕ್ರಾಂತಿ ಸಮಯದಲ್ಲಿ ಪೂಜಿಸಲ್ಪಡುತ್ತಾನೆ.

---

17 ದಕ್ಷಿಣ ಕೊಡಗಿನ ವೀರರಾಜಪೇಟೆ ತಾಲ್ಲೂಕು ಬೆಕ್ಕೆಸೊಡ್ಲೂರಿನ ಪ್ರಸಿದ್ಧ ಗ್ರಾಮದೇವತೆ ಮಂದತವ್ವನ ಸ್ತಂಭವು ತಂಪು ಮರಗಿಡಗಳ ವೃತ್ತ ವೇದಿಕೆಯ ಮೇಲೆ ನಿಂತಿದೆ. ಬ್ರಹ್ಮಕಾಂತ ಮಾದರಿಯ ಈ ಸ್ತಂಭದ ಮೇಲೆ ಕಮಲದ ಚಿತ್ತಾವಳಿ ಇದ್ದು ಒಂದು ಕಾಲಕ್ಕೆ ಸುಗ್ಗಿ ಸ್ತಂಭವೆಂದು ಕರೆಸಿಕೊಂಡ ಮಾಸ್ತಿ ಸ್ತಂಭವಾಗಿರುವಂತಿದೆ. ಹುತ್ತರಿ ಹಬ್ಬದಲ್ಲಿಯೂ ಇಲ್ಲಿ ಸಡಗರ ಆರಾಧನೆ ನಡೆಯುತ್ತದೆ. ಅದಕ್ಕಿಂತ ಮಿಗಿಲಾಗಿ ಮೂರು ವರ್ಷಗಳಿಗೊಮ್ಮೆ ಮೇ ತಿಂಗಳಲ್ಲಿ ೧೨ ದಿನಗಳ ಹಬ್ಬ ಕೆಂಡಕೊಂಡ ಸಹಿತ ನಡೆಯುತ್ತದೆ. ಈ ಮಂದವ್ವ 'ಪಾರ್ವತಿ ದೇವಿ' ಎಂದು ಅಲ್ಲಿನ ಗ್ರಾಮೀಣರ ನಂಬಿಕೆ. ಸ್ತಂಭದ ಮೇಲೆ ತೋಳಿನಂತಿರುವ ಕುರುಹು ಇದೆ.

18 ಬೆಂಗಳೂರು ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು ಹುಲುಕುಂಟೆ ಗ್ರಾಮದ ರಂಗನಾಥದೇವರು ಬೇಟೆರಂಗನಾಥಸ್ವಾಮಿ ಎಂದೇ ಪ್ರಸಿದ್ಧಿ. ಡಿಸೆಂಬರ್–ಜನವರಿ ತಿಂಗಳಲ್ಲಿ ಬರುವ ಈ ದೇವರ 'ಕೋಲುಬೇಟೆ' ಹಬ್ಬ ಮತ್ತು ೨ ಕಿ.ಮೀ. ದೂರದಲ್ಲಿರುವ ಅಲಂಕೃತ ಕಟ್ಟೆ(ಚತುರಸ್ರ ತೆರೆದ ಮಂಟಪ)ಯ ಬಳಿ ಉತ್ಸವಮೂರ್ತಿಯೊಡನೆ ಬಂದು ಬೇಟೆಯ ಮಿಕವನ್ನು (ಕೋಲಿಗೆ ಸಿಗಿಸಿದ್ದ ಮಿಕ ಬಲಿ) ಮುಂದಿಟ್ಟು ಹಬ್ಬದಾಚರಣೆ ನಡೆಯುತ್ತದೆ. ವೈಷ್ಣವ ದೇವರಿಗೆ 'ಬೇಟೆಯ ಭಕ್ತಿ' ಇದೆ.

ಸುಗ್ಗಿಕಟ್ಟೆಗಳ ಬಳಿ ಇರುವ ಶಾಸನ ಸಂಗತಿಗಳನ್ನು ಗಮನಿಸಿದರೆ ಆ ಕಟ್ಟೆಗಳು ವೀರರ ಸ್ಮಾರಕ ಕಟ್ಟೆಗಳಾಗಿ ಪರಿಗಣಿಸುವ ರೂಢಿ ಮೊದಲಿಗೆ ಚಾಲ್ತಿಯಲ್ಲಿತ್ತು ಎಂದ ಅನ್ನಿಸುತ್ತದೆ. ಹಾಲೇರಿ ಹಾದಿಯಲ್ಲಿ ಕಾಂಡನಕೊಲ್ಲಿಯ ಬಳಿ 'ದಂಡಿನ ಮಾರಮ್ಮ' ಮರದ ಕಟ್ಟೆಯ ಬಳಿಯ ಗೂಡಿನಲ್ಲಿ ತ್ರಿಶೂಲ ಸಂಕೇತಗಳೊಡನೆ ಸ್ಥಾಪಿತವಾಗಿದ್ದಾಳೆ. ದಕ್ಷಿಣ ಕೊಡಗಿನಲ್ಲಿ ಭದ್ರಕಾಳಿಯನ್ನು ಸಮೂಹ ತ್ರಿಶೂಲ ನೆಲೆಯಿಂದ ಸೂಚಿಸಿ ಆರಾಧಿಸುವ ಪದ್ಧತಿ ಇದೆ. ಹಾಲೇರಿ ಅರಸರ ಮೂಲ ಪುರುಷ ಮೊದಲು ನೆಲೆನಿಂತ ಹಾಲೇರಿಯಿಂದ ಆ ಅರಸರು ಯುದ್ಧಕ್ಕೆ ಸಾಗುವ ಮುನ್ನ ಈ ದಂಡಿನ ಮಾರಮ್ಮನ ಪೂಜೆ ಸಲ್ಲಿಸಿ ವಿಜಯದ ನಂತರ ಈ ಕಟ್ಟೆಯ ಬಳಿ ವಿಜಯಲಕ್ಷ್ಮಿ ಪೂಜೆಯನ್ನು ನಡೆಸುತ್ತಿದ್ದರೆಂದು ಜನಪ್ರತೀತಿಯಲ್ಲಿದೆ. ಹಾಲೇರಿಯಲ್ಲಿರುವ ಭದ್ರಕಾಳೇಶ್ವರಿಗೆ ಉಗಾದಿ ಸಮಯದಲ್ಲಿಯ ಸುಗ್ಗಿಯ ಹಬ್ಬದ ಸಡಗರ ತುಂಬಿಬಂದು ಹಬ್ಬದ ಉತ್ಸಾಹ, ಉತ್ಸವ, ದಾಸೋಹ ಹಾಗೂ ಜನಪದ ಕಲಾಪ್ರದರ್ಶನಗಳಾದ ಕೈತಲೆಆಟ್, ಕೊಂಬಾಟ್ ಮುಂತಾದವುಗಳು ನಡೆಯುತ್ತವೆ. ಹೀಗೆ ವಿವಿಧ ನೆಲೆಗಳಲ್ಲಿ ಸ್ಥಳೀಯ ವೈವಿಧ್ಯತೆ, ಆಚಾರಗಳನ್ನು ಮೇಳೈಸಿಕೊಂಡು ಗ್ರಾಮೀಣರಿಗೆ ಜೀವಂತ ಹರುಷ ತಂದಿರುವ ಸುಗ್ಗಿಕಟ್ಟೆಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಗಮನಿಸಬೇಕು.

ಈ ಹಿನ್ನೆಲೆಯಲ್ಲಿ ಕೊಡಗಿನ ಯಡೂರು, ಚೌಡ್ಲು, ನಗರೂರು, ಕುಮಾರಹಳ್ಳಿ, ತಲ್ತರೆಶೆಟ್ಟಳ್ಳಿ, ಹುಲುಕೋಡು, ಕಿತ್ತೂರುಗಳ ಸುಗ್ಗಿಕಟ್ಟೆ–ದೇವರುಗಳನ್ನು ಗಮನಿಸಲಾಗಿದೆ. ತೌಲನಿಕವಾಗಿ ಹಾಸನ ಜಿಲ್ಲೆಯ ಉದೇವಾರಕೆ–ಹೊಸಕೋಟೆ, ಕಾರ್ಗೋಡು, ಉತ್ತೇಳು, ಅಬ್ಬನ, ಹಾರ್ನಳ್ಳಿ, ಕೋಡಿಮಠದ ಸುಗ್ಗಿಕಟ್ಟೆ–ದೇವರುಗಳು, ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು, ಬೆಂಗಳೂರು ಜಿಲ್ಲೆ ಚನ್ನಪಟ್ಟಣ ತಾಲ್ಲೂಕು ಭೈರಾಪಟ್ಟಣದ ಉಯ್ಯಾಲೆ ಕಟ್ಟೆಗಳನ್ನು ವಿವೇಚನೆಗೆ ತೆಗೆದುಕೊಳ್ಳಲಾಗಿದೆ. ಒಟ್ಟಾರೆ ಇಲ್ಲೆಲ್ಲ ಸುಗ್ಗಿಕಟ್ಟೆ ಹಬ್ಬದ ಆಚರಣೆಗಳು ಸಮಾನ ಮೂಲಭಾವವನ್ನು ಹೊಂದಿರುವುದು ಕಾಣುತ್ತದೆ.

ಕೊಡಗಿನ ಸುಗ್ಗಿದೇವರ ಹಬ್ಬದಲ್ಲಿ ಒಂದು ವರ್ಷ ಸುಗ್ಗಿಕಟ್ಟೆಯಲ್ಲಿ ವಿಶೇಷ ವೈಭವಾಚರಣೆಗಳಿದ್ದರೆ ಮರುವರ್ಷ ವೀರಗಲ್ಲು ಸಮೂಹದ ಬಳಿ ಹರಿಸೇವೆ (ಹರಸೇವೆ) ಅಂದರೆ ವೆಂಕಟರಮಣನ ಸೇವೆ ಅಥವಾ ವೀರಭದ್ರನ ವಡೆಬು ಸೇವೆ(?)ಯ ಹೆಸರಿನಲ್ಲಿ ಅವುಗಳ ಪೂಜೆ ನಡೆಯುತ್ತದೆ, ಕೆಂಚರಾಯ-ಮುತ್ತುರಾಯನ ಪೂಜೆಯೂ ಜೊತೆಯಾಗಿ ನಡೆಯುತ್ತದೆ. ನಾಮಧಾರಿಗೌಡರಲ್ಲಿ 'ಹರಿಸೇವೆ' ಎಂದೇ ಪ್ರಚಲಿತವಿದ್ದರೂ,[19] ಭೈರವ ಪೂಜೆ, ಹೆದ್ದೇವರ(ನಾಗ)ಪೂಜೆಯೂ ಸಹಭಾಗಿ ಆಗಿ ನಡೆಯುತ್ತದೆ.

---

19 ಹಾಸನ ಜಿಲ್ಲೆ ಅರಕಲಗೂಡು ತಾಲೂಕು ಸೋಂಪುರ ಹೋಬಳಿ ಮುಸಕತ್ತೂರಿನ ಶಂಕರಲಿಂಗ ದೇವಸ್ಥಾನದ ಬಳಿ ಮುಂಗಾರು ಮಳೆ ಸಮಯದಲ್ಲಿ (ಏಪ್ರಿಲ್) 'ಅಳಗ ಜಂಪ'ವನ್ನೂ ೧೨ ವರುಷಗಳಿಗೊಮ್ಮೆ ವೀರಶೈವರು ನಡೆಸುವ ಮೂರುದಿನಗಳ ದೇವರಹಬ್ಬದಲ್ಲಿ ಆಚರಿಸಲಾಗುತ್ತದೆ. ನೈಜವಾಗಿ ಇದು 'ಹಲಗೆ ಜಂಗು' ಹಿಡಿದು, ಧರಿಸಿ ಆಡುವ ಕುಣಿತ. ವೀರಭದ್ರನ ದೇಗುಲದಲ್ಲಿ ಜತನ ಮಾಡಿರುವ ೨೫ ವೀರಭದ್ರ ಹಲಗೆಗಳನ್ನು ಹಲಗೆ ಹಿಡಿದು ಮಂಡಿಗೆ 'ಜಂಗು' ಕಟ್ಟಿ ಹಲಗೆ ಕುಣಿಸುವ ಆಟ. 'ದೇವರ'ನ್ನು ಒಂದು ಕೈಗೆ ಕಟ್ಟಿಕೊಂಡು ಇನ್ನೊಂದು ಕೈಯನ್ನು ಎತ್ತಿ ಕುಣಿಯುತ್ತಾರೆ. ವೃತ್ತಾಕಾರದಲ್ಲಿ ಹಾಸಿದ ಬಟ್ಟೆ. ಅದರ ಮೇಲೆ ಅಗ್ರ ಬಾಳೆ ಎಲೆ. ಅದರ ಮೇಲೆ ಬಾಳೆಹಣ್ಣಿನ ಚೂರುಗಳು. ಕುಣಿತದ ಉಗ್ಗಡಣೆಯ ನಡುವೆ ಬಂದು ಮಂಡಿಕೊಟ್ಟು ಬಗ್ಗಿ ಬಾಯಿಂದ ಹಿಡಿದುಕೊಳ್ಳುತ್ತಾರೆ. ಇದು 'ಹರಸೇವೆ'ಯಲ್ಲಿನ ಒಂದು ಆಚರಣೆ. ಶಂಕರಲಿಂಗನ ಗುಡಿಯಿಂದ ಹಲಗೆಯವರು ಹೋಗುವಲ್ಲಿ ಹೆಜ್ಜೆ ಹಜ್ಜೆಗೆ ಇಡಿಗಾಯಿ ಹಾಕುತ್ತಾರೆ. ಬಹುಶಃ ಈಗಿನ ತಿರುಪತಿ ಒಕ್ಕಲಿನ 'ಹರಿಸೇವೆ' ಹಿಂದೆ ವಡೆಬು ಉಗ್ಗಡಣೆಯೊಡನೆ ವೀರಭದ್ರನ 'ಹರಸೇವೆ' ಇವಲ್ಲ ಆಗಿದ್ದುದರ ಸಂಕೇತವೆನಿಸುತ್ತದೆ. ತಿರುಪತಿಯ ಮೂರ್ತಿ ವೆಂಕಟೇಶ್ವರನಾಗಿ ರೂಪಾಂತರವಾದ ಮೇಲೆ ಗೌಡ ಜನಾಂಗದ 'ಹರಭಕ್ತಿ', 'ಹರಿಭಕ್ತಿ-ಹರಿಸೇವೆ'ಗೆ ರೂಪಾಂತರವಾಗಿರಬೇಕು. ವಿಷ್ಣುವಾದರೋ 'ಫಾಲಾಕ್ಷ ಸಖಿ' ಸಲ್ಲವೆ ? ಮುಸಕತ್ತೂರಿನಲ್ಲಿ ವೀರಶೈವರು ಮಾತ್ರ ಈ 'ಹರಸೇವೆ'ಯಲ್ಲಿ ಪಾಲ್ಗೊಳ್ಳುತ್ತಾರೆ. ಮುಸಕತ್ತೂರಿನ ಈ ಆಚರಣೆಗಳ ಮಾಹಿತಿಯನ್ನು ಸೋಂಪುರದ ಶ್ರೀ ಎಸ್. ಬಸವರಾಜ್ ಅವರು ನೀಡಿದ್ದಾರೆ.

.೭೩.

ಸುಗ್ಗಿಕಟ್ಟೆಯಲ್ಲಿ ಸೊಡರು ಇಟ್ಟು, ದೇವರಿಟ್ಟು ತೂಗುವ ಕಾರಣವೆಂದರೆ, ಬದುಕಿನ ಸಂತೋಷದ ಬೆಳಕನ್ನು ಸಾಮೂಹಿಕವಾಗಿ ಹಂಚಿಕೊಳ್ಳುವುದು ಹಾಗೂ ಆಗಮೋಕ್ತ ದೇವ ವಸಂತೋತ್ಸವದ ತದ್ಭವ ಪ್ರಾಚೀನ ರೂಪ ಜನಪದದಲ್ಲಿ ರೂಪುಗೊಂಡಿರುವ ರೀತಿ ಎಂದು ಇರಬೇಕು. ಭಾರತೀಯ ಹಿನ್ನೆಲೆಯಲ್ಲಿ ಧಾರ್ಮಿಕ ಲೇಪನವು ಈ ಸಂತೋಷಕ್ಕೆ ಒದಗಿ 'ದೇವರ' ಪ್ರತೀಕಗಳ ಮೂಲಕ ಹೆಚ್ಚು ಪ್ರಚಲಿತವಾಗುವುದು ಇಲ್ಲಿನ ಯಾವುದೇ ಸಮೂಹ ಆಚರಣೆಗಳ ಜಾಯಮಾನ. ಮನಶ್ಶಾಸ್ತ್ರದ ದೃಷ್ಟಿಯಿಂದಲೂ ಈ ಬಗ್ಗೆ ವಿವೇಚನೆ ಅವಶ್ಯಕ. ಕೆಲವು ವೇಳೆ ಮನೆದೇವತೆಯನ್ನು ಸಾರ್ವತ್ರಿಕ ದೇವತೆಯನ್ನಾಗಿ ಮಾಡಿ ಗೌರವ, ಪ್ರತಿಷ್ಠೆ, ಭಕ್ತಿಗಳನ್ನೂ ತಮ್ಮ ವಂಶಕ್ಕೆ ತಂದುಕೊಡುವ, ಜನಮಾನ್ಯತೆ ಪಡೆಯುವ ಪ್ರವೃತ್ತಿ ಕೂಡ ಆಗಿರಬಹುದು. ಹೀಗಾಗಿ ಯಡೂರು ಹಾಗೂ ಇತರೆಡೆಯ ಸುಗ್ಗಿಕಟ್ಟೆಗಳ ಬಳಿ ಇಡುವ ಮುಖವಾಡಗಳು ಗ್ರಾಮದ ಪ್ರಮುಖ ಗೌಡ ಮನೆತನಗಳ ಅಥವಾ ಗ್ರಾಮವನ್ನು ಕಟ್ಟಿದ ಮೂಲ ಮನೆತನದವರ ಹಕ್ಕಿನವಾಗಿವೆ. ದಕ್ಷಿಣ ಕನ್ನಡ ಜಿಲ್ಲೆಯ ಪಡುಬಿದ್ರೆಯ ಕೊರ್ನಾಯ(ಬ್ರಾಹ್ಮಣ) ಮನೆತನದ ಖಡ್ಗೇಶ್ವರಿ ಅಲ್ಲಿನ ಬ್ರಹ್ಮಸ್ಥಾನದಲ್ಲಿ ಇಂದು ಸಾರ್ವತ್ರಿಕವಾಗಿ ಪೂಜೆಗೊಳ್ಳುತ್ತಿದ್ದಾಳೆ.ಕೆಲವು ವೇಳೆ ಮನೆತನದ 'ದೇವರ' ಮುಖವಾಡಗಳು ಅನ್ಯರ ವಶದಲ್ಲಿದ್ದು ಹಬ್ಬದಲ್ಲಿ ಕಟ್ಟೆಗೆ ತಂದು ಪೂಜಿಸುವುದುಂಟು.[20] ಇನ್ನು ಸುಗ್ಗಿದೇವರ ಹಬ್ಬದಲ್ಲಿ 'ಬೇಟೆ'ಯ ಹಿನ್ನೆಲೆಯಾದರೂ ಏನು ? ಬಹುಶಃ ಮನೆತನದ ಹಿರಿಯರು ಒಂದು ಕಾಲಕ್ಕೆ ರಾಜನ ಸೈನಿಕರಾಗಿದ್ದು ಕಾಳಗ ಅಥವಾ ಬೇಟೆಗೆ ಹೊಂದಿಕೊಂಡ ಪ್ರವೃತ್ತಿ ಹಾಗೂ ರಾಜನಿರ್ಮಿತ ಪ್ರಭಾವದಿಂದಾಗಿ ತಮ್ಮ ವಿರಾಮ ವೇಳೆಯ 'ಶಿಕಾರಿ' ಪದ್ಧತಿಗೆ ಕಾಲಕ್ರಮೇಣ ಧಾರ್ಮಿಕ ಮಂಜೂರಾತಿ ಪಡೆದು ದೇವರಹಬ್ಬದ ಅವಿಭಾಜ್ಯ ಅಂಗವಾಗಿ ಪ್ರಸಾದಕ್ಕೂ ಆಗಿ 'ಬೇಟೆ' ಯನ್ನು ಅಳವಡಿಸಿಕೊಂಡಿರಬೇಕು. ಕೊಡಗಿನ ವೀರರಾಜೇಂದ್ರನ ಕಾಲದ ಬೇಟೆಯೊಂದರ ಐತಿಹಾಸಿಕ ಘಟನೆಯನ್ನು ಇಲ್ಲಿ ಗಮನಿಸುವುದುಚಿತ.[21]

ಕೊಡಗಿನ ಇತಿಹಾಸದ ಹಿನ್ನೆಲೆಯಲ್ಲಿ ಇದು ಸಹಜವೆನಿಸಿದರೂ ಹಾಸನ ಹಾಗೂ ಚಿಕ್ಕಮಗಳೂರು ಜಿಲ್ಲೆಯಲ್ಲಿನ ಸುಗ್ಗಿದೇವರ ಹಬ್ಬದ ಸಮಯದಲ್ಲಿನ 'ಬೇಟೆ' ಪದ್ಧತಿಗೆ ಅನ್ವಯವಾಗದು ಎಂದು ನಿಖರವಾಗಿ ಹೇಳಲು ಬರುವುದಿಲ್ಲ.

ಸಾಮಾನ್ಯವಾಗಿ ಹತ್ತರಿಂದ ಹನ್ನೆರಡು ದಿನಗಳ ಅವಧಿಯ ಹಬ್ಬದಲ್ಲಿ ಆಚರಣೆಗಳು ಹತ್ತರಿಂದ ಹದಿನೆಂಟು ಹಂತಗಳಲ್ಲಿ ಸ್ಥಳೀಯ ವೈವಿಧ್ಯತೆಗಳಿಗನುಗುಣವಾಗಿ ನಡೆಯುತ್ತವೆ. ಅಲ್ಲದೆ ಈ ಹಂತಗಳು ಜನಪದ ಪಾರಿಭಾಷಿಕ ಶಬ್ದಗಳಿಂದ ರೂಢಿಯಲ್ಲಿವೆ.

೧. ಸುಗ್ಗಿಹಬ್ಬ ತೆಗೆಯುವುದು : ಒಂದು

---

20 ಕೆ. ಹೊಸಕೋಟೆಯ ಕೆಂಚಮ್ಮ ದೇವತೆಯ ಏಳು ಮುಖವಾಡಗಳು ಹರಿಹಳ್ಳಿಯ ಬ್ರಾಹ್ಮಣ ಅರ್ಚಕರ ವಶದಲ್ಲಿವೆ.

21 ವೀರರಾಜೇಂದ್ರ ಒಡೆಯ ಕಲಿಸಂದ ೪೯೦೮ ಕ್ಷಯ ಸಂ. ಚೈತ್ರ ಶುದ್ಧ ೬ರಲ್ಲಿ ಯಡವನಾಡು ತಾಲೂಕಿನ ಸೋಮವಾರಪೇಟೆಯ ಮುಂದೆ ಕಟ್ಟೆಯ ಮೇಲೆ ಹೆಬ್ಬುಲಿ, ಕಡವೆ ಇತ್ಯಾದಿ ಮೃಗಬೇಟೆಯ ನಂತರ, ಬೇಟೆಯಲ್ಲಿ ಸಿಕ್ಕಿದ ೨೬ ಆನೆಗಳನ್ನು ಕೊಂದು ಅವುಗಳ ತಲೆಯನ್ನು ಮಡಗಿಸಿ 'ಆನೆತಲೆ ಕಟ್ಟೆ' ಎಂಬ ಹೆಸರಿಟ್ಟ—'ರಾಜೇಂದ್ರನಾಮೆ', ಪುಟ ೨೭೯–೮೩. ಸೋಮವಾರಪೇಟೆಗೆ ಹಿಂದಿನ ಹೆಸರಾಗಿ ಈಗ ಹೊಂದಿಕೊಂಡಂತೆ ಇರುವ 'ನಗರೂರು' ಸುಗ್ಗಿಕಟ್ಟೆಗೆ ಈ ಹೆಸರು ಅನ್ವಯವಾಗಿರಬಹುದು. ಇಲ್ಲವೆ ಸೋಮವಾರಪೇಟೆ–ಯಡೂರು ಹಾದಿಯ ಕಲಕುಂದೂರು ತಿರುವಿನವರೆಗೆ 'ಹಾಲೆ ಕಟ್ಟೆ ರಸ್ತೆ' ಎಂದಿರುವುದು 'ಆನೆತಲೆ ಕಟ್ಟೆ' ಎಂಬ ಹೆಸರಿನ ರೂಪಾಂತರವಿರಬಹುದು ಅಥವಾ ಕಲಕುಂದೂರಿನ ಪರಿಸರದಲ್ಲಿ ಹಾಲೆಮರಗಳು ಹೆಚ್ಚಾಗಿ ಇದ್ದು ಆ ಹೆಸರು ಬಂದಿರಬಹುದು. ಗೌಡ ಜನಾಂಗದಲ್ಲಿ ಹಾಲೆಮರದ ಎರಡು ಗೂಟಗಳನ್ನು ನೆಟ್ಟು ಹೂ ಅಲಂಕಾರದ ಪೂಜೆಯ ಪದ್ಧತಿ ಇದೆ—ಹರತಿಸಿರಿ, ಪು. ೭೯. ಅಂದರೆ ಸುಗ್ಗಿಸ್ತಂಭಗಳು ಮೊದಲಿಗೆ ಹಾಲೆಮರದವು ಆಗಿರುತ್ತಿದ್ದುದರ ಸೂಚನೆ ಆಗಿರಬಹುದು. ಆದರೆ ರಾಜೇಂದ್ರನಾಮೆಯಲ್ಲಿ (ಪು. ೨೮೨) ನಗರೂರಿಗೆ ಸಮೀಪವಿರುವ ಕುಸುಬೂರು ಕಾಡಿನಲ್ಲಿ ಒಂದು ಜಾವದ ಒಳಗೆ ಇಪ್ಪತ್ತಾರು ಆನೆ ಸಿಕ್ಕಿ, ಅವುಗಳ ತಲೆಗಳನ್ನು–ಸೋಮವಾರಪೇಟೆಯ ಮುಂದೆ ಕಟ್ಟೆಯನ್ನು ಕಟ್ಟಿಸಿ ೨೬ ಆನೆ ತಲೆ ಇಡಿಸಿದ ವೀರರಾಜೇಂದ್ರ–ಇಟ್ಟು 'ಆನೆತಲೆ ಕಟ್ಟೆ' ಎಂದು ಹೆಸರಿಸಿದ ಉಲ್ಲೇಖದ ಕಾರಣ ನಗರೂರಿನ ಸುಗ್ಗಿಕಟ್ಟೆಯ 'ಆನೆತಲೆ ಕಟ್ಟೆ' ಆಗಿರಬೇಕು.

ಹೊಸ ಅಶ್ವಿನಿ ಮಳೆ ಹುಟ್ಟಿದ ಮೇಲೆ ಹಬ್ಬಕ್ಕೆ ಎಂಟು–ಹತ್ತು ದಿನಗಳ ಮುಂಚಿನ ಭಾನುವಾರ ಅಥವಾ ಗುರುವಾರ ಸುಗ್ಗಿಕಟ್ಟೆಯ ಬಳಿ ಸಾರಿ ಹಬ್ಬದ ದಿನಾಂಕವನ್ನು ನಿರ್ಧರಿಸುವುದು.

೨. **ಚೌಡಿಗೆ ಕೊಡುವುದು :** ಬೆಟ್ಟ ಅಥವಾ ಕಾಡಿನ ಮರದ ಬುಡದ ಬಳಿ ಇರುವ ಚೌಡಿಯ (ಚೌಡೇಶ್ವರಿ?) ಸಾಂಕೇತಿಕ ಶಿಲೆಗೆ ಪ್ರಾಣಿಬಲಿ ನೀಡುವುದು. ಇದರ ನಂತರವೆ ಸುಗ್ಗಿಹಬ್ಬ.

೩. **ಬೀರೇ ದೇವರಿಗೆ ವೀಳ್ಯ ಚೆಲ್ಲುವುದು :** ಒಂದೇ ಮರ ಇರುವ ಬನ(?)ವಾದ ಬೀರೇ ದೇವರ ಬನದಲ್ಲಿ ವೀಳ್ಯವನ್ನಿಟ್ಟು ಗ್ರಾಮದ ಒಳಿತಿಗೆ, ಮಳೆ-ಬೆಳೆಗೆ, ಹಬ್ಬದ, ಬೇಟೆಯ ಯಶಸ್ಸಿಗೆ ಬೇಡುವಿಕೆ.

೪. **ಸಾರು ಅಥವಾ ಸಾರುವೆ ಹಾಕುವುದು :** ಸುಗ್ಗಿಹಬ್ಬದ ಕುರಿತು ಪ್ರಸಾರ ಮಾಡುವುದು. ಹರಿಜನ ಕುಳವಾದ 'ಮೊದ್ನೆ'(ಮೊದಲನೆಯವ?)ಯ ಸಾರುವೆ ಮಾಡುವ ವ್ಯಕ್ತಿ.

೫. **ಹಣ್ಣು ಕಾಯಿ ಹೇಳಿಸುವುದು :** ಕುಳವಾಡಿಯ ಮೂಲಕ 'ಬೆಂಗಲು' ಆಚರಣೆ ಆರಂಭವಾಗಿರುವುದನ್ನು ಹೇಳಿಸುವುದು.

೬. **ಬೆಂಗಲು ಆಚರಿಸುವುದು :** ಹಬ್ಬದ ಸಮಯದಲ್ಲಿ 'ಅಶುದ್ಧ' ಆಗದಿರಲು ಆಚರಿಸಬೇಕಾದ ಕಟ್ಟುಕಟ್ಟಳೆಗಳೇ 'ಬೆಂಗಲು' ಆಚರಿಸುವುದು. ಬೆಂಗಲಾಯಿತು ಎಂದರೆ ಮೈಲಿಗೆ ಆಯಿತು ಎಂದರ್ಥ. ಹಬ್ಬದ ಹನ್ನೆರಡು ದಿನಗಳಲ್ಲಿಯೂ ಈ ನೇಮವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬುದು ಒಂದು ರೀತಿ ಸಾಮೂಹಿಕ ಸ್ವಯಂ ನಿರ್ಬಂಧವಾಗಿದೆ. 'ಮೊದ್ನೆ'ಯು ಈ ನೇಮಗಳನ್ನು ಸಾರುವೆ ಹಾಕುತ್ತಾನೆ-ಒಣಗು ಮುರೀಬೇಡಿ. ಹಸಿ ಕಡಿಬೇಡಿ. ಊರು ಒಳಗೆ ಇದ್ದವರು ಒಳಗೆ ಇರಿ. ಊರು ಹೊರಗೆ ಹೋದವರು ಹೊರಗೆ ಇರಿ; (ಅಕಸ್ಮಾತ್ ಹೊರಗೆ ಹೋಗಲೇಬೇಕಾದವರು ಹೋಗಿ ರಾತ್ರಿಯೆ ಊರಿಗೆ ಹಿಂದಿರುಗಬೇಕು. ಹಗಲಿನಲ್ಲಲ್ಲ ; ಅಕಸ್ಮಾತ್ ಹಗಲು ಬಂದು ಊರಿನ ಯಾವುದೇ ವಾಸದ ಮನೆಯನ್ನು ಮುಟ್ಟಿದರೂ ಮನೆಯ ಒಳಗಿನವರೆಲ್ಲರೂ ಅಂದು ರಾತ್ರಿಯವರೆಗೆ ಮೈಲಿಗೆ ಆದಂತೆ ಎಂಬಂತೆ ಭಾವನೆ ಇದೆ). ಓಡುವ ಎತ್ತು ಬರಬಾರದು. ದೋಸೆ ಕೊಟ್ನ ಹಾಕಬಾರದು. ಚಪ್ಪಲಿ ಮೆಟ್ಟಬಾರದು. ಹೊಲಗದ್ದೆ ಉಳಬಾರದು–ಬಹುಶಃ ಪೂರ್ಣಗಮನವೂ ಸುಗ್ಗಿಹಬ್ಬದ ಯಶಸ್ಸಿನತ್ತ ಇರಲೆಂಬ ಆಶಯವಿದು. ಮೊದಲಿಗೆ ಸೂತಕದ ಬಾಣಂತಿಯೂ ಹಬ್ಬದ ಸಮಯದಲ್ಲಿ ಊರ ಹೊರಗಿರಬೇಕಿತ್ತು. ಆದರೆ ಈಗ ಆಕೆಗೆ ಊರೊಳಗಿರಲು ರಿಯಾಯಿತಿ ಇದೆ. ಸಾವು ಆದವರ ಮನೆಯಲ್ಲಿ ಆ ಮನೆಯ ಜನ 'ಬೆಂಗಲು' ಸಮಯದಲ್ಲಿ ಶವಸಂಸ್ಕಾರ ಮಾಡುವಂತಿಲ್ಲ; ಮಣ್ಣು ಹಾಕುವಂತಿಲ್ಲ. ಬಂಧುಗಳ ಪೈಕಿ ಸಂಸ್ಕಾರ ಮಾಡಬೇಕು. ಇದಕ್ಕೆ 'ಹೊರಾಣ' ಕೊಡುವುದು ಎನ್ನುತ್ತಾರೆ.[21-ಅ]

೭. **ಊಲು ಏರಿಸುವುದು :** ಸುಗ್ಗಿಸ್ತಂಭಗಳ ತುದಿಯ ಅಡ್ಡತೊಲೆಯ ಕೆಳಕೇಂದ್ರ ಕೊಕ್ಕೆಯಿಂದ ಕಬ್ಬಿಣದ ಸರಪಳಿ ಅಥವಾ ಕೊಳವೆಯ ತುದಿಗೆ ಹೊಂದಿಸಿ ಇಳಿಬಿಟ್ಟ ಹಲಸಿನ ಮರದ ಮಣೆಯ ಮೇಲೆ ನಾಲ್ಕು ತುಪ್ಪದ ದೀಪ(ಸೊಡ್ಲು)ಗಳನ್ನಿಟ್ಟು ತೂಗಲು ಅನುವು ಮಾಡುವುದು. ಇದಕ್ಕೆ 'ರಥ ಏರಿಸುವುದು, ರಥ ತೂರಿಸುವುದು, ದೇವೀನ ಹಸೆ ಕೂರಿಸುವುದು' ಎಂದೆಲ್ಲ ಹೇಳುವುದುಂಟು.

೮. **ಬೇಟೆಗೆ ಹೋಗುವುದು :** ಕಾಡಿಗೆ ಹೋಗಿ ಮಿಕಗಳ ಬೇಟೆ ಆಡಿ ಬಲಿ ತರುವುದು. ಇದಕ್ಕೆ 'ಕಡವೆ ಕಡಿಯಲು ಹೋಗುವುದು' ಎಂದೂ ಹೇಳುತ್ತಾರೆ.

೯. **ದೊಡ್ಡ ಸುಗ್ಗಿ :** ಕಾಡಿನಿಂದ ತಂದ ಬೇಟೆಯನ್ನು ದೇವರಕೆರೆಯಲ್ಲಿ ಮುಳುಗಿಸಿಟ್ಟದ್ದುದನ್ನು ಸುಗ್ಗಿ ದೇವರಿಗೆ ಅರ್ಪಿಸಿ ಹಂಚಿಕೊಳ್ಳುವ ಹಾಗೂ ವಿಶೇಷ ಕುಣಿತ, ಪೂಜೆ ಇರುವ ದಿನವೇ ದೊಡ್ಡಸುಗ್ಗಿ. 'ರಾತ್ರಿ ಸುಗ್ಗಿ'ಗೆ ಈ ಮಾತು ಬಳಸುವುದುಂಟು.

21-ಅ ಹೊರಗಿನವರಿಂದ ಸಂಸ್ಕಾರದ ಕಾರಣ ಹೊರಗೆಹೆಣ < ಹೊರಹೆಣ < ಹೊರೆಣ < ಹೊರಾಣ ಎಂಬ ನಿಷ್ಪತ್ತಿ ರೂಪಿತವಾಗಿರುವಂತಿದೆ.

೧೦. **ಹೊನ್ನಾರು ಉತ್ಸವ :** 'ಗಂಡು-ಹೆಣ್ಣು' ವೇಷ ಧರಿಸಿದ ಇಬ್ಬರು ಗಂಡಸರು ನೇಗಿಲ ನೊಗ ಹೊತ್ತು ಮುಂದೆ ಹೋಗುತ್ತಾರೆ. ಹಿಂದೆ ಸಡ್ಡೆಯಲ್ಲಿ ಭತ್ತ, ಕಡಲೆ, ಹುರುಳಿ ಕಾಳುಗಳನ್ನು ಕನ್ಯೆಯು ಬಿಟ್ಟುಕೊಂಡು ಸುಗ್ಗಿಮಂಟಪ(ಕಟ್ಟೆ) ಹಾಗೂ ಕೆಂಡಕೊಂಡದ ಸುತ್ತ ಬರುವ ಉತ್ಸವ. ಸೊಡ್ಲುವನ್ನು ಮುಂದೆ ತೆಗೆದುಕೊಂಡು ಹೋಗುತ್ತಾರೆ.

ಕೆಲವೆಡೆ ಈ ಉತ್ಸವಕ್ಕೆ ಪರ್ಯಾಯವಾಗಿ ವೃಷಭ (ಬಸವ)ನ ಅಡ್ಡೆ ಹೊತ್ತು ವೀರಭದ್ರನ ವಡಬುಗಳನ್ನು ಹೇಳುತ್ತ 'ಹರಸೇವೆ' ನಡೆಸುತ್ತಾರೆ.

೧೧. **ಹೆದ್ದೇವರ ಪೂಜೆ :** ಕಾಡು ಅಥವಾ ಮರಗಳ ಸಮೂಹಗಳ ನಡುವೆ ತಂಪುದಾಣದಲ್ಲಿ ಸುಗ್ಗಿಕಟ್ಟೆಯ ಆದಿಸ್ಥಾನದ ದೇವರು ಹೆದ್ದೇವರೆನಿಸಿದೆ. ಹೆದ್ದೇವರ ಬನದ ಈ ದೇವರು ಹುತ್ತಗಳ ಸ್ವರೂಪದಲ್ಲಿರುತ್ತದೆ. ಕೆಲವೆಡೆ ಸಿಲಿಂಡರಾಕೃತಿಯ ಮಣ್ಣಿನ ಕೊಳವೆಯ ಕಂಠದ ಮೇಲೆ ಶಂಕುವಿನಂತಹ ಕವಚವಿಟ್ಟ ಆಕೃತಿಗಳ ಸಮೂಹವಾಗಿರುವುದುಂಟು.[22] ಈ ಹುತ್ತಗಳಿಗೆ ಹಾಲು ಎರೆದು ತುಲಾಮಾಸದಲ್ಲಿ ಕದಿರನ್ನು ತಂದಿಟ್ಟು ಪೂಜಿಸುವ ಸಂಪ್ರದಾಯವಿದೆ ; ಒಂದು ರೀತಿಯಲ್ಲಿ ನಾಗಾರಾಧನೆಯ ಸಂಕೇತವೂ ಆಗಿದೆ. ನಾಗಾರಾಧನೆ ಚೇತನದ ಪ್ರಾಚೀನ ಪ್ರತೀಕವೂ ಅಲ್ಲವೆ ?

೧೨. **ಮಲ್ಲು ಸುಗ್ಗಿ :** ಒಣಗಿದ ಬಾಳೆತರಗಿನ ಹೊರೆಯನ್ನು ಪೊರಕೆಯಂತೆ ಕಟ್ಟಿ ಶೃಂಗರಿಸಿ ತಂದು ಸುಗ್ಗಿಕಟ್ಟೆಯ ಸುತ್ತ ಮೂರುಬಾರಿ ಸುತ್ತಿ ಪತ್ತಿಸುತ್ತಾರೆ. ತರಗು ಉರಿದು ಮಿಕ್ಕ ಹಿಡಿಯನ್ನು ಸುಗ್ಗಿಸ್ತಂಭಗಳ ಮೇಲೆ ಹಾರಿ ಹೋಗುವಂತೆ ಎಸೆಯುತ್ತಾರೆ. ರಾತ್ರಿಯ ವೇಳೆಯಲ್ಲಿ ನಡೆಯುವ ಈ ಸುಗ್ಗಿಆಟ, ಬಾನಿನ ಬೆಂಕಿ ಉಂಡೆಗಳ ಚೆಲ್ಲಾಟದಂತೆ ಕಣ್ಣಿಗೆ ರೋಚಕ ದೃಶ್ಯವಾಗಿರುತ್ತದೆ. ಉಳಿದ ತರಗಿನ ಕಡ್ಡಿಗಳನ್ನು ಮನೆಗೆ ಒಯ್ದು ಶುಭದ ಕಡ್ಡಿಗಳೆಂದು ಮಾಡಿಗೆ ಸಿಗಿಸುವುದುಂಟು.

೧೩. **ಬಿಲ್ಲು ಸುಗ್ಗಿ :** ಕೊಂಡದ ಸುತ್ತ ನೆಲಕ್ಕೆ ಮತ್ತು ಮೇಲಕ್ಕೆ ಗರಗತ್ತಿಕಾಯಿ ಚುಚ್ಚಿ ಮಾಡಿದ ಬಾಣವನ್ನು ಬಿಲ್ಲಿನಿಂದ ಹೊಡೆಯುವ ಆಟ ; ಕೆಲವೆಡೆ ಇದು ಅಣಕು ಬಿಲ್ಗಾಳಗದ ಆಟವಾಗಿರುತ್ತದೆ.[23] ಕೆಲವೆಡೆ ತೆಂಗಿನಕಾಯಿಯನ್ನು ಮರದ ತುದಿಗಳಿಗೆ ಕಟ್ಟಿ ಗುಂಡು ಹೊಡೆಯುವ ಆಟವಾಗಿರುತ್ತದೆ.[24]

೧೪. **ರಾತ್ರಿ ಸುಗ್ಗಿ :** ಪೂಜೆ, ಕುಣಿತಗಳಿಂದ ಒಡಗೂಡಿ ಕೆಂಡ ತುಳಿಯುವ ಆಚರಣೆಗಳನ್ನು ನಡೆಸುವ ಸುಗ್ಗಿಯ ದಿನ, ಮಹತ್ವದ ದಿನ.

೧೫. **ಹಗಲು ಸುಗ್ಗಿ :** ರಾತ್ರಿ ಸುಗ್ಗಿಯ ಮರುದಿನದ ಈ ಸುಗ್ಗಿಗೆ 'ಮರಿಸುಗ್ಗಿ' ಎನ್ನುತ್ತಾರೆ. ರೂಢಿಯ ಪೂಜಾ ಕೈಂಕರ್ಯ-ಫಲಪೂಜೆ, ಮಂಗಳಾರತಿ ನಡೆದು ಪ್ರಸಾದ ವಿನಿಯೋಗದ ದಿನ.

೧೬. **ಮಡೆ[25] :** ಮಡಿಯಿಂದ ಶುದ್ಧವಾಗಿ ತಯಾರಿಸಿದ ಅಡುಗೆಯನ್ನು ಸುಗ್ಗಿದೇವರಿಗೆ ಎಡೆ ನೀಡುವುದು, ಆರತಿ ಹೊತ್ತು ಹೋಗುವುದು. ಕೆಲವೆಡೆ ಇದು ಬೇಟೆಯ ಮಾಂಸದ ಎಡೆಯೂ ಆಗಿರಬಹುದು. ಆದರೆ ಅದನ್ನಿಡಲು ನೆಲೆ ಪ್ರತ್ಯೇಕ.

---

22 ಈಗ ಸಕಲೇಶಪುರ ತಾಲೂಕು ಹೇರೂರುವಿನ ಹೆದ್ದೇವರ ಬನದಲ್ಲಿ ಈ ಬಗೆಯ ಆಕೃತಿಗಳಿವೆ. ಹುತ್ತದ ದೇವರು > ಹುತ್ತ ದೇವರು > ಹುದ್ದೇವರು > ಹೆದ್ದೇವರು ಎಂಬ ನಿಷ್ಪತ್ತಿ ಆಗಿರಬಹುದು.

23 ಕೊಡಗಿನ ಯಡೂರಿನಲ್ಲಿ ಹೀಗೆ ನಡೆಯುತ್ತದೆ.

24 ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಂಡುಬರುವ ಈ ಪದ್ಧತಿ ಕೊಡವರ 'ಕೈಲ್‌ಪೊಳ್ದು'ಹಬ್ಬದ 'ತೆಂಗಿನ ಈಡು' ಸ್ಪರ್ಧೆಯನ್ನು ನೆನಪಿಗೆ ತರುತ್ತದೆ.

25 ನೆಲಮಂಗಲ ತಾಲೂಕಿನ ಶಿವಗಂಗೆಯಲ್ಲಿ ಯುಗಾದಿ ಹಬ್ಬದ ತಕ್ಷಣದ ಮಂಗಳವಾರದಲ್ಲಿ ಗಂಗಾಧರೇಶ್ವರನ ಸತಿ ಹೊನ್ನಾದೇವಿಯ ಶಾಂತಿಗಾಗಿ ಬಸರಿ ಮರದ ಕೊಂಬೆಯನ್ನಿರಿಸಿ ಹದಿನೈದು ದಿನಗಳ ಪೂಜೆ ನಡೆಸುತ್ತಾರೆ. ನಂತರ ಆ ಕೊಂಬೆಯನ್ನು ಅಲ್ಲಿನ ಕಮಲತೀರ್ಥದಲ್ಲಿ ತೇಲಿಬಿಡುತ್ತಾರೆ. ಈ ಸಮಯಕ್ಕೆ ಅಲ್ಲಿ ಹೊನ್ನಾದೇವಿಗೆ ನಡೆಮುಡಿಯಲ್ಲಿ ಒಂದು ಅರ್ಪಿಸುವ 'ಆರತಿ ಹಾಗೂ ಮುತ್ತೈದೆ ಎಡೆಗೆ' 'ಹೊನ್ನಾದೇವಿಯ ಮಡೆ' ಎಂಬ ಪ್ರಸಿದ್ಧ ಹೆಸರಿದೆ. ಹರಿಜನ, ಬೋವಿಗಳೂ ಈ ಸಮಯದಲ್ಲಿ ಆರತಿ ಹೊತ್ತು ತರುತ್ತಾರೆ—ಎಂ. ಜಿ. ನಾಗರಾಜ್ : 'ಜಲದೇವಿ ಬಿದಲೂರು ಗಂಗವ್ವ', ಗ್ರಾಮಸುದ್ದಿ, ಸಂಚಿಕೆ ೫-೭-೮೬.

೧೭. **ಓಕುಳಿ :** ಬಣ್ಣದ ನೀರನ್ನು ದೇವರಿಗೆ ಹಾಗೂ ಜನರಿಗೆ ಎರಚುವುದು.

೧೮. **ಕೇಲು :** ಗಂಗೆ ತುಂಬಿದ ಮಡಕೆಯನ್ನು ಶೃಂಗರಿಸಿ ನಡೆಸುವ ಪೂಜೆಯೇ 'ಕೇಲು ಪೂಜೆ'.

೧೯. **ಊಲು ಇಳಿಸುವುದು :** ಹೊನ್ನಾರುವಿಗೆ ಮುಂಚೆ ಏರಿಸಿದ್ದ ಉಯ್ಯಾಲೆ ಹಾಗೂ ಹೊನ್ನಾರು ದಿನದಂದು ಉಯ್ಯಾಲೆ ಮಣೆಯ ಮೇಲಿಟ್ಟ ದೀಪ (ಸೊಡ್ಲು)ಗಳನ್ನೂ ಇಳಿಸುವುದು, ಅಂದರೆ 'ರಥ ಇಳಿಸಿ' ಹಬ್ಬದ ಮುಕ್ತಾಯ ಮಾಡುವುದು.

ಹಾಸನ ಜಿಲ್ಲೆಯ ಸುಗ್ಗಿಕಟ್ಟೆಗಳಲ್ಲಿ ಕಂಡುಬರುವ ಮಾರೀಪೂಜೆ, ಕೇಲುಪೂಜೆ, ಓಕುಳಿ, ಸೂರಣ್ಣು ಬಿಡುವುದು (ಹಣ್ಣು–ದವನ ಎಸೆಯುವಿಕೆ), ಮುಂಡಸ್ನಾನ, (ಉರುಳುಸೇವೆ), ಕುದುರೆ ಸುಗ್ಗಿ ಕೊಡಗಿನಲ್ಲಿ ಕಂಡುಬರುವುದಿಲ್ಲ. ಕೊಡಗಿನಲ್ಲಿ ಆಚರಣೆಯಲ್ಲಿದ್ದ 'ಎಮ್ಮೆ ಸುಗ್ಗಿ'ಯ ಸ್ವರೂಪ ಈಗ ಬದಲಾಗಿದೆ.

ಮೇಲಿನ ಹಂತಗಳನ್ನು ಗಮನಿಸಿದರೆ ಇತಿಹಾಸದ ಅನೇಕ ಘಟನೆಗಳನ್ನು ಸುಗ್ಗಿಹಬ್ಬದ ಸಮಯದಲ್ಲಿನ ಜನಪದ ಆಚರಣೆಗಳನ್ನು ಸಾಂಕೇತಿಕವಾಗಿ ಹೊಂದಿಸಿಕೊಂಡು ಪರಂಪರೆಯನ್ನು ಗಟ್ಟಿಗೊಳಿಸಿರುವ ಚಹರೆಗಳು ದಟ್ಟವಾಗಿ ಕಾಣುತ್ತವೆ ; ಜೊತೆಗೆ ಕಾಲದ ನಿಯಮ, ಅಗತ್ಯಕ್ಕೆ ಅನುಗುಣವಾಗಿ ಮಾರ್ಪಾಡುಗಳೂ ಕಾಣುತ್ತವೆ.

ಈಗ ವಿವಿಧ ನೆಲೆಗಳಲ್ಲಿ ಈ ಸುಗ್ಗಿದೇವರ ಹಬ್ಬದ ಆಚರಣಾ ವೈವಿಧ್ಯತೆಗಳನ್ನು ಕಾಣಬೇಕೆನ್ನುವ ತುರ್ತಿಗೆ ಕೆಲವು ಪ್ರಸಿದ್ಧ ನೆಲೆಗಳಲ್ಲಿ ನಡೆಯುವ ಆಚರಣೆ, ಸಂಪ್ರದಾಯಗಳನ್ನು ಪ್ರಾತಿನಿಧಿಕವಾಗಿ ಆರಿಸಿಕೊಂಡು, ಆ ನೆಲೆಯ ಇತಿಹಾಸ ಸಂಸ್ಕೃತಿ, ಜನಪದ ಜಾಯಮಾನಗಳ ಹಿನ್ನೆಲೆ–ಮುನ್ನೆಲೆಗಳನ್ನು ಮುಂದಿಡಲಾಗಿದೆ.

**ಯಡೂರಿನ ಸುಗ್ಗಿಕಟ್ಟೆ-ಇತಿಹಾಸ :** ಸೋಮವಾರಪೇಟೆಯ ಈಶಾನ್ಯಕ್ಕೆ ಎಂಟು ಕಿ. ಮೀ. ದೂರದಲ್ಲಿ ಇತಿಹಾಸ ಪ್ರಸಿದ್ಧ ಯಡೂರು ಗ್ರಾಮವಿದೆ. ಮೊದಲಿಗೆ ಇದು ಯಡೆಯೂರು ಎಂದಿದ್ದಿರಬೇಕು.[26] ಇಲ್ಲಿನ ಸುಗ್ಗಿಕಟ್ಟೆ ಮೊದಲಿಗೆ ಹಾಳೂರುಮಕ್ಕಿ (ಜನಪದದಲ್ಲಿ ಹಾಳಾರ್‌ಮಕ್ಕಿ ಎಂದೇ ಪ್ರಚಲಿತ)ಎಂಬ ಹಳೆಯೂರಿನ ನೆಲೆಯಲ್ಲಿತ್ತು.[27] ಈಗ ಅದು ಪಾಳು. ಈ ಮಕ್ಕಿಯಲ್ಲಿನ ಕಲ್ಲಿನ ಕಟ್ಟೆಯಲ್ಲಿ ಸುಗ್ಗಿಸ್ತಂಭಗಳಿದ್ದುವು. ಈಗ ಗದ್ದೆಗಳಾಗಿರುವ ಇದರ ನೆರೆಯ ತಾಣಗಳ ದಕ್ಷಿಣ ಪಾರ್ಶ್ವಕ್ಕೆ 'ಮಲ್ಲನ ಕೊಪ್ಪ'(ಹೊಸ ಯಡೂರು ಗ್ರಾಮದ ಹಿಂಬದಿಯಲ್ಲಿದೆ) ಎಂಬ ನೆಲೆ ಇತ್ತು. ಮಲ್ಲನ

---

26 i) ಕೊಲೆಗಲ್ಲುಗಳ ಸಮೀಪವಿರುವ ಈ ಗ್ರಾಮದ ಮೂರು ಮಾಳಗಳಲ್ಲಿ ನಡೆಸುವ ವಾರ್ಷಿಕ ಮಾಳದ ಹಬ್ಬದಲ್ಲಿ ಪಿತೃಗಳಿಗೆ ಎಡೆಹಾಕುತ್ತಿದ್ದ ರೂಢಿಯಿಂದಾಗಿ ಪ್ರಚಲಿತಗೊಂಡ ಹೆಸರು. ಎಡೆಯೂರು > ಎಡೂರು > ಯಡೂರು. ಈಗಿನ ಯಡೂರು ಹಿಂದಿನ ನೆಲೆ 'ಹಾಳೂರುಮಕ್ಕಿ'ಗೂ ಸುಮಾರು ಒಂದು ಕಿ.ಮೀ. ಅಂತರವಿದ್ದು ನಡುವೆ ಈ ಮಾಳಗಳಿವೆ. ಹಾಳೂರುಮಕ್ಕಿಯ ಸರಹದ್ದಿಗೆ ಮೊದಲಿಗೆ ಬೇರೊಂದು ಹೆಸರು ಇದ್ದಂತಿದೆ.

ii) ಕ್ರಿ. ಶ. ೧೧೭೫ರ ಸಂದಿಗುಂದ ಶಾಸನದಲ್ಲಿ ಹಡಿಯಜಿ 'ಕಿರಿಕಣ' ಹಾಗೂ ೧೩ನೇ ಶತಮಾನದ ಗಣಗೂರು ಶಾಸನದಲ್ಲಿ 'ಪಡಿಎರ ಬಾಸಮ್ಮ ರಾಜನ ಪುತ್ರ...' ಎಂಬ ಪದಗಳಿವೆ. ಅಂದರೆ ಹಡಿಯಜಿ = ಪಡಿಎರ ಆಗಿರಬಹುದಾದ ಸಂದರ್ಭದಲ್ಲಿ– ಪಡಿಯಜಿ > ಅಡಿಯಜಿ > ...ಅಡಿಯೂರು > ಅಡೂರು > ಯಡೂರು ? ಎಂಬ ನಿಷ್ಪತ್ತಿ ಗಮನಿಸಿದರೆ 'ಬಾಗಿಲ ಊರು' ಎಂಬ ಅರ್ಥ ಒದಗುತ್ತದೆ. 'ಹಡಿ' ಎಂದರೆ 'ಬಾಗಿಲು' ಎಂಬ ಅರ್ಥವೂ ಇದೆ. ಅಂದರೆ ಊರು ಬಾಗಿಲು ಯಾವುದು ? ಸುಗ್ಗಿಸ್ತಂಭವೇ ಅದಾಗಿರಬೇಕು. ಹುಲುಕೋಡು ಹಾಗೂ ಕಿತ್ತೂರು ಸುಗ್ಗಿಸ್ತಂಭಗಳು ಊರು ಸ್ಥಾಪನೆ ಕಲ್ಲುಗಳನ್ನು ಹೊಂದಿ ಊರಿನ ಬಾಗಿಲು ಕೂಡ ಆಗಿಲ್ಲವೆ ? ಅಂತಾಗಿ ಯಡೂರು ಅಥವಾ ಹಾಳೂರುಮಕ್ಕಿ ಇರುವ ನೆಲೆಗೆ ೧೨ನೇ ಶತಮಾನದಲ್ಲಿ 'ಹಡಿಎಜಿ' ಎಂಬ ಹೆಸರು ಇದ್ದಿರಬೇಕು. ಶಾಸನೋಲ್ಲೇಖದಲ್ಲಿ ಅದು ಊರಿನ ಹೆಸರೂ ಆಗಿದೆ. ಅಲ್ಲದೆ ಕೊಂಗಾಳ್ವರ ಸಾಮಂತನಾಗಿ ಆ ಶಾಸನದ ಕದಂಬ ತೋಳೂರ ದುದ್ದರಸನಿದ್ದಿರಬೇಕು.

27 ಪಾಳುಅರೆ > ಪಾಳಾರೆ ಎಂಬುದಕ್ಕಿಂತ ಹಾಳಾರ್‌ಮಕ್ಕಿ > ಹಾಳೂರುಮಕ್ಕಿ ಎನ್ನುವುದೇ ಸೂಕ್ತ. ಮಕ್ಕಿಗದ್ದೆ ಎಂದರೆ ಸುತ್ತಲಿನ ಗದ್ದೆಗಿಂತ ತುಸು ಎತ್ತರದಲ್ಲಿದ್ದು ತೇವಾಂಶ ಕಡಿಮೆ ಇರುವ ಒಂದು ಅಂಚಿಗಿರುವ ಗದ್ದೆ. ಈಗ ಅಲ್ಲಿ ಒಡೆದ ಬಂಡೆಗಳ ನಡುವೆ ಕಟ್ಟೆಯ ಅವಶೇಷವಿದೆ. ಸುತ್ತ ಗದ್ದೆಗಳಿವೆ.

ಕೊಪ್ಪದಿಂದ ನೈರುತ್ಯಕ್ಕೆ ಒಂದೂವರೆ ಕಿ. ಮೀ. ದೂರದಲ್ಲಿ ಕೋಟೆ ಬೆಟ್ಟವಿದೆ (ಅಬ್ಬಿಮಠದ ಬಲಬದಿಗೆ), ಬಹುಶಃ ಮಲ್ಲನಾಯಕನಕೋಟೆ ಇಲ್ಲಿಯದೇ ಆಗಿರಬಹುದು. ಈ ಕೋಟೆ ಕಟ್ಟಲು ಎದುರಿನ ಅಬ್ಬಿಹೊಳೆ (ತೊರೆ)ಯ ಪೂರ್ವದಂಡೆಯ ಮೇಲಿನ ಇಟ್ಟಿಗೆಗದ್ದೆಯಿಂದ ಇಟ್ಟಿಗೆ ಪಡೆದರಂತೆ. ಇನ್ನು ಮಲ್ಲನಕೊಪ್ಪದ ಬಳಿ ಹಳೆ ಮನೆವಳಗಳಿದ್ದುವು. ಅಬ್ಬಿಮಠದ ಎಡಕ್ಕಿರುವ ತಡಸಲು (ಜಲಪಾತ=ತಲೆತೊರೆ) ಬಳಿಯ ಮಲ್ಲಿಕಾರ್ಜುನ ದೇಗುಲದ (ಇದರ ಬಳಿಯ ಕ್ರಿ. ಶ. ೧೪೫೬ರ ಅಪ್ರಕಟಿತ ಶಾಸನವು ಹೆಸರಿಸುವ ದೇವರು) ಎದುರಿಗೆ ಕಾಣುವ ತೇರುಗದ್ದೆಯ ಬಯಲು, ವೀರಭದ್ರ ಶಿಲ್ಪವಿರುವ ಶಿಥಿಲ ಶಿಲಾನಂದಿ ಕಂಬ, ಇವುಗಳಿಗೂ ಸಮೀಪವೇ ಇದ್ದ ಹಿಂದಿನ ಯಡೂರು ಸುಗ್ಗಿಕಟ್ಟೆಗೂ ಪ್ರಾಚೀನ ಸಂಬಂಧವಿದೆ. ಹಾಳೂರುಮಕ್ಕಿಯಲ್ಲಿದ್ದ ಸುಗ್ಗಿಸ್ತಂಭಗಳನ್ನು ದೇವಿಯರ ಮುಖವಾಡ ಸಹಿತ ಹೊತ್ತು ಹೋಗಲು ಪ್ರಯತ್ನ ನಡೆದಾಗ ಮಲ್ಲನಕೊಪ್ಪ, ಕೆಳಗಣ ಹಾಗೂ ಮೇಗಣ 'ಅಜ್ಜಿಬನಗಳ' ಮಾರ್ಗವಾಗಿ ಈಗಿನ ಯಡೂರಿನ 'ಅರಮನೆ ಬರಿ'ಯ ಮುಂದೆ ತಂದು ನೆಡಲಾಗಿದೆ. ಊರು ಪಾಳುಬಿದ್ದಮೇಲೆ ಹಳೆಊರಿನ ಪೂರ್ವಕ್ಕೆ ಒಂದೂವರೆ ಕಿ. ಮೀ. ದೂರದಲ್ಲಿನ ಗ್ರಾಮ 'ಹೊಸಬೀಡು'ವಿಗೆ ಸುಗ್ಗಿಸ್ತಂಭಗಳನ್ನು ಒಯ್ಯುವ ಪ್ರಯತ್ನ ಸಾಗಲಿಲ್ಲ. ಅಲ್ಲಿಯ ಜನ ಈಗ ಸುಗ್ಗಿಕಟ್ಟೆ ಹಬ್ಬಕ್ಕೆ ಬರುವುದಿಲ್ಲ.

ಹಾಳೂರುಮಕ್ಕಿಯಲ್ಲಿದ್ದ ಸುಗ್ಗಿಕಟ್ಟೆಯ ಬಳಿ ಇದ್ದ ಕ್ರಿ. ಶ. ೧೦೯೫ರ ಕದಂಬ ದುದ್ದರಸನ ಕುರಿತಂತೆ ಅವನ ತಮ್ಮ ಜುಂಜರಸ ಹಾಕಿಸಿದ ವೀರಶಾಸನವು[28] ಈಗಿನ ಯಡೂರು ಸುಗ್ಗಿಕಟ್ಟೆಯ ಪಾರ್ಶ್ವದಲ್ಲಿ ನಿಂತಿದೆ. ಈ ಶಾಸನದ ಕಾರಣ, ಅದರಲ್ಲಿ ಬರುವ ಸಾಲುಗಳು ಪರೋಕ್ಷವಾಗಿ ಸೂಚಿಸುವಂತೆ ಸುಗ್ಗಿಕಟ್ಟೆಯ ಪ್ರಾಚೀನತೆಯನ್ನು ೧೧ನೇ ಶತಮಾನಕ್ಕೆ ಒಯ್ಯಬಹುದು. ಶಾಸನದಲ್ಲಿ ಬರುವ "ಕೆಱೆಯಂ ಕಟ್ಟಿಸಿ....ಯಮನೆತ್ತಿಸಿ....ರು ಬ್ರಾಹ್ಮಣರ್ಗೆ ಚತ್ರಮಂ ನಿಲಿಸಿ ತೋಱಗಱ್ದೆಯ ಮಾಡಿಸಿದ್ದು", 'ಕುಲಸ್ತ್ರೀ ಚಿಕಲದೇವಿ'ಯೂ ರಾಜನನ್ನು ಬೆಸಗೊಂಡಾಗ ಎನ್ನುವ ಅಂಶದಿಂದ ಕೆರೆಯ ದಂಡೆಯ ಮೇಲಣ ಭಾಗಕ್ಕೆ ಇದ್ದ ಭಾರಿ ಭಾರದ ಸ್ತಂಭಗಳಾಗಿ ಸುಗ್ಗಿಕಟ್ಟೆಯ ಸ್ತಂಭಗಳಿದ್ದುವು ಎಂದು ಪರಿಗ್ರಹಿಸುವುದಾದರೆ ಈ ಸುಗ್ಗಿಕಟ್ಟೆಯ ರಚನೆ (ಹಾಳೂರುಮಕ್ಕಿಯ ಬಳಿ)ಯು ಹನ್ನೊಂದನೇ ಶತಮಾನದ ಪ್ರಾಚೀನತೆಯನ್ನು ಮೊದಲೇ ಹೇಳಿದಂತೆ ತೋರಿಕೊಳ್ಳಬಹುದು.[29] ಜೊತೆಗೆ ಕೆರೆಯೊಂದು ಹಾಗೂ ತೊರೆಗದ್ದೆಯೂ ಇದ್ದುದು ಇಂದಿಗೂ ಜನಪ್ರತೀತಿಯಲ್ಲಿದೆ.ಎದುರಿನ ಅಬ್ಬಿಹೊಳೆಯ ಬದಿಗಿರುವ ಗದ್ದೆಗಳು ಇಂದು ಯಥೇಚ್ಛವಾಗಿರುವ 'ತೋಱಗಱ್ದೆ' ಇವುಗಳಲ್ಲೊಂದಾಗಿದ್ದಿರಬೇಕು.

ಯಡೂರು ಸುಗ್ಗಿಕಟ್ಟೆ 'ಅಕ್ಕ'ನಂತೆ; ನೆರೆಯ ಹಾನುಗಲ್ ಶೆಟ್ಟಿಹಳ್ಳಿಯ ಸುಗ್ಗಿಕಟ್ಟೆ (ಇಲ್ಲಿಯ ಸುಗ್ಗಿಹಬ್ಬ ಈಗ ನಿಂತುಹೋಗಿದೆ) 'ತಂಗಿ'ಯಂತೆ–ಎಂಬ ಜನಪದ ಹೇಳಿಕೆಯಲ್ಲಿ ಇತಿಹಾಸದ ಎಳೆಯೊಂದು ಅವಿತಿರುವಂತಿದೆ. ಕಾರಣ, ಕ್ರಿ. ಶ. ೧೦೫೦ರ ನಂತರ ಗೋವೆಯ

---

28 ಎ. ಕ., ಸಂಪುಟ ೧, (ಪರಿಷ್ಕೃತ ಆವೃತ್ತಿ) ಯಡೂರು ೬೨, ಕ್ರಿ.ಶ. ೧೦೯೫ ; ಈ ಶಾಸನದ ದುದ್ದರಸನು ಕದಂಬ ವಂಶಕನೇ ವಿನಾ ಬಾಣವಂಶಿಕನಲ್ಲ ಎಂಬ ಬಗ್ಗೆ ವಿವರವಾದ ಚರ್ಚಾ ತೀರ್ಮಾನಕ್ಕೆ 'ಹರತಿಸಿರಿ', ಪು. ೭೧೨–೧೬ ನೋಡಿರಿ.

29 'ಯಮನೆತ್ತಿಸಿ' ಎಂಬ ಪದವನ್ನು ಶಿಲಾಭಾರವನ್ನೆತ್ತುವುದು ಎಂಬರ್ಥದಲ್ಲಿ ಗಮನಿಸಿದೆ. ಇದಲ್ಲದೆ ನೆಲಮಂಗಲ ತಾಲೂಕು ತ್ಯಾಮಗೊಂಡ್ಲು ಬಳಿಯ ಅಥವಾ ಕಳಲುಘಟ್ಟದ ಸನಿಹಕ್ಕಿರುವ ಬಿದಲೂರು ಗಂಗವ್ವನಕೆರೆಯ ದಂಡೆಯ ಮೇಲಿನ ಕೋಣವಕಟ್ಟೆಯ ಜೋಡಿಸ್ತಂಭಗಳು ಏಳುಕನ್ಯೆಯರಿಂದ ರೂಪಿತವಾದುವೆಂದು ಜಾನಪದದಲ್ಲಿ ಹಾಸುಹೊಕ್ಕಾದ ಕತೆಯಾಗಿದೆ. ಅಲ್ಲಿ ವನಿತೆಯರಿಂದ ಮಂಗಳವಾರ, ಶುಕ್ರವಾರಗಳಲ್ಲಿ ತಪ್ಪದೆ ಪೂಜಾಚರಣೆಗಳು ನಡೆಯುತ್ತವೆ. (ಹೆಚ್ಚಿನ ವಿವರಗಳಿಗೆ 'ಜಲದೇವಿ ಬಿದಲೂರು ಗಂಗವ್ವ' : ಎಂ. ಜಿ. ನಾಗರಾಜ್, ಗ್ರಾಮಸುದ್ದಿ, ೧೭–೫–೮೬ ರಿಂದ ೨೧–೬–೮೬ ನೋಡಿ). ಈ ಅಂಶವು ಪ್ರಸ್ತುತ ಸುಗ್ಗಿಕಟ್ಟೆಯ ಜನಪದೀಯ ಆಚರಣೆಗೆ, ಶಾಸನ ಸಂಗತಿಗೆ ಸಂವೇದೀ ಅರ್ಥವನ್ನೂ ನೀಡುವಂತಿದೆ. ಕೆರೆಯನ್ನು ಕಟ್ಟಿಸಿರುವ ಕಾರಣ (ಜೀರ್ಣೋದ್ಧಾರ ಅಲ್ಲ !) 'ಯಮನೆತ್ತಿಸಿ' ಎನ್ನುವ ಪದಕ್ಕೆ 'ಹೂಳು ಎತ್ತಿಸಿದ' ಎಂಬ ಅರ್ಥಕ್ಕಿಂತ 'ಭಾರವನ್ನೆತ್ತಿಸಿದ' ಎಂಬ ಅರ್ಥವೇ ಸೂಕ್ತ.

ಕದಂಬವಂಶದ ಒಂದನೇ ಜಯಕೇಶಿ ಕದಂಬರನ್ನು ಸಂಘಟಿಸುವ ಕಾರ್ಯದಲ್ಲಿ ಈ ಶಾಸನದ ಕದಂಬ ದುದ್ದರಸನು ತನ್ನ ತರುಣ ವಯಸ್ಸಿನಲ್ಲಿ ಸಕ್ರಿಯನಾಗಿ ಪಾಲುಗೊಂಡಿದ್ದು ನಂತರ ಹಾನುಗಲ್ಲು ಕದಂಬ ವಂಶದ ಹರಿಕೇಸರಿಯು ಗಂಗವಾಡಿ ೯೬೦೦೦ವನ್ನು ವಿಕ್ರಮಾದಿತ್ಯನೊಡನೆ ನಿರ್ವಹಿಸುವಲ್ಲಿ ಆ ವಂಶದ ಪ್ರತಿನಿಧಿಯಾಗಿ ಕೊಡಗಿನ ಭಾಗದಲ್ಲಿ ಆಳ್ವಿಕೆಗೆ ನಿಂತು ತರಬೇತಿ ಪಡೆದು ನಂತರ ಮಹಾಮಂಡಲೇಶ್ವರನಾಗಿರಬೇಕು.[30] ವಂಶದ ನೆಲೆ 'ಹಾನುಗಲ್ಲು'ವಿನ ನೆನಪಿಗಾಗಿ ಯಡೂರು ಬಳಿ 'ಹಾನುಗಲ್ಲು'ಅನ್ನು ಸ್ಥಾಪಿಸಿರುವಂತೆ, ಇಂದು ಅದು ಯಡೂರಿನ ದಕ್ಷಿಣಕ್ಕೆ ಎರಡೂವರೆ ಮೈಲಿ ದೂರದಲ್ಲಿದ್ದು ಹಾನುಗಲ್ಲು ಅಂಚೆಗೆ ಯಡೂರು ಸೇರಿದೆ. ಯಡೂರಿನ ಸಮೀಪಕ್ಕೆ ತೋಳೂರುಶೆಟ್ಟಳ್ಳಿ ಇದೆ. ಹಾನುಗಲ್ ಶೆಟ್ಟಳ್ಳಿಯ ಜೊತೆಗೆ ದುದ್ದರಸನ ಕಾಲಾನಂತರ ಅವನ ತಮ್ಮ ಜುಂಜರಸ ಯಡೂರನ್ನು ಆಳಿರುವಂತಿದೆ. ದುದ್ದರಸನ ಮಗನ ಆಳ್ವಿಕೆಯ ಬಗ್ಗೆ ಹಾಗೂ ಹೆಸರಿನ ಬಗ್ಗೆ ಪ್ರಚಲಿತವಿಲ್ಲ. ಆದರೆ 'ತೋಳೂರು ದುದ್ದರಸ' ಎಂಬ ಹೆಸರಿನ ಉಲ್ಲೇಖ ಕ್ರಿ. ಶ. ೧೧೭೫ರ ನಂದಿಗುಂದ ಶಾಸನದಲ್ಲಿದೆ.[31] ಇತಿಹಾಸದ ಅನುಕೂಲ ಕಾಲಮಾನದ ದೃಷ್ಟಿಯಿಂದ ತಾತನ ಹೆಸರು ಮೊಮ್ಮಗನಿಗೆ ಬರುವ ರೂಢಿಯ ಹಿನ್ನೆಲೆಯಲ್ಲಿ, ತೋಳೂರ ದುದ್ದರಸ ಯಡೂರುಶಾಸನದ ದುದ್ದರಸನ ಮೊಮ್ಮಗನಾಗಿರಬೇಕು. ಶಾಸನದಲ್ಲಿ ಒಂದು ಗ್ರಾಮದ ನಾಯಕನಂತೆ ಮಾತ್ರ ಉಲ್ಲೇಖಿತವಾದಂತಿದೆ. ಯಡೂರು ಸುಗ್ಗಿಕಟ್ಟೆ 'ಅಕ್ಕ', ಹಾನುಗಲ್ ಸುಗ್ಗಿಕಟ್ಟೆ 'ತಂಗಿ' ಆಗಿರುವ ಕತೆ ಅಂತಾಗಿ ಮಹತ್ವದ್ದು.

ಯಡೂರು ಶಾಸನದ ಸಂಗತಿಗನುಗುಣವಾಗಿ ಶಾಸನದಲ್ಲಿನ ಮುಂತಳದಲ್ಲಿ 'ಕೀಲ್ಗುಂಟೆ'ಯಂತೆ ಕಾಡುವ (ಅಂಗಾತ ?) ಒಂದರ ಮೇಲೊಂದು ಮಲಗಿದಂತೆ ಕಾಣುವ ಎರಡು ಮನುಷ್ಯಾಕೃತಿಗಳ ರೇಖಾಗೆತ್ತನೆಯೂ ಇದೆ. ಅಲ್ಲದೆ ಶಾಸನದಲ್ಲಿನ 'ಸಂಹಥನಾಡು' ಹಾಗೂ 'ಪಾಕುಂವಾಡಿ'–ಆ ಕಾಲದಲ್ಲಿ ನಾಡಿಗೆ ಇದ್ದ ಹೆಸರು ಹಾಗೂ ಗ್ರಾಮದ ಹೆಸರೊಂದನ್ನು ಸೂಚಿಸುವಂತಿದೆ.

ಇನ್ನು ಅಬ್ಬಿಮಠದ ತಡಸಲಿನ ಎಡಕ್ಕಿರುವ ಮಲ್ಲಿಕಾರ್ಜುನ ಗುಡಿಯ ಬಳಿ ಇರುವ ಕ್ರಿ. ಶ. ೧೪೫೬ರ ಅಪ್ರಕಟಿತ ಶಾಸನ ಚೆಂಗಾಳ್ವರ ಕೊಡುಗೆಯ ಸೂಚನೆಯನ್ನು ನೀಡುವಂತಿದೆ.[32] ದುರ್ಬಲರಾಗಿ ಹರಿದು ಹಂಚಿಹೋಗಿದ್ದ ಚೆಂಗಾಳ್ವರ ೧೪ನೇ ಶತಮಾನಾರಂಭದಿಂದ ಸುಮಾರು ೧೦೦ ವರುಷಗಳವರೆಗಿನ ಇತಿಹಾಸ ಅಸ್ಪಷ್ಟವಿರುವಲ್ಲಿ, ಬಹುಶಃ ಪುನರ್ ಸಂಘಟನೆಯ ಅವರ ಕಾಲದಲ್ಲಿ ಉತ್ತರಕೊಡಗಿನ ಕೆಲವು ಭಾಗಗಳಲ್ಲಿ ನಾಯಕರಂತೆ ಆಳುತ್ತಿದ್ದುದಕ್ಕೆ ಸಂಭವನೀಯ ಆಧಾರ ಈ ಶಾಸನವಾಗಬಹುದು. ಮಲ್ಲನಾಯಕ ಎಂಬ ಹೆಸರೂ ಈ ಶಾಸನದಲ್ಲಿದೆ.

ಈ ಸಮಯದಲ್ಲಿ ಯಡೂರು–ಅಬ್ಬಿಮಠದ ಪ್ರದೇಶದಲ್ಲಿ ಅವರ ಪ್ರಭಾವವಿದ್ದು, ಈ ಮಲ್ಲಿಕಾರ್ಜುನ ದೇಗುಲ ಸ್ಥಾಪನೆ ಹಾಗೂ 'ತೇರು' ನಡೆಸುವ ಆಚರಣೆ ಜಾರಿಗೆ ಬಂದಿರಬೇಕು. 'ತೇರುಗದ್ದೆ ಬಯಲು' ಈಗಲೂ ಇದ್ದು ಶಿಥಿಲವಾಗಿ ಒಡೆದು ಬಿದ್ದ ನಂದಿಕಂಬವೂ ಅದರಲ್ಲಿ ಬಿದ್ದಿದೆ. ಚೆಂಗಾಳ್ವರೇ ಇಲ್ಲಿದ್ದರೋ ಅಥವಾ ಅವರ ಪ್ರತಿನಿಧಿಯಾಗಿ ಮಲ್ಲನಾಯಕ ಆಳಿದನೋ ಎಂಬುದು ನಿರ್ದಿಷ್ಟವಿಲ್ಲ. ರಾಜಧಾನಿಯನ್ನಾಗಿ ಕೊಡಗು ಶ್ರೀರಂಗಪಟ್ಟಣದಿಂದ ನಂಜರಾಯಪಟ್ಟಣದತ್ತ ಗಮನ ಹರಿಸಿದ ಮೇಲೆ ಇಲ್ಲಿನ ನೆಲೆಯ ಪ್ರಾಮುಖ್ಯತೆ ಕ್ಷೀಣಿಸಿ ಹೋಗಿರಬೇಕು. ಆದರೆ ಹಾಲೇರಿ ಅರಸರ ಕಾಲಕ್ಕೆ ಆನೆ 'ಬೇಟೆಯ' ಕಾರಣ, ಆಯಕಟ್ಟಿನ ಕಾರಣ ಅವರ ಗಮನ ಸೆಳೆದಿರಬೇಕು. ಈ ಪ್ರದೇಶ ಈಗ್ಗೆ ೫೦ ವರ್ಷಗಳ ಹಿಂದಿನವರೆಗೂ ಕೆಂಜಿಗೆ ಮೊಳಡಿವ (ಕೆಂಜಿಗೆ ಮುಳ್ಳಿನ

---

30 ಎಂ. ಜಿ. ನಾಗರಾಜ್ : 'ಕೊಡಗಿನ ಕೊಲೆ ಕಲ್ಲುಗಳು', ಹರತಿಸಿರಿ, ಪು. ೭೧೫–೧೬

31 ಎ. ಕ., ಸಂಪುಟ ೧ (ಪರಿಷ್ಕೃತ), ನಂದಿಗುಂಡ ೮೭ (೭೩), ಕ್ರಿ.ಶ. ೧೧೭೫, ಸೋಮವಾರಪೇಟೆ ತಾಲೂಕು

32 ಚೆಂಗಾಳ್ವರು ವೀರಶೈವರಾದ ಮೇಲೆ ಬೆಟ್ಟದಪುರದ ಅನ್ನದಾನಿ ಚೆನ್ನಮಲ್ಲಿಕಾರ್ಜುನನನ್ನು ಕುಲದೇವರನ್ನಾಗಿ ಮಾಡಿಕೊಂಡ ಈ ಹಿನ್ನೆಲೆಯಲ್ಲಿ ಈ ಪರಂಪರೆ ಗಮನಾರ್ಹ.

ದಿಬ್ಬ-ಕಾಡು) ಆಗಿದ್ದುದು ಜನಪದರು ಕಂಡ ಸತ್ಯ.[33] ಹಾಲೇರಿ ಅರಸರು ಈ ಕಾರಣ 'ಅರಮನೆ' ಹಾಗೂ ಕಡಂಗ (ಮಣ್ಣಿನ ದಿಬ್ಬದ ಕೆಳಪಾರ್ಶ್ವದಲ್ಲಿ ಕಂದುಕ ಗಳಂತಹ ರಚನೆ)ಗಳನ್ನು ಇಲ್ಲಿ ರೂಪಿಸಿರುವಂತಿದೆ.[33-ಅ]

ಹೊಸ ಯಡೂರಿನ ಬಳಿಯ ಅರಮನೆ ಬರಿ(ಇಳಿ ಜಾರು)ಯ ಕೆಳ ಆವರಣದಲ್ಲಿ ಸುಗ್ಗಿಕಟ್ಟೆ ಇದೆ. ಕಟ್ಟೆಯ ಎಡಪಾರ್ಶ್ವದಲ್ಲಿ ನೂರಡಿ ದೂರದಲ್ಲಿ ಕಡಂಗದ ಅವಶೇಷ ಗಳು ಎತ್ತರವಾಗಿ ನಿಂತಿವೆ. ಇವುಗಳ ನಡುವೆ, ಸುತ್ತ ಮುತ್ತ ಆದಿ ಹಕ್ಕುದಾರರಾಗಿ ಕಲ್ಲುಬಂಡೆ(ಅರೆ)ಯ ಮೇಲೆ ಗೂಡು ಕಟ್ಟಿಕೊಂಡು ವಾಸಮಾಡುತ್ತಿದ್ದ 'ಕಲ್ಲಾರೆ ದೊಡ್ಡೇಗೌಡನ' ಮನೆತನದವರು, ಹಸಿಗೋಡೆ ಕಟ್ಟಿ ವಾಸಮಾಡಿ ಎಂದು ರಾಜರಿಂದ ಆಜ್ಞಾಪಿತರಾದ ಮೊದಲಿಗೆ ಜೈನಿಗರಾಗಿದ್ದ 'ಆಸೇಗೌಡ' ಮನೆತನ ದವರು[34] ಹಾಗೂ ಹಲಸಿನಮರದಗೌಡನ ಮನೆತನ ದವರು ಸುಗ್ಗಿಹಬ್ಬದ ಆಚರಣೆಗಳಿಗೆ ಬಾಧ್ಯಸ್ಥರಾಗಿದ್ದಾರೆ. ಅರಮನೆ ಬಾಗಿಲ ಬಳಿ ಹಾಗೂ ಗ್ರಾಮದ ಏಳು ಬನಗಳಲ್ಲಿ ಐದು ವರುಷಕ್ಕೊಮ್ಮೆ ಸುಗ್ಗಿದೇವರ ಹಬ್ಬದ ಸಂದರ್ಭ ದಲ್ಲಿ ಹಂದಿಯ ಬಲಿಯನ್ನೂ ನೀಡುತ್ತಾರೆ.

**ರಚನಾಶಿಲ್ಪ :** ಮೂರು ಅಡಿ ಎತ್ತರದ ಕಲ್ಲು ಕಟ್ಟೆಯ ಮೇಲೆ ಸುಮಾರು ೨೦ ಅಡಿ ಎತ್ತರದ ಶಿಲಾ ಸ್ತಂಭಗಳು ಆರು ಅಡಿಗಳ ಅಂತರದಲ್ಲಿದ್ದು ಮೇಲೆ ಶಿಲಾ ಕಳಶಗಳನ್ನೂ ಹೊಂದಿರುವ ಅಡ್ಡತೊಲೆಯ ತಳಕೇಂದ್ರ ದಲ್ಲಿ ಕೊಕ್ಕೆ ಇದೆ.[35] ಸ್ತಂಭಗಳ ಬ್ರಹ್ಮಕಾಂತ ಬುಡ ಭಾಗದಲ್ಲಿ ಕತ್ತಿ ಗುರಾಣಿ ಹಿಡಿದು ಹುಲಿಯ ಮೇಲೆ ನಿಂತ ವೀರರ ಹಾಗೂ ಆನೆಗಳ ಮೇಲೆ ನಿಂತ ಪ್ರಣಾಮ ಮುದ್ರೆಯ ಸ್ಥಾನಕಮೂರ್ತಿಗಳ ತೆಳುವಾದ ಉಬ್ಬು ಶಿಲ್ಪಗಳಿವೆ. ಕೆಲವು ಮೂರ್ತಿಗಳಿಗೆ ಕಿರೀಟ ಲಾಂಛನವೂ ಇದೆ. ಇವುಗಳಲ್ಲಿ ಮೊದಲ ಸ್ತಂಭದ ಪಶ್ಚಿಮ ಪಾರ್ಶ್ವ ದಲ್ಲಿರುವ ಉಬ್ಬುಶಿಲ್ಪದ ವೇಷಭೂಷಗಳನ್ನು ಲಕ್ಷ್ಯ ದಲ್ಲಿರಿಸಿ ಹೇಳುವುದಾದರೂ ಅದು ದುದ್ದರಸನದೇ ಅಥವಾ ಹಾಲೇರಿ ಅರಸನದೇ ಎಂಬುದು ಸ್ಪಷ್ಟವಾಗದು. ಕಾರಣ ಕೆಲವು ಶಿಲ್ಪಗಳು ನಂತರದಲ್ಲಿ ಕಂಡರಣೆ ಆದಂತೆ ಭಾಸವಾಗುತ್ತದೆ. ಆದರೆ ಈ ಎಲ್ಲ ಶಿಲ್ಪಗಳ ಭಾವ ಪ್ರಸನ್ನತೆ ಕ್ರಿಯಾಭಂಗಿಗಳು ವೀರಭಾವವನ್ನು ಪೋಷಿಸು ವಂತಿವೆ. ಕಟ್ಟೆಯ ಮುಂದೆ ಇರುವ ಸುಮಾರು ಆರಡಿ ಎತ್ತರದ ಶಿಲಾದೀಪಸ್ತಂಭಗಳ ಮೇಲೆ ರೇಖಾಗೆತ್ತನೆಯ ಸಾಮಾನ್ಯ ಮಯೂರ ಶಿಲ್ಪವಿದೆ. ಅಲ್ಲದೆ ಸುಗ್ಗಿ ದೇವ ರಿಗೆ ಹರಕೆ ಆಗಿ ಒಪ್ಪಿಸಿದ ಬಗ್ಗೆ ಶಿಲಾಲೇಖವಿದೆ.[36] 'ಗಾಣಿಗನ ಆಟ'ನಾಟಕ ಆಡಿ ಬಂದ ಹಣದಿಂದ ದೀಪ ಸ್ತಂಭಗಳನ್ನು ಮಾಡಿಸಿದರಂತೆ.[37] ಕಟ್ಟೆಯ ಮುಂದಿ ರುವ ಅಂಕಣದ ತುದಿಯಲ್ಲಿ ೨-೩ ಅಡಿ ಎತ್ತರದ ಗಂಭೀರ ಭಂಗಿಯ ಹಸ್ತಿಯ ಶಿಲ್ಪವೊಂದಿದೆ. 'ಮೊದ್ನೆ'ಯನ್ನು ಈ ಹಸ್ತಿಯ ಮೇಲೆ ಇಡುತ್ತಾರೆ.

---

33 ಈ ಅಂಶವನ್ನು ಯಡೂರಿನ ಶ್ರೀ ಜೆ. ನಾಗರಾಜು ಅವರು ತಿಳಿಸಿದರು. ಅಲ್ಲದೆ ಕ್ರಿ.ಶ. ೧೬೬೮ರ ಮಡಿಕೇರಿ ಶಾಸನದಲ್ಲಿ ಬರುವ 'ಎಡೆನಾಡು ಸಪ್ತರಿ ಮಧ್ಯೆ....ಪೂರ್ಬ್ಬಸ್ಯದಿಸಿ ಕೆಂಜಿಗೆ ಮೊಱಡಿಏ ಗಜಸೆಲೆಯ ಕರಿವಳ್ಳಿಯ ಕೊಟ್ಟಗರ ಬಿದಣಗುಪ್ಪೆ' ಎಂಬ ಸಾಲಿನ ಅರ್ಥ ಹಾಗೂ ಶಬ್ದಗಳನ್ನು ಗಮನಿಸಬೇಕು.

33-ಅ ಕಡಂಗಗಳು ಹಾಲೇರಿ ಅರಸರಿಗೆ ಮುನ್ನವೇ ಇದ್ದರೂ ಅವಕ್ಕೆ ವ್ಯವಸ್ಥಿತ ರೂಪ ಒದಗಿದ್ದು ಹಾಲೇರಿ ಅರಸರ ಕಾಲದಲ್ಲಿಯೆ ಆಗಿದೆ.

34 ಯಡೂರಿನಲ್ಲಿ ಮೊದಲಿಗೆ ಜೈನಬಸದಿ, ಜಿನವಿಗ್ರಹ ಹಾಗೂ ಶಾಸನಗಳಿದ್ದುವು. ಈಗ ಆ ವಿಗ್ರಹ ಹಾಗೂ ಆ ಕುರಿತ ಶಾಸನ ಗಳನ್ನು ಕಲಕುಂದೂರಿಗೆ ಸಾಗಿಸಿದ್ದಾರೆ. ಇನ್ನು ರಾಜ ಹೊಸದಾಗಿ ಮನೆ ಕಟ್ಟಿ!ವಾಸ ಮಾಡಿ ಎಂದದ್ದನ್ನು, 'ಹಸಿಗೋಡೆ> ಆಸೆಗೋಡೆ>ಆಸಗೌಡ>ಆಸೇಗೌಡಿ' ಎಂಬ ರೂಪಕ್ಕೆ ಮನೆತನದ ಹೆಸರನ್ನೂ ರೂಪಿಸಿಕೊಂಡಿರುವಂತಿದೆ.

35 ಕೃಷ್ಣದೇವರಾಯನು ಬಂಗಾರ ದಾನ ಮಾಡಲು ಬಳಸುತ್ತಿದ್ದ ಹಂಪೆಯ ತುಲಾಭಾರ ಸ್ತಂಭದ ಮಾದರಿಯನ್ನು ಇದು ನೆನಪಿಗೆ ತಂದರೂ ಕದಂಬ ದುದ್ದರಸನು ತುಲಾಭಾರಕ್ಕೆ ಇದನ್ನು ಬಳಸಿದ್ದ ಬಗ್ಗೆ ಪುರಾವೆ, ಐತಿಹ್ಯ ತಿಳಿದು ಬರುವುದಿಲ್ಲ. ಹಂಪೆಯ ಮಾದರಿಯಂತೆ ಕಟ್ಟೆಯ ನಡುವೆ ನಡೆದುಹೋಗಲು ಎಡೆ ಇಲ್ಲ. ಬಾಗಿಲುವಾಡದಂತೆ (ವಿಜಯನಗರದ ಕಾಲ) ಕಾಣಬರದು. ಬದಲು ದೇವದೀಪದ ಉಯ್ಯಾಲೆ ಕಂಬವನ್ನು ಹೋಲುತ್ತದೆ.

36 ಎ. ಕ., ಸಂಪುಟ ೧(ಪರಿಷ್ಕೃತ)ರಲ್ಲಿ ಈ ಲೇಖ ದಾಖಲಾಗಿಲ್ಲ.

37 ಈ ಅಂಶವನ್ನು ತಿಳಿಸಿದವರು ಯಡೂರಿನ ಶ್ರೀ ಎ. ಯು. ರುದ್ರಪ್ಪನವರು.

**ಜನಪದ ಆಚರಣೆ :** ವರ್ಷದ ಹೊಸಮಳೆ ಅಂದರೆ ಅಶ್ವಿನಿ ಹುಟ್ಟಿದ ಮೇಲೆ ಭರಣಿ ಮಳೆ ಆಗುವ ಸಮಯಕ್ಕೆ ಇಲ್ಲಿ ಸುಗ್ಗಿದೇವರ ಹನ್ನೆರಡು ದಿನಗಳ ಹಬ್ಬಕ್ಕೆ ಅಣಿಯಾಗುತ್ತಾರೆ.[38] ಆರಂಭಕ್ಕೆ ಸುಗ್ಗಿಹಬ್ಬ ತೆಗೆದು ನಂತರ 'ಹಣ್ಣು ಕಾಯಿ ಹೇಳಿಸುವುದು' ಮಾಡುತ್ತಾರೆ. ಶುಕ್ರವಾರ ಹಬ್ಬದ ಆರಂಭದ ದಿನ. ಈ ಸುಗ್ಗಿ ಹಬ್ಬದ ಸಮಯದಲ್ಲಿ ಗ್ರಾಮದ ಬೇರೆ ಯಾವ ಸಮಾರಂಭವನ್ನೂ ಮಾಡುವಂತಿಲ್ಲ. ಸುಗ್ಗಿಹಬ್ಬ ತೆಗೆದ ಭಾನುವಾರದ ನಂತರದ ಗುರುವಾರದಂದು ಬೀರೇದೇವರ 'ಬನ'ದಲ್ಲಿ ಬೀರೇದೇವರಿಗೆ ವೀಳ್ಯ ಚೆಲ್ಲಿ ಪ್ರಾರ್ಥನೆ ಗೈಯ್ಯುತ್ತಾರೆ.

ಶುಕ್ರವಾರದ ರಾತ್ರಿ 'ಮೊದ್ದೆ'[39]ಯಿಂದ ಸುಗ್ಗಿ ಬನದಲ್ಲಿ ಒಂದನೇ ಸಾರುವೆ 'ಬೆಂಗಲು' ಬಗ್ಗೆ ನಡೆಯುತ್ತದೆ. ೨ನೇ ದಿನ ಶನಿವಾರವೂ ಇದೇರೀತಿ ಸಾರುವೆ. ಮೂರನೆಯ ದಿನ ಭಾನುವಾರ ರಾತ್ರಿ ಎಂಟು ಘಂಟೆಗೆ ಸುಗ್ಗಿಸ್ತಂಭಗಳ ನಡುವೆ ರಥ ಏರಿಸುತ್ತಾರೆ (ಊಲು ಏರಿಸುವುದು). ಅಂದರೆ ಹಲಸು, ಸಂಪಿಗೆ ಮತ್ತು ಉಪ್ಪಾಂತಿ ಮರದ ಜೋಡಿಸಿದ ತುಂಡುಗಳಿಂದ ಮಾಡಿದ 'ಸೊಡ್ಲುಮಣೆ'ಯನ್ನು ಸಿದ್ಧಪಡಿಸಿ ಕಬ್ಬಿಣದ ಸರಪಳಿ ಅಥವಾ ಪೈಪಿನ ಕೆಳತುದಿಗೆ ಸೇರಿಸಿ, ಸ್ತಂಭದ ಕೇಂದ್ರ ಕೊಕ್ಕೆಯಿಂದ ಇಳಿ ಬಿಡುವುದು ; ದೊಡ್ಡ ಅಜ್ಜ ಬನದಿಂದ ದೊಡ್ಡ ಹಾಗೂ ಚಿಕ್ಕ ಎರಡು ಮೂರು ಮೂತಿಯ ಮಣ್ಣಿನ ಹಣತೆಗಳಿಗೆ ಬತ್ತಿ, ಹಸುವಿನ ತುಪ್ಪ ಹಾಕಿ ಹತ್ತಿಸಿ ತಂದು ಈ ಮಣೆಯ ಮೇಲಿಟ್ಟು ತೂಗುವುದು ; ರಥ ಏರಿಸುವಲ್ಲಿ ಮಣೆಯ ಕೆಳಗೆ ಒಂದು ಬದಿಯಲ್ಲಿ ಭತ್ತ, ಇನ್ನೊಂದು ಬದಿಯಲ್ಲಿ ಅಕ್ಕಿಯನ್ನು ಗ್ರಾಮದ ಪ್ರತಿಯೊಂದು ಮನೆಯವರು ಸಾಂಕೇತಿಕವಾಗಿ ರಾಶಿ ಹಾಕುತ್ತಾರೆ. ದೇವರ ವಡೆಕಾರರು ಐದು ಹಿಟ್ಟನ್ನು ಶುದ್ಧದಲ್ಲಿ ತಯಾರಿಸಿ ವೀಳ್ಯದಲ್ಲಿ ಕಂಪ್ಪಣದೊಡನೆ ಇಟ್ಟು ನಿವೇದಿಸುತ್ತಾರೆ. ಕ್ರಮವಾಗಿ ಕಲ್ಲಾರೆ, ಆಸೇಗೌಡಿ ಹಾಗೂ ಹಲಸಿನ ಮರದ ಮನೆಯವರು ಮೂರು-ಮೂರು ಬಾರಿ ಸೊಡ್ಲುಮಣೆ ಸೊಡರನ್ನು ತೂಗಿಬಿಡುತ್ತಾರೆ. ನಂತರ ಇತರರಿಗೆ ಅವಕಾಶ. ಭತ್ತ ಅಕ್ಕಿಯನ್ನು ಕಟ್ಟೆಯ ಮೇಲೆ ಹಾಕುವಲ್ಲಿ ಮೂರು–ಮೂರು ಕಾಳು ಉಳಿಸಿಕೊಂಡು 'ಲಕ್ಷ್ಮಿ' ಕಾಳೆಂದು ಮನೆಗೆ ಒಯ್ಯುತ್ತಾರೆ.

ನಂತರ ಈ ಭಾನುವಾರ ರಾತ್ರಿ ಕಡವೆ ಕಡಿಯಲು ಬೀಟೆ ಮರದ ಹೊಂತೆ ಹತ್ತಿಸಿಕೊಂಡು ಕಾಡಿನ ಬಾಂದು ಕಲ್ಲಿಗೆ ಹೋಗಿ ಕಾಡಿನತ್ತ ಮೂರು ಕಲ್ಲುಗಳನ್ನು ಎಸೆದು, ಹಾಲು ಬರುವ ಮರಕ್ಕೆ ಮಚ್ಚಿನಿಂದ ಮೂರು ಏಟನ್ನು ಹೊಡೆಯುತ್ತಾರೆ. ಊದುಬತ್ತಿ ಹತ್ತಿಸಿ ಅಪಾಯವಿಲ್ಲದೆ ಬೇಟೆಗಾಗಿ ಪ್ರಾರ್ಥಿಸಿ ಗುಂಡು ಹಾರಿಸಿ ಹಿಂದಿರುಗುತ್ತಾರೆ.

ನಾಲ್ಕನೇ ದಿನ ಸೋಮವಾರ ಬೆಳಗ್ಗೆ ಎಂಟು ಗಂಟೆಗೆ ದೇವರಕಾಡಿಗೆ ದೇವರ ವಡೆಕಾರರು ಸೇರಿದಂತೆ ಐದು ಜನರು ಹೋಗಿ ನಿವೇದನವಿಟ್ಟು ಮೂರು ಕಲ್ಲುಗಳನ್ನೆಸೆದು ಬರುತ್ತಾರೆ. ಐದನೇ ದಿನ ಮಂಗಳವಾರ ಗ್ರಾಮಸ್ಥರು ಮುಂಜಾನೆ ನಾಲ್ಕು ಗಂಟೆಗೆ ಊರಿನ ಬೇರೆ ಯಾರೊಡನೆಯೂ ಮಾತಿಲ್ಲದೆ ಹೊರಟು ಕಾಡಿನ ಬೇಟೆ ಮಾಡಿ ಬರುತ್ತಾರೆ. ಆರನೇ, ಏಳನೇ ದಿನ ಅಂದರೆ ಬುಧವಾರ ಗುರುವಾರಗಳಂದೂ ಹೀಗೆಯೆ. ಬೇಟೆಯಲ್ಲಿ ಗೊರಸಿರುವ ಪ್ರಾಣಿಗಳು ಅಂದರೆ ಕುರಿ, ಜಿಂಕೆ, ಕಡವೆ, ಬೊರುಕ, ಹಂದಿ, ಹುಲ್ಲೆ, ಇಂತಹ ಪ್ರಾಣಿಗಳನ್ನು ಮಾತ್ರ ಬೇಟೆ ಆಡಿ ತರಬೇಕು. ಬೇಟೆ ಹೊಡೆದವರಿಗೆ ಚಿನ್ನದ ಕಂಪ್ಪಣವನ್ನು ಆ ಮಿಕದ ಮೇಲಿಟ್ಟು ಪೂಜಿಸಿ ನೀಡುತ್ತಾರೆ. ದೇವರ ವಡೆಕಾರರು, ಬೇಟೆ ಸಿಗಲಿಲ್ಲ ಎಂದರೆ ಹಲಸಿನ ಬೊಡಕು(ಕಾಯಿ), ಬಾಳೆಕಾಯಿ (ಕನಿಯನ್ ಬಾಳೆ)ಗಳನ್ನು ಆಯಾ ಮರಗಳಿಗೆ ಗುಂಡು ಹೊಡೆದು ಕೊಲೆ ಮಾಡಿ ತಂದು ಸುಗ್ಗಿಕಟ್ಟೆಗೆ ಪ್ರದಕ್ಷಿಣೆ

---

38 ಸುಗ್ಗಿಕಟ್ಟೆಯ ದೇವರಹಬ್ಬಕ್ಕೆ ಆಹ್ವಾನಿಸಿ ಜನಪದ ಸಂಪ್ರದಾಯಗಳ ಪರಿಚಯ ಮಾಡಿಕೊಟ್ಟವರು ಸರ್ವಶ್ರೀ ಎ. ಯು. ರುದ್ರಪ್ಪ, ಎ. ಸಿ. ಗಣೇಶ್, ಡಿ. ಟಿ. ಚೆಂಗಪ್ಪ, ಎ. ಕೆ. ವೀರಪ್ಪ, ಧರ್ಮಪ್ಪ, ಜಂಗಮರ ನಾಗರಾಜು ಮತ್ತು ಮುಖಂಡ ಸೋಮಯ್ಯನವರು.

39 ಜಿಂಕೆ ಚರ್ಮ ಬಳಸಿ ತಯಾರಿಸಿದ, ಶುಭ್ರವಸ್ತ್ರ, 'ವರ್ಷಕ್ಕೊಂದು ತಾವರೆ ಹೂ' ಲಕ್ಕಿಸೊಪ್ಪುಗಳಿಂದ ಅಲಂಕರಿಸಿದ ಮೃದಂಗರೂಪದ ಆಕೃತಿಯೇ 'ಮೊದ್ದೆ'. ಇದನ್ನು ಹೊತ್ತುಬರುವ ಹರಿಜನ ಆಳಿಕನ್ನು 'ಮೊದ್ದೆ'ಯವನು ಎನ್ನುತ್ತಾರೆ.

ಬಂದು ಮುಂದಿಟ್ಟು ನಿವೇದಿಸಿ ಆ ದಿನದ 'ಮಡೆ'ಗೆ ಬಳಸುತ್ತಾರೆ. ಇದರಲ್ಲಿ ಒಂಬತ್ತು 'ಮಡೆ'ಗಳನ್ನು ತಯಾರಿಸಬೇಕು. ಎಂಟನೇ ದಿನ ಶುಕ್ರವಾರ ಗ್ರಾಮದ ಜನತೆಗೆ ಔತಣರೂಪದಲ್ಲಿ ಪ್ರಸಾದ ವಿನಿಯೋಗವಾಗಬೇಕು. ನಂತರ ಬೆಳಕು ಹರಿಯುವವರಿವಿಗೂ ಕೊಡವ ಮಾದರಿಯ ಹಾಗೂ ಗೌಡರ ಮಾದರಿಯ ಸುಗ್ಗಿ ಕುಣಿತಗಳು ನಡೆಯುತ್ತವೆ.

ಈ ಶುಕ್ರವಾರದಂದೇ ನಿಜವಾದ ಹಬ್ಬ ಆರಂಭವಾದಂತೆ. ಈ ದಿನ ರಾತ್ರಿ ಬಾಣ ಬಿರುಸು, ಸುಗ್ಗಿ ಕುಣಿತ, ಕತ್ತಿವರಸೆ ಎಲ್ಲ ಉಂಟು. ಆ ರಾತ್ರಿ ಅಜ್ಜಬನದಿಂದ ದೇವರ ವಡೆಕಾರರು ಸೊಡ್ಲು ತರುತ್ತಾರೆ. ಜೊತೆಯಲ್ಲಿ ಸತ್ತಿಗೆ, ಚಿಬ್ಬಲು ಮುಖವಾಡ ತಂದವರೂ, 'ಮೊದ್ನೆ'ಯವರೂ ಬರುತ್ತಾರೆ. ಆಗ ಸುಗ್ಗಿಕಟ್ಟೆಯ ಪ್ರವೇಶ ದ್ವಾರದಲ್ಲಿ ತೋರಣದ ಮುಂದೆ ಹಾಕಿರುವ ಕೊಂಡವನ್ನು ಹಾಯುವಲ್ಲಿ 'ಮೊದ್ನೆ'ಯವನಿಗೆ ಆವೇಶ ಬರುತ್ತದೆ. ನಂತರ ಸೊಡ್ಲು ಹಿಡಿದ ಇಬ್ಬರು ವಡೆಕಾರರು, ಸತ್ತಿಗೆ, ಚಿಬ್ಬಲು ಹಿಡಿದ ಆರು ಜನರು ಹಾಗೂ ಮೊದ್ನೆಯವನು ಸುಗ್ಗಿಕಟ್ಟೆಯ ಸುತ್ತ ಮೂರು ಪ್ರದಕ್ಷಿಣೆ ಬಂದು ಕಟ್ಟೆಯ ಮೇಲೆ ಸೊಡ್ಲು ಚಿಬ್ಬಲುಗಳನ್ನಿಡುತ್ತಾರೆ. 'ಮೊದ್ನೆ'ಯವನು 'ಮೊದ್ನೆ'ಯನ್ನು ಆನೆಯ ಬೆನ್ನ ಮೇಲಿಟ್ಟು ನಿಲ್ಲುತ್ತಾನೆ. ನಂತರ ಪೂಜಾದಿಗಳು ನಡೆಯುತ್ತವೆ. ಇಲ್ಲಿ ಮಡೆ ಇಡುವಲ್ಲಿ ಬೈನೆಕಳ್ಳಿನ ಬಳಕೆ ಉಂಟು. ದೊರೆಯದಿದ್ದರೆ ಎಳನೀರಿನ ಬಳಕೆ.

ಒಂಬತ್ತನೇ ದಿನ ಶನಿವಾರ ಬೆಳಗ್ಗೆ ಬಸವನ ಕಂಚಿನ ವಿಗ್ರಹವನ್ನು ದೇವರಕೆರೆಯಲ್ಲಿ ಮೀಯಿಸಿ ಅಡ್ಡೆ(ಕುರುಜು ಮಣೆ) ಮೇಲೆ ಹೊತ್ತು ಬರುತ್ತಾರೆ. ಸುಗ್ಗಿಕಟ್ಟೆಗೆ ಬರುವ ಹಾದಿಯಲ್ಲಿ ವೀರಭದ್ರನ ವಡಬುಗಳನ್ನು ಹೇಳಿಕೊಂಡು 'ಹರಸೇವೆ' ನಡೆಸುತ್ತಾರೆ. ಇದಕ್ಕೆ ಮಣೇವು ಹಾಕುವುದು ಎನ್ನುವುದೂ ಉಂಟು. ಮುಂದೆ ಸುಗ್ಗಿಕಟ್ಟೆ ತಲುಪಿ ಪ್ರದಕ್ಷಿಣೆ ಬರುತ್ತಾರೆ. ನಂತರ ಬೆಳಗ್ಗೆ ಹತ್ತುಗಂಟೆಗೆ ಪ್ರಸಾದ ವಿತರಣೆ. ಆ ಸಮಯದಲ್ಲಿ 'ಮೊದ್ನೆ'ಯವನು 'ಹೆದ್ದೇವರ ಸಾರು' ಹಾಕುತ್ತಾನೆ. ಇದೇ ಎರಡನೇ ಬೆಂಗಲು-'ಹೆದ್ದೇವರ ಬೆಂಗಲು' ಎನ್ನುತ್ತಾರೆ. ಅದು ಹೆದ್ದೇವರ ಪೂಜೆಗೆ ಸಂಬಂಧ.

ಭಾನುವಾರ 'ಮೊದ್ನೆ'ಯವ ಹಾಗೂ ಅವನ ಹೆಂಡತಿ ಬಿಳಿ ಉಡುಪು ತೊಟ್ಟು ಬೆಂಗಲು ಆದವರ ಮನೆ ಬಿಟ್ಟು, ಉಳಿದ ಮನೆ ಮನೆಗೆ ಹೋಗಿ ಮೊದ್ನೆ ಪೂಜೆ, ಪಡಿ ಪಡೆಯುತ್ತಾರೆ.

ಅಂದು ಕೆಳಗಣ ಹಾಗೂ ಮೇಲಣ ಅಜ್ಜಬನಗಳಿಗೆ[40] ದೇವರ ವಡೆಕಾರರು ಹೋಗಿ ಪೂಜಿಸಿ ಸೊಡ್ಲುಗಳನ್ನು ತಂದು ಹೆದ್ದೇವರ ಬನಕ್ಕೆ ವಾದ್ಯ ಸಮೇತ ರಾತ್ರಿ ಎಂಟುಗಂಟೆಯ ಮೇಲೆ ಹೊರಡುತ್ತಾರೆ. ಮೂರು-ಮೂರು ಮಡಕೆಗಳನ್ನು ಒಂದರ ಮೇಲೊಂದು ಇಟ್ಟು ಅವುಗಳ ಮೇಲೆ 'ಸೊಡ್ಲು'ದೀಪಗಳನ್ನಿಡುತ್ತಾರೆ. ಮಡಕೆಗಳ ಕಂಠದ ಸುತ್ತ ಸಂಪಿಗೆಹಾರ ಸುತ್ತಿರುತ್ತಾರೆ. 'ಸೊಡ್ಲು' ಹೊತ್ತ ಇಬ್ಬರು ದೇವರ ವಡೆಕಾರರು, 'ಮೊದ್ನೆ', ಚಿಬ್ಬಲಿನಲ್ಲಿ ಸತ್ತಿಗೆ ಚಾಮರ ಮುಖವಾಡಗಳನ್ನು ಅಕ್ಕಿ ವೀಳ್ಯದ ಮೇಲಿಟ್ಟುಕೊಂಡು-'ಈ ಏಳು ಜನರೂ ಪೂಜೆಗೆ ಹೆದ್ದೇವರ ಬನಕ್ಕೆ ಹೋಗುತ್ತಾರೆ. ಹರಕೆ ಇದ್ದವರು ವದ್ದೆ ಮಡಿಯಲ್ಲಿ ಹೆದ್ದೇವರ ಮಂಟ

---

40 ಒಂದು ಗಿಡದ ಕೆಳಗೆ ಕಲ್ಲುಗಳನ್ನು ಪೇರಿಸಿರುವ ನೆಲೆಯು ಕೆಳಗಣ ಅಜ್ಜಬನ. ಸೊಡ್ಲುಗಳನ್ನು ಇಡಲು ಮಾಡಿರುವ ಗೂಡೇ ಮೇಲಣ ಅಜ್ಜಬನದ ನೆಲೆ. ಎರಡೂ ನೆಲೆಗಳಲ್ಲಿ ದೀಪವಿಟ್ಟು ತರುವ ರೂಢಿಯು ಅವು ಸಮಾಧಿನೆಲೆಗಳೆಂದು ಸೂಚಿಸುತ್ತದೆ. ಒಂದು ಅಜ್ಜನದು. ಇನ್ನೊಂದು ಅಜ್ಜಿಯದು. ಅರ್ಥಾತ್ ಸಂದುಹೋದ ಗಂಡು-ಹೆಣ್ಣಿನದು. ಸುಗ್ಗಿ ಕಟ್ಟೆಯನ್ನು ಹಾಳೂರುಮಕ್ಕಿಯಿಂದ 'ಅರಮನೆ ಬರಿ'ಗೆ ಸಾಗಿಸುವಲ್ಲಿ ಹೋರಾಟ ನಡೆದಾಗ ವೀರಮರಣ ಅಪ್ಪಿದ ವೀರ-ಮಾಸ್ತಿಯರ ಸಮಾಧಿ ಮಾಡಿದ ಸ್ಥಳವೂ ಆಗಿರಬೇಕು. ಇದು ಬಿಟ್ಟರೆ ಹಬ್ಬ ಮುಗಿದ ಮೇಲೆ ಅಜ್ಜಿಬನದ ಗೂಡಿನಲ್ಲಿ ದೀಪ ಇಟ್ಟು ಮತ್ತೆ ಮುಂದಿನ ವಾರ್ಷಿಕ ಹಬ್ಬಕ್ಕೆ ಅಲ್ಲಿಂದಲೇ ತರುವ ಕಾರಣದ ಹಿನ್ನೆಲೆಗೆ ಬೇರೆ ಅರ್ಥ ಹುಡುಕುವುದು ಕಷ್ಟ.

ಈ ಸುಗ್ಗಿ ಕಟ್ಟೆಗೆ ಸಂಬಂಧಿಸಿದ ಏಳು ಗ್ರಾಮದೇವತಾ ಬನಗಳು-ಬಟವಾಳ ಬರಂಜೋಡಿ, ಗ್ರಾಮದೇವತಾ ಉಡುವೆಗಳ ಜೊತೆಗೆ ಅಜ್ಜಿ ಬನಗಳೂ ಸೇರಿ ಬಹುಶಃ 'ಸಪ್ತಮ್ಮ ತಾಯಿ'ಯರ ನೆಲೆಗಳಾಗಿವೆ.

ಪದ ಸುತ್ತ ಉರುಳುಸೇವೆ ಸಲ್ಲಿಸುತ್ತಾರೆ. ವಡೆಕಾರರು ಮೊದ್ನೆ ಸಹಿತ ಅಲ್ಲಿಂದ ಸ್ವಂತ ಮನೆಗೆ ಬಂದು ನಿರ್ದಿಷ್ಟ ಕೋಣೆಯಲ್ಲಿ ಮಡಕೆಗಳನ್ನಿಡುವರು. ಮತ್ತೆ ಮಡಿಯಾಗಿ ಹೊಸಬತ್ತಿಗಳನ್ನು 'ಸೊಡ್ಲು'ಗಳಿಗೆ ಹಾಕಿ ಹಚ್ಚಿ, ಸುಗ್ಗಿಕಟ್ಟೆಗೆ ಹೋಗಿ ಮೂರು ಬಾರಿ ಪ್ರದಕ್ಷಿಣೆ ಬಂದು ಮೇಲಣ ಅಜ್ಜಿಬನಕ್ಕೆ ಹೋಗಿ ಗೂಡಿನಲ್ಲಿ ಸೊಡ್ಲುಗಳನ್ನಿಡುತ್ತಾರೆ. ಈ ಭಾನುವಾರ ರಾತ್ರಿ ಅಜ್ಜಿಬನಕ್ಕೆ ಹೋಗುವ ಮುನ್ನ ಸುಗ್ಗಿಕಟ್ಟೆಯ ಬಳಿ ಮನರಂಜನೆ ಹಾಗೂ ಶೌರ್ಯ ಕೌಶಲ್ಯಗಳ ಪ್ರದರ್ಶನವಾದ 'ಮಲ್ಲು ಸುಗ್ಗಿ' ಉಂಟು.

'ಮಲ್ಲುಸುಗ್ಗಿ'ಯಲ್ಲಿ ಬಾಳೆತರಗುಗಳಿಂದ ಮಾಡಿದ (ಪೊರಕೆಯಂತಹ ರಚನೆಯ) ಅಲಂಕೃತ ಹಿಡಿಲುಗಳನ್ನು ಹಿಡಿದು ಏಳುಜನ ವಡೆಕಾರರು ಸುಗ್ಗಿಕಟ್ಟೆಯ ಸುತ್ತ ಹಾವಿನ ಪಥದಂತೆ ಚಿಗರೆಗಳಂತೆ ಕುಣಿಯುತ್ತ ಬಂದು, ನಂತರ ತರಗಿಗೆ ಬೆಂಕಿ ಹಚ್ಚಿಕೊಂಡು ಕಟ್ಟೆಯ ಸುತ್ತ ಮೊದಲಿನಂತೆಯೇ ಕುಣಿಯುತ್ತಾರೆ. ಆಮೇಲೆ ಉರಿದ ತರಗಿನ 'ಹಿಡಿ'ಯನ್ನು ಸುಗ್ಗಿಸ್ತಂಭಗಳ ಎತ್ತರ ಮೀರಿ ಮುಂಬದಿಯಿಂದ ಹಿಂಬದಿಗೆ ಎಸೆಯುವ ಆಟ ಬೆಳಕಿನ ಚೆಂಡಿನಾಟದಂತೆ ಕಾಣುತ್ತದೆ. ಅಂತೇ ರಾತ್ರಿ ಹತ್ತರ ವರೆಗೂ ನಡೆವ ಈ ಕುಣಿತವನ್ನು 'ರಾತ್ರಿಸುಗ್ಗಿ' ಎನ್ನುವುದುಂಟು.

ಮರುದಿನ ಸೋಮವಾರ ಬೆಳಗ್ಗೆ ಹಬ್ಬದ ಆರಂಭಕ್ಕೆ 'ಮೊದ್ನೆ'ದೇವರು ಕದ್ದು ದೊಡ್ಡ ಅಜ್ಜಿಬನಕ್ಕೆ ಹೋಗುವ ರೂಢಿ. ಆಗ ವಡೆಕಾರರು ಎಚ್ಚರವಹಿಸಿ ಅವರನ್ನು ಹಿಡಿದು ಗುರುತಿಸಬೇಕು. ಅಂದು 'ಸಬ್ಬಮ್ಮ ತಾಯಿ'ಯ ಮುಖವಾಡನ್ನು ಅಕ್ಕಿ ವೀಳ್ಯದ ಮೇಲಿಟ್ಟು ಬಾಳೆಹಣ್ಣಿಗೆ ಚುಚ್ಚಿರುವ ಸತ್ತಿಗೆ ಸಹಿತ ಇರುವ ಅಡ್ಡೆಯನ್ನು ಸುಗ್ಗಿಯಕಟ್ಟೆ ಮೇಲಿಡುವರು. 'ಊಲು'ವಿಗೆ ಕಕ್ಕೆಸೊಪ್ಪು–ಹೂ, ಆನೆಯ ಮೇಲಿಟ್ಟಿರುವ ಮೊದ್ನೆಗೆ ಕಕ್ಕೆಸೊಪ್ಪಿನ ಹೂ, ರೇಷ್ಮೆ ಹುಲ್ಲಿನಂತಿರುವ ಕೆಂಪಾಗಿರುವ 'ವರ್ಷಕ್ಕೊಂದು ತಾವರೆ' ಹೂ ಮುಡಿಸಿ ಅಲಂಕರಿಸಿರುತ್ತಾರೆ. 'ಮೊದ್ನೆ'ಗೆ ಹರಕೆ ಹೊತ್ತವರು ಅದಕ್ಕೆ ಸಲ್ಲಿಸಿದರೆ, ಕಟ್ಟೆಗೆ ಹೊತ್ತವರು ಅದಕ್ಕೆ ಸಲ್ಲಿಸುತ್ತಾರೆ. ಹರಕೆ ಪ್ರಸಾದಗಳೆಲ್ಲ ಮುಗಿಯುವ ವೇಳೆಗೆ ಸಂಜೆ ನಾಲ್ಕರ ಸಮಯವಾಗುತ್ತದೆ. ಆಗ ಜನಪದ ಕಲೆ ಮನರಂಜನಾ ಪ್ರಹಸನಗಳು ನಡೆಯಲಾರಂಭ. ಇದರಲ್ಲಿ ಸೂಳೆಕುಣಿತ, ವಡ್ಡರ ಒರಟು ವಹಿವಾಟುಗಳನ್ನು ಅಣಕು ಮಾಡುವಂತೆ ಸಂಭಾಷಣೆ ಅಭಿನಯ ನಡೆಯುತ್ತವೆ. ಅದರಲ್ಲಿ ಸೂಳೆಯ ಬದುಕಿನ ಹೆಣ್ಣಿನ ಅಸಹಾಯಕತೆ ಕುರಿತ ವ್ಯಂಗ್ಯ ಅಲ್ಲಿ ಕಾಣುತ್ತದೆ. ನಂತರ ಬಿಲ್ಲುಗಳನ್ನು ಹಿಡಿದು ಕಡವೆ ಬೇಟೆಯ ಅಣಕು ಆಟವನ್ನೂ ಪ್ರದರ್ಶಿಸುತ್ತಾರೆ.

ಮುಂದಿನದು ಬಿಲ್ಲುಸುಗ್ಗಿ. ಬಿಲ್ಲು ಬಾಣ ಹಿಡಿದು ಎರಡು ಗುಂಪುಗಳು ಬಿಲ್ಗಾಳಗಕ್ಕೆ ಎದುರು ಬದರು ಕಟ್ಟೆಯ ಎರಡೂ ಮುಂಬದಿಯಲ್ಲಿ ನಿಲ್ಲುವ ಮುಂಚೆ, ಡೊಂಕು ಡೊಂಕಾಗಿ ಜಗಿಯುತ್ತ ಕುಣಿಯುತ್ತ ಕಟ್ಟೆಯನ್ನು ಸುತ್ತಿಬಂದು ಒಬ್ಬೊಬ್ಬ ನಾಯಕನ ನೇತೃತ್ವದಲ್ಲಿ ಸೇರುತ್ತಾರೆ. ತಮ್ಮ ಗುಂಪಿನ ಸಾಮರ್ಥ್ಯವನ್ನು ಕೊಚ್ಚಿಕೊಳ್ಳುತ್ತಾರೆ. ನಂತರ ಅಣಕು ಕಾಳಗ ಆರಂಭ. ಮೂರು ಬಾರಿ ಇದು ನಡೆದ ನಂತರ 'ಬಿಲ್ಲುಸುಗ್ಗಿ'ಯ ಬಾಣವನ್ನು ಸುಗ್ಗಿಕಟ್ಟೆಯ ಮೇಲ್ತುದಿಯನ್ನು ಹಾದು ಹೋಗುವಂತೆ ಬಿಡುತ್ತಾರೆ.[41] ವಡೆಕಾರರೂ ಹೀಗೆಯೇ ಬಿಲ್ಲು ಬಿಡುತ್ತಾರೆ, ಅಲ್ಲಿಗೆ ಬಿಲ್ಲುಸುಗ್ಗಿ ಮುಕ್ತಾಯ. ಆ ನಂತರ ಫಲ ಪ್ರಸಾದ ವಿನಿಯೋಗ.

ಒಂದು ಕಾಲಕ್ಕೆ ದುದ್ದರಸನ ಶಾಸನದಲ್ಲಿ ಉಲ್ಲೇಖಿತರಾದ ಲೆಂಕರು, ಕೀಲ್ಗುಂಟೆಯವರು, ಸೈನಿಕರು ಇಟ್ಟುಕೊಂಡಿದ್ದ ರೂಢಿ ಹಾಗೂ ಬದುಕಿನ ರೀತಿಯನ್ನು ಪರಂಪರೆಯಲ್ಲಿ ಸಾಂಕೇತಿಕವಾಗಿ ಹೀಗೆ ನಡೆದು ಬಂದಿರುವಂತಿದೆ.

ಹಬ್ಬದ ಕೊನೆಯ ದಿನ ಮಂಗಳವಾರ ಅಂದು ಊಲು ಇಳಿಸುವಲ್ಲಿ ವಡೆಕಾರರು ಒಂದು 'ಸೊಡ್ಲು' ತಂದು 'ರಥ ಇಳಿಸಿದ' ಮೇಲೆ ಬೋರೆದೇವರ ಬನಕ್ಕೆ 'ಊಲು'ವನ್ನು ಒಯ್ದು ಇಡುತ್ತಾರೆ. ಸೊಡ್ಲನ್ನು ಅಜ್ಜಿಬನಕ್ಕೆ ಒಯ್ಯುತ್ತಾರೆ. ಬಂಡಾರದ ಲೆಖ್ಖ ಹಿಡಿದು ಸಭೆಯ ಮುಂದೆ ಮಂಡನೆ. ನಂತರ ಹಬ್ಬ ತೀರ ಮುಕ್ತಾಯ.

---

41 ಚಿಕ್ಕಮಗಳೂರು ಜಿಲ್ಲೆಯ 'ಬಿಲ್ಲುಸುಗ್ಗಿ'ಯಲ್ಲಿ ಬಂದೂಕಿನಿಂದ 'ತೆಂಗಿಗೆ ಈಡು'.

ಈ ಸುಗ್ಗಿಹಬ್ಬದಲ್ಲಿ ಯಡೂರಿನ ಸುಗ್ಗಿ ದೇವರಿಗೆ ಗ್ರಾಮದ ಪರವಾಗಿ ಹರಿಜನ 'ಮೊದ್ನೆ' ಬಿನ್ನಹ, ಹರಕೆಗಳನ್ನು ಗ್ರಾಮಸ್ಥರು ಎತ್ತಿಹಿಡಿದ ಕೋಲು ಆಸರೆಯ ಮೇಲೆ ನಿಂತು ಅರ್ಪಿಸುವ ಹಕ್ಕನ್ನು ನೀಡಿರುವುದು ದಲಿತ ಜನಾಂಗಕ್ಕೆ ಗ್ರಾಮೀಣರು ನೀಡಿರುವ ಗೌರವ ಎಂದೇ ಹೇಳಬೇಕು.

ಸುಗ್ಗಿಕಟ್ಟೆಯ ದೇವತಾ ಮುಖವಾಡಗಳು ಭದ್ರಕಾಳಿ, ದುರ್ಗೆ, ಕಾಳಿ ಹಾಗೂ ಪಾರ್ವತಿ ಅವತಾರ ಎನ್ನುವ ಪ್ರತೀತಿ, ಯಡೂರಿನ ಏಳು ಗ್ರಾಮದೇವತಾ ಬನಗಳಿಗೆ ಬಲಿ ಪೂಜಾದಿಗಳ ಜನಪದ ಸಂಪ್ರದಾಯ, ಕಾಳಗಗಳಲ್ಲಿ, ದಕ್ಷಯಜ್ಞ ವಿನಾಶದಲ್ಲಿ ಪಾಲ್ಗೊಂಡ ವೀರಭದ್ರನ ಸತಿ ಭದ್ರಕಾಳಿ ಮತ್ತು ಚೌಡೇಶ್ವರಿಯರ ಆರಾಧನೆ–ಇವೆಲ್ಲ ಶಕ್ತಿದೇವತೆಯ ಆರಾಧನಾ ಸಂಕೇತವಾಗಿವೆ.

ಮೈಸೂರು, ತುಳುನಾಡು ಮತ್ತು ವಿಜಯನಗರದ ಕಡೆಯಿಂದ ಬಂದ ಒಕ್ಕಲಿಗ ಗೌಡ ಜನಾಂಗಗಳು, ತಮ್ಮ ಜೊತೆಯಲ್ಲಿ ಸಾಗಿಸಿಕೊಂಡು ತಂದ ಸಂಪ್ರದಾಯವನ್ನು ಕೊಡಗಿನಲ್ಲಿ ಇವರೆಲ್ಲ ಬರುವ ಮುನ್ನವೂ ಇದ್ದ ಗೌಡ ಜನಾಂಗಗಳಲ್ಲಿನ ಆಚರಣೆಗಳನ್ನು, ಸುಗ್ಗಿಸ್ತಂಭದ ಹಾಗೂ ಅದರ ಬಳಿಯ ವೀರಶಿಲ್ಪಗಳನ್ನು ಕಂಡು ಸಮೀಕರಿಸಿಕೊಂಡು, ಈ ಭಾಗದಲ್ಲಿ ಒಂದು ಸಂಯುಕ್ತ ಜನಪದ ಆಚರಣೆ ಹಾಗೂ ಪೂಜಾದಿಗಳಿಗೆ ನಾಂದಿ ಹಾಕಿದ ಮೇಲೆ[42] ವಿಕಾಸಗೊಂಡಿರುವ ಸುಗ್ಗಿಹಬ್ಬದ ವಿಸ್ತಾರ ವೈಭವ ಇಂದು ಪ್ರಚಲಿತವಾಗಿರುವಂತಿದೆ. ಆದರೆ ಹಳೆಯ ಆಚರಣೆಗಳಲ್ಲಿ ಎಷ್ಟೋ ಇಂದು ಕೇವಲ ಸಾಂಕೇತಿಕವಾಗಿರುವುದೂ ಉಂಟು. ಒಟ್ಟಾರೆ ಒಂದು ದಟ್ಟ ಸಾಂಸ್ಕೃತಿಕ ಜಾಯಮಾನದ ಮೂಲಕ ಅದು ಕೊಡಗಿನ ವೈಶಿಷ್ಟ್ಯವನ್ನು ತೋರುತ್ತದೆ.

**ಚೌಡ್ಲುಗುಡಿ–ನಗರೂರು ಸುಗ್ಗಿಕಟ್ಟೆ**

**ಶಿಲ್ಪ ಮತ್ತು ರಚನೆ :** ಶಿಥಿಲವಾಗಿರುವ ಆವರಣದ ಕಲ್ಲುಗೋಡೆಗಳು, ಕಲ್ಲಿನ ವೇದಿಕೆ, ಮುಂದಿನ ಹಸ್ತಿದ್ವಯಗಳು, ಸೋಪಾನ ಮತ್ತು ಚತುರಸ್ರ ಮಂಟಪವನ್ನು ಗಮನಿಸಿದರೆ ವಾಸ್ತವವಾಗಿ ಒಂದು ಕಾಲಕ್ಕೆ ವೇದಿಕೆಯ ನೆಲೆಯ ದೇಗುಲವಾಗಿದ್ದು, ಚತುರಸ್ರಮಂಟಪವೂ ವಸಂತೋತ್ಸವ ಮಂಟಪವಾಗಿದ್ದಂತೆಯೇ ತೋರುತ್ತದೆ. ಈಗ ವೇದಿಕೆಯೆ ದೇವತೆಯ ಕಟ್ಟೆ ಆಗಿ, ಮಂಟಪದಲ್ಲಿ 'ಊಲು' ಏರಿಸಿ ಸೊಡ್ಲು ತೂಗುತ್ತಾರೆ. ಬ್ರಹ್ಮಕಾಂತ ಮಾದರಿ ನಾಲ್ಕು ಸ್ಥಂಭಗಳ ತೆರೆದ ಮಂಟಪವು ಭುವನೇಶ್ವರಿ, ಗೋಪುರ ಹಾಗೂ ಕಳಶವನ್ನು ಹೊಂದಿದೆ. ಸ್ತಂಭಗಳ ಮೇಲೆ ಕಮಲ, ಹಂಸ, ನಾಗ-ನಾಗಿಣಿ, ಆನೆ, ಕುದುರೆ, ಲಿಂಗಕ್ಕೆ ಕೆಚ್ಚಲ ಹಾಲು ಕರೆಯುವ ಗೋವು–ಇವುಗಳ ಉಬ್ಬುಶಿಲ್ಪ ಕಂಡರಣೆ ಆಗಿದೆ. ಎಡಗೈಯಲ್ಲಿ ಫಲವೊಂದನ್ನು ಹಿಡಿದು ಭುಜ ಮಟ್ಟದಲ್ಲಿ ಬಲಗೈ ಎತ್ತಿ ಧಾರೆ ಹುಯ್ಯುವ ಭಂಗಿಯಲ್ಲಿ ಸ್ಥಾನಕ ಸ್ತ್ರೀ ಉಬ್ಬುಶಿಲ್ಪವು ಮುಂಬಲಭಾಗದ ಸ್ತಂಭದ ಉತ್ತರ ಪಾರ್ಶ್ವದಲ್ಲಿದೆ. ಮುಂದಿನ ಅಂಕಣದಲ್ಲಿ ಹಸ್ತಿಗಳ ಹಿಂದೆ ಕೊಂಡದ ನೆಲೆಯೂ ಇದೆ. ಅದರ ಮೇಲ್ಬದಿಗೆ ಮರಗಳ ನೆರಳಿನಲ್ಲಿ ಕಲ್ಲಿನ ವೇದಿಕೆ ಇದ್ದು 'ದೇವರ ಮನೆ' ಎನ್ನುತ್ತಾರೆ. ಶಿಲಾಸ್ತಂಭ ದೀಪವೂ ಬದಿಗಿದೆ. ಸುಗ್ಗಿ ಮಂಟಪದ ಕಂಬಗಳಲ್ಲಿ ಒಂದು ಗಂಡಂತೆ, ಇನ್ನೊಂದು ಹೆಣ್ಣಂತೆ.[43] ಹೆಣ್ಣು ಕಂಬವು ಆಕಸ್ಮಿಕ ಮುರಿದು ಹೋದರೆ[44] ನೆರೆಯದಿರುವ ಕನ್ಯೆಯನ್ನು ಗಂಡು ಕಂಬದೊಡನೆ ಮದುವೆ ಮಾಡಿ ದೇವರ ಬಸವಿ ಬಿಡುತ್ತಿದ್ದರು. ಈಗ ಇಲ್ಲ. ಈ ಸುಗ್ಗಿಕಟ್ಟೆಯನ್ನು ಚೌಡ್ಲಯ್ಯ–ಮೂಡ್ಲಯ್ಯನ ಕಟ್ಟೆ ಎಂದು ರೂಢಿ ಇದ್ದರೂ ವಾಸ್ತವದಲ್ಲಿ ಪ್ರಸ್ತುತ ಸುಗ್ಗಿಕಟ್ಟೆಯಿಂದ ಸುಮಾರು ಅರ್ಧ ಕಿಲೋಮೀಟರ್ ದೂರದಲ್ಲಿದೆ.

---

42 ಎಂ. ಜಿ. ನಾಗರಾಜ್ : 'ಕೊಡಗಿನ ಕೊಲೆ ಕಲ್ಲುಗಳು', ಹರತಿಸಿರಿ, ಪು. ೨೧೭-೧೯

43 ಚನ್ನಪಟ್ಟಣ ತಾಲ್ಲೂಕು ಬೈರಾಪಟ್ಟಣದ ಪಾರ್ವತಿ ಗುಡಿ ಎದುರಿನ 'ಉಯ್ಯಾಲೆ ಕಂಬ'ದಲ್ಲಿ ಒಂದು ಸ್ತಂಭದಲ್ಲಿ ಗಂಡು, ಇನ್ನೊಂದರಲ್ಲಿ ಹೆಣ್ಣಿನ ಶಿಲ್ಪವಿದೆ.

44 ಮೊದಲಿಗೆ ಸುಗ್ಗಿ ದೇವರ ಸ್ತಂಭಗಳು ಮರದವು ಎಂಬುದರ ಸೂಚನೆ ಇದಾಗಿದೆ.

ಹಾಗೂ ಇದನ್ನು ವೀರಗಲ್ಲುಕಟ್ಟೆ ಅರ್ಥಾತ್ 'ಹರಿ(ರ) ಸೇವೆ ಕಲ್ಲುಗಳ ಕಟ್ಟೆ' ಎಂದೇ ಅನ್ವಯಿಸಿಕೊಳ್ಳುವುದು ಉಚಿತ. ಇದನ್ನು ಚೌಡ್ಲಯ್ಯನ ತೀರ್ಮಾನದ ಕಟ್ಟೆ ರೂಢಿಗೆ ನಂತರ ತಂದುಕೊಂಡಿದ್ದಾರೆ. ಊರಿನ ನ್ಯಾಯ ಪಂಚಾಯಿತಿಯ ತೀರ್ಮಾನ ಒಪ್ಪಿಗೆಯಾಗದಿದ್ದಲ್ಲಿ ಆಪಾದಿತ ಹಾಗೂ ಪ್ರತಿವಾದಿಯು ಕಟ್ಟೆಯ ಮುಂದಿರುವ ಚೌಡ್ಲಯ್ಯನ ಕೆರೆಯಲ್ಲಿ ಸ್ನಾನಮಾಡಿ ಶಿವಲಿಂಗಪೂಜಾ ಶಿಲ್ಪವಿರುವ ಚೌಡ್ಲಯ್ಯ-ಮೂಡ್ಲಯ್ಯ ವೀರಗಲ್ಲುಗಳನ್ನು ಮುಟ್ಟಿ ಪ್ರಮಾಣಮಾಡಿದ ಮೇಲೆ ಇಲ್ಲಿ ಆದ ತೀರ್ಮಾನ ಅಂತಿಮ. ಈ ವೀರಗಲ್ಲುಗಳ ಬಳಿ ಕಾರ್ಯ ಶುಭಕ್ಕೆ ಪ್ರಸಾದ ಕೇಳಲು ಜನರು ಬರುವ ರೂಢಿ ಮಾಡಿಕೊಂಡಿದ್ದಾರೆ.[45]

**ಇತಿಹಾಸ :** ಇತಿಹಾಸದ ದೃಷ್ಟಿಯಿಂದ ಸುಗ್ಗಿ ಕಟ್ಟೆ ಬಳಿ ಇದ್ದ ಶಾಸನ ೧೩ನೇ ಶತಮಾನದ್ದು. ಈಗ ಎತ್ತಿಕೊಂಡು ಹೋಗಿರುವ 'ಎಣ್ಣೆ ಮಜ್ಜನ ಕಲ್ಲು' ಬಹುಶಃ ಕಳೆದು ಹೋಗಿರುವ ಆ ಶಾಸನವಿರಬೇಕು. ಶಾಸನದಲ್ಲಿ ಉಲ್ಲೇಖಿತನಾಗಿರುವ ಹರಿಹರದೇವನು ಚಂಗಾಳ್ವನೆಂದು ಉಹಿಸಲಾಗಿದೆ. ಹಾಗೂ ಇವನ ಕಾಲ ಕ್ರಿ.ಶ. ೧೨೯೫.[46] ಹೆಂಗಸರಿಗೆ, ಅವರ ಹೆಣ್ಣು ಮಕ್ಕಳಿಗೆ, ಹೆಣ್ಣುದಾಸಿಯರ ಮಕ್ಕಳಿಗೆ ಆಸ್ತಿಯ ಹಕ್ಕಿನ ಕ್ರಮವನ್ನು ಇವನು ಜಾರಿಗೆ ಕೊಟ್ಟನೆಂದು ಈ ಶಾಸನದ ಮಾತು.[47] ಶಾಸನದ ೧೨–೧೩ನೇ ಸಾಲಿನಲ್ಲಿ 'ತೊತ್ತಿನ ಮಕ್ಕಳಿಂಗೆ ಸಲುವುದು ಚವುಡ....ಮಾನೆಯೊಳು' ಎಂಬ ಮಾತಿದೆ. ಅಂತಾಗಿ ಈ ಗ್ರಾಮ 'ಚವುಡ ಠಾವು' ಆಗಿತ್ತು ಎನ್ನುವುದು ಮುಂದಿನ ಅಂಶಗಳಿಂದ ವಿದಿತವಾಗುತ್ತದೆ.

ಶಾಸನದಲ್ಲಿ 'ಚವುಡ' ಎಂಬ ಪದದ ಬಳಕೆ ಇದ್ದು ೧೩ನೇ ಶತಮಾನದಲ್ಲಿನ 'ಚವುಡ' ಗ್ರಾಮವೇ ಈಗಿನ ಚೌಡ್ಲು ಗ್ರಾಮವಾಗಿರಬಹುದು.[48] ಚಂಗಾಳ್ವರು ಕ್ರಿ.ಶ. ೧೨೮೦ ರಿಂದ ಕೊಡಗಿನ ಉತ್ತರ ಸೀಮೆಯಾದ ಚೌಡ್ಲು ಪ್ರದೇಶಕ್ಕೆ ಬಂದು ಕ್ರಿ.ಶ. ೧೨೯೯ರವರೆಗೆ ಆಳಿರಲೂ ಬಹುದೆಂದು ಊಹಿಸಲಾಗಿದೆ.[49] ಆದರೆ ಕ್ರಿ.ಶ. ೧೨೪೫ರ ಸಮಯದಲ್ಲಿಯೆ ಕೊಂಗಾಳ್ವರನ್ನು ಚಂಗಾಳ್ವರು ಸೋಲಿಸಿ ಕೊಡಗಿನ ಉತ್ತರ ಸೀಮೆಯನ್ನು ವಶಪಡಿಸಿಕೊಂಡರು.[50] ಅಂದರೆ ೧೩ನೇ ಶತಮಾನದ ಪೂರ್ವಭಾಗದಲ್ಲಿಯೆ 'ಚವುಡ ಠಾವ ಮಾನೆ' ಚಂಗಾಳ್ವರ ವಶದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಇನ್ನು 'ಚವುಡ' ಪದ 'ಚೌಡ್ಲು' ಆದದ್ದು ಹೇಗೆ ? 'ಚವುಡ' ಪದ ವ್ಯಕ್ತಿಗೆ ಅನ್ವಯವೇ ಅಥವಾ ಗ್ರಾಮದ ಹೆಸರೇ ವಿವಿಧ ರೂಪಾಂತರಗಳನ್ನು ಹೊಂದಿ ಪ್ರಸ್ತುತ ರೂಪದಲ್ಲಿ ನಿಂತಿದೆಯೇ ? 'ಚವುಡ'ವೇ ಅಲ್ಲಿ ಜನಿಸಿದ ವ್ಯಕ್ತಿಯ ಮಹತ್ತಿನಿಂದಾಗಿ ಗ್ರಾಮದ ಹೆಸರನ್ನು ಹೊತ್ತು ಚೌಡ್ಲಯ್ಯನಕಟ್ಟೆ ಎನಿಸಿತೆ? 'ಮೂಡ್ಲಯ್ಯನ ಕಟ್ಟೆ' ಎಂದೂ ರೂಢಿಯಲ್ಲಿರುವಾಗ ಗ್ರಾಮಕ್ಕೆ ಅನ್ವಯಿಕವಾಗಿ ಈ ಉಲ್ಲೇಖ ಶಾಸನದಲ್ಲಿ ಯಾವ ರೂಪದಲ್ಲಿಯೂ ಸೂಚಿತವಾಗಲಿಲ್ಲವೇಕೆ ?[50ಅ] ಎಂಬ

---

45 ಚೌಡ್ಲುವಿನ ಶ್ರೀ ಸಿ. ಎಂ. ರಾಮಪ್ಪನವರು ಈ ಮಾಹಿತಿಯನ್ನು ನೀಡಿದರು.

46 ಎ. ಕ., ಸಂಪುಟ ೧ (ಪರಿಷ್ಕೃತ ಆವೃತ್ತಿ), ಚೌಡ್ಲು ೬೦ (೯೫) ; ಅದೇ, ವಂಶಾನುಕ್ರಮ, ಪುಟ iii

47 ರಾಜಪರಿವಾರದಲ್ಲಿದ್ದ ಎಲ್ಲ ಬಗೆಯ ಹೆಂಗಳೆಯರ ವರ್ಗವನ್ನು ಬಹುಶಃ ಸೂಚಿಸುವಂತಿದೆ. ಈ ಹಕ್ಕು ಪೂರ್ವ ಸಂಪ್ರದಾಯದಂತೆ (?) ಚವುಡ ಮಾನೆಯೊಳು ನಡೆಯುತ್ತದೆ ಎಂಬುದು ಶಾಸನದಿಂದ ಸ್ಪಷ್ಟವಿದೆ. ಅಲ್ಲದೆ ಚಂಗಾಳ್ವರ ಸಂಬಂಧೀ ಪರಿವಾರವೂ ಇದ್ದ ಸೂಚನೆ ಕಾಣುತ್ತದೆ. 'ಮಾನೆ' ಆಗಿದ್ದುದರ ಕಾರಣ ಚಂಗಾಳ್ವರ ಆಶ್ರಿತರಿಗೆ ಉಂಬಳಿಯೂ ಇಲ್ಲಿ ಇದ್ದಿರಬೇಕು.

48–49 ಶ್ರೀ ಚಂದ್ರಶೇಖರ ಧೂಲೇಕರ್ : ಕನ್ನಡಪ್ರಭ, ಸಂಚಿಕೆ ೪-೫-೧೯೮೬

50 Coorg District Gazetteer, 1965, p. 48

50-ಅ ಈ ಕಟ್ಟೆಯ ವೀರಗಲ್ಲುಗಳ ಸಮೂಹದಲ್ಲಿ 'ಮೂಡ್ಲಯ್ಯ' ಎಂಬ ವೀರ ಒಂದು ಕಾಲದಲ್ಲಿದ್ದು ಮಡಿದ ಮೇಲೆ ಅವನ ವೀರಗಲ್ಲನ್ನಿಟ್ಟು, ಕಟ್ಟೆಗೆ ಅವನ ಹೆಸರನ್ನು ಜೋಡಿಸಿರಬಹುದು ಅಥವಾ ಚೌಡಯ್ಯ, ಮೂಡ್ಲಯ್ಯ ಸೋದರರಾಗಿದ್ದು ಊರಿನ ವೀರ ಇತಿಹಾಸಕ್ಕೆ ಕಾರಣರಿರಬಹುದು.

ಅನುಮಾನಗಳ ಜೊತೆಗೆ, ಶಾಸನದಲ್ಲಿ ಉಲ್ಲೇಖ ಮುಖ್ಯರೆನಿಸಿರುವ ಗೌಡ ಮುಖ್ಯಸ್ಥರ ಹೆಸರುಗಳ ನಡುವೆ 'ಚವುಡ' ಯಾರು ಎಂಬ ಸೂಚನೆ ಲಭ್ಯವಿದೆಯೆ ? ಎಂಬ ಪ್ರಶ್ನೆಗಳಿಗೆ ಉತ್ತರ ಬೇಕಾಗುತ್ತದೆ. ಚಂಗಾಳ್ವರು ಕ್ರಿ.ಶ. ೧೨೯೯ರ ನಂತರ ಈ ಪ್ರದೇಶವನ್ನು ತಮ್ಮ ಆಶ್ರಯಕ್ಕಾಗಿ ಆರಿಸಿಕೊಂಡರೆ ? ಹಾಗಿದ್ದರೆ ಕಾರಣಗಳ ಬಗ್ಗೆಯೂ ಆಳವಾದ ವಿವೇಚನೆ ಅಗತ್ಯವಾಗುತ್ತದೆ.

ಶಾಸನದ ೧೫ನೇ ಸಾಲಿನಲ್ಲಿ ಬರುವ 'ಕುಂದೂರ ಠಾವ ಮಾನೆಯೊಳು' ಎಂಬ ಸಾಲಿನ ಅರ್ಥ, ಭಾವಗಳನ್ನು ಹಿಡಿದು ಹೊರಟರೆ ಸಮಾಂತರವಾಗಿ 'ಚವುಡ (ಠಾವ) ಮಾನೆಯೊಳು' ಅಥವಾ ಚವ[ಡೂ][ರಠಾವ] ಎಂದು ಅಳಿಸಿ ಹೋಗಿರುವ ಅಕ್ಷರಗಳನ್ನು ಓದಿಕೊಂಡರೆ ಚವಡೂರು>ಚೌಡ್ಲೂರು>ಚೌಡೂರು>ಚೌಡೂಲು> ಚೌಡಲು>ಚೌಡ್ಲು ಎಂಬ ನಿಷ್ಪತ್ತಿ ಸಹಜ[51] ಹಾಗೂ ಬಳಕೆಯಾಗಿರುವ ಹಿನ್ನೆಲೆಯಲ್ಲಿ ಚೌಡ್ಲಯ್ಯ-ಮೂಡ್ಲಯ್ಯ ಅವರುಗಳ ಜನಪದ ಕತೆಯೂ ಕೂಡಿಕೊಂಡಿರಬೇಕು. ಊರ ಮುಂದಿರುವ ವೀರಗಲ್ಲುಗಳಲ್ಲಿ ಮೇಲಿನ ಎರಡು ಪ್ರಾಚೀನ (೧೧-೧೨ನೇ ಶತಮಾನ ?) ವೀರಗಲ್ಲುಗಳಲ್ಲಿ ಬಲಕ್ಕಿರುವುದನ್ನು ಚೌಡ್ಲಯ್ಯನಿಗೆ, ಎಡಕ್ಕಿರುವುದನ್ನು ಮೂಡ್ಲಯ್ಯನಿಗೆ ಆರೋಪಿಸಿ ದ್ವೈವಾರ್ಷಿಕ ಪೂಜೆ ಸಲ್ಲಿಸುತ್ತಾರೆ. ಸುಗ್ಗಿಕಟ್ಟೆ ಬಳಿಯ ಮಂಟಪದ ನೆಲೆ ಅಗ್ರ ಉಂಬಳಿಯ ಬೀಡಾಗಿ ಅನ್ವರ್ಥಕವಾಗಿ ಆ ಹೆಸರನ್ನು ಈ ಗ್ರಾಮ ಪಡೆದಿದ್ದುದರ ಸೂಚನೆಯನ್ನೂ ಶಾಸನ ನೀಡುತ್ತದೆ.[52] ಅಲ್ಲದೆ 'ಉಕ್ಕಡ' ಶಬ್ದಾರ್ಥದ ಸಂವಾದಿ ರೂಪ 'ಚವುಡ' ಆಗಿದ್ದರೆ ಹೆಚ್ಚಿನ ಪರಾಮರ್ಶೆ ಅಗತ್ಯವಾಗುತ್ತದೆ.

೧೭೯೬ರ ಶಾಸನದಲ್ಲಿ 'ಚವುಗ್ರಾಮದವರ ಮುಂದಿಟ್ಟು ಲಿಂಗಮುದ್ರೆ ಶಿಲಾ ಪ್ರತಿಷ್ಠೆಯನ್ನು ಮಾಡಿಸಿ ಕೊಟ್ಟು' ಎಂಬ ಸಾಲು, ಹೆಗ್ಗಡೆಹಳ್ಳಿಮಠದ ೧೭೨೧ರ ದಾಖಲೆಯೊಂದು ೧೭೦೮ರ ಕೆಳದಿ ಬಸಪ್ಪ ನಾಯಕ, ಶಿವಪ್ಪೊಡೆಯರಿಗೆ ಬರೆದು ಕೊಟ್ಟಿರುವ 'ಚವುಗ್ರಾಮದವರ ಕರೆಸಿಕೊಂಡು ಗಡಿ ಚಚ್ಚಾರೆ ಬಾರದಂತೆ ನಮೂದಿಸಿ' ಎಂಬಿರುವ ಸಾಲುಗಳಲ್ಲಿ[53] ಬರುವ 'ಚವುಗ್ರಾಮ' ಚೌಡ್ಲುವಿಗೆ ಆ ಕಾಲದ ಶಬ್ದರೂಪವಾಗಿ

---

51 ರ ಲ ಗಳು ದ್ರಾವಿಡ-ದ್ರಾವಿಡೇತರ ಭಾಷೆಗಳಲ್ಲಿ ಪರಸ್ಪರ ವ್ಯತ್ಯಾಸಗೊಳ್ಳುವುದು ಕಂಡುಬರುತ್ತದೆ. ಇವುಗಳಲ್ಲಿ ವ್ಯತ್ಯಾಸ ಹೊಂದಿದ್ದು ಯಾವುದು ? ಮೂಲದ್ದು ಯಾವುದು ? ಎಂದು ಹೇಳುವುದು ಅಸಾಧ್ಯವಾಗಿದೆ....'In the Dravidian family of languages this interchange of r and l is one of very common occurance. Sometimes 'l' is corrupted into 'r' ; but in a large number of cases 'r' appears to be the original and 'l' corruption' (ಡಾ॥ ಎಂ. ಬಿ. ನೇಗಿನಹಾಳ, ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ, ಧಾರವಾಡ, ೧೯೮೨, ಪು. ೬೧) ಗಮನಿಸಬೇಕು. ಇದಲ್ಲದೆ ಪದಮಧ್ಯ ಅಕ್ಷರದ ದೀರ್ಘಸ್ವರವು ಹ್ರಸ್ವೀಕರಣಗೊಳ್ಳುವುದು ಕನ್ನಡದ ವಿಶೇಷ ಬಗೆ (ಡಾ॥ ಸಂಗಮೇಶ ಸವದತ್ತಿಮಠ : ಕನ್ನಡಭಾಷಾ ವ್ಯಾಸಂಗ, ಕಲ್ಬುರ್ಗಿ, ೧೯೭೯ ಪು. ೧೬೪).

ಈ ಎರಡರ ಹಿನ್ನೆಲೆಯಲ್ಲಿ 'ಸೊಡ್ಲೂರು' ಎಂಬ ಶಬ್ದ 'ಸೊಡ್ಲು' ಎಂದು ಪ್ರಚಲಿತವಾಗಿ ಕೊಡಗಿನಲ್ಲಿ ಬಳಕೆಯಾಗಿರುವುದಕ್ಕೆ ತಾಳೆ ಒದಗುತ್ತದೆ. ದಕ್ಷಿಣ ಕೊಡಗಿನ ಪೊನ್ನಂಪೇಟೆ ಕಾನೂರು ಹಾದಿಯ ಗ್ರಾಮ : ಚೆಕ್ಕೆಸೊಡ್ಲೂರು>ಚೆಕ್ಕೆಸೊಡಲು>ಚೆಕ್ಕೆಸೊಡ್ಲು ಎಂದು ಜನಬಳಕೆಯಾಗಿದೆ. 'ರ'ಕಾರಕ್ಕೆ 'ಲ'ಕಾರ ಆಳವಡಿಕೆಯಾಗಿರುವ ಅಂಶವೂ ಗೋಚರಿಸುತ್ತದೆ. (ಚೆಕ್ಕ, ಚೆಕ್ಕೆ ಎಂದರೆ 'ಇಡು' ಎಂಬರ್ಥ ಕೊಡವ ಭಾಷೆಯಲ್ಲಿದೆ. ಸೊಡ್ಲು ಇಡು ಎಂದೇ ಪೂರ್ಣಾರ್ಥ). 'ಚೌಡ್ಲು' ಎಂಬ ಶಬ್ದಕ್ಕೂ ಮೇಲಿನ ಅಂಶಗಳು ಅನ್ವಯವಾಗಿರುವಂತಿದೆ. ಚೌಡ್ಲುವಿನ 'ಹೊನ್ನಾರು' ಜನಪದ ಗೀತೆಯಲ್ಲಿ 'ಚೌಡ್ಲೂರು' ಎಂದೂ ಬಳಕೆ ಇದೆ.

52 ನಾಲ್ಕು ಹಾದಿಯ ಅಥವಾ ನಾಲ್ಕು ಮೂಲೆಗಳ ಹಸೆಯ ನೆಲೆ ಎನ್ನುವ ಅರ್ಥವನ್ನು ಗಣಿಸಿದರೆ ಸುಗ್ಗಿಕಟ್ಟೆಯ ಅರ್ಥಕ್ಕೆ, ಆಚಾರಕ್ಕೆ, ಸ್ವರೂಪಕ್ಕೆ ಸಮನ್ವಯವಾಗುತ್ತದೆ.

53 ದಾಖಲೆಯ ಈ ಅಂಶವನ್ನು ನೀಡಿ ಸಹಕರಿಸಿದವರು ಪೂಜ್ಯಶ್ರೀ॥ ಷ॥ ಬ್ರ॥ ಶಿವಶಂಕರ ಶಿವಾಚಾರ್ಯರು, ಹೆಗ್ಗಡಹಳ್ಳಿ ಮಠಾಧ್ಯಕ್ಷರು.

ಅನ್ವಯವಾಗಿದ್ದೆಂದು ತಿಳಿಯುವುದಾದರೆ ಈ ಗ್ರಾಮವು ಪ್ರಾಚೀನ ಪ್ರಸಿದ್ಧವಾಗಿ ವೀರಶೈವ ಆಚಾರಿಗಳಿಗೂ ಮುಖ್ಯ ನೆಲೆ ಆಗಿತ್ತು ಎನ್ನುವುದಾಗುತ್ತದೆ. (ಹೊನ್ನಾರುವಿನಲ್ಲಿ ಮೊದಲಿಗೆ ಈ ಮನೆತನದ ಗಂಡು 'ವರ' ಆಗುತ್ತಿದ್ದ).

ಕ್ರಿ.ಶ. ೧೪೩೮ರ ಮೇಲಿನ ಶಾಸನದಲ್ಲಿ ಬರುವ ಕುಂದೂರತಾವ ಮಾನೆ ಬಹುಶಃ ಚೌಡ್ಲುವಿನ ಹಿಂಬದಿಯಲ್ಲಿರುವ ಕಲಕುಂದೂರಿಗೆ ಅನ್ವಯವೆಂದು ತೋರುತ್ತದೆ. ಚೌಡ್ಲುಬೆಟ್ಟದ ಹಿನ್ನೆಲೆಯಲ್ಲಿ ಕಲಕುಂದೂರು ಬೆಟ್ಟವಿದೆ. ಅಂದರೆ ಕುಂದೂರು ಚೆಂಗಾಳ್ವರ 'ತಾವ ಮಾನೆ' ಗಡಿಠಾಣ್ಯವಾಗಿದ್ದ ಅರ್ಥದಲ್ಲಿ ಚವುಡು ಗ್ರಾಮ ಕೂಡ ಆಗಿತ್ತು ಎನ್ನಬೇಕು. ಈ 'ಕುಂದೂರು' ಯಡೂರು ಶಾಂತಳ್ಳಿ ನಂತರ ಬರುವ ಈಗಿನ 'ಕೂದಳ್ಳಿ'ಗೆ ಅನ್ವಯವಾಗಿಸಿದರೆ ಸಮರ್ಥನೀಯವಾಗಲಾರದು !

ಕ್ರಿ.ಶ. ೧೨೪೮ರ ಸುಮಾರಿನಲ್ಲಿ ಸೋಮದೇವ ಬೊಪ್ಪದೇವ ಚಂಗಾಳ್ವರ ಕಾಲದಲ್ಲಿ, ಚಂಗಾಳ್ವರು ಕಿಗ್ಗಟ್ಟುನಾಡಿನ ಪಾಲ್ಪರೆಯಿಂದ ಸಿದ್ದಾಪುರದ ಬಳಿಯ ಕೊಡಗು ಶ್ರೀರಂಗಪಟ್ಟಣಕ್ಕೆ ತಮ್ಮ ರಾಜಧಾನಿಯನ್ನು ಬದಲಾಯಿಸಿಕೊಂಡರು. ಆ ಸಮಯದಲ್ಲಿಯೆ ಕೊಂಗಾಳ್ವರನ್ನು ಸೋಲಿಸಿ ಕೊಡಗಿನ ಉತ್ತರಭಾಗವನ್ನು ತಮ್ಮ ವಶಮಾಡಿಕೊಂಡರು.[54] ಕ್ರಿ.ಶ. ೧೨೨೦ರ ಸಮಯದಲ್ಲಿಯೆ ಉತ್ತರಕೊಡಗಿನ ಭಾಗಗಳು ಚಂಗಾಳ್ವರ ವಶದಲ್ಲಿದ್ದುವು ಎಂಬುದೂ ಶಾಸನೋಕ್ತ.[55] ಅಂದರೆ ಪಾಲ್ಪರೆಯಲ್ಲಿದ್ದಾಗಲೆ ಅಥವಾ ಕೊಡಗು ಶ್ರೀರಂಗಪಟ್ಟಣದತ್ತ ಬರುವಾಗಲೆ ಚಂಗಾಳ್ವರು ಕೊಡಗಿನ ದಕ್ಷಿಣಭಾಗದ ಕುಂತೂರು, ಕುಟ್ಟ, ನಾಗರಹೊಳೆ ಮುಂತಾದ ಕಡೆ ತಮ್ಮ ಪ್ರತಿನಿಧಿಗಳನ್ನು ಗಡಿಠಾಣ್ಯದ ಮುಖ್ಯಸ್ಥರಾಗಿ ಕಳುಹಿಸಿರುವಂತೆ ಕೊಡಗಿನ ಉತ್ತರಭಾಗದ ನೆಲೆಗಳಾದ ಕುಂದೂರು, ಚೌಡ್ಲು, ಹಾಲೇರಿ, ಗರ್ವಾಲೆ, ಯಡೂರು (ಹಡಿಯಜಿ) ಗ್ರಾಮಗಳಿಗೂ ತಾವಮಾನೆಗಳ ಸ್ಥಾಪನೆಯ ಕಾರಣವಾಗಿ ಪ್ರತಿನಿಧಿಗಳನ್ನು ಕಳುಹಿಸಿ ಆಳ್ವಿಕೆಯನ್ನು ನಡೆಸಿಕೊಂಡು ಹೋಗಿರಬೇಕು. ಆದರೆ ಚಂಗಾಳ್ವರೇ ಈ ಗಡಿಗಳಲ್ಲಿ ಬಂದು ಇದ್ದು ಆಳ್ವಿಕೆ ನಡೆಸಿದರೆನ್ನುವುದಕ್ಕೆ ಸಮರ್ಥನೆ ಇಲ್ಲ ಅಥವಾ ಸಾಲದು. ಕ್ರಿ. ಶ. ೧೪೪೮ರ ನಂತರ ಅಂದರೆ ರಾಜಧಾನಿಯನ್ನಾಗಿ ಕೊಡಗು ಶ್ರೀರಂಗ ಪಟ್ಟಣವನ್ನು ಸ್ಥಾಪಿಸಿದ ಸುಮಾರು ೫೪ ವರ್ಷಗಳ ನಂತರವೆ ಚೌಡ್ಲುವಿಗೆ ಬಂದರು ಎನ್ನುವುದೂ ಅಸೂಕ್ತವಾಗುತ್ತದೆ. ಈ ಮೊದಲೆ ಚೌಡ್ಲು, ಕುಂದೂರು ಅವರ ಅಧೀನದಲ್ಲಿತ್ತು ಎಂಬುದು ಶಾಸನಗಳಿಂದ ವಿದಿತ. ಕ್ರಿ.ಶ. ೧೩೦೦ರ ನಂತರ ಒಂದು ಶತಮಾನ ಕಾಲ ಅವರ ರಾಜಕೀಯ ಜೀವನದಲ್ಲಿ ಬೀಳು ಕಂಡರೂ, ಹೆಸರೇ ಕೇಳಿಬರದು ಎಂದರೂ ಕ್ರಿ.ಶ. ೧೫೦೨ಕ್ಕೂ ಮುಂಚಿನ ಚಂಗಾಳ್ವರಸರಾದ ನಾಗರಾಜ, ರಂಗರಾಜ ಮತ್ತು ಪೆರಿಯಣ್ಣರಾಜರು ಕೊಡಗು ಶ್ರೀರಂಗಪಟ್ಟಣವನ್ನೇ ಆಳಿದ್ದುದರಿಂದ[55-ಅ] ಚಂಗಾಳ್ವರು ತಮ್ಮ ಅಸ್ತಿತ್ವವನ್ನು ಅಳಿಸಿಕೊಳ್ಳಲಿಲ್ಲವೆಂಬುದು, ೧೫ನೇ ಶತಮಾನದ ಆರಂಭಕ್ಕೂ ಮುಂಚೆ ಚಂಗಾಳ್ವರು ಕೊಡಗಿನಲ್ಲಿಯೇ ಮತ್ತೆ ಉದಿಸಿದರೆಂಬುದು ಸ್ಪಷ್ಟವಾಗುತ್ತದೆ, ಕ್ರಿ.ಶ. ೧೫೦೨ರ ನಂತರ ಕೊಡಗು ಶ್ರೀರಂಗಪಟ್ಟಣದ ನೆರೆಯ ಕಾವೇರಿದಂಡೆಯ ಮೇಲಿನ ನಂಜರಾಜಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು, 'ಚೌಡ್ಲು'ವಿಗಿಂತ ಕಾವೇರಿದಂಡೆ ಹಾಗೂ ಮೊದಲಿನ ರಾಜಧಾನಿಗೆ ಅಂಟಿಕೊಂಡ ದುರ್ಗಮ ಅರಣ್ಯವೇ ನಂಜರಾಯಪಟ್ಟಣಕ್ಕೆ ಆಯಕಟ್ಟು ಹಾಗೂ ರಕ್ಷಣೆಯನ್ನು ಒದಗಿಸಬಲ್ಲುದು ಎಂಬ ಅಂಶ, ಪೂರ್ವ ಪರಿಚಿತ ವ್ಯವಹಾರ ಸೌಲಭ್ಯಗಳು ಪರಂಪರೆಯಿಂದ ಒದಗಿದ್ದುದು ರಾಜಧಾನಿಯನ್ನಾಗಿ ಅದನ್ನು ಆರಿಸಿಕೊಳ್ಳಲು ಕಾರಣವಾಗಿದ್ದಿರಬಹುದು. ಚೌಡ್ಲು ಬೆಟ್ಟದ ಕೋಟೆಗಿಂತ ಹಾಗೆ ನೋಡಿದರೆ ಗರ್ವಾಲೆ ಕೋಟೆ ಬೆಟ್ಟವೇ ಆ ಸುತ್ತಲ ಸರಹದ್ದಿನಲ್ಲಿ ಎತ್ತರ ಹಾಗು

---

54 Coorg District Gazetteer, 1965, p. 48

55 ಎ. ಕ., ಸಂಪುಟ ೧ (ಪರಿಷ್ಕೃತ), ಕೊಡಗು ೩೬, ಪೆರೂರು ಶಾಸನ; ಡಿ. ಎನ್. ಕೃಷ್ಣಯ್ಯನವರು ಪೆರೂರು ಶಾಸನದಲ್ಲಿ ಅಳಿಸಿಹೋಗಿರುವ 'ಕಾಲ'ವನ್ನು ತಮ್ಮ ಕೃತಿ 'ಕೊಡಗಿನ ಇತಿಹಾಸ' ಪು. ೫೦ರಲ್ಲಿ ಕ್ರಿ.ಶ. ೧೨೭೦ ಎಂದು ಗುರುತಿಸಿದ್ದಾರೆ.

55-ಅ ಡಿ. ಎನ್. ಕೃಷ್ಣಯ್ಯ : ಕೊಡಗಿನ ಇತಿಹಾಸ, ಪು. ೬೨

ಆಯಕಟ್ಟಿನದು. ಆದರೆ ಆ ನೆಲೆಗಳಿಂದ ಸುಮಾರು ೨೫ ಮೈಲಿಗಳಿಗೂ ಮೀರಿದ ಕೊಡಗು ಶ್ರೀರಂಗಪಟ್ಟಣ–ನಂಜರಾಯಪಟ್ಟಣ ನೆಲೆಗಳೇ ವ್ಯವಹಾರ ಹಾಗೂ ರಾಜಧಾನಿಯ ಅವಕಾಶಗಳಿಗೆ ಸೂಕ್ತವಾಗಿದ್ದು ಆರಿಸಿ ಕೊಂಡಿರಬೇಕು. ಹೀಗೆಲ್ಲ ಇದ್ದರೂ 'ಚೌಡ್ಲು' ಗಡಿಠಾಣ್ಯವಾಗಿ ಪ್ರಮುಖವಾಗಿತ್ತು ಎಂಬುದನ್ನು ಅಲ್ಲಗಳೆಯುವಂತಿಲ್ಲ. ಚೌಡ್ಲುಬೆಟ್ಟದ ಕೋಟೆಯ ತುದಿಯಲ್ಲಿ 'ನಿಧಿದಿಬ್ಬ'ವಿತ್ತು ಎಂಬ ಪ್ರತೀತಿಯೂ ಇದೆ. ಅಲ್ಲಿ ಮೂರು ಕೋಟೆಗಳ ಅವಶೇಷಗಳು ಕಾಣಬರುತ್ತವೆ. ಬಹುಶಃ ಇಲ್ಲಿದ್ದ ನಿಧಿ ಚಂಗಾಳ್ವರ ಏಳು-ಬೀಳುಗಳನ್ನು ಸುಮಾರು ೨೦೦ ವರುಷಗಳಲ್ಲಿ ಕಂಡು ಇದ್ದ ಕೊಡಗು ಶ್ರೀರಂಗ ಪಟ್ಟಣದ ಮರು ಉತ್ಥಾನಕ್ಕೆ ನಂಜರಾಯಪಟ್ಟಣದ ಉತ್ಥಾನಕ್ಕೆ ಸಹಕಾರಿ ಆಗಿದ್ದರೆ ಚಂಗಾಳ್ವರಿಗೆ ಅದು ಚೌಡ್ಲುವಿನ ಸಾರ್ಥಕ ಕೊಡಗೆ ಆಗುತ್ತದೆ. ಮತ್ತು 'ಚವುಡ' ಈ ಮುನ್ನ ಕೊಂಗಾಳ್ವರಿಂದ ಉತ್ತರ ಕೊಡಗಿನ ಸೀಮೆಗಳನ್ನು ಚಂಗಾಳ್ವರು ಗೆದ್ದುಕೊಂಡಾಗ ಅವರ ಪ್ರತಿನಿಧಿಯಾಗಿ ನೇಮಕವಾಗಿದ್ದ ವ್ಯಕ್ತಿ ಆಗಿದ್ದಿರಬಹುದು,

೧೪-೧೫ನೇ ಶತಮಾನದಲ್ಲಿ ಸ್ವಲ್ಪಕಾಲ ಚೌಡ್ಲು ನೆಲೆಯಲ್ಲಿ ಚಂಗಾಳ್ವರು ಇದ್ದರು ಎನ್ನುವುದಾದರೂ ಆ ಕಾಲದ ಅವರ ಒಂದು ಶಾಸನವೂ ಅಲ್ಲಿ ಕಾಣದು; ಕನಿಷ್ಠ ದಾನಶಾಸನಗಳೂ ಸದ್ಯಕ್ಕಂತೂ ಅವರ ಪರವಾಗಿ ಅಲ್ಲಿ ಕಾಣದು. ಕ್ರಿ.ಶ. ೧೨೫೫ ಮತ್ತು ೧೨೮೫ರ ಸಮಯದಲ್ಲಿ ಹಾಗೂ ಮುನ್ನವೂ ಕೊಡಗಿನ ಉತ್ತರಭಾಗದಲ್ಲಿ ಹೊಯ್ಸಳರು ಆಳಿದ್ದುಂಟು.[56] ಆದರೆ ಚೌಡ್ಲುವೂ ಅವರ ಅಧೀನದಲ್ಲಿತ್ತು ಎಂಬುದು ಸ್ಪಷ್ಟವಿಲ್ಲ.

ಕೊಂಗಾಳ್ವರು ಹಾಗೂ ಚಂಗಾಳ್ವರು ಶೈವ ಅಥವಾ ವೀರಶೈವ ಧರ್ಮದ ಪ್ರಭಾವಕ್ಕೆ ೧೧ನೇ ಶತಮಾನದಲ್ಲಿಯೆ ಒಳಗಾಗಿದ್ದರು ಅಥವಾ ಅವಲಂಬಿಸಿದ್ದರು ಎನ್ನಲು ಬಳುಗುಂದದಲ್ಲಿ ದೊರೆತ ೧೧ನೇ ಶತಮಾನದ (ಲಿಪಿಯ ಲಕ್ಷಣ ಅನುಸರಿಸಿ) ಹೊಸ ಶಾಸನವು ಪರೋಕ್ಷ ದಾಖಲೆಯನ್ನು ಒದಗಿಸುತ್ತದೆ.[57] ಚೌಡ್ಲಯ್ಯನಕಲ್ಲು ಎಂದು ಆರೋಪಿತವಾಗಿರುವ ವೀರಗಲ್ಲಿನ ಮೇಲಿರುವ ಶಾಸನ (ಅಪ್ರಕಟಿತ) ಹಾಗೂ ಶಿವಧರ್ಮ ಪ್ರಭಾವಿತ ಕೈಲಾಸದ ಶಿಲ್ಪಗಳನ್ನು ಗಮನಿಸಿದರೆ, ಅಸ್ಪಷ್ಟ ಹಾಗೂ

56 ಡಿ. ಎನ್. ಕೃಷ್ಣಯ್ಯ (ಸಂ.) : ಕೊಡಗಿನ ರಾಜೇಂದ್ರನಾಮೆ, ೧೯೪೯, ಪೀಠಿಕೆ, ಪು. xii; ಇದಲ್ಲದೆ ಕೊಂಗಾಳ್ವರೂ ೧೦ನೇ ಶತಮಾನದಲ್ಲಿ ವೀರಶೈವ ಧರ್ಮವನ್ನವಲಂಬಿಸಿರಬಹುದು (ಡಿ. ಎನ್. ಕೃಷ್ಣಯ್ಯ : ಕೊಡಗಿನ ಇತಿಹಾಸ, ಪು. ೪೪) ಎಂಬ ಮಾತಿಗೆ ಇತ್ತೀಚೆಗೆ ದೊರೆತ ಹೊಸ ಶಾಸನಗಳ ಮಾಹಿತಿ ಹಾಗೂ ಶಿಲ್ಪಗಳು ಪರೋಕ್ಷ ಪುರಾವೆ ನೀಡುವಂತಿದೆ. ಚೌಡ್ಲುವಿನ ಪರಿಸೇವೆಕಲ್ಲುಗಳ ಸಮೂಹದಲ್ಲಿರುವ 'ಚೌಡ್ಲಯ್ಯನ' ಕಲ್ಲಿನ ವೀರಶಾಸನ ಹಾಗೂ 'ಮೂಡ್ಲಯ್ಯನ'ಕಲ್ಲಿನ ಮೇಲಿರುವ ಅಂತಿಮ ಹಂತದ ಕೈಲಾಸಾರೋಹಣ ಹಾಗೂ ಶಿವಲಿಂಗ ಪೂಜಾಶಿಲ್ಪಗಳು ಇದಕ್ಕೆ ಪೂರಕವಾಗಿವೆ. ಅದು ಶೈವಧರ್ಮದ ಪ್ರಭಾವವೇ ಆಗಿರಲೂಬಹುದು. ಸುಗ್ಗಿಕಟ್ಟೆ ಹಾಗೂ 'ಪರಿಸೇವೆ ಕಲ್ಲು'ಗಳ ನಡುವೆ ಚೌಡ್ಲುಬೆಟ್ಟದ ಬುಡದಲ್ಲಿ ಮಹದೇಶ್ವರನ ಪ್ರಾಚೀನ ದೇಗುಲವಿದೆ. 'ಶಕ್ತಿ' ಪಂಥದ ಶ್ರೀಚಕ್ರ ಸಂಕೇತವು ಇಲ್ಲಿದೆ. ಬೆಟ್ಟದ ಒಂದು ಭಾಗದಲ್ಲಿ 'ಚೌಡಿ'ಗೆ ಬಲಿಯ ನೆಲೆಯೂ ಇದೆ.

57 ಎಂ. ಜಿ. ನಾಗರಾಜ್ : 'ಕೊಡಗಿನ ಕೊಲೆ ಕಲ್ಲುಗಳು', ಹರತಿಸಿರಿ, ಪು. ೭೨೧; ಇಲ್ಲಿ ಹೇಳಿರುವ ಹೊಸ ಶಾಸನದ ಪಾಠದಲ್ಲಿ '....ಗೋರುಣಭ[ಪ್ರ] ಗುರೋಪಿ, ಮಾರತೀಬಿ ನಿಂಣಗಣ ಗೋಪತಿಕೋಕ್ಷ' ಎಂಬ ಸಾಲಿದೆ. ಪೂರ್ವಾಶ್ರಮದಲ್ಲಿ 'ಗೋಪತಿ' ಎನಿಸಿದ್ದ ಶ್ರೀಶೈಲ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರು ಈ ಶಾಸನೋಕ್ತ ಗೋಪತಿಯೆ ಆಗಿದ್ದರೆ, ಭಾರತದ ದಕ್ಷಿಣಭಾಗದ ಅವರ ಸಂಚಾರದಲ್ಲಿ ಚೋಳರನ್ನೂ ವೀರಶೈವ ದೀಕ್ಷಿತರನ್ನಾಗಿ ಮಾಡಿದಂತೆ ಆ ಪ್ರಭಾವಕ್ಕೆ ಕೊಂಗಾಳ್ವರು, ಚಂಗಾಳ್ವರು ಒಳಗಾದುದರ ಪುರಾವೆ ಇದೆಂದು ತೋರುತ್ತದೆ. ಕೊಡಗಿನ ಆಳ್ವಿಕೆಯನ್ನು ದೀರ್ಘಕಾಲ ಮಾಡಿದ ಚೆಂಗಾಳ್ವರ ಪಾಲಿಗಂತು ಇದು ಸತ್ಯ.

ಆದೇ ಮೈಸೂರು ಜಿಲ್ಲೆಯ ಭಾಗಗಳಲ್ಲಿದ್ದ ಚಂಗಾಳ್ವರ ಬಗ್ಗೆ ಈ ಮಾತು ಹೇಳಲು ಕಷ್ಟ. ಕಾರಣ ೧೨ ಅಥವಾ ೧೩ನೇ ಶತಮಾನದ ಈ ಭಾಗಗಳ ಚಂಗಾಳ್ವರು ಶ್ರವಣಗುಡ್ಡದ ೧೮ ಅಡಿ ಎತ್ತರದ ಬಾಹುಬಲಿಯನ್ನು ಪ್ರತಿಷ್ಠಾಪಿಸಿರುವಂತಿದೆ. (ಹಂ. ಪ. ನಾಗರಾಜಯ್ಯ : ಗೊಮ್ಮಟ ಬಾಹುಬಲಿ, ಬೆಂಗಳೂರು, ೧೯೮೧, ಪು. ೩೮). ಆದರೆ ಅವರೆಲ್ಲ ಜೈನಧರ್ಮದಲ್ಲಿಯೆ ಉಳಿದಿದ್ದರು ಎಂದಿದ್ದಾರೆ.

ಸವೆದ ಕೆಲವು ಲಿಪಿಯ ಕಾರಣ ಇತಿಹಾಸದ ಪ್ರತಿಕೂಲತೆ–ಅನುಕೂಲತೆಗಳ ನಡುವೆ ಆ ಕುರಿತ ಕಾಲ ನಿರ್ಣಯ, ನಿರ್ಧಾರ ತೂಗಾಡಿದರೂ ವಿವೇಚನೆ ಶಾಸನ ಶಿಲ್ಪದ ಸಂಕೇತದ ಪರವಾಗಿಯೆ ನಿಲ್ಲುತ್ತದೆ ಎನ್ನಬೇಕು.

ಕ್ರಿ. ಶ. ೧೦೨೬ರ ಸಮಯದಲ್ಲಿ ಹೊಯ್ಸಳ ನೃಪಕಾಮನನ್ನು ಮನ್ನಿಯಲ್ಲಿ ಕೊಡಗು ಭಾಗಗಳನ್ನು ಆಳುತ್ತಿದ್ದ ರಾಜೇಂದ್ರಚೋಳ ಪೃಥ್ವಿ ಕೊಂಗಾಳ್ವನು ಸೋಲಿಸಿದ್ದು ಹೊನ್ನೂರು ೭೬ ಶಾಸನದಿಂದ ವ್ಯಕ್ತವಾಗುತ್ತದೆ.[58] ಕುಸುಬೂರಿನಲ್ಲಿ ದೊರೆತ ಹೊಸಶಾಸನದ ರೀತ್ಯ ಬಹುಶಃ ಈ ಕೊಂಗಾಳ್ವನ ಮೊಮ್ಮಗನಿರಬಹುದಾದ 'ಕೋಳಾಹಳಕೊಂಗ'ನೆನಿಸಿದ ವಿಗಚಾಬ್ಬಿ ಚೋಳ ಕೊಂಗಾಳ್ವದೇವನು,ಸಳ, ಕೋಬಳ, ಸೇನ, ಮಲೆಯಾಳದ ಚೇರ(ಇಮದ್ದೇಯರಸ ಕುಂಞ?)ರನ್ನು ಸೋಲಿಸಿದ ಸಂಗತಿ ಕಾಣಬರುತ್ತದೆ.[59] ಈ ಶಾಸನದ ಗೋವು–ಕರುವಿನ ಶಿಲ್ಪ ತುರುಗೋಳ ಸೂಚಿಸದೆ ಸುರಲೋಕದ ಕಾಮಧೇನು ಸೂಚಿತ ಬಸದಿಯ ಕವಿಲೆ–ಕರು ಶಿಲ್ಪ ಎನ್ನುವುದಾದರೆ, ಕೊಂಗಾಳ್ವರು ಆ ಹೊತ್ತಿಗೂ ಜೈನರೆ ಆಗಿದ್ದರು ಎಂಬ ಅಂಶವನ್ನು ಸಮರ್ಥಿಸಬಹುದು. (ಮುಳ್ಳೂರು ೭೨, ಕ್ರಿ. ಶ. ೧೦೫೯ರ ಶಾಸನದ ಶಿಲ್ಪವೂ ಹೀಗೆಯೇ ಗೋವು–ಕರುವಿನ ಶಿಲ್ಪ ಹೊಂದಿದ್ದು ಬಸದಿಗೆ ಸಂಬಂಧಿಸಿದುದಾಗಿದೆ). ಹಾಗಿದ್ದರೆ ಚೌಡ್ಲುವಿನ ಹೊಸ ವೀರಶಾಸನದ 'ರಳವೀರಕೋಳಾಹಳ'ನು ಮೇಲಿನ 'ಕೋಳಾಹಳ ಕೊಂಗ'ನೆ ಎಂಬ ಬಗ್ಗೆ ಶೈವಶಿಲ್ಪದ ದೃಷ್ಟಿಯಿಂದ ತಾರ್ಕಣೆ ಒದಗುವುದು ಕಷ್ಟವಾಗುತ್ತದೆ ; ಧಾರ್ಮಿಕ ಸಂದಿಗ್ಧತೆಯೂ ಒದಗುತ್ತದೆ.

ಎರಡನೆಯದಾಗಿ,'ಕೋಳಾಹಳ' ಎಂಬ ವಿಶ್ಲೇಷಣವಿರುವ ವ್ಯಕ್ತಿ ಕುಸುಬೂರು ಹಾಗೂ ಚೌಡ್ಲುವಿನ ಹೊಸ ಶಾಸನಗಳಲ್ಲಿ ಅನುಕ್ರಮವಾಗಿ ಪರಿಗಣಿಸಿದರೆ ಕ್ರಿ. ಶ. ೧೦೮೬ ಹಾಗೂ ೧೦೮೭ರಲ್ಲಿ ಕಾಣಬರುವ ಕಾರಣ ಮತ್ತು ಕುಸುಬೂರು ಶಾಸನದಲ್ಲಿ 'ಕೊಂಗಾಳುವ ಭಟ' ಎನ್ನುವ ಬದಲಿಗೆ 'ಕೊಂಗಾಳುವ ಬಿದ' ಎಂದು ಓದಿಕೊಂಡರೆ ಇತಿಹಾಸದ ಘಟನೆಗಳ ಕುರಿತ ಒಂದು ವಾದಕ್ಕೆ ಪೂರಕವಾಗುತ್ತದೆ. ಆದರೆ ಕ್ರಿ.ಶ. ೧೦೭೭ರಲ್ಲಿ ರಾಜೇಂದ್ರ ಪೃಥ್ವಿ ಕೊಂಗಾಳ್ವನು ಜೈನಮುನಿಗೆ ಚೈತ್ಯಾಲಯ ಕಟ್ಟಿಸಿದ್ದು ಪೂರ್ವಧರ್ಮದ ಬಗ್ಗೆ ಇದ್ದ ಅನುಕಂಪ ಕೃತಜ್ಞತೆಯ ಕಾರಣವೇ ಎಂಬುದು ಸ್ಪಷ್ಟವಾಗಬೇಕು.

ರೈಸ್‌ರ ರೀತ್ಯ ಕ್ರಿ.ಶ. ೧೦೬೬-೧೧೦೦ರ ಕಾಲದ ಕೊಂಗಾಳ್ವರಲ್ಲಿ ಬಹಳ ಬಲಾಢ್ಯನೆನಿಸಿದ ತ್ರಿಭುವನಮಲ್ಲ ಚೋಳ ಕೊಂಗಾಳ್ವನೂ ಆದ ರಾಜೇಂದ್ರ ಪ್ರಥವಿ ಕೊಂಗಾಳ್ವನು ಅದಟರಾದಿತ್ಯ ಎಂಬ ಹೆಸರನ್ನಿಟ್ಟುಕೊಂಡು ಕಪ್ಪಕೊಡದೆ ಅನಾದರ ತೋರಿದ.[59-ಅ] ಕಾರಣ ಕ್ರಿ.ಶ. ೧೦೮೯ರ ಸುಮಾರಿನಲ್ಲಿ ದಕ್ಷಿಣಕ್ಕೆ ದಂಡೆತ್ತಿ ಬಂದು ಚಂಗಾಳ್ವರನ್ನು, ಕೊಂಗಾಳ್ವರನ್ನು, ಮಲೆಯಾಳದ ಚೇರರನ್ನು, ಸಿಂಗಲೀಕ ರಾಜರನ್ನು ಪಶ್ಚಿಮ ಚಾಲುಕ್ಯ ಚಕ್ರವರ್ತಿ ಎರಡನೇ ವಿಕ್ರಮಾದಿತ್ಯನು ಸೋಲಿಸಿದನು. ಈ ದಂಡಯಾತ್ರೆಯಲ್ಲಿ ಹೊಯ್ಸಳ ರಾಜ ವಿನಯಾದಿತ್ಯ ಆತನಿಗೆ ಸಹಾಯ ಮಾಡಿದಂತೆ ತೋರುತ್ತದೆ.[60] ಅಂದರೆ ಕ್ರಿ.ಶ. ೧೦೮೬-೮೭ರ ಸಮಯದಲ್ಲಿ ಕೊಂಗಾಳ್ವರಿಂದ ಅನುಭವಿಸಿದ್ದ ಸೋಲಿನ ಸೇಡನ್ನು ಹೊಯ್ಸಳರು ಹೀಗೆ ತೀರಿಸಿಕೊಂಡಂತೆ ಕಾಣುತ್ತದೆ. ಕ್ರಿ. ಶ. ೧೦೮೬–೮೯ರ ಅವಧಿಯ ಯುದ್ಧದಲ್ಲಿ ವೀರಚೋಳ ಭುವನವೀರ ಕೊಂಗಾಳ್ವದೇವನ ಬಹುಶಃ ಸುತನಾದ ವಿಗಚಾಬ್ಬಿ ಚೋಳ ಕೊಂಗಾಳ್ವದೇವನು ಕಾದು ಮಡಿದಿರುವಂತಿದೆ. ಅಲ್ಲದೆ ಕ್ರಿ. ಶ. ೧೦೭೦ರ ವೇಳೆಗೆ ಕೊಂಗಾಳ್ವರು ವೀರಶೈವ (ಶೈವ ?) ಧರ್ಮದ ಪ್ರಭಾವಕ್ಕೆ ಒಳಗಾಗಿರಬಹುದೆಂಬ ಸೂಚನೆಯು ವೀರಸಿದ್ಧೇಶ್ವರ ದೇವರಿಗೆ ದಾನ–ಕೊಡುಗೆಗಳು ಅವರಿಂದ ಆದ ಬಗ್ಗೆ ಮೊಟ್ಟಮೊದಲಿಗೆ ಹೊಸಹಳ್ಳಿ ಶಾಸನದಿಂದ[61] ತೋರಿಬರುತ್ತದೆ. ಆದರೆ ಕ್ರಿ. ಶ.

---

58 ಡಿ. ಎನ್. ಕೃಷ್ಣಯ್ಯ : ಕೊಡಗಿನ ಇತಿಹಾಸ, ಪು. ೪೧–೪೪

59 ಎಂ. ಜಿ. ನಾಗರಾಜ್ : ಅದೇ, ಹರತಿಸಿರಿ, ಪು. ೭೨೪

59-ಅ ಕುಸುಬೂರಿನ ಹೊಸ ಶಾಸನದ 'ವೀರ ಚೋಳ ಭುವನವೀರ ಕೊಂಗಾಳ್ವದೇವ' ಇವನೇ ಆಗಿರಬಹುದು.

60 ಡಿ. ಎನ್. ಕೃಷ್ಣಯ್ಯ : ಅದೇ, ಪು. ೪೪

61 ಎ. ಕ., ಸಂಪುಟ ೧ (ಪರಿಷ್ಕೃತ), ಹೊಸಹಳ್ಳಿ ೪೮, ಕ್ರಿ.ಶ. ೧೦೭೦

೧೦೭೯ರಲ್ಲಿ ಕೊಂಗಾಳ್ವದಟರಾದಿತ್ಯನು ಗಂಡವಿಮುಕ್ತ ಸಿದ್ಧಾಂತ ರತ್ನಾಕರರಿಗೆ ಚೈತ್ಯಾಲಯವನ್ನು ಕಟ್ಟಿಸಿದುದು, ಕ್ರಿ. ಶ. ೧೧೫೦ರಲ್ಲಿಯೂ ಮಹಾಮಂಡಲೇಶ್ವರ ವೀರ ಚೋಳ ಕೊಂಗಾಳ್ವನು ಪ್ರಭಾಚಂದ್ರ ಸಿದ್ಧಾಂತದೇವರ ಶಿಷ್ಯನೆಂದು ಇದ್ದುದು ಶಾಸನಗಳಿಂದ[61-ಅ] ವಿದಿತವಿರುವುದರಿಂದ ಮೊದಲಿಗೆ ಜೈನರಾಗಿದ್ದರೂ, ಆಯಾ ಪ್ರದೇಶದಲ್ಲಿ ಪ್ರಬಲವಿದ್ದ ಧರ್ಮದ ಪರಿಸರಕ್ಕೆ, ಜನತೆಯ ಆಶೋತ್ತರಗಳಿಗೆ ಸ್ಪಂದಿಸಿದರು ಎನ್ನಬಹುದು; ಹಾಗೆಯೆ ಕೊಂಗಾಳ್ವ ರಾಜರಲ್ಲಿ ಕೆಲವರು ವೀರಶೈವ(ಶೈವ ?) ಧರ್ಮ ಪಕ್ಷಪಾತಿಗಳೂ ಆಗಿದ್ದಿರಬಹುದು. ಸಮಾಂತರ ಉದಾಹರಣೆ ಎಂದರೆ, ಚಂಗಾಳ್ವರು ಅನ್ನದಾನಿ ಚೆನ್ನ ಮಲ್ಲಿಕಾರ್ಜುನ ದೇವರನ್ನು ೧೨ನೇ ಶತಮಾನದ ಆರಂಭದಲ್ಲಿಯೆ ಕುಲದೇವರನ್ನಾಗಿ ಮಾಡಿಕೊಂಡಿದ್ದ ಪರಂಪರೆಯಲ್ಲಿಯೂ ಕ್ರಿ.ಶ. ೧೨೪೫ರ ವೇಳೆಗಾಗಲೇ ವೀರಶೈವ ಧರ್ಮವನ್ನವಲಂಬಿಸಿದ್ದ ಚಂಗಾಳ್ವರಲ್ಲಿ ಬೊಪ್ಪದೇವನು-ಕೊಡಗು ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಸಮಯದಲ್ಲಿ ಇರಬೇಕು–ಶ್ರೀರಂಗನ ಪರಮಭಕ್ತನಾಗಿದ್ದನೆಂದು ವರ್ಣಿಸಲಾಗಿದೆ[61-ಆ] ಎಂಬುದೇ ಆಗಿದೆ. ಅಂದರೆ ವೀರಶೈವನಾಗಿದ್ದ ಅರಸ ವೈಷ್ಣವದೇವರಭಕ್ತನಾಗಿದ್ದಂತೆ, ವೀರಶೈವವನ್ನು ಅನುಸರಿಸಿದ್ದ(?) ಕೊಂಗಾಳ್ವ ಕೆಲವು ಅರಸರು ಪೂರ್ವಧರ್ಮದ ಮೇಲಿನ ಕೃತಜ್ಞತೆಯಿಂದಲೋ ಏನೋ ಚೈತ್ಯಾಲಯ ನಿರ್ಮಾಣ ಹಾಗೂ ಜಿನಮುನಿಯ ಶಿಷ್ಯರಾಗಬಾರದು ಎಂದೇನಿಲ್ಲ. ಈ ಅಂಶಗಳನ್ನು ಪರಿಗಣಿಸುವುದಾದರೆ ಕುಸುಬೂರು ಹಾಗೂ ಚೌಡ್ಲುವಿನ ಹೊಸಶಾಸನಗಳಲ್ಲಿ ಕಂಡು ಬರುವ ಶಿಲ್ಪಗಳ ಧಾರ್ಮಿಕ ಸೂಚನೆಗಳಲ್ಲಿನ ಸಂದಿಗ್ಧತೆ ಅಳಿದು ಹೋಗಬಲ್ಲುದು.

ಮೂರನೆಯದಾಗಿ, ಶಾಸನದ ಕಾಲ ಕ್ರಿ.ಶ. ೧೧೪೭ ಎಂದರೆ ಚೌಡ್ಲು ಹೊಸ ಶಾಸನದ 'ರಣವೀರ ಕೋಳಾಹಲ' ಕೊಂಗಾಳ್ವದೇವನಿಗೆ ಅನ್ವಯಿಸದೆ ಚಂಗಾಳ್ವನ ಬಿರುದು ಮಾತ್ರ ಎಂದರೆ ಶಾಸನದ ಧಾರ್ಮಿಕ ಶಿಲ್ಪ ಭಾಗದ ಹಿನ್ನೆಲೆಯಲ್ಲಿ ಚಂಗಾಳ್ವರ ಅಧೀನಕ್ಕೆ ಅಥವಾ ಪ್ರಭಾವಕ್ಕೆ ಚೌಡ್ಲು ೧೨ನೇ ಶತಮಾನದ ಪೂರ್ವಾರ್ಧದಲ್ಲಿಯೇ ಇತ್ತು ಎಂದಾಗುತ್ತದೆ. ಕಾರಣ ಚಂಗಾಳ್ವ ಅರಸು ಅನ್ನದಾನಿ ಚಂಗಾಳ್ವ(೧೧೦೬–೧೧೨೩)ನು ಹೊಯ್ಸಳರಾಜರ ವಿರುದ್ಧ ಕೊಡಗಿನ ಮಲೆಪರನ್ನು ಎತ್ತಿ ಕಟ್ಟಿ ಕ್ರಿ. ಶ. ೧೧೨೪ರಲ್ಲಿ ಸಹಾಯ ಮಾಡಿದ.[62] ಆದರೆ ಇವರೆಲ್ಲ ಕ್ರಿ.ಶ. ೧೧೩೦ರಲ್ಲಿ ಹೊಯ್ಸಳರಿಂದ ಸೋಲಿಸಲ್ಪಟ್ಟರೆಂದು ತೋರುತ್ತದೆ.[63] ಇದಲ್ಲದೆ ಕ್ರಿ.ಶ. ೧೧೫೦ರಲ್ಲಿಯೂ ಕೊಂಗಾಳ್ವರಿಗೂ, ಚಂಗಾಳ್ವರಿಗೂ ಘರ್ಷಣೆ ನಡೆದಿರುವುದನ್ನು ಶಾಸನಗಳು ತಿಳಿಸುತ್ತವೆ. ಚಂಗಾಳ್ವರು ವಿಜಯಿಗಳೂ ಆಗಿದ್ದಾರೆ. ಅಂದರೆ ಕ್ರಿ. ಶ. ೧೧೭೪ರ ಪನಸೋಗೆಯಲ್ಲಿ ಹೊಯ್ಸಳ ದಂಡನಾಯಕ ಬೆಟ್ಟರಸನೊಡನೆಯ ಯುದ್ಧದ ಮೊದಲೇ ಚಂಗಾಳ್ವರ ಪ್ರಭಾವ ಕೊಡಗಿನ ಉತ್ತರ ಭಾಗಗಳ ಮೇಲಿದ್ದುದಕ್ಕೆ ಈ ಅಂಶಗಳು ಸಾಕ್ಷಿ ಆಗುತ್ತವೆ. ನಂತರ ಕೊಂಗಾಳ್ವರು ಮತ್ತು ಚಂಗಾಳ್ವರು ಸಂಯುಕ್ತವಾಗಿ ಬಂದು ಹೊಯ್ಸಳ ವೀರ ಬಲ್ಲಾಳನನ್ನು (ಕ್ರಿ. ಶ. ೧೧೭೩–೧೨೨೦) ಎದುರ್ಗೊಂಡು ಗೌರವ ಸೂಚಿಸಿದುದು ಶಾಸನೋಕ್ತ. ಇದು ಅವರಿಬ್ಬರಲ್ಲಿ ಸೌಹಾರ್ದ ಸಂಬಂಧ (ಬಹುಶಃ ಧಾರ್ಮಿಕವಾಗಿಯೂ) ಕುದುರಿದ್ದುದರ ೧೨ನೇ ಶತಮಾನದ ಉತ್ತರಾರ್ಧದ ಸಾಕ್ಷಿ ಆಗಿರುವಂತಿದೆ.

ಪರಿಷ್ಕೃತ ಎ. ಕ. ಸಂಪುಟ ನೀಡಿರುವ 'ಕಾಲ'ದ ಬದಲು ರೈಸರು, ಕೊಂಗಾಳ್ವ ರಾಜೇಂದ್ರ ಪೃಥ್ವಿ ಕೊಂಗಾಳ್ವನ ಕಾಲವನ್ನು ನಿರ್ಧರಿಸಿರುವುದನ್ನೆ ಗಮನಿಸಿ ಹೇಳುವುದಾದರೆ, 'ವೀರ ಚೋಳ ಭುವನ ವೀರ

---

61-ಅ Hassan District Gazetteer, 1971, p. 55

61-ಆ ಅದೇ, ಪು. ೫೯

62-63 Coorg District Gazetteer, 1965, p. 46—ಇದರ ಜೊತೆಗೆ ಗಮನಿಸಬೇಕಾದದ್ದು ; ಕದಂಬ ದುಪ್ಪರಸನ ಕ್ರಿ. ಶ. ೧೦೯೫ರ ಯಡೂರು ಶಾಸನದಲ್ಲಿ ೧೩ನೇ ಸಾಲಿನಲ್ಲಿ ಅವನಿಗೆ 'ಮಲೆಪರ ನಂದನವನಂ' ಎಂಬ ಬಿರುದಿರುವ ಕಾರಣ, ಕೊಡಗಿನಲ್ಲಿ 'ಮಲೆಪರ' ಅಸ್ತಿತ್ವ-ಪರಂಪರೆ ೧೧ನೆಯ ಶತಮಾನ ಅಥವಾ ಮುಂಚಿನಿಂದಲೂ ಇದ್ದು, ೧೨ನೆಯ ಶತಮಾನದಲ್ಲಿಯೂ ಮುಂದುವರಿದಿರುವುದಕ್ಕೆ ಈ ಐತಿಹಾಸಿಕ ಘಟನೆ ಪುರಾವೆ ಆಗಿದೆ ಹಾಗೂ ಕೊಡಗಿನ ಪರಿಸರದಲ್ಲಿ ಸಹಜವೂ ಆಗಿದೆ.

ಕೊಂಗಾಳ್ವ'ನ ನಂತರ ಅವನ ಸುತ (೧೧೦೦-೧೧೨೫), ನಂತರ ಅವನ ಮೊಮ್ಮಗ ವಿಗಚಾಬ್ಬಿ ಚೋಳ ಕೊಂಗಾಳ್ವ (೧೧೨೫-೧೧೫೦) ಆಗುತ್ತಾನೆ. ಹೀಗಾದರೆ ಕೊಂಗಾಳ್ವರ ಆಳ್ವಿಕೆಯ ಕಾಲಾವಧಿ ಮತ್ತು ವಂಶಾವಳಿ ಹೊಸದಾಗಿ ನಿರ್ದೇಶಿತವಾಗಬಲ್ಲದು. ವಿಗಚಾಬ್ಬಿ ಚೋಳ ಕೊಂಗಾಳ್ವನ ಕಾಲದಲ್ಲಿ ಯುದ್ಧನಡೆದು ಹೊಯ್ಸಳರು ಗೆದ್ದಿರಬಹುದು. ಕೊಂಗಾಳ್ವರು ವೀರಶೈವ (ಶೈವ?) ಧರ್ಮದ ಪ್ರಭಾವಕ್ಕೆ ಒಳಗಾದ ಮೇಲೆ ಚೌಡ್ಲುವಿನಲ್ಲಿ ಅವರ ಅಧೀನದ ಮಲೆ ಪರನಾಯಕನಾಗಿದ್ದಿರಬಹುದಾದ ಹೊಸ ಶಾಸನೋಕ್ತ 'ರಾಚುಮಿ' ಮಡಿದಿರಬಹುದು. (ಈ ವಾದವನ್ನಿಟ್ಟು ಕೊಂಡರೆ ಲಭ್ಯ ಎರಡು ಹೊಸ ಶಾಸನಗಳ ಕುಸುಬೂರು ಚೌಡ್ಲು-ಕಾಲವನ್ನು ೧೦೫೬, ೧೧೫೭ ಎಂದಿಟ್ಟುಕೊಳ್ಳ ಬೇಕಾಗುತ್ತದೆ). ಕೊಂಗಾಳ್ವರು ವೀರಶೈವ ಅಥವಾ ಶೈವ ಧರ್ಮದ ಪ್ರಭಾವಕ್ಕೆ ಒಳಗಾಗಲಿಲ್ಲ ಎಂದೇ ವಾದಿಸಿದರೆ ಚೌಡ್ಲು, ಚಂಗಾಳ್ವರ ವೀರಶೈವ ಪ್ರಭಾವಕ್ಕೆ ೧೭ನೇ ಶತಮಾನದಲ್ಲಿ ಬಂದು ಅವರ ಪರವಾಗಿ ಚೌಡ್ಲುವಿನಲ್ಲಿ 'ರಾಚುಮಿ' ಎಂಬ ಮಲೆಪರನಾಯಕ ಆಳುತ್ತಿದ್ದ ; ಆ ನಂತರ ಚಂಗಾಳ್ವರ ರಾಜಕೀಯ ಅಧಿಕಾರವಿದ್ದಷ್ಟು ದಿನವೂ ಅವರ ಗಡಿಠಾಣ್ಯವಾಗಿ ಕ್ರಿ.ಶ. ೧೭೯೫ರಲ್ಲಿ ಮುಖ್ಯವಾಗಿತ್ತು ಎಂದೇ ಹೇಳಬೇಕಾಗುತ್ತದೆ. ಈ ವಿವೇಚನೆಯಿಂದ ಚೌಡ್ಲು ಪ್ರದೇಶವು, ಮಲೆಪರ, ಕೊಂಗಾಳ್ವರ ಹಾಗೂ ಚಂಗಾಳ್ವರ ಅಧೀನದಲ್ಲಿ ವಿವಿಧಕಾಲ ಗಳಲ್ಲಿ ಇದ್ದು, ಮುಂದೆ ಹಾಲೇರಿ ಅರಸರ ಅಂಕಿತಕ್ಕೂ ಒಳಗಾಯಿತು ಎಂದೆನ್ನಬೇಕು. ಈ ಇತಿಹಾಸದ ಘಟನೆ ಗಳಲ್ಲಿನ ಸಂಗತಿಗಳಿಗೆ ಜನಪದ ಸಾಂಸ್ಕೃತಿಕ ಚೌಕಟ್ಟನ್ನು ದಟ್ಟವಾಗಿ ಹೊಂದಿಸಿಕೊಡಿತು ಎಂಬುದು ಸ್ಪಷ್ಟ. ಇಷ್ಟಾದರೂ ಇಲ್ಲಿನ ಹಳೆ ಮತ್ತು ಹೊಸ ಶಾಸನಗಳಲ್ಲಿ ನೇರವಾಗಿ ಸುಗ್ಗಿದೇವರ ಅಥವಾ ಕಟ್ಟೆಯ ಪ್ರಸ್ತಾಪವು ಕಾಣಬರುವುದಿಲ್ಲ.

**ಚೌಡ್ಲೂರು-ನಗರೂರು ಸುಗ್ಗಿಕಟ್ಟೆಯ ಸಂಯುಕ್ತ ಜನಪದ ಆಚರಣೆಗಳು**

ಸುಗ್ಗಿದೇವರ ಹಬ್ಬ ಹಾಗೂ ಹರಿಸೇವೆ ಚೌಡ್ಲುವಿನಲ್ಲಿ ಪರ್ಯಾಯ ವಾರ್ಷಿಕ ಜನಪದ ಹಬ್ಬಗಳೆಂದು ಈಗಾಗಲೇ ತಿಳಿಸಿದೆ. ಆದರೆ ಸುಗ್ಗಿಕಟ್ಟೆ ದೇವರ ಹಬ್ಬವು ಚೌಡ್ಲು ಮತ್ತು ನಗರೂರುವಿನಲ್ಲಿ ಸಂಯುಕ್ತ ಸಹಯೋಗ ಮತ್ತು ಪರಂಪರೆಯ ಸಂಬಂಧದ ಕಾರಣ ಒಂದೇ ಸಮಯಲ್ಲಿ ನಡೆಯುತ್ತದೆ. ಕಾರಣ ಹೀಗಿದೆ : ನಗರೂರು ಸುಗ್ಗಿಕಟ್ಟೆಯ ದೇವರ ಸಾಮಾನು. ಭಂಡಾರ ಹಾಗೂ ಸ್ತಂಭಗಳನ್ನು ನೆರೆಯ ಕಿರಗಂದೂರಿನ ಕಿಡಿಗೇಡಿಗಳು ಅಪಹರಿಸಿದರಂತೆ. ಇದು ಮಾನಕ್ಕೆ ಮತ್ತು ಮೌಲ್ಯಕ್ಕೆ ಸವಾಲಾಯಿತು. ನಗರೂರು ಸುಗ್ಗಿಕಟ್ಟೆ ಬಳುಗುಂದ(ಪೆಳ್ಳಿಗುಂದ)ದವರಿಗೂ ಸಂಬಂಧಿಸಿದ್ದುದ ರಿಂದ ಅಲ್ಲಿನ ವೀರರಾದ 'ಅಣ್ಣ-ತಮ್ಮಂದಿರು' ಹೋರಾಡಿ ವಸ್ತುಗಳನ್ನು ಕಿರಿಗಂದೂರಿನಿಂದ ಹಿಂದಕ್ಕೆ ತಂದುಕೊಟ್ಟರು. ಆದರೆ ಕಾಳಗದಲ್ಲಿ ಮಡಿದರು. ಆಗ ಹೆಂಡತಿಯರು ಸತಿಯರಾದರು. ಈ ಅಣ್ಣ ತಮ್ಮಂದಿರ ವೀರ-ಮಾಸ್ತಿಗಲ್ಲಿಗೆ 'ಊರಬಾಗಿಲ ಗೌಡ'ನ ಕಲ್ಲು ಎಂದು ಹೆಸರಿಸಿ ಬಳುಗುಂದ ಗ್ರಾಮದ ಮುಂದೆ ನಿಲ್ಲಿಸಿದ್ದಾರೆ.[64]

ಈ ಶಿಲ್ಪಗಳ ಮೇಲ್ಭಾಗದಲ್ಲಿ ಬಹುಶಃ ಸುಗ್ಗಿ ದೇವರ ಸಂಕೇತವಾಗಿ ಕಳಶ ಹಾಗೂ ಚಂದ್ರ, ಸೂರ್ಯರ ಶಿಲ್ಪಗಳೂ, ಪತ್ರ ತೋರಣವೂ ಕಂಡರಣೆ ಆಗಿದೆ. ಹೆಣ್ಣು ತನ(ಹೇಡಿ?)ದ ಆರೋಪ ಆಗಿನ ನಗರೂರಿನವರ ಮೇಲೆ ಬಂದಿದ್ದಿರಬಹುದು ಅಥವಾ ಸುಗ್ಗಿಕಟ್ಟೆಯ ಸಾಮಾನು ಗಳನ್ನು ಅಪಹರಿಸಿಕೊಂಡು ಹೋಗಿದ್ದಾಗ ಸನಿಹದ ಚೌಡ್ಲುವಿಗೆ ಹೋಗಿ ಹಬ್ಬ ಆಚರಿಸಿದ ಘಟನೆ ಮುಂದೆ ಕೊಡು-ಕೊಳ್ಳು ಪರಂಪರೆಯಾಗಿ ರಕ್ಷಣೆಯ ದೃಷ್ಟಿ ಯಿಂದಲೂ ಸಂಯುಕ್ತವಾಗಿ ಹಬ್ಬವು ನಡೆದುಕೊಂಡ ಬಂದಿರುವಂತಿದೆ. ಇದಕ್ಕೆ ಪೂರಕವಾಗಿ ಹಬ್ಬದಲ್ಲಿ ನಡೆ ಯುವ ಸಾಂಪ್ರದಾಯಿಕ ಆಚರಣೆಗಳೇ ಸಾಕ್ಷಿ ಆಗಿವೆ. 'ಊರಬಾಗಿಲ ಗೌಡ'ನ ವೀರಶಿಲೆಯ ಶಿಲ್ಪವು ವಿಜಯ ನಗರ ಕಾಲದ ಶೈಲಿಯಾಗಿರುವ ಕಾರಣ ಈ ಶಿಲ್ಪ ರೂಪಿತ ವಾಗುವ ಮುನ್ನವೆ ಸುಗ್ಗಿಕಟ್ಟೆ ಹಬ್ಬ ಹಾಗೂ ಜನಪದ ಉತ್ಸವ ರೂಢಿಯಲ್ಲಿದ್ದಿರಬೇಕು ಎಂಬ ಇತಿಹಾಸದ ಎಳೆ ಈ ಕತೆಯುಲ್ಲಿ ಅಡಕವಾಗಿದೆ. ಅಂದರೆ ಕೊಡಗಿನಲ್ಲಿ ಈ ಸಾಂಪ್ರದಾಯಿಕ ಹಬ್ಬದ ಪ್ರಾಚೀನತೆ ಕನಿಷ್ಠ ಆರು ಶತಮಾನಗಳ ಆಚೆಯದು ಎಂದು ತಿಳಿಯುತ್ತದೆ. ಸುಗ್ಗಿ

64 ಈ ಕತೆಯನ್ನು 'ಊರಬಾಗಿಲ ಗೌಡ'ನ ವಂಶೀಕರಣದ ಬಳುಗುಂದದ ಶ್ರೀ ಪಟೇಲ ಚಿಣ್ಣಪ್ಪನವರು ತಿಳಿಸಿರುವರು.

ಕಟ್ಟೆಯಲ್ಲಿ ಮೊದಲಿಗೆ ಮರದ ಸ್ತಂಭಗಳೂ ರೂಢಿಯಲ್ಲಿದ್ದವು ಎಂದಾಗುತ್ತದೆ. ವೀರರ ಕೈಯಲ್ಲಿನ ಬಂದೂಕು, ಕೊಡಗಿನ ವಿಶಿಷ್ಟ 'ಪಡಿಕತ್ತಿ' ಶಿಲ್ಪವೂ ಪೂರಕಾಂಶವಾಗಿದೆ.

ಮೇ ತಿಂಗಳಲ್ಲಿ ಮಳೆ ಬಿದ್ದ ಮೇಲೆ ಶುಕ್ರವಾರದಿಂದ ಮಾತ್ರ ೧೨ ದಿನಗಳ ಹಬ್ಬ ಆರಂಭವಾಗುತ್ತದೆ.[65] ಒಂದನೇ ದಿನ ಚೌಡ್ಲುವಿನ ಸುಗ್ಗಿಕಟ್ಟೆಗೆ ಸುಮಾರು ಒಂದು ಕಿ. ಮೀ. ದೂರದಲ್ಲಿರುವ ಕಿರುದಿಬ್ಬದ ಮೇಲಿರುವ ಅಂದಾಜು ಮೂರು ಅಡಿ ಎತ್ತರದ 'ಸಾರುಕಲ್ಲು' ಬಳಿ ನಿಂತು ಸುತ್ತಲಿನ ಕಲಕುಂದೂರು, ಕಿಬ್ಬೆಟ್ಟಚೌಡ್ಲು, ನಗರೂರು ಮುಂತಾದ ೨೮ ಹಳ್ಳಿಗಳಿಗೆ ಹಬ್ಬದ ಆರಂಭ ಕುರಿತು ತಿಳಿಯುವಂತೆ 'ಸಾರು ಹಾಕುವುದು' ಮಾಡುತ್ತಾರೆ. ಅದರೊಡನೆಯೆ 'ಬೆಂಗಲು' ಸೇರಿಕೊಳ್ಳುತ್ತದೆ.

ಈ ಸುಗ್ಗಿಹಬ್ಬದ ಸಮಯದಲ್ಲಿ ನಗರೂರಿನ ಧ್ವಯಸ್ತಂಭಗಳ ಸುಗ್ಗಿಕಟ್ಟೆಗೆ ಸುಮಾರು ನೂರು ಅಡಿ ಈಶಾನ್ಯಕ್ಕೆ ನಾಲ್ಕುಕಂಬದ ಚಪ್ಪರ ಹಾಕಿ 'ದೇವರಮನೆ' ಮಾಡುತ್ತಾರೆ. (ಇದು ಕ್ಷೇತ್ರ ಪಾಲನ ನೆಲೆಯ ಸಂಕೇತವಾಗಿಯೆ ? ಅಥವಾ ನಗರೂರಿನ ಸುಗ್ಗಿಕಟ್ಟೆ ಮೊದಲು ಇದ್ದ ನೆಲೆಯೆ ? ಎಂಬುದು ಸ್ಪಷ್ಟವಾಗದ ಸಂಗತಿ). ಈ ಮನೆಯಲ್ಲಿ ದೇವರನ್ನು ಕೂರಿಸಿ ತೆರೆ ಹಾಕಿ ಮುಂದೆ ಗೌಡ ಮನೆತನದವರು ಪಹರೆ ಇರುತ್ತಾರೆ. ಹಬ್ಬಕ್ಕೆ 'ಊಲು ಏರಿಸುವ' ದಿನ ಇಲ್ಲಿಗೆ ಬರುತ್ತಾರೆ. ಈಗಿನ ಪದ್ಧತಿಯಂತೆ ೨-೩ ದಿನಗಳ ಮುಂಚಿನ ಬೆಳಗ್ಗೆ ಬಂದು 'ಊಲು' ಏರಿಸುತ್ತಾರೆ. ಅದೇ ಚೌಡ್ಲುವಿನಲ್ಲಿ ಆ ದಿನ ಸಂಜೆ 'ಊಲು' ಕಟ್ಟಿ ಪೂರ್ವಾಭಿಮುಖ ಇಡುತ್ತಾರೆ, ಅಂದರೆ ಹಬ್ಬದ ಎರಡನೆಯ ದಿನ ಶನಿವಾರದಂದು 'ಸೊಡರಿನ ಉಯಿಲು'(ಊಲು[66] ತೂಗುವುದು) ಏರಿಸುತ್ತಾರೆ. ಚೌಡ್ಲುವಿನಲ್ಲಿ 'ಬೇಟೆ'ಯನ್ನು ನಿಲ್ಲಿಸಿರುವ ಕಾರಣ ಈ ಆಚರಣೆ ಮಂಗಳವಾರದಂದು ನಡೆಯುತ್ತದೆ. ಭಾನುವಾರ ಹಾಗೂ ಸೋಮವಾರ ಬೇಟೆಗೆ ಹೋಗುವ ಪದ್ಧತಿ ಇಲ್ಲವಾದ ಕಾರಣ ಮೂರನೇ ಮತ್ತು ನಾಲ್ಕನೇ ದಿನ ಅಂದರೆ ಮಂಗಳವಾರ ಬುಧವಾರ ಬೇಟೆಗೆ ಮೊದಲಿಗೆ ಹೋಗುವ ಪದ್ಧತಿ ಇತ್ತು. ಈಗಿನ ಕಾನೂನಿನ ರೀತ್ಯ ಮನಸ್ಸಿ ಬೇಟೆಗೆ ಸಾಧ್ಯವಿಲ್ಲ.

ಐದನೇ ದಿನ ಗುರುವಾರ ದೊಡ್ಡಸುಗ್ಗಿ. 'ಹರಿಸೇವೆ ಕಲ್ಲು' ಕಟ್ಟೆಯ ಹಿಂಬದಿಯಲ್ಲಿರುವ ದೇವರಕೆರೆಯಲ್ಲಿ ಮೂರುದಿನಗಳ ತನಕ ಬೇಟೆಯ ಬಲಿಯನ್ನು ಮುಳುಗಿಸಿಡುತ್ತಿದ್ದರು. ನಂತರ ಆ ಬಲಿಯನ್ನು ಕಟ್ಟೆಯ ಮುಂದಿನ ಕೊಂಡದಿಂದಾಚೆಯ ನೆಲೆಯಲ್ಲಿಡುತ್ತಿದ್ದರು. ಈ ಸುಗ್ಗಿಯಲ್ಲಿಯೇ ಬೇಟೆಯಲ್ಲಿನ ಪಾಲನ್ನು ಹಂಚಿಕೊಳ್ಳುವುದಿತ್ತು. ಬೇಟೆಗೆ ಹೋದ ವೀರಶೈವರ ಪಾಲು ಗೌಡ ಜನಾಂಗಕ್ಕೆ ದಕ್ಕುತ್ತಿತ್ತು.

ಹೊನ್ನಾರುವಿನ ಹಿಂದಿನ ದಿನ–ಈ ಗುರುವಾರ ರಾತ್ರಿ ನಗರೂರಿನ ಸುಗ್ಗಿಕಟ್ಟೆಯ ಬಳಿ ಬಂದಿರುವುದು

---

65 ನಗರೂರಿನಲ್ಲಿ ಹಬ್ಬದ ಹೊಣೆ ಘಟ್ಟದಗೌಡರು (ಮಲ್ಲೇಗೌಡರ ಮನೆತನ) ಹಾಗೂ ಕಲ್ಲೇಗೌಡರ ಮನೆತನದ್ದು ; ಚೌಡ್ಲುವಿನಲ್ಲಿ ರಾಜೇಗೌಡ, ಬಸವೇಗೌಡ, ಸಣ್ಣೇಗೌಡ ಹಾಗೂ ಪಟೇಲ ಗೌಡರ ಮನೆತನದವರದು. ಸಹಕಾರ ಗ್ರಾಮದ್ದು.

66 ಉಯ್ಯಾಲೆ > ಉಯಾಲೆ > ಉಯಾಲು > ಉಯಲು > ಉಯಿಲು > ಉಯ್ಲು > ಊಲು ಎಂಬ ನಿಷ್ಪತ್ತಿಯನ್ನು ಇಲ್ಲಿ ರೂಪಿಸಲು ಅವಕಾಶವಿದೆ. ಕಾರಣ ಇದಾಗಬಹುದು : 'ಪದಮಧ್ಯ ಅಕ್ಷರದ ದೀರ್ಘಸ್ವರವು ಹ್ರಸ್ವೀಕರಣಗೊಳ್ಳುವುದು ಕನ್ನಡದ ವಿಶೇಷ ಬಗೆ'. ಜೊತೆಗೆ 'ಪ' ಕಾರ 'ಉ' ಕಾರವಾಗಿ ಜನಪದದಲ್ಲಿ ಪರಿವರ್ತಿತವಾಗುವುದೂ ಕಂಡುಬರುತ್ತದೆ. (ಸಂಗಮೇಶ ಸವದತ್ತಿಮಠ : ಕನ್ನಡಭಾಷಾ ವ್ಯಾಸಂಗ, ಪುಟ ೧೭೪.) ಈ ಬಗ್ಗೆ ವಿವೇಚನೆ ಅವಶ್ಯಕ. ಹ್ರಸ್ವ ಪದ ಮಧ್ಯಾಕ್ಷರಗಳು ರೂಪಾಂತರ ಸಮಯದಲ್ಲಿ ಪದಾಂತ್ಯದಲ್ಲಿ ಒತ್ತಕ್ಷರವಿದ್ದಾಗ 'ದೀರ್ಘ'ವಾದ ಉದಾಹರಣೆಯೂ ಕಂಡುಬರುತ್ತದೆ.

ಪುದುವಟ್ಟು > ಪುದುವಟ್ಟು > ಪಧುವಟ್ಟು > ವಡವಟ್ಟು > ವಡವಾಟ. ಜನಪದ ಉಚ್ಚಾರದಲ್ಲಿದ್ದ ಈ ಶಬ್ದ ೧೯೩೬ಕ್ಕೆ ಮುಂಚೆ ರಾಮನಗರ ತಾಲೂಕಿನ ಈಗಿನ ಲಕ್ಷ್ಮೀಪುರಕ್ಕೆ ಬಳಕೆಯಲ್ಲಿ ಹೆಸರಾಗಿತ್ತು. (ಲಕ್ಷ್ಮೀಪುರ ಎಂದಾದ ಘಟನೆಯನ್ನು ಲಕ್ಷ್ಮೀಪುರದ ಡಾ|| ಎಂ. ಎನ್. ಈಶ್ವರರಾವ್ ಅವರು ತಿಳಿಸಿದ್ದರು.)

ನಗರೂರಿನ ವೀರಶೈವ ಮನೆತನದ ಕನ್ಯೆ. ಹೊನ್ನಾರು ಉತ್ಸವಕ್ಕೆ 'ಹೆಣ್ಣು' ಕಳುಹಿಸುವ ಪದ್ಧತಿ ಅವರದು. ಈಗ ಹೆಣ್ಣು ವೇಷ ಧರಿಸಿದ, ಆ ಮನೆತನದವರು ಸೂಚಿಸುವ ಯಾವುದೇ ಅನ್ಯ ಜಾತಿಯ ಗಂಡು ಚೌಡ್ಲು ವಿಗೆ ಬರುತ್ತದೆ. ಹೊನ್ನಾರು ನರಗೂರಿನಿಂದ ಚೌಡ್ಲು ವಿಗೆ ಬರುತ್ತದೆ. ಸುಗ್ಗಿ ಸಮಯುದಲ್ಲಿ ಚೌಡಮ್ಮನ ಬನ ದಲ್ಲಿರುವ ಹಾಲು ಬರುವ ಮರದಡಿಯ 'ಚೌಡೇಶ್ವರಿ' ಗುಡಿಗೆ ಈ ಮನೆತನದವರು 'ಹಣ್ಣು-ಕಾಯಿ' ಮಾಡು ತ್ತಾರೆ.

ಹೊನ್ನಾರು ಶುಕ್ರವಾರ. ಆ ದಿನ ಬೆಳಗ್ಗೆ ಹತ್ತಕ್ಕೆ ಚೌಡ್ಲುವಿನಿಂದ ನಗರೂರಿಗೆ ಸೀರೆ ಕುಪ್ಪಸ ಚೌಲಿ ಇರುವ ಬಂಗಾರದ ಕುಕ್ಕೆ(ಬೆತ್ತದ ಕುಕ್ಕೆ)ಯನ್ನು ತಂದು 'ಹೆಣ್ಣು' ಕರೆಯಲು ಬರುತ್ತಾರೆ. ಇಲ್ಲಿಂದ ಸೀರೆ ಉಡಿಸಿ ಆ ಹೆಣ್ಣನ್ನು ಕರೆದೊಯ್ಯುತ್ತಾರೆ. ಪ್ರಸಿದ್ಧ ಜಾತ್ರೆ ಯಂತೆ ಕಾಣುವ ಹೊನ್ನಾರು ಉತ್ಸವದ ಸಮಯದಲ್ಲಿ 'ಗಂಡು' ಗೌಡ ಜನಾಂಗದವರು ನೊಗವನ್ನು ಹೊರು ತ್ತಾರೆ. ನಗರೂರಿನವರು ಅವರಿಗೆ ನೊಗ ಹೊರಿಸು ತ್ತಾರೆ. ನೇಗಿಲಿನೊಡನೆ, ಚೌಡ್ಲುವಿನ ನಾಲ್ಕು ಜನ ಗೌಡರು ಮುಂದೆ ದೀಪ ಹಿಡಿದು ನಿಲ್ಲುತ್ತಾರೆ. ನಗರೂ ರಿನ 'ಕನ್ಯೆ' ಸಡ್ಡೆ ಬಿಟ್ಟುಕೊಂಡು ಕೊಂಡದ ಹಾಗೂ ಸುಗ್ಗಿ ದೇವರ ಸುತ್ತ ಮೂರು ಸುತ್ತುಗಂಡಿನೊಡನೆ ಸಾಗುತ್ತದೆ. ಕಟ್ಟೆಯ ಮೇಲೆ ಕಲ್ಲುದೀಪ ಹಾಗೂ ಮುಖವಾಡ ಇಟ್ಟಿರುತ್ತಾರೆ.

ನೇಗಿಲು ಹೊಡೆಯುವ ಗಂಡಸರು ಕಚ್ಚೆ ಪಂಚೆ, ಪೇಟ ಮತ್ತು ಬಿಳಿ ಪರಟು ಧರಿಸಿರಬೇಕು. ಸೊಡ್ಲು ಹಿಡಿದವರು ಬಿಳಿ ಕುಪ್ಪಸ ದಟ್ಟಿ, ಉಳಿಕೆ ತುದಿ ಇರುವ ಪೇಟ ಧರಿಸಿರಬೇಕು. ಈ ಉಳಿಕೆ ತುದಿಯಿಂದ ಆಚರಣೆ ಗಳ ಸಮಯದಲ್ಲಿ ಬಾಯ್ಮುಚ್ಚಿಕೊಂಡಿರುತ್ತಾರೆ.[67] ಆದರೆ ಕೊಡವರಂತೆ ಪೀಚಕತ್ತಿ ಸೊಂಟದಲ್ಲಿರುವುದಿಲ್ಲ. 'ಹೆಣ್ಣಿಗೆ' ಕರ್ನಾಟಕ ಮಾದರಿಯ ಸೀರೆಯುಡಿಗೆ.

ಈ ಹೊನ್ನಾರುವಿನ ಹಿಂದೆ ಮುಂದೆ ಸುಮಾರು ಎರಡು ಅಡಿ ಉದ್ದದ ಜೋಡಿ ವಾಟಿಕಡ್ಡಿಗಳನ್ನು ಹಿಡಿದು ಬಡಿಯುತ್ತ ಹಾಡು ಹೇಳುತ್ತ ಕುಣಿಯುತ್ತ ಸಾಗುತ್ತಾರೆ ಕುಣಿತಗಾರರು. 'ಹೊನ್ನಾರು'ವಿನ ಜನಪದ ಹಾಡಿನಲ್ಲಿ ಉತ್ತ ಹೊಲದಿಂದ (ಗದ್ದೆಯಿಂದ ?) ಫಲ ವಂತಿಕೆಯ ಧನವನ್ನು ಬಯಸುತ್ತ ಅಡ್ಡಿ ಆತಂಕಗಳು ಪ್ರಯತ್ನ – ದುಡಿಮೆಗಳನ್ನು ಹಾಳುಮಾಡದಿರಲಿ, ಚೌಡ್ಲೂರ ಮುಗ್ಧ ಮಕ್ಕಳ ಬದುಕಿಗೆ ದೇವರ ಕೃಪೆ ಇರಲಿ ಎಂಬ ಬೇಡಿಕೆ-ಹರಕೆಗಳನ್ನು ಸುಗ್ಗಿದೇವರಲ್ಲಿ ಅರ್ಪಿಸುವ ಅರ್ಥ ಕಾಣುತ್ತದೆ. ಈ ಹಾಡು ಕೊಡವರ ಗದ್ದೆ ನಾಟಿಯ ಸಮಯದ ಜನಪದ ಗೀತೆಯಾದ 'ಒಯ್ಯ ಕಾಕುವ'ದ ಫಲಶ್ರುತಿಯನ್ನು ನೆನಪಿಗೆ ತರುತ್ತದೆ.[68]

ಹೊನ್ನಾರು ಹಾಡು (ತ್ರಿಪದಿ) ಹೀಗಿದೆ[69] :

ಮೂಡು ಮುಂದಾಗಿ । ಹೂಡಿತು ಹೊನ್ನಾರು
ಮೂಡುತ ಕಂಡೆ ನಿಧುನಾವ
ಮೂಡುತ ಕಂಡೆ ನಿಧುನಾವ ಕೊಡುಸ್ವಾಮಿ
ಚೌಡ್ಲೂರ ಹುಟ್ಟೋ ಮಕ್ಕಳಿಗೆ ಕ್ಲೂ....ಕ್ಲೂ
॥ ೧ ॥

---

67 ಬಹುಶಃ ಜೈನಿಗರಾಗಿದ್ದವರು ಗೌಡ ಜನಾಂಗದವರಾದಮೇಲೂ ಉಳಿಸಿಕೊಂಡ ಹಳೆಯ ಪದ್ಧತಿ ಎಂದು ಕಾಣುತ್ತದೆ. ಆ ತುದಿ ಬಾಯಿಗೆ ಬಟ್ಟೆ ಸುತ್ತಿಕೊಳ್ಳಲು ಅನುಕೂಲ ಹಾಗೂ ದೇವರ ವಿಚಾರದಲ್ಲಿ ಅಪ್ಪಿ ತಪ್ಪಿ ಉಗುಳು ಹಾರದಿರಲಿ ಎಂಬ ಎಚ್ಚರವೂ ಹೌದು. ಯಡೂರಿನಲ್ಲಿಯೂ ಹೀಗೆಯೇ ಪದ್ಧತಿ ಇದೆ.

68 ನೆಟ್ಟ್ಲಂಗಡ ಬಾಯಿಕ್ ಪಾಲುಕೂಳು ಕೊಡ್ ನಾಟಿಯೇ ।
ಕದ್ದವಂಡ ಬಾಯಿಕ್ ನಂಜಿ ಮಾರಂಜಿ ಪೋಡು ನಾಟಿಯೇ !
—'ನಾಟಿ ನೆಟ್ಟವರಿಗೆ ಹಾಲು ಅನ್ನ ; (ಕಾಯಕ ನಡೆಸದೆ) ಪೈರು ಕದ್ದವನಿಗೆ ನಂಜಿನ ಅನ್ನ' ಎನ್ನುವ ಭಾವ ಇಲ್ಲಿಯದು.
(ಎಂ. ಜಿ. ನಾಗರಾಜ್: 'ಕೊಡಗಿನ ಒಯ್ಯ ಕಾಕುವ', 'ಶಕ್ತಿ' ದಿನಪತ್ರಿಕೆ, ೧೧-೮-೮೩ ರಿಂದ ೨೨-೯-೮೩, ಮಡಿಕೇರಿ ಮತ್ತು 'ಮಾಮಿಡಿ' ತ್ರೈಮಾಸಿಕ, ಸಂಚಿಕೆ ೧೩, ೧೯೮೩)

69 ಬಾಯ್ದೆರೆಯಲ್ಲಿಯೇ ಉಳಿದು ಬಂದಿರುವ ಈ ಹಾಡನ್ನು ಸಂಗ್ರಹಿಸಲು ನೆರವಾಗಿ ಹಾಗೂ ನಗರೂರು ಸುಗ್ಗಿಕಟ್ಟೆ ಕುರಿತ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದವರು ಚೌಡ್ಲುವಿನ ಶ್ರೀ ಸಿ. ಎಂ. ರಾಮಪ್ಪನವರು.

ಉತ್ತ ಹೊಲದಲ್ಲಿ ಬಿತ್ತಿತು ಮೂರಂಬು
ಬಿತ್ತುತ ಕಂಡೆ ನಿಧುನಾವ
ಬಿತ್ತುತ ಕಂಡೆ ನಿಧುನಾವ ಕೊಡುಸ್ವಾಮಿ
ಚೌಡ್ಲೂರ ಆಡೋ ಮಕ್ಕಳಿಗೆ ಕ್ಲೂ....ಕ್ಲೂ
॥ ೨ ॥

ಆರಿಲೂ ಆರಿಲೂ ನೇರಿಲೂ ನೆಲ್ಲಿಲೂ
ಆ ಗಿಡ ಹುಟ್ಟಿ ಫಲವಾಯ್ತು
ಆ ಗಿಡ ಹುಟ್ಟಿ ಫಲವಾಯ್ತು ಕೊಡುಸ್ವಾಮಿ
ಚೌಡ್ಲೂರ ಹುಟ್ಟೋ ಮಕ್ಕಳಿಗೆ ಕ್ಲೂ....ಕ್ಲೂ
॥ ೩ ॥

ಹಾರಂಗಿ ಹಿಡಕೊಂಡು । ಹರದೂರು ಮೆಟ್ಟಿ ಕೊಂಡು
ಕುಸುಬೂರು ಸೆರಗು ಇಳಿ ಇಕ್ಕಿ ಬರುವಾಗ
ಕಂಡಸಿಯ ಮುಳ್ಳು ತಡೆದಾವು
ಚೌಡ್ಲೂರ ಹುಟ್ಟೋ ಮಕ್ಕಳಿಗೆ ಕ್ಲೂ....ಕ್ಲೂ
॥ ೪ ॥

ಗರವಾಲೆ ಕಲ್ಲುಕೋಟೆ ಬಿಳಿಗೇರಿ ಬಿಲ್ಲುಕೋಟೆ
ಬಲ್ಲಿದೇವರ ಕೋಟೆ
ಮಡಿಕೇರಿ ಅರಮನೆಯ ಕಲ್ಲುಹತ್ತಿ ಇಳಿ ಇಕ್ಕಿ ಬರುವಾಗ
ಕಂಡಸಿಯ ಮುಳ್ಳು ತಡೆದಾವು
ಚೌಡ್ಲೂರ ಹುಟ್ಟೋ ಮಕ್ಕಳಿಗೆ ಕ್ಲೂ....ಕ್ಲೂ
॥ ೫ ॥

—ಸಂತೋಷ, ಉಲ್ಲಾಸ ಮತ್ತು ಧನವನ್ನು ತರುವ ಫಲದ ರಾಶಿಯನ್ನು ಕಂಡು ಆಚರಿಸುವ ಈ ಸುಗ್ಗಿ ಹಬ್ಬಕ್ಕೆ ಚೌಡ್ಲುವಿನ ನಾಲ್ದೆಸೆಯ ನೆಲೆಯ ಜನರನ್ನು ಬಾವಣಿಸಿ ಕರೆಯುವಷ್ಟು, ರಾಜರಿಗೆ ತಿಳಿಸಿ ಬರುವಷ್ಟು ಪ್ರಸಿದ್ಧಿ ಈ ಹಬ್ಬಕ್ಕಿತ್ತು. ಚೌಡ್ಲೂರ ಮಕ್ಕಳು ಅಂತಾಗಿ ಶೂರರು, ಧೀರರು, ರಾಜನಿಷ್ಠರು. ಈ ಹಬ್ಬಕ್ಕೆ ಬರುವವರೂ ಅಷ್ಟೆ.

"ಮಡಿಕೇರಿ ಅರಮನೆ ಕಲ್ಲು ಹತ್ತಿ ಇಳಿ ಇಕ್ಕಿ ಬರುವಾಗ" ಎಂಬ ಸಾಲು, ೧೭ ನೇ ಶತಮಾನದಿಂದಲೂ ಹಾಲೇರಿ ಅರಸರಿಗೆ 'ತುಪ್ಪ' ಹಾಗೂ ಬಹುಶಃ ಧೂಳಿ ಭತ್ತವನ್ನು[70] ಕೊಡವರೂ ಕೊಡುತ್ತಿದ್ದಂತೆ, ಚೌಡ್ಲು ಗ್ರಾಮದವರೂ ಪರಂಪರೆಯಲ್ಲಿ ಬಂದಂತೆ ನೀಡಿ ರಾಜರನ್ನು ಹಬ್ಬಕ್ಕೆ ಆಹ್ವಾನಿಸಿ ಅರಿಕೆ ಮಾಡಿಕೊಳ್ಳುತ್ತಿದ್ದರೆಂದು ಸೂಚಿಸುತ್ತದೆ.

ಹೊನ್ನಾರುವಿನ ನಂತರ ಶನಿವಾರ ಬಿಲ್ಲುಸುಗ್ಗಿ ಹಬ್ಬ. ಸೊಡ್ಲು ಹಿಡಿದ ನಾಲ್ಕು ಜನರು ಗರಗತ್ತಿ ಕಾಯಿಗೆ ಕಡ್ಡಿ ಚುಚ್ಚಿ ಬಿಲ್ಲಿನಿಂದ ಕೊಂಡ ಸುತ್ತ ನೆಲಕ್ಕೆ, ಮೇಲಕ್ಕೆ ಬಾಣವಾಗಿ ಬಿಡುತ್ತಾರೆ. ಹೊನ್ನಾರು ದಿನದಿಂದ ನಾಲ್ಕು ದಿನ ಈ ಪದ್ಧತಿ ಉಂಟು. ಸುಗ್ಗಿ ಮಂಟಪದ ಸುತ್ತಲೂ ಹೀಗೆಯೆ ಬಾಣ ಬಿಟ್ಟು ಸಾಗುವರು. ಈ ದಿನ ಸಂಜೆ ನಾಲ್ಕು ಗಂಟೆಯ ನಂತರ ಮಲ್ಲು ಸುಗ್ಗಿ. ಅಂದರೆ ಸಂಜೆ ಆರು ಗಂಟೆಯ ವೇಳೆಗೆ 'ಮಲ್ಲು' ತಂದು ಹತ್ತಿಸಿ ಕಟ್ಟೆಯ ಸುತ್ತ ಕುಣಿದು ಬರುತ್ತಾರೆ. ಸೀದುಹೋದ ತರಗಿನಲ್ಲಿಯ ಕಡ್ಡಿಗಳನ್ನು ಶುಭದ ದೇವರ ಉಳಿಕೆ ಎಂದು ತಂದು ಮನೆಯ ಮಾಡಿಗೆ ಸಿಗಿಸುವರು.

ಭಾನುವಾರ ಸುಗ್ಗಿದೇವರ ಕಟ್ಟೆಯ ಮುಂದಿರುವ ಚತುರಸ್ತಂಭ ಮಂಟಪದಿಂದ 'ಊಲುಮಣೆ' ಇಳಿಸುವ ಮುನ್ನ ಸುಗ್ಗಿದೇವರಿಗೆ ಮುತ್ತೈದೆಯರಿಂದ 'ಮಡೆ'ಯ ಎಡೆ ಆಗುತ್ತದೆ. ನಂತರ ಮಣೆಯ ಮೇಲಿನ ಸೊಡ್ಲು (ದೀಪ)ಗಳನ್ನು ಇಳಿಸುತ್ತಾರೆ. ಇಲ್ಲಿನ ಕಟ್ಟೆಯ ಮೇಲಿಡುವ 'ದೇವಿರಮ್ಮ'ನ ಮುಖವಾಡಗಳಿಗೆ ಮೊದಲು ಪೂಜೆ ಸಲ್ಲಿಸುವ ಹಕ್ಕು ಚೌಡ್ಲುವಿನ ನಾಲ್ಕು ಗೌಡ ಮನೆತನಗಳದಾಗಿದೆ.[71] ಮೊದಲಿಗೆ ಹಲಸಿನ ಮರದ

---

70 ಧೂಳಿಭತ್ತ : ಒಕ್ಕಲು ಕಣದಿಂದ ಪತ್ತಾಯಕ್ಕೆ ಹಾಕಿ ಕೊನೆಯಲ್ಲಿ ಉಳಿದಿದ್ದ ಭತ್ತವನ್ನು ಹಾಲೇರಿಯ ಮೊದಲ ವೀರಶೈವ ರಾಜ, ವೀರರಾಜ ಹಾಗೂ ಆತನ ಪರಿವಾರದವರ ಖರ್ಚಿಗೋಸ್ಕರ ಹಾಲೇರಿಯ ಸುತ್ತಮುತ್ತಲಿನ ನಾಡುಗಳ ಜನ ತಾವಾಗಿಯೆ ಕೊಡುತ್ತಿದ್ದ ಭತ್ತ–ಡಿ. ಎನ್. ಕೃಷ್ಣಯ್ಯ : ಕೊಡಗಿನ ಇತಿಹಾಸ, ಪು. ೭೪.

71 ಹಾಲಿ ಚೌಡ್ಲುವಿನ ಗೌಡನ ಮನೆಯ ಚಿಟ್ಟಪ್ಪ, ಬಸವೇಗೌಡನ ಮನೆಯ ಶಾಂತಪ್ಪ, ಸಣ್ಣಯ್ಯಗೌಡನ ಮನೆಯ ಶಾಂತಯ್ಯ, ರಾಜೇಗೌಡನ ಮನೆಯ ದೇವಯ್ಯ ಅವರಿಂದ ಪೂಜೆ.

ಸೊಡ್ಲುಮಣೆ ಬಳಕೆಗಿತ್ತು. ಈಗ ಕಬ್ಬಿಣದ ಸರಪಳಿ (ಪೈಪು ?)ಗೆ ಹೊಂದಿಸಿದ ಮಣೆ ಬಳಕೆಗೆ ಬಂದಿದೆ.

ದೇವಿರಮ್ಮನ ಮುಖವಾಡಗಳಿಗೆ ದೊಡ್ಡ ಸುಗ್ಗಿಯ ದಿನ ಮನೆಯ ಮಾದರಿಯಲ್ಲಿ ಮಂಟಪದ ಎದುರಿನ ವೇದಿಕೆಯ ಮೇಲೆ ಚಪ್ಪರ ಹಾಕಿ ಪೂಜೆ ನಡೆಸುತ್ತಾರೆ.[72] ಭಾನುವಾರದಂದು ಹೆದ್ದೇವರಿಗೆ ಪೂಜೆ ನಡೆಯುತ್ತದೆ.

ಹೀಗೆಯೇ ನಗರೂರಿನ ಹಬ್ಬದಲ್ಲಿಯೂ ಚೌಡಿಗೆ ಕೊಡುವುದು, ಊಲು ಏರಿಸುವುದು, ಸುಗ್ಗಿಸ್ತಂಭಗಳ ಬಲಪಕ್ಕಕ್ಕೆ ಇರುವ ಹೆದ್ದೇವರ ಬನದಲ್ಲಿ ಹೆದ್ದೇವರಿಗೆ (ಕೊಡುವುದು) ಹಾಲು ಎರೆಯುವುದು, ಬಿಲ್ಲುಸುಗ್ಗಿ, ಮಲ್ಲುಸುಗ್ಗಿ ಹಾಗೂ ಮಡೆ ಉಂಟು. ಆದರೆ ಹೊನ್ನಾರು ಇಲ್ಲಿಂದ ಚೌಡ್ಲುವಿಗೆ ಹೋಗುತ್ತದೆ. ಇಲ್ಲಿ ಬೆಳಗ್ಗೆ ಊಲು ಇಳಿಸಿದರೆ ಚೌಡ್ಲುವಿನಲ್ಲಿ ಆ ಸಂಜೆ ಇಳಿಸುತ್ತಾರೆ. ಚೌಡ್ಲುವಿನಲ್ಲಿ ಹಗಲುಸುಗ್ಗಿ ಇಲ್ಲ. ನಗರೂರಿನಲ್ಲಿ ಸೋಮವಾರ ಹಗಲುಸುಗ್ಗಿ. ಆ ದಿನ ಸುಗ್ಗಿದೇವರು ನಗರೂರಿಗೆ ಬಂದು ಪೂಜೆ ಪಡೆದು ಚೌಡ್ಲುವಿಗೆ ಸಾಗುತ್ತದೆ. ನಗರೂರಿನ ಸುಗ್ಗಿಕಟ್ಟೆಗೆ ವೀರರಾಜೇಂದ್ರ ಒಡೆಯನಿಂದಾಗಿ 'ಆನೆತಲೆಕಟ್ಟೆ' ಹೆಸರು ಬಂದಂತಿದೆ.

### ತಲ್ತರೆಶೆಟ್ಟಹಳ್ಳಿ ಸುಗ್ಗಿಕಟ್ಟೆ[73]

ತಲ್ತರೆಶೆಟ್ಟಳ್ಳಿ ಸುಗ್ಗಿಕಟ್ಟೆಯ ಸುಗ್ಗಿದೇವರಿಗೆ 'ಮಂಡೆ ಸುಗ್ಗಿದೇವರೆಂದು' ಹಿಂದೆ ಕರೆಯುತ್ತಿದ್ದರು. ನಾಲ್ಕು ಗ್ರಾಮಗಳಿಗೆ–ಶಾಂತಳ್ಳಿ, ಅಬ್ಬಿಮಠ ಬಾಚಳ್ಳಿ, ಹರಗ ಮತ್ತು ತಲ್ತರೆಶೆಟ್ಟಳ್ಳಿ–ಸೇರಿ ಒಂದು ದೇವರು ಇದ್ದಾಗ ಈ ಹೆಸರಿನಿಂದ ಕರೆವ ರೂಢಿ. ಶಾಂತಳ್ಳಿ ಹಾಗೂ ಬಾಚಳ್ಳಿಯವರು ತೆರಿಗೆ ಹಾಕಿ ಪೂಜೆಗೆ ಬರುತ್ತಾರೆ. ಈ ಮೊದಲಿಗೆ ಗುಸ್ಸಳ್ಳಿ, ತಾಕೇರಿ ಗ್ರಾಮದವರು ಸೇರುತ್ತಿದ್ದರು. ಈ ಭಾಗದಲ್ಲಿ ಮಂದೆಗೊಳಪಟ್ಟ ಸುಗ್ಗಿ ದೇವರ ಕಟ್ಟೆಗಳು ಕುಮಾರಹಳ್ಳಿ, ಕೂತಿನಾಡು, ತೋಳೂರು, ಯಡೂರು ಹಿಂದಿನ ಮಂಜರಾಬಾದು ತಾಲೂಕಿನ ಒಣಗೂರು ಗ್ರಾಮಗಳಲ್ಲಿವೆ.

ಅಬ್ಬಿಮಠ–ಶಾಂತಳ್ಳಿ ಹಾದಿಯಲ್ಲಿ ನಡುವೆ ಕಾಡಿನ ದೇವರ ಬನದಲ್ಲಿದೆ. ಸುಂದರ ಪ್ರಶಾಂತ ಅಚ್ಚುಕಟ್ಟಿನ ವಾತಾವರಣದಲ್ಲಿ ನಾಲ್ಕು ಅಡಿ ಎತ್ತರದ ಚತುರಸ್ರ ಶಿಲಾವೇದಿಕೆಯ ಮೇಲೆ ಸುಗ್ಗಿಕಟ್ಟೆಯ ಚೆಲುವಾದ ಸ್ತಂಭಗಳು ಪೂರ್ವಪಾರ್ಶ್ವದಲ್ಲಿ ಶಿಲ್ಪವನ್ನೂ ಹೊಂದಿ ನಿಂತಿವೆ. ಈ ಸುಗ್ಗಿಕಟ್ಟೆಯ ದೇವರಿಗೆ ಕೊಡುಗೆಯಾಗಿ ೯೯ ಎಕರೆ ದೇವರಕಾಡು ಇತ್ತು. ಮೊದಲಿಗೆ ಇಲ್ಲಿನ ಸ್ತಂಭಗಳು ಮರದವುಗಳಾಗಿದ್ದುವು. ಶಾಂತಳ್ಳಿಯ ಜನರ ಹಿರಿಯ ತಲೆಮಾರು ಈ ದೇವರಕಾಡಿನ ಬಳಿ ವ್ಯಾಸ್ತವ್ಯ ವಿತ್ತಂತೆ.[74]

ಕುಳವಾಡಿಯಿಂದ ಸುಗ್ಗಿಹಬ್ಬದ 'ಸಾರು' ನಂತರ 'ಬೆಂಗಲು' ಘೋಷಣೆ ಆಗುತ್ತದೆ. ಆ ಆರಂಭಕ್ಕೆ ಸ್ತಂಭಗಳಿಗೆ ಎಣ್ಣೆ ಹಚ್ಚಿ ಹೂ-ಪೂಜೆ ನಡೆಯುತ್ತದೆ. ಒಂದು ರಾತ್ರಿ ಹಸಿಹಬ್ಬ ನಡೆಯುತ್ತದೆ. ಅಂದು ಶುದ್ಧವಾದ ಎಡೆ ಇಡುತ್ತಾರೆ. ಹಬ್ಬಕ್ಕೆ ಎರಡು ದಿನ ಮೊದಲು ಸ್ತಂಭಗಳ ಅಡ್ಡತೊಲೆಯ ಮೇಲಿನ ಶಿಲಾ ಕಳಶಗಳಿಗೆ ಬೆಳ್ಳಿಯ ಹೊದಿಕೆಯಿಂದ ಅಲಂಕರಿಸುತ್ತಾರೆ. ಎರಡನೆಯ ದಿನದಂದು ರಾತ್ರಿ ಸುಗ್ಗಿ. ಈ ದಿನದ ಸಬ್ಬದಲ್ಲಿ ಆರು ಅಡಿ ಅಗಲದ ಕೊಂಡವನ್ನು ಹಾಯುವವರು ಹೆಜ್ಜೆ ಊರಿಯೆ ದಾಟಬೇಕು, ಇಲ್ಲವಾದರೆ ಕಳ್ಳತನ ಮಾಡಿದ ಅಪಾದನೆ ಆರೋಪವಾಗುತ್ತದೆ. ಈ 'ರಾತ್ರಿ ಸುಗ್ಗಿ'ಯ ದಿನ ವಿಶೇಷ ಪೂಜೆ, ಕುಣಿತ ಹಾಗೂ

---

72. ಬಹುಶಃ ಒಂದು ಕಾಲಕ್ಕೆ ಈ ನೆಲೆಯಲ್ಲಿ ದೇವಿಯ ಗುಡಿ ಇತ್ತು ಎಂಬುದಕ್ಕೆ ಇದು ಜನಪದ ಪದ್ಧತಿ ತೋರುವ ಸಾಕ್ಷ್ಯ. ರೈಸರೂ ತಮ್ಮ ಸಂಪಾದಿತ ಎ. ಕ. ಸಂಪುಟದಲ್ಲಿ ಚೌಡ್ಲು ೫೫ ಶಾಸನ (ಕ್ರಿ. ಶ. ೧೨೫೫) ಇರುವ ನೆಲೆಗೆ 'ಸುಗ್ಗಿದೇವರ ಗುಡಿ' ಬಳಿಯ ಶಾಸನವೆಂದೇ ಹೇಳಿದ್ದಾರೆ.

73 'ತಲ್ತರೆ' ಎಂಬ ಶಬ್ದ ಜನಪದದಲ್ಲಿ ತಳತೊರೆ > ತಲೆತೊರೆ ಎಂಬುವುಗಳ ಆಡು ಮಾತಾಗಿರುವಂತಿದೆ. ಅಲ್ಲದೆ ಈ ಗ್ರಾಮದ ಕೆಳಮುಖಕ್ಕೆ ತೊರೆ ಹರಿದು ಮುಂದೆ ಅಬ್ಬಿಮಠದ ಎಡಭಾಗದಲ್ಲಿರುವ ಮಲ್ಲಿಕಾರ್ಜುನ ದೇವಾಲಯದ ಬಳಿ ಅಬ್ಬಿಯಾಗಿ (ತಡಸಲು ; ತಲೆತೊರೆ ?) ಮುಂದೆ ಧುಮುಕುತ್ತದೆ.

74 ಈ ಅಂಶವನ್ನು ಶಾಂತಳ್ಳಿಯ ಏಲಕ್ಕಿ ಪ್ಲಾಂಟರ್ ಶ್ರೀ ಬಿ. ಎಸ್. ಸೀತಾರಾಮಯ್ಯ ಅವರು ತಿಳಿಸಿರುವರು.

ಕೆಂಡ ತುಳಿಯುವಿಕೆ ಉಂಟು. ಮೊದಲು ಗೌಡ ಜನಾಂಗದ ಸುಗ್ಗಿದೇವರ ಪೂಜಾರಿ ಕೊಂಡ ಹಾಯಬೇಕು.[75] ಈ 'ರಾತ್ರಿ ಸುಗ್ಗಿ'ಯ ದಿನ ದೊಡ್ಡ ಹಬ್ಬವಾದ ಕಾರಣ ಅದನ್ನು ದೊಡ್ಡ ಸುಗ್ಗಿ ಎಂದೂ ಕರೆಯುವುದುಂಟು. ಈ ಸಮಯದಲ್ಲಿ ಸುಗ್ಗಿಯಮ್ಮನ 'ತಿರುವಳ' (ದೈವಾವೇಶ) ಬರುವುದುಂಟು. ಬಂದವರು ತ್ರಿಶೂಲ ಕಡ್ಡಿಗಳ ತುದಿಗಳಿಂದ ಕೆನ್ನೆಗೆ ಚುಚ್ಚಿಕೊಂಡು ತಪ್ಪು ನೆಪ್ಪುಗಳಿಗೆ ಪರಿಹಾರ ಕೇಳುತ್ತಾರೆ. ಸುಗ್ಗಿಕಟ್ಟೆಯ ಬಳಿ ಮೂರುದಿನ ಪೂಜೆ ಆಚರಣೆಗಳಲ್ಲಿ ಸಣ್ಣ ತೊಟ್ಟಿಲಿನಲ್ಲಿ ದೇವರ ಆಭರಣದ ಸಾಮಾನುಗಳನ್ನು ಇಟ್ಟು ತೂಗುತ್ತಾರೆ. ಸುಗ್ಗಿಯಮ್ಮ ಅಥವಾ 'ಸಬತಾಯಿ' ಎಂದು ಕರೆಯುವ ಹೆಣ್ಣು ದೇವತೆಯ ಮುಖವಾಡವನ್ನು ಕಟ್ಟೆಯ ಮೇಲಿಟ್ಟು ಪೂಜೆ ನಡೆಸುತ್ತಾರೆ.

ರಾತ್ರಿಸುಗ್ಗಿ ನಂತರ ಬೆಳಗ್ಗೆ ಐದುಗಂಟೆಗೆ ಕಡವೆ ಕೊಂಬನ್ನು ತಲೆಗೆ ಕಟ್ಟಿಕೊಂಡು ಕೊಂಬಾಟ ನಡೆಸುತ್ತಾರೆ. ನಂತರ ಸುಗ್ಗಿಕಟ್ಟೆಯ ಸುತ್ತ ಕುಣಿತ, ಪೂಜೆ. ಇದೇ ಹಗಲು ಸುಗ್ಗಿಯಲ್ಲಿನ ಬಗೆ. ಅಂದರೆ ಆಚಾರ ಮುಕ್ತಾಯವಾಗುವ ದಿನ, ಹಬ್ಬದ ಕೊನೆಯ ದಿನ. ಈ ಹಗಲು ಸುಗ್ಗಿಗೆ 'ಮರಿಸುಗ್ಗಿ' ಎಂದೂ ಅನ್ನುವುದುಂಟು. ಈ ಮುಕ್ತಾಯದ ಹಂತದಲ್ಲಿ ಹಿಟ್ಟಿಡೆ ಹಾಕುತ್ತಾರೆ. ಮರಿಸುಗ್ಗಿಯ ದಿನ ಸಂಜೆ ನಾಲ್ಕು ಗಂಟೆ ವೇಳೆಗೆ ಹಣ್ಣುಕಾಯಿ ಕಾಣಿಕೆ, ತಪ್ಪುಕಾಣಿಕೆ ಅರ್ಪಣೆ.

ಇಲ್ಲಿನ ಸುಗ್ಗಿಬೇಟೆಗೆ ಹಿಂದೆ ತಿಳಿಸಿದ ನಾಲ್ಕು ಗ್ರಾಮಗಳವರು ಹೋಗಿ ತಂದ ಬಲಿಯನ್ನು 'ಬಂಟನ ಕಟ್ಟೆ'(ಸುಗ್ಗಿಕಟ್ಟೆಗೆ ಸ್ವಲ್ಪ ದೂರದಲ್ಲಿನ ನೆಲೆ)ಯಲ್ಲಿ ಸುಗ್ಗಿಕಟ್ಟೆಯ 'ಬಂಟನಿಗೆ ಎಡೆ ಮಾಡಲು ಮಡೆ' ಇಡುತ್ತಾರೆ.[76]

ಈ ಸುಗ್ಗಿದೇವರ ಹಬ್ಬದ ಸಮಯದಲ್ಲಿ, ದೇವರ ಕಾಡಿನ ಆದಿಸ್ಥಾನವಾದ 'ಹೆದ್ದೇವರ ಸನಿಹದಲ್ಲಿ ಬೀರೇದೇವರನ್ನಿಟ್ಟು ಪೂಜೆ ನಡೆಸುತ್ತಾರೆ. ಈ ಬೀರೆದೇವರಿಗೆ ಕೋಳಿಯನ್ನು ಶೂಲಕ್ಕೆ ಸಿಗಿಸಿ ನಿವೇದಿಸಿ, ನಂತರ ಚೊಕ್ಕ ಭೋಜನದ ಎಡೆ. ಹೀಗೆಯೇ ಆ ಕಾಡಿನ ಮರದ ಬುಡದ ಬಳಿಯ ಶಿಲೆಯೊಂದನ್ನು ಇರಿಸಿ ಬೆಳ್ಳಿಯ ಮುಖವಾಡ ಹೊದಿಸಿ 'ಸೊಡ್ಲು ಚೌಡಿ' ಎಂದು ಪೂಜಿಸಿ ೨೦ ಕೋಳಿಗಳನ್ನು ಶೂಲಕ್ಕೆ ಹಾಕಿ ಬಲಿ ನೀಡುತ್ತಾರೆ. ನಂತರ ಮನೆಯಲ್ಲಿ ಅವುಗಳನ್ನು ಚೊಕ್ಕ ಭೋಜನಕ್ಕೆ ಬಳಸುತ್ತಾರೆ.

'ಹೆದ್ದೇವರು' ಮಾತ್ರ ಸಣ್ಣ ಹುತ್ತಗಳ ಸಾಮೂಹಿಕ ಸಂಕೇತವಾಗಿದ್ದರೂ ಈ ತಲ್ತರೆ ಕಾಡಿನ ಹೆದ್ದೇವರು ೯೯ ಎಕರೆ ದತ್ತಿಯನ್ನೂ ಹೊಂದಿದ್ದು ಲಿಂಗರೂಪಿ ಶಿಲೆ ಆಗಿದೆ. ಶಾಂತಿಕಾರರಿಂದ[77] ಮಾತ್ರ ಪೂಜೆಗೊಂಡರೂ ಪ್ರತಿ ವರುಷ ಬೆಳೆ ಕುಯ್ಯುವ ಮುನ್ನ ಶುಕ್ಲಪಕ್ಷ ಪೂರ್ಣಿಮೆಯಂದು ಗೌಡ ಜನಾಂಗದ ಮುಖ್ಯಸ್ಥರು ಅವರೊಡನೆ ಹೋಗಿ ಹುತ್ತಕ್ಕೆ ಹಾಲು ಎರೆದು ಹುತ್ತರಿಯ ಹೊಸ ಕದಿರನ್ನು ಇಟ್ಟು ಪೂಜೆ ಮಾಡಿಸುತ್ತಾರೆ. ಸುಗ್ಗಿಗೆ ಮುಂಚೆ ೧೫ ದಿನಗಳ ಕಾಲ ಈ ದೇವರಿಗೆ ಪೂಜೆ ಇಲ್ಲಿ ಉಂಟು. ಸುಗ್ಗಿಕಟ್ಟೆಯ ಸ್ತಂಭಗಳಲ್ಲಿ ಕಂಡುಬರುವ ನಾಗಶಿಲ್ಪಕ್ಕೂ ಈ ದೇವಾರಾಧನೆಗೂ ಸಂಬಂಧವಿರಬಹುದು. ಅಲ್ಲದೆ ಕಾಮ ಮತ್ತು ಶೌರ್ಯ ಸಂವಾದಿಗಳಲ್ಲವೇ ?

---

75 ಕುರಾದ ಗೌಡನ ಪೂವಯ್ಯ, ಪಾಪಯ್ಯ ಅವರುಗಳು ಈ ದೇವರ ಪಡಿಕಾರರು–ಅಂದರೆ ಇಲ್ಲಿನ ಸುಗ್ಗಿ ದೇವರ ಪೂಜಾರಿಗಳು. ಮೊದಲಿಗೆ ಇವರು ವೀರಶೈವ ಜನಾಂಗದವರಾಗಿದ್ದರಂತೆ. ಸಬತಾಯಿಯ ಬೆಳ್ಳಿಯ ಮುಖವಾಡ ಕುರಾದ ಗೌಡನ ಮನೆತನದಲ್ಲಿ ಮೊದಲಿಗೆ ಇತ್ತಂತೆ.

76 ಹಾಸನ ಜಿಲ್ಲೆ ನಿಡ್ಮೂರಿನ ಶರಣಸ್ಥಲದ ಸಂಗಪ್ಪನ ಮಠದ ಗದ್ದುಗೆ ಎದುರು ಸಹ 'ಬಂಟ'ನ ಗುಡಿ ಇದೆ. ಒಳಗೆ ಹುತ್ತವಿದೆ. ಮುಂದೆ 'ಬಂಟ'ನ ಮುಖವಾಡವಿರಿಸಿದ್ದಾರೆ. 'ಬಂಟ'ನಿಗೆ ಮಠದವರು ವಾರ್ಷಿಕ ಉತ್ಸವದಲ್ಲಿ 'ಗೌಡ' ಜನಾಂಗದವರ ಮೂಲಕ ಬಲಿ ನೀಡಿಸುತ್ತಾರೆ. ಹೀಗೆಯೇ ಕೊಡಗಿನ ಪಾಡಿ ಇಗ್ಗುತಪ್ಪದೇವರಿಗೆ 'ಬಯನಾಡ' ಎಂಬ ಬಂಟನಿದ್ದು ಗುಡಿಯ ಕಾವಲಾಗಿದ್ದಾನೆ. ಗುಡಿಯ ಮರದ ಮುಂಗೋಪುರದಲ್ಲಿ ಅವನ ಆಕೃತಿಯ ಜಿಡಾವಣೆ ಆಗಿದೆ. ಅವನ ನೆಲೆ ಶ್ರೀ ಇಗ್ಗುದೇವರ ದೇವಾಲಯದಿಂದ ೨೦೦ ಅಡಿ ದೂರದಲ್ಲಿ ತಳ ಬದಿಯಲ್ಲಿದೆ. ಅವನಿಗೂ ಬಲಿ ಆಹಾರವುಂಟು.

77 ಬ್ರಾಹ್ಮಣ ಪೂಜಾರಿಗಳು.

ಸುಗ್ಗಿದೇವರ ಪೂಜೆ ಹಾಗೂ 'ಹರಿ(ರ)ಸೇವೆ ಕಲ್ಲು'ಗಳ ಪೂಜೆಯು ಇಲ್ಲಿಯೂ ವಾರ್ಷಿಕ ಪರ್ಯಾಯಗಳು. ಅಂದರೆ ಒಂದು ವರ್ಷ ವೀರ ಶಕ್ತಿದೇವತೆಯ ಪೂಜೆಯಾದರೆ ಮರುವರ್ಷ ವಂಶದ ವೀರ ಹಿರಿಯರ ಪೂಜೆ ಇಲ್ಲಿಯೂ ನಡೆಯುತ್ತದೆ. ಈ ಎರಡೂ ಸಂದರ್ಭಗಳಲ್ಲಿಯೂ ಬೀರೇದೇವರ ಪೂಜೆ ತಪ್ಪುವುದಿಲ್ಲ.

ಸುಗ್ಗಿದೇವರ ಹಬ್ಬದ ಸಮಯದಲ್ಲಿ ಮದ್ನೇದೇವರ ಹಬ್ಬದ ಆಚರಣೆ ಆರಂಭದಲ್ಲಿ ಹಾಗೂ ಅಂತ್ಯದಲ್ಲಿ ಉಂಟು. 'ಹರಿಜನ ಒಕ್ಕಲಿನ ದೇವರು–ಮೊದ್ನೆ' ಯನ್ನು ಹೊತ್ತು ಮೊದ್ನೆಯುವನು ಹಿಂದಿನಿಂದ ಬಂದ ಹಕ್ಕಿನಂತೆ ಸುಗ್ಗಿಕಟ್ಟೆಯ ಆವರಣದಲ್ಲಿ ಪೂರ್ಣ ಪ್ರದಕ್ಷಿಣೆ ಬರುತ್ತಾನೆ. ಹಾಗೂ ಹಬ್ಬದ ಆಚರಣೆಗಳಲ್ಲಿ ಅಗತ್ಯವಿರುವಷ್ಟು ಸಹಕಾರ ನೀಡುತ್ತಾನೆ.[78] ಇಲ್ಲಿ ಆನೆಯ ಶಿಲ್ಪವಿಲ್ಲ. ಬದಲು ಆವರಣದ ಕಿರುಗೋಡೆಯ ಬಳಿಯ ಮಂಟಪದಲ್ಲಿ 'ಮೊದ್ನೆ' ಇಡುತ್ತಾನೆ.

**ಕುಮಾರಹಳ್ಳಿ ಸುಗ್ಗಿಕಟ್ಟೆ :** ಸೋಮವಾರಪೇಟೆ ತಾಲ್ಲೂಕು ಕುಂಬಳ್ಳಿ–ಹೆಗ್ಗಡೆಮನೆ ಹಾದಿಯಲ್ಲಿನ ಈ ಗ್ರಾಮದಲ್ಲಿ ನೆಲಮಟ್ಟದಲ್ಲಿಯ ಕಟ್ಟೆಯನ್ನು ಹೊಂದಿ ಆದರ ಮೇಲೆ ಸುಮಾರು ೨೦ ಅಡಿ ಎತ್ತರದ ಜೋಡಿ ಸ್ತಂಭಗಳಿದ್ದವು. ೧೦ ಅಡಿ ಉದ್ದದ ಅಡ್ಡತೊಲೆ ಇದೆ. ನಾಗಶಿಲ್ಪವೂ ಜೊತೆಗಿದೆ. ಸ್ತಂಭದ ಪಶ್ಚಿಮ ಪಾರ್ಶ್ವದ ಬುಡದಲ್ಲಿ ತ್ರಿಶೂಲ, ಡಮರು, ಗದೆ ಸಹಿತ ಚತುರ್ಭುಜ ಸ್ಥಾನಕಮೂರ್ತಿಗಳಾದ ದ್ವಾರಭದ್ರರ ಶಿಲ್ಪಗಳು ಕಂಡರಣೆ ಆಗಿವೆ. ಸ್ತಂಭಗಳ ಉತ್ತರ–ದಕ್ಷಿಣ ಪಾರ್ಶ್ವದ ಒಳಮೈಯಲ್ಲಿ ಪ್ರಣಾಮಮುದ್ರೆಯ ಅಭಿಮುಖ ಸ್ಥಾನಕ ಸ್ತ್ರೀಮೂರ್ತಿಗಳು ಪೂರ್ವಾಭಿಮುಖದಲ್ಲಿ ಕಮಲ ಒಡಿದು ನೃತ್ಯ ಭಂಗಿಯಲ್ಲಿರುವ ಸ್ತ್ರೀಶಿಲ್ಪ, ಸ್ತಂಭದ ಹೊರಮೈಯಲ್ಲಿ ನೃತ್ಯಭಂಗಿಯಲ್ಲಿ ಶಂಖವನ್ನು ಊದುತ್ತಿರುವ ಕಲಾತ್ಮಕ ಸ್ತ್ರೀಶಿಲ್ಪವಿದೆ.

ಉಗಾದಿಯ ನಂತರ ೧೫ ದಿನಕ್ಕೆ ನಡೆಯುವ ಇಲ್ಲಿನ ಸುಗ್ಗಿದೇವರ ಹಬ್ಬದಲ್ಲಿ ದೀಪವಿಟ್ಟು ಛತ್ರವಿಟ್ಟು ಭದ್ರಕಾಳಿಯ ಮುಖವಾಡವಿಟ್ಟು ಪೂಜೆ ನಡೆಸುತ್ತಾರೆ.[79] ಇಲ್ಲಿನ ಸುಗ್ಗಿಕಟ್ಟೆಯ ಬಳಿ ಬಲಿ ಇಡುವುದಿಲ್ಲ. ಮೊದಲು ಮರದ ಸ್ತಂಭಗಳಿದ್ದವು. ೧೯ ವರ್ಷಗಳ ಹಿಂದೆ ಅವುಗಳ ಬದಲು ಕಲ್ಲಿನ ಸ್ತಂಭಗಳನ್ನು ನಿಲ್ಲಿಸಲಾಯಿತು. ಈ ಸುಗ್ಗಿದೇವರ ಆದಿಸ್ಥಾನ ಸನಿಹದ ಹೊಂಡರಕಲ್ಲುಗುಡ್ಡದ ಹೆದ್ದೇವರ ಗುಡಿ ಆಗಿದೆ. 'ಹೆದ್ದೇವರು'-ಹುತ್ತದ ನೆಲೆ ಆಗಿರುವ ಕಾರಣ ನಾಗಪೂಜೆಗೂ ಸುಗ್ಗಿದೇವರ ಪೂಜೆಗೂ ಇರುವ ಅನನ್ಯ ಸಂಬಂಧ ನೋಡಿದರೆ, ಸಂತಾನದ ಹರಕೆಗಳು ಸುಗ್ಗಿದೇವರಿಗೆ ಸಲ್ಲುತ್ತಿತ್ತೆಂದು ತೋರುತ್ತದೆ.

ಹೊಂಡರಕಲ್ಲುಗುಡ್ಡದ ಹೆದ್ದೇವರ ನೆಲೆಯಿಂದ ದೇವರನ್ನು ಕರೆತರುತ್ತಾರೆ. ಬೀರೇದೇವರ ಹಬ್ಬ ಕಳೆದು ಒಂದು ತಿಂಗಳ ನಂತರ ಇಲ್ಲಿ ಸುಗ್ಗಿಹಬ್ಬ ನಡೆಯುತ್ತದೆ.

ಈ ಸುಗ್ಗಿಕಟ್ಟೆಯ ವಿಶೇಷವೆಂದರೆ ಬೇರೆಡೆ ಸೂಚಿತವಿಲ್ಲದಿರುವ 'ಭದ್ರಕಾಳಿ'ಯ ಮುಖವಾಡವನ್ನಿಟ್ಟು ಆರಾಧಿಸುವುದೇ ಆಗಿದೆ.

**ನಗರಹಳ್ಳಿ ಸುಗ್ಗಿ(ಸ್ತಂಭ)ಕಟ್ಟೆ :** ಶಾಂತಳ್ಳಿಯ ಆಚೆಗಿನ ಈ ಗ್ರಾಮದ ಸುಗ್ಗಿಸ್ತಂಭ ಮೊದಲಿಗೆ ಮರದ್ದಾಗಿತ್ತು. ಈಗ ಕಲ್ಲಿನದು, ಒಂದೇ ಸ್ತಂಭವಿದ್ದು ವಿಗ್ರಹಗಳನ್ನು ಕೆತ್ತಿದೆ. ಹನ್ನೆರಡು ವರುಷಗಳಿಗೊಮ್ಮೆ ದೊಡ್ಡ ಸುಗ್ಗಿ ನಡೆಯುತ್ತದೆ. ಮೊದಲಿಗೆ ಈ ಸುಗ್ಗಿಯಲ್ಲಿ ಕೋಣ ಮತ್ತು ಎತ್ತನ್ನು ಬಲಿ ನೀಡುವ ಪದ್ಧತಿ ಇತ್ತು. (ಉತ್ತರಕನ್ನಡ ಜಿಲ್ಲೆಯ ಹಾಲಕ್ಕಿ ಗೌಡರು ಮತ್ತು ಈಡಿಗ ಜನಾಂಗದಲ್ಲಿ ಈ ಪದ್ಧತಿಗೆ ಸಮಾಂತರವೆನಿಸುವಂತಹ ಪದ್ಧತಿಯೊಂದಿದೆ—ನದೀ ತೀರದಲ್ಲಿ ಮರದ ಕಂಬವೊಂದನ್ನು ನೆಟ್ಟು ಅದಕ್ಕೆ ಸ್ವಲ್ಪ ದೂರದಲ್ಲಿ ಒಣಗಿದ ತೆಂಗಿನ ಗರಿಯಲ್ಲಿ ಹಿಡಿದ ಮೀನನ್ನು ಸುಟ್ಟು ಬಲಿಯನ್ನು ಮರದ ಒಂದು ಕಂಬಕ್ಕೆ ಅರ್ಪಿಸುತ್ತಾರೆ).[80]

ನಗರಹಳ್ಳಿಯಲ್ಲಿ ಉಳಿದಂತೆ ಪ್ರತಿವರುಷವೂ

---

78 ಇಲ್ಲಿ ಜಾಗಟೆ ಹೊಡೆದು ಮೊದ್ನೆ ತರುವವನು ಹರಿಜನ ಒಕ್ಕಲಾದ ಮಲ್ಲೇಶ.

79 ಕುಮಾರಹಳ್ಳಿ ಕರೆಗೌಡನ ಮನೆಯವರು ಇಲ್ಲಿನ ದೇವರ ಪಡೆಕಾರರು ಆಗಿದ್ದಾರೆ.

80 ಎಂ. ಜಿ. ನಾಗರಾಜ್ : 'ಕೊಡಗಿನ ಕೊಲೆಕಲ್ಲುಗಳು', ಹರತಿಸಿರಿ, ಪು. ೭೧೮

'ಸಣ್ಣ ಸುಗ್ಗಿ'ಯನ್ನು ಆಚರಿಸುತ್ತಾರೆ. ಆಗ ಬಲಿ ಇಲ್ಲ. ಕಂಬಕ್ಕೆ ಎಣ್ಣೆ ಉಜ್ಜಿ (ಎಣ್ಣೆ ಮಜ್ಜನ ಮಾಡಿ 'ನೇರ' ಮಾಡುವಿಕೆ) ಆ ಒಂಟಿ ಸುಗ್ಗಿಸ್ತಂಭದ ಸುತ್ತ ಎರಡು ಸೊಡ್ಲು ಇಡುತ್ತಾರೆ. ಆರು ದಿನದ ಈ ಹಬ್ಬದಲ್ಲಿ ತುಲಾ ದಂಡ–ತಕ್ಕಡಿ ಹಾಕಿ ಮೊದಲು ದೇವರು, ನಂತರ ಭಕ್ತರು ಎರಡೂ ಬದಿಯಲ್ಲಿ ಕುಳಿತು ತಿರುಗುತ್ತಾರೆ. ಹನ್ನೆರಡು ವರ್ಷಗಳಿಗೊಮ್ಮೆಯ ದೊಡ್ಡಸುಗ್ಗಿಯಲ್ಲಿ ನೀಡುತ್ತಿದ್ದ ಬಲಿ ತಪ್ಪಿ ಈಗ ಸುಗ್ಗಿಸ್ತಂಭದ ಬಳಿ ಕೋಣ ಎಮ್ಮೆಗಳನ್ನು ನಿಲ್ಲಿಸಿ ಪಾತ್ರರಿಗೆ ದಾನ ಮಾಡುತ್ತಾರೆ.

**ತೊರೆನೂರುಮಠದ ಉಯ್ಯಾಲೆ ಕಂಭ :** ಕುಶಾಲ ನಗರ–ಅರಕಲಗೂಡು ಹಾದಿಯಲ್ಲಿನ ತೊರೆನೂರು ಮಠದ ಮುಂದೆ ಜೋಡಿ ಮರದ ಸ್ತಂಭಗಳು ಗ್ರಾಮ ದೇವತೆಯ ಹಬ್ಬದ ಆಚರಣೆಗೆ ಅನುವುಗೊಂಡಿದೆ. ಮಠದ ಆಶ್ರಯದಲ್ಲಿ ಸುಗ್ಗಿಹಬ್ಬವು ಕಾಳಿಕಾದೇವಿಯನ್ನು ಮುಖ್ಯ ಮಾಡಿಕೊಂಡು ನಡೆಯುತ್ತದೆ. ಆ ದೇವಿಯ ಗೂಡಿನಲ್ಲಿ ಏಳುಕಲ್ಲುಗಳನ್ನು ಸಾಂಕೇತಿಕವಾಗಿ ಇರಿಸಿದ್ದಾರೆ. ಗ್ರಾಮದ ತರಗು ಗುಡಿಸಿ ಮೊದಲಿಗೆ ಮನೆ ಮಾಡಿದವರು ಗಂಗಡಿಕಾರ ಒಕ್ಕಲಿಗ ಮನೆತನದವರು.[81] ಅಂತಾಗಿ ಆ ಪರಂಪರೆಯ ಚಿಣ್ಣಯ್ಯನ ಮನೆತನ ಮತ್ತು ತಿಮ್ಮರಾಯಿ ಮನೆತನದವರಿಂದ ಈ ದೇವತೆಗೆ 'ಮೊದಲ ಎಡೆ' ಸಂದಾಯವಾಗುತ್ತದೆ (ಹಣ್ಣು, ತುಪ್ಪ). 'ಹಣ್ಣೆಡಿಗೆ'[81–ಅ] ಹೊತ್ತು ಈ ಮೊದಲ ಪೂಜೆ ನಡೆದ ಮೇಲೆ ಉಳಿದವರಿಗೆ ಪೂಜೆಗೆ ಅವಕಾಶ. ಮೇ ತಿಂಗಳಲ್ಲಿ ಈ ಹಬ್ಬ.

ಗ್ರಾಮದೇವತೆಯ ಹಬ್ಬವು ಸಮೀಕರಣವಾಗಿರುವುದರಿಂದ ಆ ಸಮಯದಲ್ಲಿಯೆ ಮರದ ಉಯ್ಯಾಲೆ ಕಂಬ (ಸುಗ್ಗಿಕಂಬ)ಗಳಿಗೆ ತೊರೆನೂರು ಮಠದ ಶ್ರೀ ಮಹಂತಸ್ವಾಮಿಗಳವರಿಂದ ತೆಂಗಿನ ಫಲದ ನಿವೇದನವಾಗುತ್ತದೆ. ನಂತರ ಸರಪಳಿ ಮಣೆ ಬಿಟ್ಟು ಉಯ್ಯಾಲೆ. ದೇವರನ್ನು ಹೊತ್ತು ಕೆಂಡ ಕೊಂಡದ ಮೇಲೆ ನಡೆದು ಬರುತ್ತಾರೆ. ಉಯ್ಯಾಲೆ ಮಣೆಯ ಮೇಲೆ ದೀಪವಿಟ್ಟು ತೂಗುತ್ತಾರೆ.

**ಹುಲುಕೋಡು-ಕಿತ್ತೂರು ಸುಗ್ಗಿಸ್ತಂಭಗಳು :** ಇಲ್ಲಿನ ಸುಗ್ಗಿದೇವರ ಹಬ್ಬವು ಮಕರ ಸಂಕ್ರಾಂತಿ ಹಬ್ಬ. ಉತ್ಸವ ಅರ್ಥಾತ್ ಹುಲುಕೋಡಯ್ಯ–ಕಿತ್ತೂರಯ್ಯನ ಜಾತ್ರೆಯೊಡನೆ ಅಂಗವಾಗಿ ಬರುವ ಹಬ್ಬವಾಗಿದೆ. ಶನಿವಾರ ಸಂತೆಯ ಬಳಿಯ ಬೆಂಬಳೂರಿನ ಗ್ರಾಮದೇವತೆ ಬಾಣತಮ್ಮನ ಒಂದೇ ಹೆಸರಿನ ಏಳು ಜನ ಮಕ್ಕಳಲ್ಲಿ ಹಿರಿಯನಾದ ದೊಡ್ಡಯ್ಯ, ಅವನ ಸೋದರ ಹುಲುಕೋಡಯ್ಯ ಕಿತ್ತೂರಯ್ಯರೊಡನಾದ ಜನಪದ ಕತೆಯೊಡನೆ ಹಾಸುಹೊಕ್ಕಾಗಿ ಸುಗ್ಗಿದೇವರ ಹಬ್ಬವು ಸಾಂಕೇತಕವಾಗಿ ನಡೆದುಬಂದಿದೆ.[82] ಆರು ಜನ ಮಕ್ಕಳಿಗೂ 'ಕುಮಾರ ಲಿಂಗೇಶ್ವರ' ಎಂಬ ಹೆಸರೇ ಇದ್ದು ಬಾಣತಮ್ಮನ ಬಳಿಯ ಇರುವ ಕಿರಿಮಗನಿಗೆ 'ಕುಂಟ ಕುಮಾರಲಿಂಗ'ನೆಂದು ಹೆಸರಿದೆ. ಹಾಸನ ಜಿಲ್ಲೆ ಗೊದ್ದುಗ್ರಾಮದ ಘಟ್ಟದಬಾಗಿಲ ದೊಡ್ಡಯ್ಯ, ಹುಲುಕೋಡಿನ ಹುಲುಕೋಡಯ್ಯ, ಕಿತ್ತೂರಿನ ಕಿತ್ತೂರಯ್ಯ–ಇವರುಗಳ ಸುಗ್ಗಿ-ಸಂಕ್ರಾಂತಿ ಜಾತ್ರೆಯಲ್ಲಿ ಹೆಗ್ಗಡಹಳ್ಳಿಯ ಶ್ರೀಶೈಲ ಸಂಸ್ಥಾನದ ವೀರಶೈವ ಶಾಖಾ ಮಠದ ಅವಿಭಾಜ್ಯ ಸಂಬಂಧವು ಜನಪದ ಆಚರಣೆಗಳಲ್ಲಿ ಮೇಳೈಸಿದೆ. ಹುಲುಕೋಡು ಹಾಗೂ ಗೊದ್ದು ಗ್ರಾಮದ ಘಟ್ಟದಬಾಗಿಲ ಇತಿಹಾಸದ ಪುಟಗಳೂ ಇಲ್ಲಿ ತೆರೆದು ಹೇಳುವ ಕತೆಯೂ ಇದೆ.[82–ಅ]

---

81 'ಮಲ್ಲು ಸುಗ್ಗಿ' ಎಂಬ ಹೆಸರು ಹಾಗೂ ತದನುಗುಣ ರಂಜನೆಯ ಆಚರಣೆಯು ಈ ಹಬ್ಬದ ಸಮಯದಲ್ಲಿ ಅವಕಾಶ ಪಡೆಯಲು ಇದೂ ಒಂದು ಕಾರಣವಿರಬಹುದು.

81-ಅ ಹಣ್ಣನ್ನು ಎಡೆಗೆ ಇಡುವ ಕಾರಣ ಈ ಸಂಯುಕ್ತ ಪದ ರೂಢಿಯಾಗಿರಬೇಕು.

82 ಬಾಣತಮ್ಮನ ಏಳು ಮಕ್ಕಳಲ್ಲಿ ಕೊಡಗಿನ ಹುಲುಕೋಡು, ಕಿತ್ತೂರು, ಶಾಂತಳ್ಳಿ, ಬೆಂಬಳೂರುಗಳಲ್ಲಿ ಕುಮಾರ ಲಿಂಗೇಶ್ವರರೆನಿಸಿ ಹಾಸನ ಜಿಲ್ಲೆಯ ಗೊದ್ದು ಗ್ರಾಮದ ಘಟ್ಟದಬಾಗಿಲು (ದೊಡ್ಡಯ್ಯ), ಹೆತ್ತೂರು, ಮತ್ತೂರುಗಳಲ್ಲಿಯೂ ಕುಮಾರಲಿಂಗೇಶ್ವರರೆನಿಸಿದ್ದಾರೆ. ಹುಲುಕೋಡಿನ ಕುಮಾರಲಿಂಗೇಶ್ವರನಿಗೆ ಹುಲುಕೋಡಯ್ಯ, ಘಟ್ಟದ ಬಾಗಿಲ ಕುಮಾರಲಿಂಗೇಶ್ವರನಿಗೆ ದೊಡ್ಡಯ್ಯ, ಕಿತ್ತೂರಿನಲ್ಲಿ ಕಿತ್ತೂರಯ್ಯ ಎಂದೇ ವಾಡಿಕೆ ಇದೆ.

82-ಅ ಇಲ್ಲಿ ಬರುವ ಘಟ್ಟದಬಾಗಿಲ ದೊಡ್ಡಯ್ಯ ಯಾರು ? ಮಡಿಕೇರಿಯ ಕನ್ನಂಡಬಾಣೆಯ ದೊಡ್ಡಯ್ಯ ಇವನೆಯೇ ? ಎಂಬ ಅನುಮಾನಕ್ಕೆ ಮುಂದಿನ ಸಾಲುಗಳು ಹೇಳುವುದು ಹೀಗೆ :

ರಚನೆ ಮತ್ತು ಶಿಲ್ಪ : ಹುಲುಕೋಡಿನಲ್ಲಿ ಸುಗ್ಗಿ ಕಟ್ಟೆಯ ಸ್ತಂಭಗಳು ಕುಮಾರಲಿಂಗೇಶ್ವರ ದೇಗುಲದ ಎದುರಿಗೆ ಇದ್ದು, ಊರ ಪ್ರವೇಶದ ನೆಲೆಯಲ್ಲಿಯೂ ಆಗಿರುವ ಕಾರಣ 'ಊರ ಮುಂದಿನ ಹೆಬ್ಬಾಗಿಲು' ಎನ್ನುತ್ತಾರೆ. ಈ ಕಟ್ಟೆಯ ಬಲಬದಿಗೆ ಅಂಟಿದಂತೆ ಸುಮಾರು ಎರಡೂವರೆ ಅಡಿ ಎತ್ತರದ ಕರಿಕಲ್ಲನ್ನು 'ಊರು ಸ್ಥಾಪನೆಯ ಕಲ್ಲು' ಎನ್ನುತ್ತಾರೆ. ೧೨ ಅಡಿ ಎತ್ತರದ ಸ್ತಂಭಗಳ ಮೇಲೆ ೪ ಅಡಿ ಅಗಲದ ತೊಲೆಯು ಮೂರು ಶಿಲಾಕಳಶಗಳನ್ನು ಹೊದಿತ್ತು. (ಈಗ ಒಂದು ಕಳಶ ಮುರಿದುಹೋಗಿದೆ). ಎಡಸ್ತಂಭದ ಮೇಲೆ ಮನುಷ್ಯ ಹೊತ್ತಂತೆ ಗಂಡಭೇರುಂಡದ ಕೆತ್ತನೆ ಇದೆ. ಸ್ತಂಭಗಳು ಕಿರುಕಟ್ಟೆಗಳಲ್ಲಿ ನಿಂತು ಈ ಕಟ್ಟೆಗಳ ನಡುವೆ ತೂರಿ ಹೋಗಲು ಬಾಗಿಲಿನಷ್ಟು ಅವಕಾಶವಿದೆ. ಸ್ತಂಭಗಳ ಎದುರು ಪೂರ್ವ ೧೦ ಅಡಿ ದೂರದಲ್ಲಿ ದ್ವಯ ಶ್ರೀಕಾರಗೆತ್ತನೆಯ ಕಲ್ಲು ಇದೆ. ('ಊರು ಸ್ಥಾಪನೆಯ ಕಲ್ಲಿ'ಗೆ ದೀಪಾವಳಿಯಂದು ಬಿಲ್ವಪತ್ರೆ ಪೂಜೆ ನಡೆಯುತ್ತದೆ).

ಇತಿಹಾಸ : ಬಲಸ್ತಂಭದಲ್ಲಿ ಅಪ್ರಕಟಿತ ಶಾಸನವೊಂದು, ಕ್ಷೇತ್ರಕಾರ್ಯಕ್ಕೆ ಹೋಗಿದ್ದಾಗ ಪತ್ತೆ ಆಯಿತು. ಶಾಸನ ಪಾಠದ ರೀತ್ಯ ಚೂರಜನಾಡಿನ ಉಕ್ಕಡವೆಂದು ಹುಲುಕೋಡು ಗ್ರಾಮವು ಆಗಿತ್ತು ಎಂದೂ ಲಿಪಿ ಆಧಾರದ ಮೇಲೆ ೧೮-೧೯ನೇ ಶತಮಾನದ ಸಂಗತಿ ಎಂದೂ ತಿಳಿಯುತ್ತದೆ. ಆದರೆ ಈ ಗ್ರಾಮದಿಂದ ೧/೪ ಮೈಲಿ ಪೂರ್ವಕ್ಕೆ ಇರುವ ಕನ್ನೇಶ್ವರ ದೇಗುಲದ ಬಳಿಯ ೨೨-೧೨-೧೩೪೯ರ ಶಾಸನವು ಹುಲುಕೋಡಿನ ಚಿಕ್ಕಣ್ಣಯ್ಯನಿಗೆ ವೀರಗಲ್ಲು ಹಾಕಿಸಿದ ಸಂಗತಿಯನ್ನು ತಿಳಿಸುತ್ತದೆ; ಹುಲುಕೋಡಿನ ಅಸ್ತಿತ್ವವನ್ನು ೧೪ನೇ

---

ಲಿಂಗರಾಜೇಂದ್ರ ಒಡೆಯ, ಕನ್ನಾಂಡ ದೊಡ್ಡಯ್ಯ ಮತ್ತು ಅಪ್ಪಚ್ಚಿರ ಮಂದಣ್ಣ ಮೈಸೂರು ಸೈನ್ಯದ ಫರಜುಲ್ಲಾ ಖಾನನನ್ನು ಬಿಸಿಲೆಘಾಟಿನ ಬಳಿ ಅಡ್ಡಗಟ್ಟಿ ಜಗಳ ಮಾಡಿದರು. ಅವನೊಡನೆ ಯುದ್ಧ ಮಾಡಿ ಸೋಲಿಸಿದರೂ ಕ್ರಿ. ಶ. ೧೭೭೭ರ ಸಮಯದಲ್ಲಿ ಏಳುಸಾವಿರ ಸೀಮೆಯ ಶನಿವಾರಸಂತೆ ಹೋಬಳಿ ಕಾಜೂರುಬಾಗಿಲಲ್ಲಿ ದೊಡ್ಡಯ್ಯ, ಮಂದಣ್ಣ ಮಡಿದರು. ದೊಡ್ಡಯ್ಯನ ನೆನಪಿಗೆ ಕನ್ನಂಡ ಕುಟುಂಬದವರು ಕಲ್ಲಿನಲ್ಲಿ ಅತನ ಪ್ರತಿಮೆ ಕೆತ್ತಿಸಿ ಮಡಿಕೇರಿಯ ಕನ್ನಂಡಬಾಣೆಯಲ್ಲಿ ನೆಟ್ಟಿರುವರು (ಡಿ. ಎನ್. ಕೃಷ್ಣಯ್ಯ : ಕೊಡಗಿನ ಇತಿಹಾಸ, ಪು. ೧೩೩). ಇದಕ್ಕಿಂತ 'ಘಟ್ಟದಬಾಗಿಲಲ್ಲಿ ಮಡಿದರು' ಎಂಬುದೇ ಸೂಕ್ತ. ಇತಿಹಾಸದ ಘಟನೆಗಳು ಇದಕ್ಕೆ ಪೋಷಕವಾಗಿ ಮುಂದೆ ನಡೆದಿರುವುದು ಕಾಣುತ್ತದೆ. [ಅಲ್ಲದೆ ಕನ್ನಾಂಡಬಾಣೆಯಲ್ಲಿ ವೇದಿಕೆಯ ಮೇಲೆ ಕೊಡವ ವೇಷಧಾರಿ ದೊಡ್ಡಯ್ಯನ ವೀರಗಲ್ಲು ಇದೆ. ಬಹುಶಃ ಅದು ತೋರುಗದ್ದುಗೆಯಂತಿದೆ. ನಿಜವಾದ ಗದ್ದುಗೆಯಲ್ಲವೆಂದೇ ತೋರುತ್ತದೆ. ಕಾಜೂರಿನಲ್ಲಿ ಮುಸ್ಲಿಮರ (ಸಂತ ?) ಗೋರಿ ಇದ್ದು ವಾರ್ಷಿಕ ಉರುಸು ನಡೆಯುತ್ತದೆ. ಫರಜುಲ್ಲಾ ಖಾನನ ಸೇನಾ ಮುಖ್ಯಸ್ಥನ ಗೋರಿಯೂ ಆಗಿರಬಹುದು. ಕಾಜೂರಿಗೆ ಸುಮಾರು ೧-೧ ೧/೨ ಮೈಲಿ ದೂರದ ಬಿಳಾಪಿನಲ್ಲಿ ಈ ಗೋರಿ ಇದೆ. ಯುದ್ಧ ನಡೆದ ಜಾಗ ಎಂಬ ಪ್ರತೀತಿ ಇದ್ದರೂ ದೊಡ್ಡಯ್ಯನ ಸಮಾಧಿ ಅಥವಾ ಕುರಿತಂತೆ ಯಾವ ಐತಿಹ್ಯವು ಕಾಜೂರಿನಲ್ಲಿಲ್ಲ. ಬದಲು ಗೊದ್ದು ಗ್ರಾಮದ ಘಟ್ಟದಬಾಗಿಲ ದೊಡ್ಡಯ್ಯನ ಬಗ್ಗೆ ಇದೆ—ಬಾಣತಮ್ಮನ ಏಳು ಜನ ಮಕ್ಕಳಲ್ಲಿ ಏನೋ ಕಾರಣದಿಂದ ಜಗಳ ಬಂತಂತೆ. ತೆಂಗಿನ ಫಲ, ಹೊಂಬಾಳೆ ತಂದು ವಿರಸ ಪೋಗಿಸಲೆಂದು ಹೋದ ದೊಡ್ಡಯ್ಯ ಘಟ್ಟದಬಾಗಿಲಲ್ಲಿ ಐಕ್ಯವಾದ. ಅಂತಾಗಿ ಅಲ್ಲಿಯೇ ಅವನಿಗೆ ಸಂಕ್ರಾಂತಿಯ ಮರುದಿನ ಕುಮಾರಲಿಂಗೇಶ್ವರನ ಹೆಸರಲ್ಲಿ ಜಾತ್ರೆ, ಉತ್ಸವ, ಪೂಜೆ. ಶ್ರೀ ಹೆಚ್. ಟಿ. ತಿಮ್ಮಯ್ಯ, ಮಂಡಲ ಪಂಚಾಯತಿ ಸದಸ್ಯ, ಚೆಂಗಡಹಳ್ಳಿ ಅವರು ಹೇಳುವ ಜನಪದಗೀತೆಯ ರೀತ್ಯ ದೊಡ್ಡಯ್ಯ ಗೊದ್ದು-ಬಾಣೆಗೆರೆ ನಡುವಿನ ತಾಂಬೂಲ ಗೆರೆಯಾಚೆಗಿನ ಕೊಂಗಳ್ಳಿ ಮಲೆನಾಡು ಅಲ್ಲಿಗೆ ಹೋಗಿ ಮನಸಾಗಿ ನೆಲಸಿದನಂತೆ. ಅವನೇ ಘಟ್ಟದಬಾಗಿಲ ದೊಡ್ಡಯ್ಯನೆನಿಸುವ ಕುಮಾರಲಿಂಗೇಶ್ವರ. ಈ ದೇಗುಲದ ಬಲಬದಿಯಲ್ಲಿ ನೆಲಮಟ್ಟದಿಂದ ತುಸು ಎತ್ತರದ ದಿಬ್ಬವಿದೆ. ಅಲ್ಲಿ ಶಿಥಿಲ ಶಿವಲಿಂಗವಿದೆ. ಹಾಗೂ ಗುಡಿಯ ನೆಲಗಟ್ಟಿದೆ. ಈ ಕತೆಯ ಹಿನ್ನೆಲೆಯಲ್ಲಿ, ದೊಡ್ಡಯ್ಯ, ಮಂದಣ್ಣ ಕಾಜೂರಿನಲ್ಲಿ ಕಾಳಗ ಕೊಟ್ಟರೂ ಅಲ್ಲಿಂದ ೧೪ ಮೈಲಿ ದೂರದ ಘಟ್ಟದಬಾಗಿಲಲ್ಲಿ (ಬಿಸಲೆಘಾಟ್‌ನ ಸಮೀಪ) ಫರಜುಲ್ಲಾ ಖಾನನನ್ನು ಸೋಲಿಸಿ ಮಡಿದ ವೀರರಾದರು. ಅಂತಾಗಿ ಅಲ್ಲಿ ದೊಡ್ಡಯ್ಯನಿಗೆ ಪೂಜೆ. ಜೊತೆಗೆ 'ಗೊದ್ದು' ಮೊದಲಿಗೆ 'ಗದ್ದುಗೆ' ಎಂಬ ಗ್ರಾಮವಾಗಿದ್ದು ನಂತರ ಗೊದ್ದು ಆಗಿರಲೂಬಹುದು. ಈ ದೊಡ್ಡಯ್ಯನಿಗೆ ವೀರಶೈವಗೌಡರೂ ನಡೆದುಕೊಳ್ಳುತ್ತಾರೆ. ಬಹುಶಃ ಕನ್ನಾಂಡ ದೊಡ್ಡಯ್ಯನ ಸಮಾಧಿ ಇಲ್ಲಿ ಆಗಿರಬಹುದು. ಅಂತಾಗಿ ಕಾಜೂರು ಈವರೆಗಿನ ಇತಿಹಾಸಕಾರರು ಹೇಳಿದಂತೆ, ಕನ್ನಾಂಡ ದೊಡ್ಡಯ್ಯ, ಮಂದಜ್ಜಿರ ಅಪ್ಪಣ್ಣ ಮಡಿದ ಜಾಗವಲ್ಲ.

ಶತಮಾನಕ್ಕೆ ಒಯ್ಯುತ್ತದೆ.[83] ಈ ಕನ್ನೇಶ್ವರ ಗುಡಿಯು ಸನಿಹವಿದ್ದ 'ಹಳೆಮನೆದಳ' ವಿದ್ದ ಊರಿಗೂ ಪ್ರಸ್ತುತ ಸ್ತಂಭಗಳ ಸ್ವರೂಪವೇ ಹೆಬ್ಬಾಗಿಲು ಆಗಿತ್ತು ಎಂಬ ಸೂಚನೆಯೇನೂ ಶಾಸನದಲ್ಲಿ ಕಾಣದು. 'ಕನ್ನೇಶ್ವರ' ಪಾಳುಗುಡಿ ವಾಸಿ ಆದಾಗ ಸುಗ್ಗಿಹಬ್ಬದ ಸಂಪ್ರದಾಯ ನಂತರದ ಹುಲುಕೋಡಯ್ಯನಿಗೆ ಅನ್ವಯ ವಾಗಿ ಬಂದಂತೆ ಕಾಣುತ್ತದೆ.

ಅವರದಾಳು ಗ್ರಾಮದಲ್ಲಿ ಸಂಕ್ರಾಂತಿಯ ಎರಡನೆಯ ದಿನದಂದು–ಗೊದ್ದುವಿನ ಘಟ್ಟದಬಾಗಿಲ ದೊಡ್ಡಯ್ಯನ ಜಾತ್ರೆಯ ಮರುದಿನ-ಹುಲುಕೋಡಯ್ಯನ ಜಾತ್ರೆ ನಡೆಯುತ್ತದೆ. ಹುಲುಕೋಡಿನಲ್ಲಿ ಸುಗ್ಗಿಕಟ್ಟೆಯ ಮೇಲೆ ಕೂರಿಸಿ, ದುಡಿ, ಓಲಗ ಒರೆಕತ್ತಿ ಹಿಡಿದು ಕುಣಿದು ಬರುತ್ತಾರೆ. ಅಡ್ಡೆಯಲ್ಲಿ ಕುಳಿತು ಆತುರ, ಆರ್ಭಟ ದಿಂದ ಬರುವ ಹುಲುಕೋಡಯ್ಯ ಅವರದಾಳುವಿನಲ್ಲಿ ತನಗೆ ಮೀಸಲಾದ ಕಟ್ಟೆಯ ಮೇಲೆ, ಅಶ್ವಾರೋಹಿ ಲೋಹವಿಗ್ರಹವಾದ ಉತ್ಸವಮೂರ್ತಿ ಅಲಂಕೃತನಾಗಿ ಕುಳಿತುಕೊಳ್ಳುತ್ತಾನೆ. ಸನಿಹ ಬಲಪಾರ್ಶ್ವದಲ್ಲಿನ 'ಮಾದಿಗಿತ್ತಿಕಟ್ಟೆ'ಗೂ[84] ಮಹತ್ವ ಬರುವಂತೆ ಅಲ್ಲಿ ಅವನ ಹಾಜರಿ ಆಗಿ ಪೂಜಾದಿಗಳು ನಡೆಯುತ್ತವೆ. ನಂತರ ಹುಲುಕೋಡಿಗೆ ಹಿಂದಿರುಗಿ ಬಂದು ರಾತ್ರಿಯ ಸುಗ್ಗಿಹಬ್ಬದ ಆಚರಣೆಗೆ ಆಶೀರ್ವದಿಸುತ್ತಾನೆ; ತಾನೂ ಪಾಲ್ಗೊಳ್ಳುತ್ತಾನೆ. ಈ ಹುಲುಕೋಡಯ್ಯ (ಕುಮಾರ ಲಿಂಗೇಶ್ವರನ ಉತ್ಸವಮೂರ್ತಿ) ಅವರದಾಳು ಗ್ರಾಮಕ್ಕೆ ಹೋಗಿ ಹಿಂದಿರುಗಿ ಬರುವವರೆವಿಗೂ ಕಿತ್ತೂರಿನ ಕುಮಾರ ಲಿಂಗೇಶ್ವರ ಹುಲುಕೋಡಿನ ಅವನ ದೇಗುಲದಲ್ಲಿದ್ದು ಅತ್ತಿಗೆಯ ಪಹರೆಗಾಗಿ ಇರುತ್ತಾನಂತೆ. ಅಣ್ಣ ಹಿಂದಿರು ಗುವ ವೇಳೆಗೆ ಅವನಿಗೆ ತನ್ನ ಮೋರೆಯನ್ನು ತೋರಿಸದೆ ಕಿತ್ತೂರಿನ ತನ್ನ ಸುಂದರ ದೇಗುಲಕ್ಕೆ ಹಿಂದಿರುಗುತ್ತಾನೆ. ಕಿತ್ತೂರು ಕುಮಾರಲಿಂಗೇಶ್ವರ ಹಿಂದಿರುಗುವಲ್ಲಿ ತೌಳೂರು ಎಂಬಲ್ಲಿಗೆ ಹೋಗಿ ಮನೆ ಮನೆ ಆರತಿ ಪಡೆದು ಬೆಳಗಿನ ಜಾವ ಬರುತ್ತಾನೆ.

ಕಿತ್ತೂರಿನ ಕುಮಾರಲಿಂಗೇಶ್ವರ ಗುಡಿಯು ಎಡ ಪಾರ್ಶ್ವಕ್ಕೆ ಉತ್ತರಮುಖಿಯಾಗಿ ಸುಗ್ಗಿಸ್ತಂಭಗಳ ಬಾಗಿಲುವಾಡವಿದ್ದು, ಪ್ರವೇಶದ್ವಾರದಂತೆ ಕಾಣಿಸಿ ಕೊಳ್ಳುತ್ತದೆ. '೧೯೩೭ರಲ್ಲಿ ಕಿತ್ತೂರು ಸಂಪಿಗೆದಾಳು ಕಾಳಪ್ಪ' ಎಂಬ ಸಾಲು ಈ ಸ್ತಂಭಗಳ ಮೇಲಿದ್ದು, ಬಹುಶಃ ಜೀರ್ಣೋದ್ಧಾರವಾದ ಸೂಚನೆ ನೀಡುವಂತಿದೆ. ದೇಗುಲದ ಬಲಬದಿಯ ಮುಂದೆ 'ಊರು ಸ್ಥಾಪನೆ ಕಲ್ಲು' ನಿಂತಿದೆ.

ಸಂಕ್ರಾಂತಿಯ ರಾತ್ರಿಯಿಂದಲೇ ಇಲ್ಲಿನ ಕುಮಾರ ಲಿಂಗೇಶ್ವರನಿಗೆ ಸುಗ್ಗಿಹಬ್ಬದ ಕಾರ್ಯಾಚರಣೆಗಳು ಆರಂಭವಾಗುತ್ತವೆ. ಆದರೆ 'ಸಾರುವೆ', 'ಬೆಂಗಲು' ಇತ್ಯಾದಿ ಕಟ್ಟುಗಳು ಕಾಣಬರುವುದಿಲ್ಲ. ನಾಲ್ಕು ದಿನ ಗಳ ಹಬ್ಬ ನಡೆಯುತ್ತದೆ. ಒಂದನೇ ದಿನ ಕುಮಾರ ಲಿಂಗೇಶ್ವರನಿಗೆ, ಸೋಮೇಶ್ವರ ಗುಡಿ ಬಳಿ ಇರುವ 'ದೇವರಬಾವಿ'ಯ ಜಲದಿಂದ ಗಂಗಾಸ್ನಾನವಾಗುತ್ತದೆ. ಅಗಸರು ನಡೆಮುಡಿ ಹಾಸಿರುವಲ್ಲಿ ಬೆಸ್ತರು ಛತ್ರಿ ಚಾಮರಗಳೊಡನೆ, ಪಂಜಿನ ಪ್ರಕಾಶದಲ್ಲಿ ವೀರಶೈವರು ದೇವರನ್ನು ಸಿಂಬಿಯ ಮೇಲಿಟ್ಟುಕೊಂಡು ಬರುತ್ತಾರೆ.

---

83 ಎ. ಕ., ಸಂಪುಟ ೧ (ಪರಿಷ್ಕೃತ ಆವೃತ್ತಿ) ೫೯(೬೭), ೧೩೫೯ ; ಜೊತೆಗೆ ಕೊಡಗಿನ ಮನೆಪೆದ (ಮನೆತನಗಳ ಹೆಸರುಗಳ ಇತಿಹಾಸ ಕನಿಷ್ಠ ೧೪ನೇ ಶತಮಾನದ್ದು ಎಂಬ ಅಂಶವನ್ನು ಶಾಸನದ 'ತ್ರಿನಮೇರ' ಎಂಬ ಮನೆಪದ (?) ಸೂಚಿಸುವಂತಿದೆ. ಹುಲುಕೋಡಿನ ಚಿಕ್ಕಣ್ಣಯ್ಯ ತ್ರಿನಮೇರ ದೇವಣ್ಣನೊಡನೆ ಘಟ್ಟದ ಕೆಳಗೆ ಯುದ್ಧಕ್ಕೆ ಸಾಗಿದ್ದ ಸಂಗತಿ ಇದರಲ್ಲಿದೆ. ಈ 'ಕನ್ನೇಶ್ವರ' ದೇವರಿಗೆ ೪ ಎಕರೆ ಉಂಬಳಿ ಭೂಮಿ ಇತ್ತು.

84 ಹುಲುಕೋಡಯ್ಯ ಮೋಹಿಸಿ ಒಲಿಸಿಕೊಂಡ ಹರಿಜನರ ಹೆಣ್ಣು ಈಕೆ. ಇದಕ್ಕೆ 'ಸೂಳೆಕಟ್ಟೆ' ಎಂದೂ ಹೇಳುವುದುಂಟು. ಈ ಜಾತ್ರೆ ಸಮಯದಲ್ಲಿ ಈ ಕಟ್ಟೆಗೂ ಚಪ್ಪರ ಹಾಕಿ 'ಅಮ್ಮನ ಹೆಜ್ಜೆ' ಎಂದು ಚಿಬ್ಬಲಿನಲ್ಲಿ ಅಕ್ಕಿ ಹೊಂಬಾಳೆ ಕಳಶ ಮತ್ತು ದೀಪವಿಡುತ್ತಾರೆ. ಇವರಿಬ್ಬರ ಒಲವಿನ ಕತೆ 'ಜನಪದಗೀತೆ'ಯಾಗಿ ಪ್ರಚಾರದಲ್ಲಿದೆ. ಹುಲುಕೋಡಿನ ಪ್ರಾಚೀನ ಕನ್ನೇಶ್ವರ ಗುಡಿಯಲ್ಲಿ ಆರತಿಗೆ ಹತ್ತು ವರುಷದೊಳಗಿನ ನೆರೆಯದ ಕನ್ಯೆಯರಿಗೆ ಮಾತ್ರ ಅವಕಾಶವಿರುವುದಕ್ಕೂ ಹುಲು ಕೋಡಯ್ಯನ ಜನಪದ ಕತೆಗೂ ಸಾಂಕೇತಿಕ ಸಂಬಂಧವಿರಬಹುದು. ಈ ಮೇಲಿನ ಕಟ್ಟೆ ಇರುವುದು ವೀರಶೈವರ ರುದ್ರ ಭೂಮಿಯೂ ಆಗಿರುವ 'ಜಾತ್ರೆ ಬಸ'ದಲ್ಲಿ. 'ಜನಪದ ಗೀತೆ'ಯಲ್ಲಿ ಹುಲುಕೋಡಯ್ಯ ಹಾಗೂ ಅವನ ಪ್ರೇಯಸಿಯ ಒಲವಿನ ಕತೆ ತುಂಬ ಸುಂದರವಾಗಿ ಹಾಗೂ ವೀರ್ಯವತ್ತಾಗಿ ರೂಪಿತವಾಗಿದೆ.

ಹಾಗೆ ಬರುವಲ್ಲಿ ಮನೆ ಮನೆಯ ಮುತ್ತೈದೆ ಹಾಗೂ ಕನ್ನೆಯರಿಂದ ಕಳಶದಾರತಿ ಬೆಳಗುತ್ತದೆ. ಈ ಕುಮಾರ ಲಿಂಗೇಶ್ವರ ಅವರದಾಳು ಜಾತ್ರೆಗೆ ಹೋಗುವುದಿಲ್ಲ. ಆದರೆ ಅಣ್ಣ ಹುಲುಕೋಡಯ್ಯ ಅವರದಾಳು ಜಾತ್ರೆಗೆ ಸಡಗರ, ಆರ್ಭಟಗಳಿಂದ ಹೋಗಿರುವಲ್ಲಿ ಹುಲುಕೋಡಿನ ದೇಗುಲದಲ್ಲಿ ಇರುತ್ತಾನೆ. ಹುಲುಕೋಡಯ್ಯ ಹುಲುಕೋಡನ್ನು ಹಿಂದಿರುಗಿ ಬಂದು ಸೇರುವ ಸ್ವಲ್ಪ ಸಮಯದ ಮುನ್ನ ಕಿತ್ತೂರಿನ ಕಡೆ ಹೊರಡುತ್ತಾನೆ.

ಮರುದಿನ ಅಂದರೆ ಮೂರನೆಯ ದಿನ ಊರು ಮುಂದಿನ ಗದ್ದೆಬಾಣೆಯಲ್ಲಿ ಕಿತ್ತೂರಯ್ಯನ ಜಾತ್ರೆ. ಆಗಲ್ಲಿ ಕುಮಾರಲಿಂಗೇಶ್ವರನನ್ನು ಒಯ್ದು 'ಕಟ್ಟೆಜಾತ್ರೆ' ಎನ್ನುತ್ತಾರೆ. ಅಲ್ಲಿ ಎಲ್ಲರೂ ಹಣ್ಣು ಕಾಯಿ ಮಾಡಿಸುತ್ತಾರೆ. ನಾಲ್ಕನೇ ದಿನ ರಾತ್ರಿಯಿಂದ ಬೆಳಗಿನವರೆಗೆ ಅಡ್ಡೆಯಲ್ಲಿ ದೇವರನ್ನಿಟ್ಟು ಕುಣಿತ ಉಯ್ಯಾಲೆಯಂತೆ ನಡೆಯುವುದುಂಟು. ಜೊತೆಗೆ ನಡೆಯುವ ಸುಗ್ಗಿ ಕುಣಿತವು 'ಒರೆಕತ್ತಿ ಕುಣಿತ'ವೆಂದು ಪ್ರಸಿದ್ಧವಾದ ಕುಣಿತ-ಕಿತ್ತೂರಿನ ಸುಗ್ಗಿಕತ್ತಿ ಕುಣಿತವೆಂದೂ ಪ್ರಸಿದ್ಧವಾಗಿದೆ.

ಕೊಡಗಿನ ವೀರರಾಜೇಂದ್ರನ ಮುಂದೆ ಶಿರಕ್ಕೆ ಜರಿಪೇಟ, ಸೊಂಟಕ್ಕೆ ವೀರಗಚ್ಚೆ ಹಾಗೂ ತುಂಡು ದಟ್ಟಿ ಧರಿಸಿ ಒರೆಗತ್ತಿ ಸೆಳೆದು ಕುಣಿಯುತ್ತಿದ್ದ ಪರಂಪರೆ ಕಿತ್ತೂರಿನದಂತೆ.[85]

ನಾಲ್ಕನೇ ದಿನದ ಕುಣಿತದ ನಂತರ ಗುಡಿಯ ಬಾಗಿಲಲ್ಲಿ ಅಂದರೆ ಸುಗ್ಗಿಸ್ತಂಭಗಳ ಬಾಗಿಲಲ್ಲಿ ಹಣ್ಣು ಕಾಯಿ ಪೂಜೆ ನಡೆಯುತ್ತದೆ.

ಹುಲುಕೋಡಯ್ಯ ಮತ್ತು ಅವನ ತಮ್ಮ ಕಿತ್ತೂರಯ್ಯ-ಕುಮಾರಲಿಂಗೇಶ್ವರರ ಉತ್ಸವಮೂರ್ತಿಗಳು ಅಶ್ವಾರೋಹಿ ಮೂರ್ತಿಗಳಾಗಿವೆ. ಈರ್ವರ ದೇಗುಲಗಳಲ್ಲಿ ಗದ್ದುಗೆಯ ಮೇಲೆ ಆ ವಿಗ್ರಹಗಳನ್ನೂ ಇಡುತ್ತಾರೆ. ಶಿವಲಿಂಗಗಳು ಎರಡೂ ದೇಗುಲಗಳಲ್ಲಿ ಇಲ್ಲ. ಬಹುಶಃ ಐತಿಹಾಸಿಕ ವ್ಯಕ್ತಿಗಳಾದ ಹುಲುಕೋಡಯ್ಯ ಮತ್ತು ಕಿತ್ತೂರಯ್ಯನ ಗದ್ದುಗೆಗಳೇ ಅವರೀರ್ವರ ಹೆಸರಿನ ದೇಗುಲಗಳಾಗಿರುವಂತಿವೆ. ಅದೇ ಸಕಲೇಶಪುರ ತಾಲೂಕು (ಹಿಂದಿನ ಮಂಜರಾಬಾದು) ಗೊದ್ದುಗ್ರಾಮದ 'ಘಟ್ಟದಬಾಗಿಲ ದೊಡ್ಡಯ್ಯ'ನ ದೇಗುಲದಲ್ಲಿ ಶಿವಲಿಂಗವಿದ್ದು ಕುಮಾರಲಿಂಗೇಶ್ವರನೆನಿಸಿದ್ದಾನೆ. ಐಗೂರಿನ ಇತಿಹಾಸದಲ್ಲಿ[85-ಅ] ಈ ದೊಡ್ಡಯ್ಯನ ಹಾಗೂ ಗೊದ್ದುಗ್ರಾಮದ ಸಂಬಂಧಗಳೂ ಕಂಡುಬರುತ್ತವೆ.

ಕೊಡಗಿನಲ್ಲಿ ಹೀಗೆಯೇ ಶನಿವಾರಸಂತೆಯ ಬಳಿಯ ಪ್ರಸಿದ್ಧ ಐತಿಹಾಸಿಕ ನೆಲೆಯಾದ (ಈಗ ಹಾಸನ ಜಿಲ್ಲೆಯ) ಐಗೂರಿನಲ್ಲಿ ಸುಗ್ಗಿಕಟ್ಟೆ, ತೋಳೂರುಶೆಟ್ಟಳ್ಳಿ ಮತ್ತು ಹಾನಗಲ್ಲುಶೆಟ್ಟಳ್ಳಿಯ ಜೋಡಿಸ್ತಂಭಗಳ ಸುಗ್ಗಿಕಟ್ಟೆಗಳೂ ಗಮನಾರ್ಹವಾಗಿವೆ. ಕೊಡಿಗೆಕೊಪ್ಪಲು ಬಳಿಯ ಹೆಗ್ಗಡಹಳ್ಳಿಯ ಉಯ್ಯಾಲೆ ಸ್ತಂಭಕಟ್ಟೆಯು ದಂಡಿನಮ್ಮ, ಸಪ್ತಮಾತೃಕೆಯರಿಗೆ ಮೀಸಲು.

### ನೆರೆಯ ಜಿಲ್ಲೆಯ ಸುಗ್ಗಿಕಟ್ಟೆಗಳು
### ಹಾಸನ ಜಿಲ್ಲೆಯ ಹೇರೂರು ಸುಗ್ಗಿಕಟ್ಟೆ

ಹಿಂದಿನ ಕೊಡಗಿನ ಗಡಿಗ್ರಾಮ ಚಂಗಡ ಹಳ್ಳಿಯ ಮೂಲಕ ೨ ಮೈಲಿ ಸಾಗಿದರೆ, ಕೊಡಗಿನ ಗಡಿಯಾಚೆಯ ಗ್ರಾಮವೇ ಸಕಲೇಶಪುರ ತಾಲೂಕಿನ ಹೇರೂರು. ಇಲ್ಲಿ ೧೦ ಅಡಿ ಅಗಲ ೨ ೧/೨ ಅಡಿ ಎತ್ತರದ ಕಟ್ಟೆಯ ಮೇಲೆ ಸುಮಾರು ೨೦ ಅಡಿ ಎತ್ತರದ ಸುಗ್ಗಿಸ್ತಂಭದ್ವಯಗಳಿವೆ. ಕಟ್ಟೆಯ ನಡುಪಾರ್ಶ್ವ(ದಕ್ಷಿಣ)ಕ್ಕೆ ಸರ್ಪವನ್ನು ಹಿಡಿದಿರುವ ಹಂಸದ ಶಿಲ್ಪ, ಸ್ತಂಭದ ಮೇಲೆ ಮಿಥುನ ಶಿಲ್ಪವಿದೆ. ಮೇಲಿನ ಅಡ್ಡತೊಲೆಯಲ್ಲಿ ಶಿಲಾಕಳಶ ಹಾಗೂ ಕೇಂದ್ರ ಕೊಕ್ಕೆಯಿಂದ ಇಳಿಬಿಟ್ಟ ಕಬ್ಬಿಣದ ಸರಪಳಿಯ ತುದಿಯಲ್ಲಿ ಗೂಡುಮಣೆ ಇದೆ.

---

85 ಈ ಅಂಶವನ್ನು ಕಿತ್ತೂರಿನ ಶ್ರೀ ಕೆ. ವಿ. ವಿಶ್ವನಾಥ್ ಮತ್ತು ಶ್ರೀ ಕೆ. ವಿ. ಮಂಜುನಾಥ್ ಅವರು ತಿಳಿಸಿದರು. ಹುಲುಕೋಡಯ್ಯ ಹಾಗೂ ಘಟ್ಟದಬಾಗಿಲ ದೊಡ್ಡಯ್ಯನ ಜಾತ್ರೆ ಹಾಗೂ ಸುಗ್ಗಿಹಬ್ಬದ ಸಂಬಂಧದ ಜನಪದ ಕ್ಷೇತ್ರಕಾರ್ಯ ಹಾಗೂ ಅಧ್ಯಯನಕ್ಕೆ ನೆರವಾದವರು ಹೆಗ್ಗಡಹಳ್ಳಿಮಠದ ಅಧ್ಯಕ್ಷರಾದ ಶ್ರೀ ಷ॥ ಬ್ರ॥ ಶಿವಶಂಕರ ಶಿವಾಚಾರ್ಯರು ಹಾಗೂ ಶ್ರೀ ಮಲ್ಲಿಕಾರ್ಜುನಸ್ವಾಮಿ ಹಿರೇಮಠ ಅವರು.

85-ಅ ಐಗೂರು ಚಂಗಾಳ ನಾಯಕನ ಕಾಲದಲ್ಲಿ ನಾಡಗೌಡರಿಗೆ ಬಿಂದು ಬಾವಲಿಗಳು ದಕ್ಕಿದುವಂತೆ.

ಹನ್ನೆರಡು ದಿನಗಳ ಸುಗ್ಗಿಹಬ್ಬವು 'ಚಿಕ್ಕಮ್ಮ' ದೇವತೆಯ ಹೆಸರಿನಲ್ಲಿ ನಡೆಯುತ್ತದೆ. ಜೊತೆಗೆ ಈಶ್ವರ ದೇವರಿಗೂ ಹಬ್ಬದಪೂಜೆ ಉಂಟು. ಹಬ್ಬ ಆರಂಭ ವಾಗುವ ಶುಕ್ರವಾರದಂದು ಈಶ್ವರನ ಗುಡಿಯ ಮುಂದೆ 'ಪರ', ಶನಿವಾರದಂದು ಹಬ್ಬದ ವ್ಯವಸ್ಥೆಯ ನಿರೂಪ, ಭಾನುವಾರ ರಾತ್ರಿ 'ಸಾರುವೆ' ಆಗುತ್ತದೆ. ರಾತ್ರಿ ಮೂರು ಗಂಟೆಗೆ ಅಂದರೆ ಸೋಮವಾರವೇ ನಿಜವಾಗಿ 'ಸಾರುವೆ'.

ತೊಟ್ಟಿಲಲ್ಲಿ ಮೂರು ಮುಖವಾಡವಿಟ್ಟುಕೊಂಡು, ಕಂಚಿನ ಬ್ಯಾಟೆಬೀರನ ಸಹಿತ ರುದ್ರಮುನಿಸ್ವಾಮಿ ಗುಹೆಯ ಬಳಿ ಅಭಿಷೇಕಪೂಜೆಯ ನಂತರ ಹೆದ್ದೇವರ ಬನಕ್ಕೆ ದೇವರು ಓಡಿ ಬಂದು ಪೂಜಾದಿಗಳು ನಡೆಯು ತ್ತದೆ. ಸೋಮವಾರ ಬೆಳಗ್ಗೆ ಏಳುಗಂಟೆಗೆ ಸುಗ್ಗಿ ಕಟ್ಟೆಯ ಬಳಿ ಬಂದು ಮೂರು ಸುತ್ತು ಸುತ್ತಿದ ನಂತರ ಕಟ್ಟೆಯ ಮೇಲೆ ದೇವರಿಗೆ ಪೂಜೆ. ನಂತರ ದೇವಸ್ಥಾನಕ್ಕೆ ಹಿಮ್ಮುಖವಾಗಿ ಸಾಗುತ್ತದೆ. ದೇಗುಲದಲ್ಲಿ ಮಂಗಳಾ ರತಿಯ ವೇಳೆಗೆ ಹತ್ತು ವರುಷದ ನೆರೆಯುದ ಹೆಣ್ಣು ಮಕ್ಕಳು ಮೂವರು, 'ಸೊಡ್ಲು' ತರುತ್ತಾರೆ. ವಾದ್ಯ, ಕತ್ತಿವರಸೆ, ಸುಗ್ಗಿಕುಣಿತದ ರಂಜನೆಯೊಡನೆ ರಾತ್ರಿಯ ತ್ರಿಕಾಲ ಪೂಜೆಯೂ ನಡೆಯುತ್ತದೆ.

ಐದು–ಆರು–ಏಳನೇ ದಿನಗಳಲ್ಲಿ (ಮಂಗಳ-ಬುಧ-ಗುರುವಾರ) ಈಶ್ವರ ಹಾಗೂ 'ಚಿಕ್ಕಮ್ಮ'ನ ದೇಗುಲಗಳಲ್ಲಿ ಪೂಜೆ ನಡೆದರೆ, ಸುಗ್ಗಿಕಟ್ಟೆಯ ಬಳಿ ರಾತ್ರಿ ವೇಳೆ ಸೊಡ್ಲುಪೂಜೆ ಹಾಗೂ ಕತ್ತಿ ಕುಣಿತವಿರುತ್ತದೆ. ಎಂಟನೇ ದಿನ ಶುಕ್ರವಾರ ಸುಗ್ಗಿಕಟ್ಟೆ ಆವರಣದ ಹೊರಗಿನ ಹಾದಿ ಯಲ್ಲಿ ದೊಡ್ಡ ತೋರಣಬಾಗಿಲು ನಿಲ್ಲಿಸಿ ಮೇಲೆ ಬಿದಿರಿನ 'ಗಿಣಿ' ಕಟ್ಟಿ ಸಂಜೆ ನಾಲ್ಕಕ್ಕೆ ಪೂಜೆ ಉಂಟು. 'ಮುಂಡಸ್ಥಾನ' (ಉರುಳುಸೇವೆ) ಹರಕೆ ಸೊಡ್ಲು ಹಾಗೂ ಹಣ್ಣು–ತುಪ್ಪದ 'ಹಣ್ಣೆಡಿಗೆ' ಅರ್ಪಣೆ ನಡೆಯುತ್ತದೆ. ರಾತ್ರಿ ೯ಕ್ಕೆ ಮುಂದಿನ ಪೂಜೆ. ಆಗ ಹದಿನಾರು ಹಳ್ಳಿಯ ಜನ ಸೇರುತ್ತಾರೆ. ರಾತ್ರಿ ಎರಡು ಗಂಟೆಯವರಿವಿಗೆ ಕತ್ತಿವರಸೆ, ಕುಣಿತಗಳುಂಟು. ಮರದ ಹೆಣ್ಣು–ಗಂಡು ಕುದುರೆಗಳನ್ನೂ ಅಲ್ಲಿ ಅರ್ಪಿಸು ತ್ತಾರೆ.[86] ವೀರಶೈವರ ಮೂವರು ಕನ್ಯೆಯರು, ಮೂರು ಸೊಡ್ಲು, ಒಂದು ಪಂಚಾರತಿ ಸಮೇತ ವಾದ್ಯ ದೊಡನೆ ಸುಗ್ಗಿಕಟ್ಟೆಗೆ ಬಂದು 'ಸಲಾಂ ಕುದುರೆ' ಹಾಕು ತ್ತಾರೆ. ಅದಕ್ಕೆ ದೊಡ್ಡಸುಗ್ಗಿ ಅಥವಾ ಕುದುರೆಸುಗ್ಗಿ ಎನ್ನುತ್ತಾರೆ. ಶನಿವಾರ ಬಿಲ್ಲುಸುಗ್ಗಿ ಹಾಗೂ ಮರೆ ಕುದುರೆ ಆಟ. ಭಾನುವಾರ ಉಪವಾಸ, ಶುದ್ಧ ಮುದ್ರಿಕೆಯಲ್ಲಿದ್ದು ಹೊಸಭತ್ತ ಕುಟ್ಟಿ ಹಸಿಸೌದೆ ಉರಿಸಿ ಬಾಳೆಎಲೆ ಮೇಲೆ ಆ ಹಿಟ್ಟಿನ ರೊಟ್ಟಿ ಮತ್ತು ತಂಬಿಟ್ಟು ತಯಾರಿಸಿ ಹಾಗೂ ಹುಗ್ಗಿ ಅನ್ನವನ್ನು ಶೃಂಗರಿಸಿದ ಹೊಸ ಮಡಿಕೆಯಲ್ಲಿ ತಂದು ದೇಗುಲದಲ್ಲಿಡುವರು. ಆ ರಾತ್ರಿ 'ಮಲ್ಲುಸುಗ್ಗಿ'ಯ ನಂತರ 'ಮಡೆ' ನಡೆಯುತ್ತದೆ–ಅಂದರೆ ಸೋಮವಾರ ಬೆಳಗಿನ ಜಾವ ಮೂರು ಗಂಟಗೆ ಮೂರು ಮುಖವಾಡಗಳನ್ನು ಮಾತ್ರ ತೊಟ್ಟಿಲಲ್ಲಿಟ್ಟು ಕೊಂಡು–'ಚಿಕ್ಕಮ್ಮ'ನನ್ನು ವಾದ್ಯ ಸಮೇತ ಅರ್ಚಕರು ಹಾಗೂ 'ಮಡೆ'ಯ ಮಡಿಕೆ ಹೊತ್ತ ಕನ್ಯೆಯರು ಹೆದ್ದೇವರ ಬನಕ್ಕೆ ಬಂದು ಎರಡು ಎಡೆ ಇಡುತ್ತಾರೆ. ದೇವತೆಯ ಪತಿ ಕೋರಸ್ವಾಮಿಗೆ ನಾಲ್ಕು ಎಡೆ ಪೂಜೆ ಸಹಿತ ಇಡುತ್ತಾರೆ. ದೇವತೆ ಗಂಡನ ನೆಲೆಯಾದ ಕೋರಸ್ವಾಮಿ ಬನಕ್ಕೆ ಹೋಗುವುದಿಲ್ಲವಾದ ಕಾರಣ ಜನರೇ ಹೋಗಿ ಸುಗ್ಗಮ್ಮ ದೇವರ ಗಂಡ ಕೋರಸ್ವಾಮಿಗೆ ೧೦೧ ಎಡೆ ಇಡುತ್ತಾರೆ. ಅಲ್ಲಿಂದ ಸುಗ್ಗಿಕಟ್ಟೆಗೆ ಒಂದು ಪೂಜೆಗೆ ಮುನ್ನ 'ಮಡೆ' ಇಡು ತ್ತಾರೆ–ಅಂದರೆ ಕಟ್ಟೆಯ ಕಂಬಕ್ಕೆ ತೋರಣಗಂಬಕ್ಕೆ ದೇಗುಲದ ಮುಂದಿನ ಬಲಿಗಂಬಕ್ಕೆ ಇಡುವುದು–ಆನಂತರ ಕಟ್ಟೆಯಲ್ಲಿ ದೇವತೆಗೆ ಫಲಪೂಜೆ ; ದೇಗುಲದಲ್ಲಿಯೂ ಪೂಜೆ. ಇದಾದ ನಂತರ ಮಲ್ಲುಕಟ್ಟೆಗೆ, ನಾಲ್ಕು ಸೊಡ್ಲು ತಂದು ಕಟ್ಟೆಯ ಬಳಿ ಹಚ್ಚಿ ಕುಣಿಯುತ್ತಾರೆ. ಇದಾದ ಮೇಲೆ ಹಗಲುಸುಗ್ಗಿ. 'ಚಿಕ್ಕಮ್ಮ'ನಿಗೆ ಉಯ್ಯಾಲೆ. ಆಮೇಲೆ ಚಿಕ್ಕಮ್ಮನನ್ನು ಅಡ್ಡೆಯಲ್ಲಿಟ್ಟುಕೊಂಡು ಕುಣಿ ಯುತ್ತ ಒಂದು ಸುತ್ತು ಬಂದಮೇಲೆ ಕಟ್ಟೆಯ ಬಳಿ ಆಕೆಗೆ 'ಸೂರಣ್ಣು' (ಹಣ್ಣು–ದವನ) ಬಿಡುವರು. ಇಡಿ ಗಾಯಿ ಹಾಕುವರು. ಸೋಮವಾರ ರಾತ್ರಿ ೯ಕ್ಕೆ ಕಟ್ಟೆ

---

86 ಕೊಡಗಿನಲ್ಲಿ ಶಾಸ್ತಾವು ಅಯ್ಯಪ್ಪನಿಗೆ (ಪೆಗ್ಗಳ, ಮಕ್ಕಿ, ಬಿಲ್ಲವಾಪಟೆ ಮತ್ತು ಇತರೆಡೆ) ಮಣ್ಣಿನ ನಾಯಿ, ಕುದುರೆ, ಆನೆಗಳನ್ನು ಅರ್ಪಿಸುವ ರೂಢಿಯನ್ನು ಇದು ನೆನಪಿಗೆ ತರುತ್ತದೆ.

ಯಿಂದ ದೇವತೆಯನ್ನು ಎಬ್ಬಿಸಿ ಕಟ್ಟೆಯ ಬಾಗಿಲ ಬಳಿ ಆರತಿಯ ನಂತರ, ದೇವರ ಸಾಮಾನುಗಳ ಸಹಿತ ದೇಗುಲಕ್ಕೆ ಒಯ್ದಿಡುತ್ತಾರೆ. ಇನ್ನು ಮುಂದಿನ ವರುಷದ ಹಬ್ಬದಲ್ಲಿಯೇ ಆ ದೇಗುಲದ ಬಾಗಿಲನ್ನು ತೆಗೆಯುವುದು. ಮೊದಲಿಗೆ ಇಲ್ಲಿನ ಹಬ್ಬಕ್ಕೆ ಚಂಗಡಹಳ್ಳಿ ಹಾಗೂ ಹೆಗ್ಗಡ ಹಳ್ಳಿ ಸ್ವಾಮಿಗಳು ಬರುತ್ತಿದ್ದರು. ಅವರಿಗಾಗಿ ನಿರ್ದಿಷ್ಟ ವಾಗಿದ್ದ ಕಲ್ಲುಕಟ್ಟೆ ಇಂದು ಬಿಕೋ ಎನ್ನುತ್ತಿದೆ. ಇಲ್ಲಿನ ಅರ್ಚಕರು ವಿಶ್ವಕರ್ಮ ಜನಾಂಗದವರು. ಈ ಹಬ್ಬದ ಹನ್ನೆರಡು ದಿನವೂ ಮನೆಗೆ ಹೋಗದೆ ಶುದ್ಧ ಮುದ್ರಿಕೆ ಯಲ್ಲಿ ದೇಗುಲದಲ್ಲಿ ವಾಸಮಾಡಿ ಪೂಜಾದಿಗಳನ್ನು ನೆರ ವೇರಿಸಬೇಕು.

ಗಂಡನಾದ 'ಕೋರಸ್ವಾಮಿ'ಯ ಬನಕ್ಕೆ ಸುಗ್ಗಿ ದೇವರ ಹಬ್ಬದಲ್ಲಿ ಅವನ ಸತಿಯರು ಹೋಗದಿರುವುದಕ್ಕೆ ಜನಪದ ಕತೆ ಹೀಗಿದೆ : ಸಕಲೇಶಪುರ ತಾಲೂಕು 'ಜಾನಕೆರೆ ಸುಗ್ಗಮ್ಮ'ನೊಡನೆ ಕೋರಸ್ವಾಮಿ ಪ್ರೇಮ ದಿಂದಿದ್ದ. ಅಂತಾಗಿ ಅವಳನ್ನು ಆಗಾಗ ಕರೆದುಕೊಂಡು ಬಂದು 'ಜಾಗರದಿಣ್ಣೆ' ಎಂಬಲ್ಲಿ ಸಲ್ಲಾಪ ನಡೆಸುತ್ತಿದ್ದ. ಇದನ್ನು ಕೇಳಿಸಿಕೊಂಡು ಸುಗ್ಗಮ್ಮ (ಚಿಕ್ಕಮ್ಮ?), ಕೆಂಚಮ್ಮ ಜಾಗರದಿಣ್ಣೆಯ ಬಳಿ ನೋಡಲು ಹೋದಾಗ ಕೋರಸ್ವಾಮಿ ಸಿಟ್ಟುಗೊಂಡು ಅವರ ಮುಖಗಳನ್ನು ಕೊಚ್ಚಿ ಹಾಕುವಂತೆ ಹೊಡೆದನಂತೆ. ಅದರಿಂದ ಸಿಟ್ಟು ಗೊಂಡು ಒಂದು ದೇವಿಯರು ಗಂಡನಿರುವ ಬನಕ್ಕೆ ಹೋಗುವುದನ್ನೆ ನಿಲ್ಲಿಸಿದರಂತೆ. ಜಾನಕೆರೆ ಸುಗ್ಗಿಹಬ್ಬವೂ ಇಲ್ಲಿ ಮೊದಲಿಗೆ ಮಿಳಿತವಾಗಿತ್ತು ಎಂಬ ಇತಿಹಾಸದ ಎಳೆ ಈ ಕತೆಯಲ್ಲಿದೆ ಎನ್ನಿಸುತ್ತದೆ. ಕೋರಸ್ವಾಮಿಯ ಬನದಲ್ಲಿ ಅವನ ವಿಗ್ರಹ ಹಾಗೂ ಕಪಾಲಭೈರವಿ ಶಿಲ್ಪಕ್ಕೆ ಜನಪದ ಮೇಲಿನಂತೆ ಕತೆಯನ್ನು ಸೃಷ್ಟಿಸಿರಬಹುದು. ಜೊತೆಗೆ ಈ ಶಿಲ್ಪಗಳ ಚಹರೆಗಳು ಕೊಡಗನ್ನು ಆಳಿದವರ ಇತಿಹಾಸದ ಕೆಲವು ಸಂಗತಿಗಳನ್ನು ಗಮನಾರ್ಹವಾಗಿ ಹೇಳುವಂತಿವೆ; ಅವರ ಕಾಲದಲ್ಲಿ ಈ ಭಾಗವು ಕೊಡಗಿಗೆ ಸೇರಿತ್ತು ಎಂಬ ಸೂಚನೆಯನ್ನು ನೀಡುವಂತಿವೆ. ಈಗಿನ ಸಕಲೇಶಪುರ ಅರ್ಥಾತ್ ಹಿಂದಿನ ಮಂಜರಾಬಾದು ಪ್ರದೇಶಗಳ ಗಡಿಭಾಗಗಳು ಒಂದುಕಾಲಕ್ಕೆ ಕೊಡಗಿಗೆ ಸೇರಿದವುಗಳೇ ಆಗಿದ್ದುವು.

ಈ ಕೋರಸ್ವಾಮಿಯ ಎರಡೂ ಕೈಗಳಲ್ಲಿ ಕಮಲದ ಮೊಗ್ಗುಗಳಿವೆ. ಶಿರದ ಹಿಂಬದಿಯಲ್ಲಿ ಕಿವಿತನಕ ಹೊಂದಿ ಕೊಂಡಂತೆ ಸೂರ್ಯಕಿರಣಗಳು ಚಕ್ರಾಕೃತಿಯಲ್ಲಿ ಮೂಡಿವೆ. ವಿಗ್ರಹ ಭಿನ್ನವೂ ಆಗಿದೆ. ಚಹರೆ, 'ಸೂರ್ಯ'ದೇವರ ಶಿಲ್ಪವೆಂದು ತೋರಿಸುತ್ತದೆ. ಈ ವಿಗ್ರಹದ ಬಲಕ್ಕೆ ಪಾನ ಪಾತ್ರೆ ಹಿಡಿದ ಕಪಾಲಭೈರವಿ ವಿಗ್ರಹವಿದೆ. (ಬಹುಶಃ ಜಾನಕೆರೆಯಿಂದ ಅಪಹರಿಸಿ ತಂದ ಶಿಲ್ಪವಾಗಿದ್ದು, ಆದಕ್ಕೆ ಜನಪದ ತನ್ನದೇ ಆದ ರೀತಿಯಲ್ಲಿ ಕತೆ ಯನ್ನು ರೂಪಿಸಿಕೊಂಡಿರುವಂತೆ ಕಾಣುತ್ತದೆ). ಕೋರ ಸ್ವಾಮಿಯ ಎಡಕ್ಕೆ ಚತುರ್ಭುಜ ಸ್ಥಾನಕ ಸೂರ್ಯ ನಾರಾಯಣನ ವಿಗ್ರಹವಿದೆ. ಮೂರು ವಿಗ್ರಹಗಳೂ ಭಿನ್ನವಾದ ಬಿಡಿ ವಿಗ್ರಹಗಳೇ ಆಗಿವೆ. ಮೂರನೇ ವಿಗ್ರಹ ಹೊಯ್ಸಳ ಶೈಲಿಯದಾಗಿದೆ. ಇಲ್ಲಿ ಸೂರ್ಯಶಿಲ್ಪ ದೊರೆ ತಿರುವುದು ಅಪರೂಪವೆ. ಕಾರಣ ತಿಳಿಯಬೇಕು.

ಸೂರ್ಯಾರಾಧನೆ ಭಾರತದಲ್ಲಿ ಒಂದು ಕಾಲಕ್ಕೆ ವಿಶೇಷವಾಗಿತ್ತು. ತಂಜಾವೂರು ಜಿಲ್ಲೆ ತಿರುವಡ ಮುರ ಡೂರಿನಲ್ಲಿ ಕುಲೋತ್ತುಂಗಚೋಳ ಕಟ್ಟಿಸಿದ 'ಸೂರ್ಯ ಕೋಯಿಲ್'ನಲ್ಲಿ ಸೂರ್ಯನೇ ಪ್ರಧಾನ ದೇವತೆ.[87] ಈ ಹಿನ್ನೆಲೆಯಲ್ಲಿ ಕೊಡಗಿನ ಇತಿಹಾಸದ ತುಣುಕುಗಳು ಕಾಣಬರುವಂತಿವೆ.

ಚೋಳರ ಪ್ರಭಾವಕ್ಕೆ ಕೊಂಗಾಳ್ವರು ಅಥವಾ ಚಂಗಾಳ್ವರು ಒಳಗಾಗಿ ಕೊಡಗಿನ ಗಡಿಪ್ರದೇಶದಲ್ಲಿ ಸೂರ್ಯದೇವಾಲಯವನ್ನು ೧೧ನೇ ಶತಮಾನದಲ್ಲಿ ಕಟ್ಟಿಸಿ ಟ್ಟಿರಬಹುದು. ನಂಜರಾಯಪಟ್ಟಣದ ನಂಜುಂಡೇಶ್ವರ ದೇಗುಲದ ಬಲಬದಿಯ ಕಾವೇರಿದಂಡೆಯ ಬಳಿ ಚೋಳರು ವೀರಭದ್ರನ ಸ್ಥಾಪನೆ ಮಾಡಿದ[87-ಅ] ಕುರುಹುಗಳೂ ಕಾಣಬರುತ್ತದೆ ಮತ್ತು ಹೊಯ್ಸಳರಿಂದ ಚಂಗಾಳ್ವರು ಸೋಲಿಸಲ್ಪಟ್ಟ ಮೇಲೆ ಅವರ ಅಧೀನ ದಲ್ಲಿದ್ದು ಪ್ರಭಾವಿತರಾಗಿದ್ದರು ಎನ್ನುವುದಾದರೆ

87 ಪ್ರೊ॥ ಎಸ್. ಕೆ. ರಾಮಚಂದ್ರರಾವ್ : ಮೂರ್ತಿಶಿಲ್ಪ : ನೆಲೆ–ಹಿನ್ನೆಲೆ, ಪು. ೨೬೨

87-ಅ Coorg District of Gazetteer, p. 44–45

ಹೊಯ್ಸಳ ಶೈಲಿಯಲ್ಲಿರುವ ನಂಜರಾಜಪಟ್ಟಣದೊಳಗಿನ ವೀರಭದ್ರನ ಶಿಲ್ಪ ಮತ್ತು ದೇಗುಲ ಸಾಕ್ಷಿ ಆಗಬಲ್ಲುವು. ಅದೇ ನಿಟ್ಟಿನಲ್ಲಿ ಯೋಚಿಸಿದರೆ ಪ್ರಸ್ತುತ ಹೇರೂರಿನ ಶಿಲ್ಪವೂ ಚೆಂಗಾಳ್ವರ ಕಾಲದವು ಆಗಿರಬಹುದು. ಕಪಾಲ ಭೈರವಿಯ ಶಿಲ್ಪವು ಶಕ್ತಿಪಂಥದ ಪ್ರಭಾವ ಬಂದು ಹೋಗಿರುವುದನ್ನು ಇಲ್ಲಿ ತಿಳಿಸುವಂತಿದೆ. ಇನ್ನು ಇಲ್ಲಿನ ಸೂರ್ಯದೇವರಿಗೆ 'ಕೋರಸ್ವಾಮಿ' ಎಂದು ಕರೆವ ಕಾರಣವನ್ನು ತಿಳಿಯುವುದುಚಿತ.

ಸೂರ್ಯನನ್ನು ಆರು ಕೈಗಳಿರುವ ವಿಗ್ರಹದಂತೆಯೂ ರೂಪಿಸುವ ರೂಢಿ ಇದೆ. ಅಂತಾಗಿ ಕೋರ=ಕುವರ= ಕುಮಾರ ಎಂದರ್ಥವಿರುವ ಕಾರಣ 'ಕುಮಾರ' ಕೃತ್ತಿಕೆಯರ, ಮಾತೃಕೆಯರ ರಕ್ಷಕನಾಗಿ ಕ್ರಿ. ಶ. ಒಂದನೆಯ ಶತಮಾನದಿಂದಲೂ ಬಂದ ಪರಂಪರೆಯಂತೆ ಪೂಜೆಗೊಳ್ಳುವ ಕಾರಣ, ಕುಮಾರಸ್ವಾಮಿ=ಕೋರಸ್ವಾಮಿ ಎಂಬ ಸಂವಾದಿರೂಪಕ್ಕೆ ಅನ್ವಯ ಮಾಡಿಕೊಂಡು ಜನಪದ ಸುಗ್ಗಮ್ಮದೇವಿಯ ರಕ್ಷಕನನ್ನಾಗಿ 'ಜಾನಕೆರೆ ಸುಗ್ಗಮ್ಮ'ನ ಪ್ರಕರಣಕ್ಕೆ ಮೊದಲು ಈ ಕೋರಸ್ವಾಮಿಯನ್ನು ಕಂಡಿರಬೇಕು. ಅಥವಾ ಕೈಯಲ್ಲಿ ಕಮಲದ ಮೊಗ್ಗು ಹಿಡಿದಿರುವ ಕಾರಣ ಮೊದಲಿಗೆ ಕೋರಕ (= ಮೊಗ್ಗು) ಸ್ವಾಮಿ ಎಂಬ ಹೆಸರಾಗಿ ಕಾಲಾನುಕ್ರಮದಲ್ಲಿ ಜನಪದ 'ಕೋರಸ್ವಾಮಿ' ಎಂದು ಕರೆಯತೊಡಗಿರಬೇಕು. ಸುಗ್ಗಿಕಟ್ಟೆಯ ಆಚರಣೆಗಳಿಗೆ ಮೇಳೈಸಿರಬೇಕು.

### ಹಾಸನಜಿಲ್ಲೆಯ ಹಾಡ್ಯ–ಐಗೂರು ಸುಗ್ಗಿ ಕಟ್ಟೆ

ಕೊಡಗಿನ ಶನಿವಾರಸಂತೆಯಿಂದ ಹನ್ನೆರಡು ಮೈಲಿ ದೂರದ ಹಾಡ್ಯ-ಐಗೂರು ಪ್ರಸಿದ್ಧ ಐತಿಹಾಸಿಕ ನೆಲೆ. ಇಲ್ಲಿನ ಸುಗ್ಗಿಕಟ್ಟೆ ಚತುರಸ್ರಕಟ್ಟೆಯ ಮೇಲೆ ನಾಲ್ಕು ಸ್ತಂಭಗಳ ಮಂಟಪವಾಗಿ ಕಳಶ ಗೋಪುರ ಹೊಂದಿದೆ. ಕಲ್ಲುಕಟ್ಟೆಯ ಆವರಣದ ಕೇಂದ್ರದಲ್ಲಿರುವ ಸುಗ್ಗಿ ಮಂಟಪದ ಪಶ್ಚಿಮ ಮುಖಕ್ಕೆ ಸುಗ್ಗಿದೇವರ ಗುಡಿ ಇದೆ. ಕಟ್ಟೆಯ ಸ್ತಂಭಗಳ ಮೇಲೆ ಮಿಥುನಶಿಲ್ಪ, ಕಳಶ, ವ್ಯಾಸ ಪ್ರತಿಷ್ಠಾ ಶೈಲಿಯ ಅಕ್ಷಯಕುಮಾರನ ಮೇಲೆ ನಿಂತಿರುವ ಮಾರುತಿಯ ಶಿಲ್ಪ, ವ್ಯಾಳಿ, ಕಮಲ, ನೃತ್ಯ ಸ್ತ್ರೀ ಶಿಲ್ಪಗಳು ಕಂಡರಣೆ ಆಗಿವೆ. ಚೌಡ್ಲುವಿನ ಸುಗ್ಗಿಮಂಟಪವನ್ನು ಇಲ್ಲಿನ ಸುಗ್ಗಿಕಟ್ಟೆ ನೆನಪಿಗೆ ತರುತ್ತದೆ.

ಕಟ್ಟೆಯ ಎಡಬದಿಯಲ್ಲಿ ೨೦೦ ಅಡಿ ದೂರದಲ್ಲಿ ಪ್ರಾಚೀನ ಅರಮನೆಯ ಅಂಗಳದ ಅವಶೇಷಗಳು. ಚಿನ್ನದ ಅರಮನೆ ಮಾದರಿ ಬಿದ್ದುಹೋಗಿದೆ ಎನ್ನಲಾದ ಅರಮನೆ, ಕೆರೆ, ಮಣ್ಣಿನಕೋಟೆ, ಕಂದುಕ, ಕುಟ್ಟುವ ಕಲ್ಲು, ಒರಳುಗಲ್ಲು–ಇವೆಲ್ಲಾ ಶಿಥಿಲವಾಗಿ ಮೌನನಿದ್ರೆಯಲ್ಲಿ ಮಲಗಿವೆ. ಅರಮನೆಯ ಉತ್ತರಪಾರ್ಶ್ವಕ್ಕೆ ಸುಗ್ಗಿಕಟ್ಟೆ, ದಕ್ಷಿಣಪಾರ್ಶ್ವಕ್ಕೆ ಬಸರಿಒಡ್ಡಿನ ಕೆರೆ ಹಾಗೂ ರಹದಾರಿ ನೀಡುತ್ತಿದ್ದ ನೆಲೆ, ಬತೇರಿಗಳಿವೆ. ಈ ಅವಶೇಷಗಳು, ಬಲಂ ವಂಶೀಕ ವೆಂಕಟಾದ್ರಿನಾಯಕ ಹಾಗೂ ಹಾಲಿ ಐಗೂರಿನ ವೀರಶೈವ ಮನೆತನಗಳ ಹಿರಿಯರಿಗೂ ಇದ್ದ ಸಂಬಂಧದ ಸಂಕೇತಗಳಾಗಿ ಉಳಿದಿವೆ. ಈಗ ಸುಗ್ಗಿಕಟ್ಟೆಯ ಮೇಲ್ವಿಚಾರಣೆ ಐಗೂರಿನಲ್ಲಿ ಸುಮಾರು ಹದಿಮೂರು ಕುಟುಂಬಗಳಷ್ಟೆ ಇರುವ ವೀರಶೈವರ ಹಾಗೂ ಹರಿಜನರ ಸೇವೆಯಲ್ಲಿ ನಡೆಯುತ್ತಿದೆ.

ಇಲ್ಲಿ ಸುಗ್ಗಿದೇವರ ಹಬ್ಬ ೮ ದಿನಗಳ ಪರ್ಯಂತ ನಡೆಯುತ್ತಿತ್ತು. ಒಂದನೇ ದಿನ ಕಟ್ಟೆ ಕೆಲಸ (ಸೋಮವಾರ ಆರಂಭ), ೨ನೇ ದಿನ ಸಾರುವೆ (ಛಲವಾದಿ ಹಾಗೂ ಕುಳವಾಡಿ ಮೂಲಕ), ಮೂರನೇ ದಿನ ದೇವರ ಮುಖವಾಡಗಳನ್ನು ಅಲಂಕರಿಸಿ ಕಟ್ಟೆಯಲ್ಲಿ ಪೂಜೆ ಹಾಗೂ ೧೨ ಸೊಡ್ಲುಗಳಿಂದ ಪೂಜೆ, ಐದನೇ ದಿನ ಹೊನ್ನಾರು ಉತ್ಸವದಲ್ಲಿ ಕಟ್ಟೆಯ ಆವರಣದ ಆಗ್ನೇಯ ಮೂಲೆಯಲ್ಲಿ ಸಣ್ಣನೇಗಿಲು ಇಟ್ಟು ಬಟ್ಟೆಯ ಮೇಲೆ ಕಾಳು ಇಡುವುದು, ಆರನೇ ದಿನ ಮಲ್ಲುಸುಗ್ಗಿ, ಏಳನೇ ದಿನದ ದೊಡ್ಡಸುಗ್ಗಿಯೆಂದು ಬಿಲ್ಲುಸುಗ್ಗಿ ಕುಣಿತ, ಕತ್ತಿಕುಣಿತ, ಎಂಟನೇ ದಿನ ಮಡೆ ಆಗುತ್ತದೆ. ಇಲ್ಲಿನ ಹೆದ್ದೇವರ ಬನದಲ್ಲಿ ಸಿಲಿಂಡರಾಕೃತಿಯ ಮಣ್ಣಿನ ಕೊಳವೆ ಮೇಲಿಡುವ ದೀಪಗಳನ್ನು ಪೂಜೆಗೆ ಇಟ್ಟು ಅಲ್ಲಿಯೇ ಇಟ್ಟು ರಾಶಿ ಮಾಡಿದ್ದಾರೆ. ಹೇರೂರಿನ ಹೆದ್ದೇವರ ಬನವನ್ನು ಇದು ನೆನಪಿಗೆ ತರುತ್ತದೆ. ಈಗ ಒಂದೇ ದಿನದಲ್ಲಿ ಈ ಎಲ್ಲ ಆಚಾರಗಳನ್ನು ಮುಗಿಸುತ್ತಿರುವ ಪದ್ಧತಿಯನ್ನು ಮೂರು ದಿವಸಗಳಿಗೆ ವಿಸ್ತರಿಸಬೇಕೆನ್ನುವ ಪ್ರಯತ್ನ ನಡೆಯುತ್ತಿದೆ.*

* ಇಲ್ಲಿನ ಸುಗ್ಗಿದೇವರ ಪರಿಚಯ ಮಾಡಿಕೊಟ್ಟವರು ಮೇಲ್ವಿಚಾರಕರಾದ ಐಗೂರಿನ ಶ್ರೀ ಐ. ಎಮ್. ಚನ್ನಬಸವೇಗೌಡರು ಮತ್ತು ಸಹೋದರರು.

'ಮಣಿ ನಾಗಪುರ'ವೆನಿಸಿದ್ದ ಐಗೂರು ಬಲಂ ಪಾಳೇಗಾರರ ರಾಜಧಾನಿಯೂ ಆಗಿತ್ತು. ವಿಜಯನಗರದರಸರಿಗೆ ಬಲಂ ಪ್ರಾಂತ್ಯದ ಮೇಲೆ ಕಾಳಜಿ ಇತ್ತು.

**ಹೆತ್ತೂರು–ಕೂತಿನಾಡಮ್ಮನ ಕರ್ಕಳ್ಳಿ ಸುಗ್ಗಿಕಟ್ಟೆ**

ವಿಶೇಷವೆಂದರೆ ಈ ಸುಗ್ಗಿಕಟ್ಟೆ ಹೆಣ್ಣು ಮಕ್ಕಳಿಗೇ ಮೀಸಲಾದ ಸುಗ್ಗಿಕಟ್ಟೆ. ಅಂತಾಗಿ ಇಲ್ಲಿನ ಸುಗ್ಗಿಯನ್ನು 'ಹೆಣ್ಣುಮಕ್ಕಳ ಸುಗ್ಗಿ' ಎನ್ನುತ್ತಾರೆ. ಮರದ ಬುಡದಲ್ಲಿ ಹುತ್ತದ ಮಾದರಿಯಲ್ಲಿ ಮೂಡುವ ಕಳಶವನ್ನು ಸುಗ್ಗಿದೇವರೆಂದು ಪೂಜಿಸುತ್ತಾರೆ. (ಬಹುಶಃ ಹೆದ್ದೇವರು ಸುಗ್ಗಿದೇವರ ಮೂಲಸ್ಥಾನವಾದ್ದರಿಂದ ಇದು ರೂಢಿಯಲ್ಲಿರಬೇಕು). ಇಲ್ಲಿ ಬೇರೆ ಸುಗ್ಗಿಸ್ತಂಭವಿಲ್ಲ. ಸ್ತ್ರೀಯರ ಹೊರತು ಅನ್ಯರಿಗೆ ಪ್ರವೇಶವಿಲ್ಲ. ಮಂಗಳವಾರದ ದಿನ ಹಗಲು ಇಲ್ಲಿ ಸೊಡ್ಲುಗಳನ್ನಿಟ್ಟು ಪೂಜಿಸುತ್ತಾರೆ. ಕೂತಿನಾಡಮ್ಮನಿಗೆ ಮುಖವಾಡವಿದೆ. ಹೆಂಗಸರೇ ಎಡೆ ತಯಾರಿಸಿ ದೇವಿಗೆ ಎಡೆ ಇಟ್ಟು ಪೂಜಿಸಿ, ಎಡೆ ಪ್ರಸಾದ ಸ್ವೀಕರಿಸುತ್ತಾರೆ. ಅವರಿಗಲ್ಲದೆ ಬೇರೆ ಯಾವ ಪುರುಷರಿಗೆ ಈ ಪ್ರಸಾದವನ್ನು ನೀಡುವುದಿಲ್ಲ.** ಬಹುಶಃ ಒಂದು ಕಾಲಕ್ಕೆ ಇಲ್ಲಿ ನಡೆಯುತ್ತಿದ್ದ ನಗ್ನಪೂಜೆಯ ಸಂಕೇತ ಇದಾಗಿರಬೇಕೆಂದು ತೋರುತ್ತದೆ. ಕೊಡಗಿನ ಬಲ್ಲಮಾವಟಿಯ ಕುರ್ಚಿಂದಲೆ ಅಯ್ಯಪ್ಪನಿಗೆ ಇದೇ ಬಗೆಯ ನಗ್ನ ಸ್ತ್ರೀ ಆರಾಧನೆ ಪ್ರಾಚೀನ ಕಾಲದಲ್ಲಿ ನಡೆಯುತ್ತಿತ್ತಂತೆ.

**ಹಾಸನಜಿಲ್ಲೆಯ ಉದೇವಾರದ ಸುಗ್ಗಿಕಟ್ಟೆ**

ಸಕಲೇಶಪುರ ಈ ತಾಲೂಕಿನ ಗ್ರಾಮದಲ್ಲಿ ಭರಣಿ ಮಳೆಯ ಸಮಯದಲ್ಲಿ ಹನ್ನೆರಡು ದಿನಗಳ ಸುಗ್ಗಿಹಬ್ಬ ನಡೆಯುತ್ತದೆ. ಒಂದನೇ ದಿನ ಮಾರಿಹಬ್ಬ.[88] ಎರಡನೇ ದಿನ 'ಸಾರು'. ಮೂರನೇ ದಿನ ಬೀರೇದೇವರ ಹಬ್ಬ–ಗದ್ದೆ ಬಯಲಿನಿಂದ ಒಂದು 'ಕೇಲು' (ತೀರ್ಥ ತುಂಬಿದ ಮಡಕೆ) ಮತ್ತು ಎರಡು ಕಳಶಗಳನ್ನು ಹರಿಜನರಿಂದ ಪೂಜೆ ಮಾಡಿಸಿ 'ದೇವರು' ತರುತ್ತಾರೆ. ನಾಲ್ಕನೇ ದಿನ 'ಹೊನ್ನಾರು' ಕರೆಯುತ್ತಾರೆ. ಅಕ್ಕಿಬೀಜ ಬಿತ್ತುತ್ತಾರೆ. ಹೊನ್ನಾರುವಿಗೆ ಬಳುಸುವ ನೇಗಿಲನ್ನು ಬಡಗಿಯು ಒಂದು ರಾತ್ರಿ, ಒಂದು ಹಗಲು ಉಪವಾಸವಿದ್ದು ಕೆತ್ತಿರುತ್ತಾನೆ. ಉಪವಾಸವಿದ್ದು ಶುದ್ಧರಾಗಿ ಬರುವ ಹುಡುಗರು ಪಲ್ಲಕ್ಕಿಯಲ್ಲಿ ಐವತ್ತು ದೇವತಾ ಮುಖಗಳನ್ನು, ಕುಮಾರ ಸ್ವಾಮಿಯ ಅಡ್ಡೆ ಸಹಿತ ಬಂದು ಪೂಜೆ ಪುನಸ್ಕಾರ ಮಾಡಿಸಿಕೊಂಡು ಹೋಗುವರು.

ಐದನೆಯದಿನ, ಚಿಕ್ಕಮ್ಮ–ದೊಡ್ಡಮ್ಮನವರ ಕೇಲುಗಳಲ್ಲಿ ಕೆರೆಯಿಂದ ಅಡ್ಡೆಯಲ್ಲಿ ಸುಗ್ಗಿಕಟ್ಟೆಗೆ ಗಂಗೆ ತರುವರು.[89] ಆರನೆಯ ದಿನ, ಬಿಲ್ಲುಸುಗ್ಗಿ ಮತ್ತು ಜನಪದ ಕುಣಿತವಿರುತ್ತದೆ. ಏಳನೆಯ ದಿನ, ಮಲ್ಲು ಸುಗ್ಗಿ. ಎಂಟನೆಯ ದಿನ, 'ಮಾಡುದೀಪ'ವನ್ನು (ಈ ದೀಪವನ್ನು ಹೊರುವ ಇಬ್ಬರು ಎರಡು ದಿನ ಉಪವಾಸದಲ್ಲಿರಬೇಕು. ಏಳುಜನ ಕತ್ತರಿಗೈಯವರು, ಇಬ್ಬರು ಮರ ಕಡಿಯುವವರು, ಇಬ್ಬರು–ಮೂವರು ಬಡಗಿಗಳು ಉಪವಾಸವಿದ್ದು ಶುದ್ಧರಾಗಿ ತಟ್ಟೆಗೇರಿ ಮರದಲ್ಲಿ ದೀಪ ಮಾಡಿ ಹಸಿರುಗಣಿ ಮರದ ಏಳು ಅಂತಸ್ತುಗಳಲ್ಲಿ ಅಡ್ಡ – ಉದ್ದ ಜೋಡಿಸಿದ ಮರದ ತುಂಡುಗಳಿಂದಾದ 'ಕೊಪ್ಪ' ತಯಾರಿಸಿ ಅದರ ಮೇಲೆ ಈ ದೀಪವಿಟ್ಟುಕೊಂಡು ಬರುವುದು) ಹೊತ್ತು ಬಂದು ದೇವೀರಮ್ಮನ ದೇವಸ್ಥಾನಕ್ಕೆ ಹೋಗುತ್ತಾರೆ. ಒಂಬತ್ತನೇ ದಿನದ ಹಗಲುಸುಗ್ಗಿಯಂದು ಹಣ್ಣುಕಾಯಿ ಪೂಜೆ ಮಂಗಳಾರತಿ ನಡೆಯುತ್ತದೆ.

ಹತ್ತನೇದಿನ, ಇಬ್ಬರು ಮುತ್ತೈದೆಯರು ಉಪವಾಸ ಶುದ್ಧವಿದ್ದು ಅಡಿಗೆಮಾಡಿ ದೇವರಿಗೆ ಎಡೆತಯಾರಿಸುತ್ತಾರೆ. ಅಂದು 'ಮಡೆ'.

ಹನ್ನೊಂದನೇ ದಿನ 'ಓಕುಳಿ'—ಬಣ್ಣದ ನೀರನ್ನು ದೇವರು ಹಾಗೂ ನೆರೆದ ಜನಕ್ಕೆ ಎರಚುವುದು. ಕಾಗಡಿ

---

** ಕೊತಿನಾಡಮ್ಮನ ಸುಗ್ಗಿಕಟ್ಟೆ ಆಚಾರವನ್ನು ತಿಳಿಸಿದವರು ಹಾಸನಜಿಲ್ಲೆ ಹೆತ್ತೂರಿನ ಶ್ರೀ ಎಚ್. ಟಿ. ಸುರೇಶ್ ಅವರು.

88 ಮಡಿವಾಳರು ಮತ್ತು ಹರಿಜನರು ಬೇರೆಡೆ ಬಲಿಕಲ್ಲಿನ ಬಳಿ ಹಂದಿಬಲಿಯನ್ನು ಈ ದಿನ ನೀಡುತ್ತಾರೆಂದು ಉದೇವಾರದ ಶ್ರೀ ವೈ. ಎನ್. ನಿರ್ವಾಣಪ್ಪ ತಿಳಿಸಿದರು.

89 ಇಲ್ಲಿನ ಸುಗ್ಗಿಕಟ್ಟೆ ನಾಲ್ಕುಸ್ತಂಭಗಳ ಮಂಟಪ. ಗೋಪುರ ಮತ್ತು ಕಳಶ ಹೊಂದಿದೆ.

ಯಲ್ಲಿ ಕುಮಾರಸ್ವಾಮಿ ದೇವರನ್ನು ಕೂರಿಸಿ ಸುಗ್ಗಿ ಕಟ್ಟೆಯ ಉಯ್ಯಾಲೆಯಲ್ಲಿಟ್ಟು ಪೂಜಿಸುತ್ತಾರೆ. ಓಕುಳಿ ಯಲ್ಲಿ ಕೊರಮ ಜನಾಂಗದವರಿಂದ ಮೊದಲ ಓಕುಳಿ. ದೇವರಿಗೆ ನಂತರ ಇತರರದು.

ಹನ್ನೆರಡನೇ ದಿನ ಪ್ರಸಾದ ವಿನಿಯೋಗ. ಹಬ್ಬದ ಮೇಲ್ವಿಚಾರಣೆ ಎಲ್ಲವೂ ವೀರಶೈವ ಜನಾಂಗದ್ದು. ಸಹಕಾರ ಉಳಿದ ಸಾರ್ವಜನಿಕರದ್ದು. ದಲಿತವರ್ಗಕ್ಕೆ ಕೆಲವು ಆಚರಣೆಗಳಲ್ಲಿ ಪ್ರಥಮ ಅವಕಾಶ ನೀಡಿರುವುದು ಇಲ್ಲಿನ ವೈಶಿಷ್ಟ್ಯ.

**ಕೆಂಚಮ್ಮನ ಹೊಸಕೋಟೆಯ ಸುಗ್ಗಿಕಟ್ಟೆ**

ಬಾಳುಪೇಟೆ – ಕೊಡ್ಲಿಪೇಟೆಯ ನಡುವೆ ಬರುವ ಈ ಗ್ರಾಮದಿಂದ ಎರಡು ಮೈಲು ದೂರದಲ್ಲಿರುವ ಕೆಂಚಮ್ಮನ ಗುಡಿಯ ಬಳಿ ಸಾಮಾನ್ಯವಾಗಿ ಮೇ ತಿಂಗಳ ಮೊದಲವಾರದಲ್ಲಿ ಕೆಂಚಮ್ಮದೇವರ ಜಾತ್ರೆ. ಗುಡಿಯ ಕಟ್ಟಡ ಸುಂದರವಾಗಿದೆ. ಹುತ್ತಗಳ ಹೊರತು ಗುಡಿ ಯಲ್ಲಿ ಆಕೆಯ ವಿಗ್ರಹವಿಲ್ಲ. ಹರಿಹಳ್ಳಿ ಎಂಬ ಊರಿನಲ್ಲಿ ರುವ ಬ್ರಾಹ್ಮಣ ಅರ್ಚಕರ ಮನೆಯಲ್ಲಿ ಈ ದೇವತೆಯ ಹೆಸರಿನಲ್ಲಿರುವ ಏಳು ಮುಖವಾಡಗಳನ್ನು ಜಾತ್ರೆಯ ಸಮಯದಲ್ಲಿ ತಟ್ಟೆಯಲ್ಲಿಟ್ಟುಕೊಂಡು ತಂದು ಅರ್ಚಕರು ಗುಡಿಯೊಳಗಿನ ಪೀಠದ ಮೇಲೆ ಇಟ್ಟು ಪೂಜಾರ್ಚನೆ ಗಳನ್ನು ನಡೆಸುತ್ತಾರೆ. ಆ ನೆಲೆಯೆ ಸುಗ್ಗಿಕಟ್ಟೆಯ (ಆದಿಸ್ಥಾನದ) ನೆಲೆಯೂ ಕೂಡ ಆಗಿರುವಂತಿದೆ. ಕಾರಣ ಈ ಸಮಯದಲ್ಲಿ ಗುಡಿಯ ಹುತ್ತಗಳಿರುವೆಡೆ ಹೆದ್ದೇವರ ನೆಲೆ. ಎದುರು ಕೊಂಡ ಹಾಯುವಿಕೆ ಉಂಟು.

**ಕಾರ್ಗೋಡು ಸುಗ್ಗಿಕಟ್ಟೆ**

ಕೆ. ಹೊಸಕೋಟೆ ಹೋಬಳಿಯ ಈ ಗ್ರಾಮದಲ್ಲಿ ಕೆಂಚಮ್ಮ ದೇವರಿಗೆ ಸುಗ್ಗಿಕಟ್ಟೆಯ ಬಳಿ ಸುಗ್ಗಿಹಬ್ಬ ನಡೆಯುತ್ತದೆ. ಹಬ್ಬಕ್ಕೆ ಒಂದು ದಿನ ಮುಂಚೆ 'ಸಾರುವೆ' ನಂತರ ಮೂರು ದಿನ 'ಹಸೆ ಹಚ್ಚು'ತ್ತಾರೆ. ನಾಲ್ಕನೇ ದಿನ, ಕೆಂಚಮ್ಮನ ಒಂದೇ ಒಂದು ಮುಖವಾಡವನ್ನು ನೇತು ಹಾಕಿದ ಮಣೆಯ ಮೇಲಿಟ್ಟು ದೀಪವನ್ನಿಟ್ಟು ತೂಗುತ್ತಾರೆ, ಆಚರಣೆಗಳೆಲ್ಲ ವೀರಶೈವ ಜನಾಂಗದಿಂದ ನಡೆಯುತ್ತದೆ. ಬಲಿ ನೀಡುವ ಪದ್ಧತಿ ಇಲ್ಲ. ಭಾನುವಾರ ದಿಂದ ಯಾವತ್ತು ಹಬ್ಬ ಆರಂಭ. ಸುಗ್ಗಿಕಟ್ಟೆ ನಾಲ್ಕು ಕಂಬಗಳ ಮಂಟಪವಾಗಿದೆ. ಸುಗ್ಗಿಹಬ್ಬದ ಸಮಯ ದಲ್ಲಿನ ಕಟ್ಟುಗಳು ಇಲ್ಲಿಯೂ ಉಂಟು.

**ಉತ್ತೇಳು ಸುಗ್ಗಿಕಟ್ಟೆ : ಕೂಗ್ಗೋಡು ಮತ್ತು ಅಬ್ಬನ ಸುಗ್ಗಿಕಟ್ಟೆ**

ಬೇಲೂರು ತಾಲೂಕು ಅರೆಹಳ್ಳಿ ಬಳಿ ಇರುವ ಈ ಗ್ರಾಮದ ನಾಲ್ಕುಸ್ತಂಭಗಳ ಸುಗ್ಗಿಕಟ್ಟೆಯ ಹಬ್ಬ ಹನ್ನೆರಡು ದಿನಗಳಿದ್ದು, ಕೆಂಡೋತ್ಸವ ಉಂಟು. ಅಡ್ಡೆ ಯಲ್ಲಿ ಬರುವ 'ಸುಗ್ಗಿದೇವರು' ದೇವೀರಮ್ಮ. ವೀರ ಶೈವರಿಂದಲೇ ಪೂಜಾಚರಣೆ.

ಇದೇ ರೀತಿ ಕೂಗೋಡುವಿನಲ್ಲಿ ಮೇ ತಿಂಗಳಲ್ಲಿ ರೇವತಿ ನಕ್ಷತ್ರದಲ್ಲಿ ಹನ್ನೆರಡು ದಿನಗಳ ಹಬ್ಬ ಹಾಗೂ ಕೆಂಡೋತ್ಸವ. ಅಡ್ಡೆಯಲ್ಲಿ ದೇವೀರಮ್ಮನ ನಾಲ್ಕು ಮುಖವಾಡಗಳನ್ನಿಟ್ಟು ಉತ್ಸವಾದಿಗಳು ನಡೆಯುತ್ತವೆ. ಅದೇ ಅಬ್ಬನ ಸುಗ್ಗಿಕಟ್ಟೆಯಲ್ಲಿ ಮಾರ್ಚ್ – ಏಪ್ರಿಲ್ ತಿಂಗಳಲ್ಲಿ ಐದು ಮುಖವಾಡಗಳಿರುವ ಹೆಣ್ಣು ದೇವತೆಗೆ ೧೨ ದಿನಗಳ ಹಬ್ಬ. ಅಡ್ಡೆಯಲ್ಲಿ ಸೀರೆ ಕುಪ್ಪಸದೊಡನೆ ವಿಗ್ರಹವನ್ನು ತರುತ್ತಾರೆ. ಕೆಂಡೋತ್ಸವ ಹಾಗೂ ವೀರ ಗಾಸು ಉಂಟು. ವೀರಶೈವರ ಮೇಲ್ವಿಚಾರಣೆಯಲ್ಲಿ ಹಬ್ಬ ನಡೆಯುತ್ತದೆ.

ಇನ್ನು ಅರಸೀಕೆರೆ ತಾಲೂಕು ಹಾರ್ನಳ್ಳಿ ಕೋಡಿಮಠದ ಎದುರಿನ ಸಾಲಾಪುರದ ಕೆರೆಯ ಕೋಡಿಯ ಪಕ್ಕದಲ್ಲಿ ಗ್ರಾಮದೇವತೆ ಕೋಡಮ್ಮನ ದೇಗುಲವಿದೆ. ದೇಗುಲದ ಎದುರಿಗೆ ಸುಗ್ಗಿಸ್ತಂಭಗಳನ್ನು ಹೋಲುವ ಉಯ್ಯಾಲೆ ಕಂಬಗಳಿದ್ದು ಮೇಲಿನ ಅಡ್ಡತೊಲೆಯಲ್ಲಿ ಕೇಂದ್ರಕ್ಕೆ ಕೊಕ್ಕೆ ಇದೆ. ತಳಮಟ್ಟದಲ್ಲಿ ದೇಗುಲಕ್ಕೆ ನಡೆದು ಹೋಗಲು ಎಡೆ ಇದ್ದು,[90] ಸ್ತಂಭಗಳ ಬುಡದಲ್ಲಿ ಸ್ತ್ರೀ

90 ಇವು ಹಂಪೆಯಲ್ಲಿ ಕೃಷ್ಣದೇವರಾಯನು ಬಂಗಾರದ ತುಲಾಭಾರ ಮಾಡಿಸಿಕೊಂಡು ದಾನ ನೀಡಲು ಬಳಸುತ್ತಿದ್ದ ಹಂಪೆಯ ತುಲಾಭಾರಸ್ತಂಭದ ಮಾದರಿಯನ್ನು ನೆನಪಿಗೆ ತರುತ್ತವೆ.

ವಿಗ್ರಹ ಉತ್ತರಮುಖಿಯಾಗಿ ಕಂಡರಿಸಲ್ಪಟ್ಟಿದೆ. ಸ್ತಂಭಗಳ ಮೇಲಿನ ಕೊಕ್ಕೆಯಿಂದ ಇಳಿಬಿಟ್ಟ ಸರಪಳಿ ಮಣೆಯ ಮೇಲೆ ಕೋಡಮ್ಮ, ಚಲುವರಾಯ, ಭೂತರಾಯ ಹಾಗೂ ವೀರಭದ್ರರ ನಾಲ್ಕು ಮುಖವಾಡಗಳನ್ನು ಉತ್ಸವ ಮೂರ್ತಿಗಳಂತೆ ಅಲಂಕರಿಸಿ ಇಟ್ಟು ತೂಗುತ್ತಾರೆ. ಈ ಮುನ್ನವೆ ಈ ದೇವರುಗಳು ಕೋಡಿಮಠದ ನೀಲಮ್ಮಜ್ಜಯ್ಯ ಗದ್ದುಗೆಯ ಮುಂದೆ ಬಂದು ಮಂಗಳಾರತಿ ರುದ್ರಾಕ್ಷಿ ಹಾಗೂ ಭಸ್ಮಗಳನ್ನು ಪಡೆದು ಉಯ್ಯಾಲೆ ಮಹೋತ್ಸವಕ್ಕೆ ಸಿದ್ಧವಾಗುತ್ತಾರೆ. ಏಪ್ರಿಲ್ ತಿಂಗಳ ಸಮಯದಲ್ಲಿ ಈ ಜಾತ್ರೆ ನಡೆಯುತ್ತದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಚಿಕ್ಕಮಗಳೂರು, ಚಿಕ್ಕಮೇಗರವಳ್ಳಿ, ದೊಡ್ಡಮೇಗರವಳ್ಳಿ, ಆವುತಿ, ಫಲ್ಗುಣ ಮುಂತಾದ ಊರುಗಳು ಸುಗ್ಗಿಕಟ್ಟೆ ಸಂಪ್ರದಾಯಗಳಿಗೆ ಪ್ರಸಿದ್ಧವಾಗಿವೆ.[91] ಸಾಮಾನ್ಯವಾಗಿ ಇಲ್ಲೆಲ್ಲ ನಡೆಯುವ ಸುಗ್ಗಿಕಟ್ಟೆ ಸಂಪ್ರದಾಯಗಳು ಹೆಚ್ಚು ಕಡಿಮೆ ಒಂದೇ ಆಗಿವೆ.

ಚಿಕ್ಕಮಗಳೂರಿನಲ್ಲಿ ವರುಷದ ಮಾರ್ಚಿ ತಿಂಗಳ ಒಂದನೇ ತಾರೀಖಿನಿಂದ ಹದಿನೈದನೇ ತಾರೀಖಿನವರೆಗೆ ಸುಗ್ಗಿಕಟ್ಟೆಯ ಜಾತ್ರೆ ನಡೆಯುತ್ತದೆ. ಹಬ್ಬದ ಸಮಯದಲ್ಲಿ ಕೋಳಿ ಕೂಗುವ ಮುನ್ನವೇ ಉಪಾಹಾರ ಸ್ವೀಕರಿಸಿರಬೇಕು. ನಂತರ ರಾತ್ರಿ ದೇವರುಗಳ ಮೆರವಣಿಗೆ ೧೦ ಗಂಟೆ ವೇಳೆಗೆ ಆದ ನಂತರ ಸ್ವಚ್ಛ ಶುದ್ಧ ಊಟೋಪಚಾರ ಮಾಡಬೇಕು ಮುಂತಾಗಿ ಎಂದಿನ ಕಟ್ಟು ಕಟ್ಟಳೆಯ ಪಾಲನೆ ಇದೆ.

ದೇವರಕಾಡಿನಲ್ಲಿ ಹೂತಿಟ್ಟ ಮಡಕೆಗಳಲ್ಲಿರುವ ದೇವರ ಮುಖವಾಡಗಳನ್ನು ಸೋಮವಾರದಂದು ಬೆಳಗ್ಗೆ ಸುಮಾರು ೫-೩೦ರ ವೇಳೆಗೆ ಹೊರಗೆ ತೆಗೆಯುತ್ತಾರೆ. ಸಿಹಿ ಪದಾರ್ಥಗಳನ್ನು ಎಡೆಮಾಡುತ್ತಾರೆ. ದೇವರ ಮೂರ್ತಿ - ಮುಖವಾಡಗಳನ್ನು ಶುದ್ಧಗೊಳಿಸುತ್ತಾರೆ. ಚಿಕ್ಕಮಗಳೂರಿನಲ್ಲಿ ಸುಗ್ಗಿಹಬ್ಬದ ಸಮಯದಲ್ಲಿ ಬೇಟೆ ಇಲ್ಲದಿದ್ದರೂ ಸುತ್ತಲಿನ ಗ್ರಾಮಗಳಲ್ಲಿ ಬೇಟೆ ನಡೆಸುತ್ತಾರೆ.

ಈ ಸುಗ್ಗಿಕಟ್ಟೆ ಹಬ್ಬದಲ್ಲಿ ಮುಖವಾಡಗಳನ್ನಿಟ್ಟು ಪೂಜಿಸುವವರು ದೇವಾಂಗಶೆಟ್ಟರು ಅಥವಾ ಪದ್ಮಶಾಲೆ ಜನಾಂಗದವರು. ದೇವರಿಗೆ ತೂಗುದೀಪದೊಡನೆ ಊಲು ತೂಗುತ್ತಾರೆ. ಇಲ್ಲಿನ 'ಬಿಲ್ಲುಸುಗ್ಗಿ'ಯಲ್ಲಿ ತೆಂಗಿನಕಾಯಿಗಳನ್ನು ಮರಕ್ಕೆ ಕಟ್ಟಿ ಬಂದೂಕಿನಿಂದ ಗುರಿ ಹೊಡೆಯುವುದಾಗಿದೆ.[92] ಹೊನ್ನಾರಿಗೆ ಬೆಂಡು ಕಟ್ಟುವುದು, ಹೆದ್ದೇವರ ಪೂಜೆ ನಡೆಯುತ್ತದೆ. ರಾತ್ರಿ ಸುಗ್ಗಿ, ಹಗಲುಸುಗ್ಗಿ ಆಚಾರಗಳಿವೆ. 'ಮಲ್ಲುಸುಗ್ಗಿ'ಯ ಹೆಸರು ಕೇಳಿ ಬರುವುದಿಲ್ಲ. ಕೋಲಾಟ ಕುಣಿತ ಉಂಟು. ಏಳು ದಿವಸಗಳ ಕಾಲ ಒಂದು ದೇವರನ್ನು ಆನಂತರ ಮೂರು ವಿಗ್ರಹಗಳನ್ನು ಅಡ್ಡೆಯಲ್ಲಿ ಕಟ್ಟಿ ಕುಣಿಸಲಾಗುವುದು. ಕೆಲವು ಸುಗ್ಗಿಕಟ್ಟೆಗಳ ಬಳಿ ಶಾಸನಗಳಿವೆ. ಶಿಲ್ಪಗಳ ಕಂಡರಣೆಯೂ ಇದೆ. ಈ ಜಿಲ್ಲೆಯಲ್ಲಿ ಪ್ರಾಚೀನ ಪ್ರಸಿದ್ಧ ಶೃಂಗೇರಿ ಮಠದ ಸಮ್ಮತಿಯೂ ಈ ಸುಗ್ಗಿ ದೇವತಾರಾಧನೆಗೆ ಇತ್ತು ಎಂಬುದಕ್ಕೆ ಉಲ್ಲೇಖಗಳಿವೆ.

“ಸಬ್ಬಮ್ಮ ಎಂದರೆ ಸರ್ವಾಂಬೆ ಅಥವಾ ಮಹಾಮಾತೆ ಎಂಬರ್ಥ....ಶಿವಪೂಜೆ ಮಾಡುತ್ತಿದ್ದ ಗೌಡರು ವೈಷ್ಣವ ಮತಾವಲಂಬಿಗಳಾಗಿ ವೆಂಕಟರಮಣನನ್ನು ಕುಲದೇವತೆಯನ್ನಾಗಿ ಮಾಡಿಕೊಂಡಿರಬೇಕು....ವಿಜಯನಗರ ಪತನಾನಂತರ ಇವರು ಪಶ್ಚಿಮದ ಕಡೆ ಬಂದಾಗ ಇಕ್ಕೇರಿ ವಂಶದ ರಾಜರ ಆಶ್ರಯ ಪಡೆದು ಐಗೂರು ಬಳಿ ಇರುವ ಊರುಗಳಲ್ಲಿ ನೆಲಸಿದಾಗ ಶೃಂಗೇರಿ ಜಗದ್ಗುರು ಶ್ರೀ ಶಂಕರಾಚಾರ್ಯರ ಉಪದೇಶದಂತೆ 'ಸಬ್ಬಮ್ಮ'

---

91 ಈ ಸ್ಥಳಗಳಲ್ಲಿನ ಆಚಾರಕ್ಕುರಿತು ಚಿಕ್ಕಮೇಗರವಳ್ಳಿಯ ಶ್ರೀ ಸಿ. ಹೆಚ್. ವೆಗ್ಗೇಗೌಡರ ಮಗ ಶ್ರೀ ಸಿ. ಹೆಚ್. ರುದ್ರೇಗೌಡರಿಂದ ಶ್ರೀ ಎಸ್. ಕೃಷ್ಣಯ್ಯ, ಅರ್ಥಶಾಸ್ತ್ರದ ಉಪನ್ಯಾಸಕರು, ಸೋಂಪುರ ಅವರ ಮೂಲಕ ಮಾಹಿತಿಗಳನ್ನು ಪಡೆಯಲಾಗಿದೆ.

92 ಕೊಡಗಿನ ಕೊಡವರ ಆಯುಧಪೂಜೆಯ ಹಬ್ಬವಾದ 'ಕೈಲ್‌ಪೊಳ್ಳು'ವಿನಲ್ಲಿ ಪದ್ಧತಿಯಾಗಿರುವ ತೆಂಗಿನ 'ಈಡು' ಸ್ಪರ್ಧೆಯನ್ನು ಇದು ನೆನಪಿಗೆ ತರುತ್ತದೆ.

ದೇವರಪೂಜೆ ಮಾಡುವಂತೆ ಉಪದೇಶ ಮಾಡಿದುದರಿಂದ 'ಸಬ್ಬಮ್ಮ' ದೇವರಿಗೆ ಹರಕೆ ಹಣ ಕಟ್ಟುವ ಪದ್ಧತಿ ಬಂದಿದೆ....ಕೊಡಗಿಗೆ ಬಂದಾಗ ಅಲ್ಲಿನ ಗ್ರಾಮದೇವತಾರಾಧನೆಯನ್ನೂ ಮಾಡ ತೊಡಗಿದರು."[93] ಅಂದರೆ ಚಿಕ್ಕಮಗಳೂರು ಜಿಲ್ಲೆಯಲ್ಲಿ ಪ್ರಬಲವಾಗಿದ್ದ ಈ 'ಸಬ್ಬಮ್ಮ' ಗ್ರಾಮದೇವತಾ ಪೂಜಾ ಪದ್ಧತಿ ಕೊಡಗಿನಲ್ಲೂ ಮುಂದುವರಿಯಿತು ಎಂಬ ಅಂಶ ಇಲ್ಲಿ ಪ್ರಕಟವಾದರೂ ವೀರಶೈವರೂ ಇದನ್ನು ಕೊಡಗು ಹಾಗೂ ಹಾಸನದ ಗಡಿ ಪ್ರದೇಶಗಳಲ್ಲಿ ಮುಂದಾಳುಗಳಾಗಿ ಆಚರಿಸುತ್ತ ಬಂದಿರುವ ಕಾರಣ ಮತ್ತು 'ಸಬ್ಬಮ್ಮ'–'ಸಪ್ತಮಾತೃಕೆ'ಯರ ತದ್ಭವ ರೂಪಾಂತರದ ಕಾರಣ ಗೌಡ ಜನಾಂಗದಲ್ಲಿಯೂ ಮೊದಲಿನಿಂದಲೂ ರೂಢಿಯಲ್ಲಿತ್ತು ಎಂದಾಗುತ್ತದೆ. ವಿಜಯನಗರದ ಕಡೆಯಿಂದ ಬಂದವರಿಗೆ ಈ ಆರಾಧನೆಯ ಮಹತ್ವವನ್ನು ಮತ್ತೆ ನೆನಪಿಗೆ ತಂದುಕೊಡುವ ಕೆಲಸಕ್ಕೆ ಶ್ರೀಮಠದ ಪ್ರಭಾವವೂ ಸೇರಿತು ಎನ್ನಬಹುದು. ಸುಗ್ಗಿ ಕಟ್ಟೆಯ ದೇವತೆಯ ಆರಾಧನೆ ಕೊಡಗಿನಲ್ಲಿ ವಿಜಯನಗರದ ಕಾಲದ ಮುನ್ನಿನದು ಎಂದು ಈಗಾಗಲೇ ಶೃತಪಡಿಸಿದೆ. ಜೊತೆಗೆ ಐಗೂರು ಚಂಗಾಳ(ಳ್ವ?) ನಾಯಕನ ಕಾಲದಲ್ಲಿ ಅಲ್ಲಿನ ಗೌಡರಿಗೆ ಬಿರುದು ಬಾವಲಿ ನೀಡಿತ್ತು.

ಬೆಂಗಳೂರು ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ಭೈರಾಪಟ್ಟಣದಲ್ಲಿ ಉಯ್ಯಾಲೆ ಕಂಬಗಳು ಮಾರಮ್ಮ (ಪಾರ್ವತಿ) ಗುಡಿಯ ಎದುರು ೨೦–೨೨ ಅಡಿ ಎತ್ತರವಾಗಿ ನಿಂತಿವೆ. ಪ್ರಣಾಮಮುದ್ರೆಯ ಸ್ತ್ರೀ ಮತ್ತು ಪುರುಷ ಸ್ಥಾನಕ ಮೂರ್ತಿಗಳು (ಸ್ಥಂಭಗಳ ಮೇಲಿನ ಅಡ್ಡತೊಲೆಯ ಮುಂಮಧ್ಯದಲ್ಲಿ ಆಸೀನ ಪ್ರಣಾಮ ಮುದ್ರೆಯ ಮೂರ್ತಿ ಸಹಿತ) ಒಂದೊಂದು ಸ್ತಂಭದಲ್ಲಿ ನಿಂತಿವೆ. ಉಗಾದಿ ತೀರಿದ ಎಂಟುದಿಸಕ್ಕೆ ಇಲ್ಲಿ ಹಬ್ಬ ಪೂಜೆ ಸಲ್ಲಿಸಿ ಮಾರಮ್ಮನ ಉತ್ಸವಮೂರ್ತಿಯನ್ನು ಸರಪಳಿಯಿಂದ ಇಳಿಬಿಟ್ಟ ತೊಟ್ಟಿಲುಮಣೆಯ ಮೇಲೆ ಇಟ್ಟು ತೂಗುವರು. ನಂತರ ಉಳಿದವರಿಗೆ ಉಯ್ಯಾಲೆ ತೆರವಾಗುತ್ತದೆ. ದೇಗುಲದ ಎಡಭಾಗದಲ್ಲಿ ಸಿಡಿ ನಡೆಯುತ್ತದೆ. ಸಿಡಿಯ ತುಲಾಭಾರದ ತಕ್ಕಡಿಮಣೆಗಳಲ್ಲಿ ಒಂದರಲ್ಲಿ ದೇವರು ಇನ್ನೊಂದರಲ್ಲಿ ಹರಕೆಯಂತೆ ಮಕ್ಕಳನ್ನು ಕೂರಿಸಿ ತಿರುಗಿಸುವರು. ಸ್ತಂಭಗಳ ಸಮೀಪದಲ್ಲಿ ಶಾಸನಗಳೂ ಇವೆ. ಈ ತೌಲನಿಕ ಸಂಶೋಧನೆಯಿಂದ ಸುಗ್ಗಿದೇವರ ಹಬ್ಬವು ಸಾರ್ವತ್ರಿಕ ಹಬ್ಬವಾಗಿ ಹೆಚ್ಚು ಕಡಿಮೆ ಸಮಾನ ಅಚರಣೆ ಎಂದು ತಿಳಿಯುತ್ತದೆ.

ಈ ಮೇಲಿನ ನೆಲೆಗಳಲ್ಲಿ ಕಂಡುಬರುವ ಉತ್ಸಾಹ, ಸಂತೋಷ, ಆಸಕ್ತಿ ಸುಗ್ಗಿಯ ಹೆಸರಿನರ್ಥದಷ್ಟೇ ಅನ್ವಯವಾಗುತ್ತದೆ. ಕೊಡಗಿನ ಹೊಸ ಅಕ್ಕಿಯನ್ನು ಮನೆಗೆ ತರುವ ಹಬ್ಬವಾದ ಹುತ್ತರಿಯೂ ಹೀಗೆಯೆ ಸಡಗರದ ಹಬ್ಬ. ನವೆಂಬರ್–ಡಿಸೆಂಬರ್ ತಿಂಗಳಲ್ಲಿ ರೋಹಿಣಿ ನಕ್ಷತ್ರದ ವೃಶ್ಚಿಕ ಪೌರ್ಣಮಿಯಂದು ನಡೆಯುವ ಈ ಹಬ್ಬ ಕೇರಳದ 'ಓಣಂ' ಹಬ್ಬವನ್ನು ಹೆಚ್ಚು ಹೋಲುತ್ತದೆ. ಐದು ದಿನಗಳ ಪರ್ಯಂತವಿರುವ ಈ ಹಬ್ಬದ ಸಮಯದಲ್ಲಿ ಹುತ್ತರಿ ಕೋಲಾಟ, ಕುಣಿತ, ಕುದುರೆ ಕಳಿ ಇತ್ಯಾದಿಗಳು ಬಹು ಚೆಲುವಾಗಿ ನಡೆಯುತ್ತವೆ. ಕೊಡಗಿನ ವ್ಯವಸಾಯದ ಅಧಿದೇವತೆಯಾದ ಶ್ರೀ ಈಶ್ವರಾಂಶದ ಶ್ರೀ ಇಗ್ಗುತಪ್ಪನನ್ನು ಮುಖ್ಯವಾಗಿ ಆರಾಧಿಸುತ್ತಾರೆ. ಅಂತಾಗಿ ಅವನಿಗೆ ಪಾಡಿ ದೇವಸ್ಥಾನದಲ್ಲಿ ಹುತ್ತರಿ ಕಲಾಡ್ಚದ (ಹಬ್ಬ) ವೈಭವಪೂರ್ಣ ಹಬ್ಬವಿದೆ. ಈ ಹಬ್ಬದಲ್ಲಿ ಬೇಟೆ ಇಲ್ಲ. ಆದರೆ ಹಂದಿ ಬಾಡಿನ ಸಾರು, ಕೇಚಕ್ಕಿ ಕೂಳು ಊಟಕ್ಕೆ ಮನೆಯಲ್ಲಿ ಉಂಟು. ಗದ್ದೆಯಲ್ಲಿ ಕದಿರು ಪೂಜಿಸಿ ತಂದು ಮನೆಯ ನೆಲ್ಲಕ್ಕಿ ಬಾಡೆಯಲ್ಲಿಟ್ಟು ಆರಾಧಿಸಿ 'ಪೊಲಿ ಪೊಲಿ ದೇವ' (ಹೆಚ್ಚಲಿ, ಹೆಚ್ಚಲಿ) ಎಂಬ ಘೋಷದೊಡನೆ ಮನೆಯ ಆಸ್ತಿಪಾಸ್ತಿಗಳಿಗೆ, ಕೈಮಡಗಳಿಗೆ ಸಿಗಿಸಿಡುವರು. ಇಲ್ಲಿ 'ಸುಗ್ಗಿಕಟ್ಟೆ' ಹಬ್ಬದ ಸಡಗರವಿರಬಹುದು. ಆದರೆ ಪದ್ಧತಿ, ಆಚರಣೆ ಹಾಗೂ ಸಂಪ್ರದಾಯಗಳು ಹುತ್ತರಿ ಹಬ್ಬದೊಡನೆ ಸಮೀಕರಣವಾಗುವ ಸುಗ್ಗಿದೇವರ ಸಂಪ್ರದಾಯಗಳಿಲ್ಲ. ಸುಗ್ಗಿದೇವರ ಹಬ್ಬದಲ್ಲಿ ಪ್ರಮುಖವಾಗಿ ಸ್ತ್ರೀ ದೇವತೆ ಅರ್ಥಾತ್ ಮಾತೃಕೆಯರ ಪೂಜೆ; ಹುತ್ತರಿಯಲ್ಲಿ ಪ್ರಮುಖವಾಗಿ ಶ್ರೀ ಇಗ್ಗುತಪ್ಪ ದೇವರಿಗೆ ಪೂಜೆ. ಹುತ್ತರಿ ಹಬ್ಬದಲ್ಲಿ ಪಾಡಿ ದೇಗುಲ ಹಾಗೂ ಪೆರೂರು

---

93 ಪೂಜಾರಿರ ಪೊಣ್ಣಪ್ಪ : 'ಗೌಡರ ಪೂರ್ವಪರಿಚಯ', ಕೊಡಗು ಮತ್ತು ದಕ್ಷಿಣಕನ್ನಡ ಗೌಡ ಸಮಾಜದ ಸಂಸ್ಕೃತಿ (ಸ್ಮರಣ ಸಂಚಿಕೆ), ಬೆಂಗಳೂರು, ೧೯೭೦, ಭಾಗ ೧, ಪು. ೧೯–೨೦

ಮತ್ತು ನೆಲಜಿ ಇಗ್ಗುತಪ್ಪ ದೇವರಿಗೆ ಮಕ್ಕಳಿಗೆ ಅಕ್ಕಿ ತುಲಾಭಾರ ಮಾಡಿ ದೇವರಿಗೆ ಅರ್ಪಿಸುತ್ತಾರೆ. ಕೆಂಡ ಕೊಂಡದ ಪದ್ಧತಿಯಾಗಲಿ ದೇವ ಮುಖವಾಡ ಪೂಜಾಪದ್ಧತಿಯಾಗಲಿ ಈ ಸಮಯದಲ್ಲಿ ಕಂಡುಬಾರದು. ಹಾಲೇರಿಯ ಅರಸರು ಹುತ್ತರಿಯನ್ನು ಅರಮನೆಯಲ್ಲಿಯೂ ಆಚರಿಸುತ್ತಿದ್ದರು. ಕಿತ್ತೂರಿನ ಕತ್ತಿ ಕುಣಿತದ ಉದಾಹರಣೆಯಿಂದ ಸುಗ್ಗಿ ಹಬ್ಬಕ್ಕೂ ಪ್ರಾಮುಖ್ಯತೆಯನ್ನು ಹಾಲೇರಿ ಅರಸರು ನೀಡಿದ್ದರೆಂದು ತಿಳಿದುಬರುತ್ತದೆ. ಹುತ್ತರಿ ಚಳಿಗಾಲದ ಹಬ್ಬ, ಕದಿರು ದಾಟುವ ಸಮಯದಲ್ಲಿ ಆಚರಿಸುವ ಹಬ್ಬ. ಸುಗ್ಗಿಕಟ್ಟೆ ಹಬ್ಬ, ವಸಂತಕಾಲದ ಹಬ್ಬ. ಮನೆಗೆ ಭತ್ತ ತುಂಬಿಕೊಂಡ ಮೇಲೆ ವಿರಾಮ ಸಮಯದಲ್ಲಿನ ಹಬ್ಬ. ಆದರೆ ಕೊಡಗಿನಲ್ಲಿ ಎರಡೂ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿವೆ. ಜನಪದ ಗೀತೆಗಳ ವಿಪುಲತೆಯನ್ನೂ ಹೊಂದಿವೆ.

ಈ ವಿವೇಚನೆಯಿಂದ ವಿದಿತವಾಗುವ ಅಂಶಗಳೆಂದರೆ, ಸುಗ್ಗಿಕಟ್ಟೆಯು, ಉಯ್ಯಾಲೆ ಕಂಬಗಳಲ್ಲಿ ನಡೆಯುವ ಜನಪದ ಆಚರಣೆಗಳನ್ನು ಮೇಳೈಸಿಕೊಂಡಿದೆ, ಶಾಸನಗಳಲ್ಲಿ ಸುಗ್ಗಿಸ್ತಂಭ–ಕಟ್ಟೆ ಎಂಬ ಹೆಸರಿನ ಬದಲು 'ಉಯ್ಯಾಲೆ ಕಂಬ' ಎಂದು ಪ್ರಚಲಿತವಾಗಿರುವುದೇ ಹೆಚ್ಚು. ಸಪ್ತಮಾತೃಕೆಯರ ಆರಾಧನೆಯನ್ನು ಶಕ್ತಿ ದೇವತಾ ಪೂಜಾ ಸಂಪ್ರದಾಯಗಳನ್ನು ಅಳವಡಿಸಿಕೊಂಡು ಧಾರ್ಮಿಕ ಸನ್ನಾಹವನ್ನು ತಂದುಕೊಟ್ಟಿದೆ; ಜನಪದ ಕಲೆಗಳನ್ನು ಸಾಂಸ್ಕೃತಿಕ ವೈವಿಧ್ಯತೆಗಳೊಡನೆ ಬೆಳೆಸಿಕೊಂಡು ಬಂದ ಸಂಕೇತವಾಗಿದೆ; ಊರು ಸ್ಥಾಪನೆಯಾದ ಸಂದರ್ಭದಲ್ಲಿ ಸ್ವಾಗತದ ಬಾಗಿಲುಗಳಾಗಿಯೂ ತೆರೆದುಕೊಂಡಿದೆ; ರಾಜರಿಂದ, ಗುರುಗಳಿಂದ ಎಲ್ಲಕ್ಕಿಂತ ಮಿಗಿಲಾಗಿ ಜನಪದದಿಂದ ಐತಿಹಾಸಿಕವಾಗಿ ಸುಮಾರು ಹನ್ನೊಂದನೇ ಶತಮಾನದಿಂದಲೂ ಮಾನ್ಯ ಮಾಡಲ್ಪಟ್ಟ ಸಂಕೇತವಾಗಿದೆ.

ಸುಗ್ಗಿಬೇಟೆಗೆ ಹೋಗಿ ತಂದ ಬಲಿಯನ್ನು ಸುಗ್ಗಿ ದೇವರ ಸ್ತಂಭದ ನೆರೆಯ ನೆಲೆಯಲ್ಲಿಟ್ಟು ಎಡೆಮಾಡುತ್ತಿದ್ದುದು—'ಬೇಟೆ'ಗೆ ಈಗ ಅವಕಾಶವು ಕಾನೂನಿನ ರೀತ್ಯ ಇಲ್ಲದ ಕಾರಣ ನಿಂತಿರಬಹುದು–ಒಂದು ಕಾಲದ ಆಚಾರವಾಗಿತ್ತು. ಅಂದರೆ ಆ ಕಾಲಕ್ಕೆ ಸುಗ್ಗಿಕಟ್ಟೆಯು ವೀರಕಟ್ಟೆಯು ಆಗಿ ಯುದ್ಧಕ್ಕೆ ಸಾಗುವ ಮುನ್ನ ಕಟ್ಟೆಯ ಬಳಿ ವೀರಪೂಜೆ ಸಲ್ಲಿಸಿ ವೀರಪಣ ತೊಟ್ಟು ಹೋಗುವ ನಾಡಿಗರಿಗೆ ವೀರಮೌಲ್ಯದ ಸಂಕೇತವೂ ಆಗಿತ್ತು ಎನ್ನಬೇಕು. ವಿಜಯ ಪಡೆದು ಬಂದವರು ಶಾಂತಿಗಾಗಿ ಬಲಿ (?) ನೀಡುವ ಪದ್ಧತಿಯನ್ನು ಬೆಳೆಸಿಕೊಂಡು ಬಂದಿರಬೇಕು. ಆಗಿನ ಬಲಿ ವೀರರಿಗೊಂದು ಮೌಲ್ಯದ ಬಹುಮಾನವಾಗಿದ್ದಿರಬೇಕು. ಹಚ್ಚುವ 'ಸೊಡ್ಲು' ವಿಜಯದ ಬೆಳಕಾಗಿ 'ಸ್ತಂಭ'ಗಳು ಶಕ್ತಿದೇವರ ಪ್ರತೀಕವಾಗಿ ಕಂಡಿರಬೇಕು. ಸ್ತಂಭಗಳ ಮೇಲಿನ ಶಿಲ್ಪವು, ಯುದ್ಧದಲ್ಲಿ ತೊಡಗಿಸಿದ ಅಥವಾ ಬೇಟೆಯಾಡಿದ ಪ್ರಾಣಿಗಳ ಶಿಲ್ಪವಾಗಿರಬೇಕು. ಮಿಥುನ ಶಿಲ್ಪವು ಮನುಷ್ಯ ಸಹಜ ಪ್ರವೃತ್ತಿಯ ಮುಖವಾಗಿರಬೇಕು. ಯುಗಾದಿಯ ನಂತರವೇ ಈ ಹಬ್ಬದಾಚರಣೆಯ ಕಾರಣವು ಅನುಕೂಲ ನಿಧಿ, ಅಗತ್ಯ ಪಡೆದ ವಿರಾಮ, ಚೈತ್ರದ ಹರುಷ, ದವಸದ ಕಣಜ ತುಬಿದ ತೃಪ್ತಿಯೆ ಆಗಿದ್ದಿರಬೇಕು. ಒಂದು ಕಾಲದ ಈ ಎಲ್ಲ ಸ್ಥಿತಿಗಳು ಶಿಥಿಲವಾಗುತ್ತ ಬಂದಿದ್ದರೆ ನಾವು ಬದುಕನ್ನು ನಡೆಸಿಕೊಂಡು ಬಂದ ಕಾರಣವೂ ಮುಂದೆ ನಿಲ್ಲುತ್ತದೆ; ಅವುಗಳ ನೆರಳಾಗಿ ಮಾತ್ರ ಇಂದು ನಡೆಯುವ ನಮ್ಮನ್ನು ಅಣಕಿಸುತ್ತದೆ.

ಹೀಗೆ ಶೌರ್ಯ, ಶಿಲ್ಪ, ಇತಿಹಾಸ, ಧರ್ಮ ಜನಪದ ಸಂಸ್ಕೃತಿಯೊಡನೆ ಹಾಸು ಹೊಕ್ಕಾಗಿ ಜನ ಮಾನಸದಲ್ಲಿ ದಟ್ಟ ಮೌಲ್ಯವಾಗಿ ಅಚ್ಚೊತ್ತಿ ಬಂದಿರುವ ಸುಗ್ಗಿಕಟ್ಟೆಯ ಸ್ತಂಭಗಳಲ್ಲಿ 'ಹೆಣ್ಣು–ಗಂಡು' ಜೋಡಿಯ ಶಿಲ್ಪ ಸಂಕೇತಕ್ಕೆ ಮೌಲಿಕ ಅರ್ಥವಿದೆ. ತೊಡಗುವ ಕಾರ್ಯ ಸಾಮೂಹಿಕ ಸಂಪರ್ಕ, ಸಮಾಧಾನಗಳೊಡನೆ ಒಕ್ಕಟ್ಟಾಗಿ ನಡೆಯಲೆಂಬುದೇ ಆಗಿದೆ, ಸತಿಪತಿ ಸಾಮರಸ್ಯದಂತೆ. ಇನ್ನು ಸುಗ್ಗಿಕಟ್ಟೆಗಳು, ಹರಿಸೇವೆಕಲ್ಲು(ವೀರಗಲ್‌ನೆಲೆ)ಗಳ ನಡುವೆ ಪರ್ಯಾಯವಾಗಿ ವಾರ್ಷಿಕ ಉತ್ಸವದ ಜನಪದ ಸಂಪ್ರದಾಯ ನಡೆದು ಬರಲು ಮೇಲೆ ವಿವೇಚಿಸಿದ ಸಂಗತಿಗಳು ಬಹುಪೂರಕವಾಗಿ ಕಾಣಬರುತ್ತವೆ. ಅಂತಾಗಿ ವೈವಿಧ್ಯತೆಗಳನ್ನೊಳಗೊಂಡು, ತಲೆಮಾರುಗಳ ಹಿರಿತನವನ್ನು ಆಧುನಿಕರು ನಂಬಲಿ ಬಿಡಲಿ, ತನ್ನತನವ ಬಿಟ್ಟುಕೊಡದೆ ಜನತೆಯ ಹೃದಯದಲ್ಲಿ ಗಾಂಭೀರ್ಯದಿಂದ ಅಚ್ಚುಕಟ್ಟಾಗಿ ತಾಜಾತನದಿಂದ ಕಂಗೊಳಿಸುತ್ತ ಸುಗ್ಗಿಕಟ್ಟೆಗಳು ಜೀವಂತವಾಗಿವೆ; ಉಲ್ಲಾಸದ ವಾರ್ಷಿಕ ಕೇಂದ್ರಗಳಾಗಿವೆ; ಸಮೂಹ ಮನೋಹರಿಯಾಗಿವೆ. O

ಕೆ. ವಸಂತಲಕ್ಷ್ಮಿ

# ಶ್ರವಣಬೆಳಗೊಳದ ಶಿವಮಾರನ ಬಸದಿ

ಕರ್ನಾಟಕದ ಪ್ರಾಚೀನ ಜೈನಕೇಂದ್ರಗಳಲ್ಲಿ ಶ್ರವಣಬೆಳಗೊಳವೂ ಒಂದಾಗಿದೆ. ಇಲ್ಲಿಯ ಚಂದ್ರಗಿರಿಯು ವೈವಿಧ್ಯಮಯ ಶಾಸನಗಳನ್ನು ಹೊಂದಿರುವಂತೆ, ಪ್ರಾಚೀನ ರಾಜವಂಶಗಳ ಧಾರ್ಮಿಕ ಸಂಬಂಧವನ್ನೂ ಹೊಂದಿದೆ. ಉತ್ತರದಿಂದ ಬಂದ ಭದ್ರಬಾಹು ಭಟಾರಕರು ತಪಗೆಯ್ದಿದ್ದು ಇಲ್ಲಿಯೇ. ಅನೇಕ ಜೈನಮುನಿಗಳು ಈ ಕ್ಷೇತ್ರದಲ್ಲಿ ಸಂನ್ಯಸನದಿಂದ ಮುಡಿಪಿದ್ದಾರೆ. ಹೀಗಿದ್ದರೂ ಇಂದು ಸ್ಪಷ್ಟವಾಗಿ ಗುರುತಿಸಬಲ್ಲ ಪ್ರಾಚೀನ ಅವಶೇಷಗಳು ಇಲ್ಲಿ ಕಡಿಮೆ ಎಂದೇ ಹೇಳಬೇಕಾಗಿದೆ.

ಇಂತಹ ಅವಶೇಷಗಳಲ್ಲಿ ಪೂರ್ಣವಾಗಿ ಉಳಿದಿರುವ ಚಂದ್ರಗುಪ್ತ ಬಸದಿ, ಚಾವುಂಡರಾಯ ಬಸದಿಗಳು ಮುಖ್ಯವಾದರೂ, ಇನ್ನೂ ಇತರ ವಾಸ್ತು ಅವಶೇಷಗಳು ಉಳಿದಿರಬಹುದೆಂಬ ಶಂಕೆ ಮೂಡುತ್ತದೆ. 'ಚಾವುಂಡರಾಯಂ ಮಾಡಿಸಿದಂ'[1] ಎಂಬ ಬರಹವುಳ್ಳ ಚಾವುಂಡರಾಯನ ಬಸದಿಯು ಇಂದಿಗೂ ಸುಸ್ಥಿತಿಯಲ್ಲಿದೆ. ಆದರೆ ಇದರ ಬಳಿಯೇ ಇರುವ ಪ್ರಾಚೀನ ಬಸದಿಯಾದ ಚಂದ್ರಪ್ರಭ ಬಸದಿಯು ಮೂಲರೂಪದಲ್ಲಿ ಕಾಣದೇ ಕಾಲಕಾಲದಲ್ಲಿ ಬದಲಾವಣೆಗೆ ಒಳಗಾಗಿದೆ. ಇಲ್ಲಿ ದೊರೆಯುವ 'ಸಿವಮಾರನ ಬಸದಿ'[2] ಎಂಬ ಬರಹದ ಆಧಾರದ ಮೇಲೆ ವಿದ್ವಾಂಸರು ಇದನ್ನು ಗಂಗರ ಅರಸ ಎರಡನೇ ಶಿವಮಾರನು ಕಟ್ಟಿಸಿರಬಹುದಾದ ಬಸದಿಯೆಂದು ಗುರುತಿಸುತ್ತಾರೆ.

ಈ ಬಸದಿಯು ಗರ್ಭಗೃಹ, ನವರಂಗಗಳನ್ನೊಳಗೊಂಡಿದ್ದು, ಸರಳ ಅಧಿಷ್ಠಾನದ ಮೇಲೆ ಇಟ್ಟಿಗೆಯ ಗೋಡೆಯನ್ನು ಹೊಂದಿದೆ. ಕಾಲದ ಒತ್ತಡಕ್ಕೆ ಸಿಕ್ಕಿ ಶಿಥಿಲವಾಗಿದ್ದಿರಬಹುದಾದ ಶಿಲಾಭಿತ್ತಿಯ ಜಾಗದಲ್ಲಿ ಇಟ್ಟಿಗೆಯ ಭಿತ್ತಿ ಬಂದಿದೆ. ಸುಮಾರು ಎಂಟು – ಒಂಬತ್ತನೇ ಶತಮಾನದ್ದೆಂದು ಗುರುತಿಸಬಹುದಾದ ಕಂಬಗಳು ಕೆಲವು ಬದಲಾಗಿರುವಂತೆ ತೋರುತ್ತದೆ. ಇದರಿಂದ ಕಾಲಾಂತರದಲ್ಲಿ ಈ ಬಸದಿಯು ಜೀರ್ಣೋದ್ಧಾರವಾಗಿದೆಯೆಂದು ಊಹಿಸಬಹುದಾಗಿದೆ.

ಬಸದಿಯಲ್ಲಿ ಚಂದ್ರಪ್ರಭನಾಥನೆಂದು ಕರೆಯುವ ತೀರ್ಥಂಕರನ ಮತ್ತು ಯಕ್ಷ – ಯಕ್ಷಿಯರ ಬಿಂಬಗಳಿವೆ. ಸಿಂಹಪೀಠದ ಮೇಲೆ ಯೋಗಿಕ ಭಂಗಿಯಲ್ಲಿ ಆಸೀನನಾಗಿರುವ ಕರಿಶಿಲೆಯ ಜಿನಬಿಂಬವಿದೆ. ಇದನ್ನು ವಿದ್ವಾಂಸರು ಹಾಗೂ ಜನರು ಚಂದ್ರಪ್ರಭಾನಾಥನದೆಂದು ಪಾರಂಪಾರಿಕವಾಗಿ ಗುರುತಿಸುತ್ತಾ ಬಂದಿದ್ದಾರೆ.

ಯಕ್ಷ – ಯಕ್ಷಿಯರನ್ನು ಅವಲೋಕಿಸಿದರೆ, ಈ ಬಿಂಬಗಳಲ್ಲಿ ಸುಮಾರು ಎಂಟನೇ ಶತಮಾನದ ಶಿಲ್ಪಲಕ್ಷಣಗಳು ಗೋಚರಿಸುತ್ತಿದ್ದು, ಇವು ಶ್ರವಣಬೆಳಗೊಳದ ಉಳಿದ ಬಸದಿಗಳಲ್ಲಿರುವ ಯಕ್ಷ–ಯಕ್ಷಿಯರ ಬಿಂಬಗಳಿಗಿಂತ ಆಕಾರದಲ್ಲಿ, ಭಂಗಿಯಲ್ಲಿ, ಆಭರಣ ಮತ್ತು ರೂಪ–ರೇಷೆಗಳಲ್ಲಿ ಬೇರೆ ರೀತಿಯಾಗಿರುವುದು ಕಂಡುಬರುತ್ತದೆ.

---

1 ಎ. ಕ., ಸಂಪುಟ ೨ (ಪರಿಷ್ಕೃತ ಆವೃತ್ತಿ). ಶ್ರವಣಬೆಳಗೊಳ ೧೫೧, ಪು. ೮೮

2 ಅದೇ, ಶ್ರವಣಬೆಳಗೊಳ ೧೬೦ (೪೧೫), ಪು. ೮೬

ಇಲ್ಲಿರುವ ಯಕ್ಷಿಯು 'ಸಿಂಹವಾಹಿನಿ'ಯಾಗಿದ್ದಾಳೆ. ಇವಳ ಕೈಗಳಲ್ಲಿ ಬೀಜಪೂರ ಮತ್ತು ನೀಲೋತ್ಪಲಗಳಿವೆ. ಈ ಲಕ್ಷಣಗಳು ದಿಗಂಬರಪಂಥದ ಸಿದ್ಧಾಯಿಕೆಗೆ ಅನ್ವಯಿಸುತ್ತದೆ.[3] ಆದರೆ ಈ ಬಿಂಬವನ್ನು 'ಅಂಬಿಕೆ' ಎಂದೂ,[4] 'ಜ್ವಾಲಮಾಲಿನಿ' ಎಂದೂ[5] ಕರೆದಿದ್ದಾರೆ. ಆದರೆ ಜೈನ ಶಿಲ್ಪಶಾಸ್ತ್ರಗಳ ಪ್ರಕಾರ 'ಆಮ್ರಸ್ತಬಕ'ವಿರದ ಇವಳು ಅಂಬಿಕೆಯೂ ಅಲ್ಲ, 'ಜ್ವಾಲೆ'ಯ ಲಾಂಛನವೂ ಇತರ ಯಾವ ಅಸ್ತ್ರಗಳೂ ಕಾಣಬರದ ಇವಳು ಯಕ್ಷಿ ಜ್ವಾಲಾಮಾಲಿನಿಯೂ ಅಲ್ಲ.[6] ಈ ಬಿಂಬವು ದಿಗಂಬರ ಪದ್ಧತಿಯ 'ಯಕ್ಷಿ ಸಿದ್ಧಾಯಿಕೆ'ಯ ಬಿಂಬವೇ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಹೀಗೆಯೇ, ಇಲ್ಲಿಯ ಯಕ್ಷನ ಬಿಂಬವು ಇಲ್ಲಿ ಎರಡೇ ಕೈಗಳಿದ್ದು ಕೈಗಳಲ್ಲಿ ಅಭಯ ಹಸ್ತ ಮತ್ತು ಬೀಜಪೂರಗಳಿವೆ. ಈ ಬಿಂಬವು ದಿಗಂಬರ ಪದ್ಧತಿಯ ಮಾತಂಗ ಯಕ್ಷನ ಶಿಲ್ಪವಾಗಿದೆ.[7]

ಇಂತಹದೇ ಇನ್ನೊಂದು ಮಾತಂಗ ಯಕ್ಷನ ಪ್ರಾಚೀನ ಶಿಲ್ಪವನ್ನು ಚಂದ್ರಗುಪ್ತ ಬಸದಿಯ ಅಂತರಾಳದಲ್ಲಿ ಕಾಣುತ್ತೇವೆ. ಇಲ್ಲಿ 'ಮಾತಂಗ ಯಕ್ಷನು' ತನ್ನ ಲಾಂಛನದ ಆನೆಯ ತಲೆಯ ಮೇಲೆ ಸ್ಥಾನೀಕ ಭಂಗಿಯಲ್ಲಿದ್ದಾನೆ. ಈ ಬಿಂಬವನ್ನು ಡಾ॥ ಎಂ.ಹೆಚ್. ಕೃಷ್ಣರವರು 'ಧರಣೇಂದ್ರಯಕ್ಷ'ನೆಂದು[8] ಗುರುತಿಸಿದರೆ, ಡಾ॥ ಶಿರೂರುರವರು 'ಸರ್ವಾಹ್ಣ ಯಕ್ಷ'[9]ನದೆಂದು ಗುರುತಿಸಿದ್ದಾರೆ. ಡಾ॥ ಪೆಟ್ಟರ್‌ರವರು ತಮ್ಮ 'ಶ್ರವಣಬೆಳಗೊಳ' ಪುಸ್ತಕದಲ್ಲಿ 'ಧರಣೇಂದ್ರ'ನೆಂದು ತಮ್ಮ ಒಂದು ಲೇಖನದಲ್ಲಿ 'ಸರ್ವಾಹ್ಣ'ನೆಂದು ಅಭಿಪ್ರಾಯ ಪಟ್ಟರುತ್ತಾರೆ[10]. ಹೀಗೆ ನಿರ್ದಿಷ್ಟವಾಗಿ ಗುರುತಿಸಲಾಗದ ಈ ಬಿಂಬವು ಚಂದ್ರಪ್ರಭ ಬಸದಿಯ ಯಕ್ಷನನ್ನೇ ಹೋಲುತ್ತಿದ್ದು, ಆನೆ ಲಾಂಛನವೂ ಇರುವ ಈ ಬಿಂಬವು ಕೂಡ ಮಾತಂಗಯಕ್ಷನದೇ ಆಗಿದೆ.[11]

ಸಿವಮಾರನು ಕಟ್ಟಿಸಿರುವ ಈ ಬಸದಿಯು

---

3 "ಸಿದ್ಧಾಯಿಕಾ ತಥಾ ದೇವಿ ದ್ವಿಭುಜ ಕನಕ ಪ್ರಭಾ ॥" (ಪ್ರತಿಷ್ಠಾಸಾರಸಂಗ್ರಹ)
"The most Important symbol connected with Siddhayika is her 'Loin' &........The other Symbol is citrus, this is particularly indicative of her Yakshini's nature"— Jaina Iconography, B. Bhattcharya, p. 84

4 ಶ್ರವಣಬೆಳಗೊಳ, ಡಾ॥ ಎಸ್. ಪೆಟ್ಟರ್, ಪು. ೨೩

5 ಶ್ರವಣಬೆಳಗೊಳ, ಡಾ॥ ಶಿರೂರು, ಪು. ೩೪೪

6 i) "ದ್ವಿಭುಜಾ ಸಿಂಹಾರೂಢ ಆಮ್ರದೇವಿ ಹರಿತ್ಪ್ರಭ," (ಪ್ರತಿಷ್ಠಾ ಸಾರಸಂಗ್ರಹ)
"The Digambara image of this Yakshini is described as also riding a lion, but as bearing two hands with a bunch of Mangoes & a child"—Jaina Iconography, B. C. Bhattacharya, p. 104
ii) ಜ್ವಾಲಿನಿ ಮಹಿಷಾರೂಢ ದೇವಿಶ್ವೇತಾಭುಜಾಷ್ಟಕ
ಕಾಂಡಂ ವಜ್ರಂ ತ್ರಿಶೂಲಂಚಿ ಧತ್ತೇ ಪಾಶಾಂ ಚತುಷ್ಟಯೇ ॥ (ಪ್ರತಿಷ್ಠಾ ಸಾರಸಂಗ್ರಹ)

7 ವರ್ಧಮಾನ ಜಿನೇಂದ್ರಸ್ಯಯಕ್ಷೋ ಮಾತಂಗ ಸಂಜ್ಞಕ...
....ವರದೋ ಗಜವಾಹನ ।
ಮಾತುಲಿಂಗಂ ಕರೆಧತ್ತೆ ಧರ್ಮಚಕ್ರಶ್ಚ ಮಸ್ತಕೆ ॥ (ಪ್ರತಿಷ್ಠಾ ಸಾರಸಂಗ್ರಹ)

8 ಶ್ರವಣಬೆಳಗೊಳ, ಎಂ. ಹೆಚ್. ಕೃಷ್ಣ, ಪು. ೩೧

9 ಶ್ರವಣಬೆಳಗೊಳ, ಡಾ॥ ಶಿರೂರು, ಪು. ೩೪೪

10 ಶ್ರವಣಬೆಳಗೊಳ, ಡಾ॥ ಪೆಟ್ಟರ್, ಪು. ೧೭ ; The Classical Literature & the Jaina Iconography— 'Aspects of Jaina Art & Architecture', p. 28

11 ಇಂಥಹದೇ ಆನೆಯ ಲಾಂಛನವಿರುವ ಯಕ್ಷನ ಬಿಂಬವನ್ನು ಬಾದಾಮಿಯ ಮಹಾವೀರನ ಗುಹೆಯಲ್ಲಿ (ಮೂರನೇ ಬಸದಿ) ಕಾಣಬಹುದು.

ಮೂಲತಃ ಚಂದ್ರಪ್ರಭನಾಥದೆ ? ಇಲ್ಲಿರುವ ಜಿನಬಿಂಬವನ್ನು ಚಂದ್ರಪ್ರಭನಾಥನದೇ ಎನ್ನಲು ಆಧಾರಗಳೇ ಇಲ್ಲವಾಗಿದೆ. ಜಿನಬಿಂಬಗಳು ಒಂದೇ ರೀತಿಯಾಗಿರುವುದು ಹೀಗೆ ಗುರುತಿಸುವಲ್ಲಿ ತೊಡಕಾಗಿದೆ. ಅಲ್ಲದೇ, ಜೈನಧರ್ಮದಲ್ಲಿ ವೃಷಭನಾಥ, ನೇಮಿನಾಥ, ಪಾರ್ಶ್ವನಾಥ ಮತ್ತು ಮಹಾವೀರರು ಪ್ರಮುಖ ತೀರ್ಥಂಕರರಾಗಿದ್ದಾರೆ.[12] ಇವರಲ್ಲಿ ವೃಷಭನಾಥ, ನೇಮಿನಾಥ ಮತ್ತು ಪಾರ್ಶ್ವನಾಥರ ಬಸದಿಗಳಲ್ಲದೇ ಸುಪಾರ್ಶ್ವನಾಥ, ಅನಂತನಾಥ ಮತ್ತು ಚಂದ್ರಪ್ರಭನಾಥ ಮೊದಲಾದ ತೀರ್ಥಂಕರರ ಬಸದಿಗಳನ್ನು ಇಲ್ಲಿ ಕಾಣುತ್ತೇವೆ. ಆದರೆ ಇಂತಹ ಚಂದ್ರಗಿರಿಯಲ್ಲಿ ಪ್ರಮುಖ ತೀರ್ಥಂಕರನೆನಿಸಿದ ಮಹಾವೀರನ ಬಸದಿಯೇ ಇಲ್ಲದಿರುವುದು ಶಂಕೆಗೆ ಎಡೆಮಾಡಿದೆ. ಹೀಗಾಗಿ ಈ ಸಿವಮಾರನ ಬಸದಿಯಲ್ಲಿರುವ ಮಾತಂಗ ಯಕ್ಷ ಮತ್ತು ಸಿದ್ಧಾಯಿಕೆ ಯಕ್ಷಿಯರನ್ನು ಗಮನಿಸಿದಾಗ ಇಲ್ಲಿರುವ ಜಿನಬಿಂಬವು ಮಹಾವೀರನದಾಗಿರಬೇಕೆಂಬ ಸಂಶಯ ಬರುತ್ತದೆ.

ಇದೇ ನಿಟ್ಟಿನಲ್ಲಿ ಆಲೋಚಿಸಿದಾಗ, ಜೈನಶಿಲ್ಪ ಶಾಸ್ತ್ರವು, ವೃಷಭನಾಥ, ನೇಮಿನಾಥ ಮತ್ತು ಮಹಾವೀರರ ಬಿಂಬಗಳು ಮಾತ್ರ ಆಸೀನ ಭಂಗಿಯಲ್ಲಿದ್ದು ಉಳಿದ ತೀರ್ಥಂಕರರ ಬಿಂಬಗಳೆಲ್ಲ ಕಾಯೋತ್ಸರ್ಗ ಭಂಗಿಯಲ್ಲಿರುತ್ತವೆಂದು ತಿಳಿಸುತ್ತದೆ. ಇದನ್ನು ಗಮನಿಸಿದಾಗ, ಶಿವಮಾರನ ಬಸದಿಯು ಚಂದ್ರಪ್ರಭನಾಥನದೇ ಆಗಿದ್ದಿದ್ದರೇ, ಮೂಲಬಿಂಬವು ಕಾಯೋತ್ಸರ್ಗ ಬಿಂಬವಾಗಿರಬೇಕಾಗಿತ್ತು ಮತ್ತು ಯಕ್ಷ ಯಕ್ಷಿಯರು ಶ್ಯಾಮ, ಜ್ವಾಲಾಮಾನಿಯರ ಬಿಂಬಗಳಾಗಿರುತ್ತಿದ್ದರು. ಇಲ್ಲಿ ಹಾಗಿಲ್ಲದಿರುವುದರಿಂದ ಸಿವಮಾರನ ಬಸದಿಯಲ್ಲಿರುವ ಆಸೀನ ಬಿಂಬವು ಮಹಾವೀರನದೇ ಎಂಬ ಅಂಶವು ದೃಢಪಡುತ್ತದೆ.

ಇನ್ನು ಬಸದಿಯ ಸಮೀಪದಲ್ಲಿರುವ ಪೂರ್ವೋಕ್ತ ಸಿವಮಾರನ ಶಾಸನವು, ಲಿಪಿಯ ದೃಷ್ಟಿಯಿಂದ ಸುಮಾರು ಎಂಟನೇ ಶತಮಾನದಾಗಿದ್ದು, ಈ ಬಸದಿಯು ಶ್ರವಣಬೆಳಗೊಳದ ಪ್ರಾಚೀನ ಬಸದಿಗಳಲ್ಲಿ ಒಂದೆಂದು ಹೇಳಬಹುದಾಗಿದೆ. ಜೈನಧರ್ಮದ ಪೋಷಕನಾಗಿದ್ದ ಗಂಗರ ದೊರೆ ಎರಡನೇ ಸಿವಮಾರನು ಕಟ್ಟಿಸಿದ್ದ ಬಸದಿಯು ಇದೆಂದು, ಡಾ॥ ಎಂ. ಶೇಷಾದ್ರಿಯವರು ಮತ್ತಿತರ ವಿದ್ವಾಂಸರು ನಿಶ್ಚಯಿಸಿದ್ದಾರೆ.[13] ಇದರಿಂದ ಎಂಟನೇ ಶತಮಾನದಲ್ಲೇ ಕಟ್ಟಲ್ಪಟ್ಟಿದ್ದ ಈ ಬಸದಿಯು ಮೊದಲಿಗೆ ಮಹಾವೀರನಿಗೆ ಅರ್ಪಿತವಾಗಿತ್ತೆಂದು ಹೇಳಬೇಕಾಗುತ್ತದೆ.

ಈ ಬಗೆಯ ತೀರ್ಮಾನಕ್ಕೆ ಬರಲು ಇನ್ನೊಂದು ಪ್ರಬಲವಾದ ಆಧಾರವೆಂದರೆ, ಶ್ರವಣಬೆಳಗೊಳದ ಸಮೀಪದಲ್ಲೇ ಇರುವ ಕಂಬದಹಳ್ಳಿಯ ಬಸದಿಯನ್ನು ಅವಲೋಕಿಸಿದಾಗ, ಇಲ್ಲಿಯ ಮಧ್ಯದ ಗರ್ಭಗೃಹದಲ್ಲಿ ನೇಮಿನಾಥನ ಬಿಂಬವಿದ್ದರೂ, ನವರಂಗದಲ್ಲಿ ಯಕ್ಷ–ಯಕ್ಷಿ ಸಹಿತವಾದ ಜಿನಬಿಂಬವೊಂದು ಇಡಲ್ಪಟ್ಟಿರುವುದು ಕಂಡುಬರುತ್ತದೆ. ಈ ತೀರ್ಥಂಕರನ ಬಿಂಬವನ್ನು ವಿದ್ವಾಂಸರು ಮಹಾವೀರನ ಬಿಂಬವೆಂದು ಗುರುತಿಸಿದ್ದಾರೆ. ಈ ಮಹಾವೀರನ ಬಿಂಬದ ಬದಿಯಲ್ಲಿ ಕಂಡುಬರುತ್ತಿರುವ ಯಕ್ಷ–ಯಕ್ಷಿಯರು ಮಾತಂಗ, ಸಿದ್ಧಾಯಿಕೆಯರೇ ಆಗಿದ್ದಾರೆ. ಅಲ್ಲದೇ, ಈ ಬಿಂಬಗಳು ಚಂದ್ರಪ್ರಭಾನಾಥನ ಬಸದಿಯ ಯಕ್ಷ–ಯಕ್ಷಿಯರ ಬಿಂಬಗಳನ್ನು ಹೋಲುತ್ತಿವೆ. ಹೀಗೆ ಕಂಬದಹಳ್ಳಿಯ ಮಹಾವೀರನ ಬಿಂಬವನ್ನು ಸ್ಪಷ್ಟವಾಗಿ ಗುರುತಿಸುತ್ತಿರುವುದು ನಮಗೆ ಸಿವಮಾರನ ಬಸದಿಯ ಜಿನಬಿಂಬವು ಮಹಾವೀರ ತೀರ್ಥಂಕರನದು ಮತ್ತು ಮಾತಂಗಯಕ್ಷ, ಸಿದ್ಧಾಯಿಕೆ ಯಕ್ಷಿಯರದೇ ಬಿಂಬಗಳೆಂದು ನಿರ್ಧರಿಸುವಲ್ಲಿ ಸಹಾಯಕವಾಗುತ್ತದೆ.

ಇದಲ್ಲದೇ, ಶ್ರವಣಬೆಳಗೊಳದ ದೊಡ್ಡಬೆಟ್ಟದಲ್ಲೂ ಒಂದು ಚಂದ್ರನಾಥ ಬಸದಿ ಇದೆ. ಈ ಬಸದಿಯ ಹಿಂದಿನ ಗೋಡೆಯ ಬಂಡೆಯಲ್ಲೇ ಕಡೆದಿರುವ ಜಿನಬಿಂಬವು ಆಸೀನ ಭಂಗಿಯಲ್ಲಿದ್ದು, ಶಿಲ್ಪದ ಎರಡೂ ಬದಿಯಲ್ಲಿ ಬರೀ ಚಾಮರಗಳು ಬಿಡಿಸಲ್ಪಟ್ಟಿವೆ. ಯಕ್ಷ–ಯಕ್ಷಿಯರ ಬೇರೆ ಬೇರೆ ಬಿಂಬಗಳಿಲ್ಲ. ಇದರಿಂದ ತೀರ್ಥಂಕರರನ್ನು ಗುರುತಿಸುವುದು ಕಷ್ಟವಾದರೂ,

---

12 "ಶ್ರೀ ಆದಿನಾಥ ನೇಮಿಶ್ಚ ಪಾರ್ಶ್ವೋ ವೀರ ಚತುರ್ಥಕ" (ರೂಪಮಂಡನ-VI, ೨೬)

13 ಭಾರತ ಸಂಸ್ಕೃತಿ ದರ್ಶನ, ಡಾ॥ ಎಂ. ಶೇಷಾದ್ರಿ, ಪು. ೫೦೪

ಬಸದಿಯ ಬಳಿಯಲ್ಲೇ ಇರುವ ಶಾಸನವು ಇದು 'ಆದೀಶ್ವರನ ಬಸದಿ'[14] ಎಂದು ಸ್ಪಷ್ಟಪಡಿಸುತ್ತದೆ. ಶಾಸನವಲ್ಲದೇ, ಬಿಂಬದಲ್ಲಿ ಭುಜದವರೆಗೆ ಇರುವ ಮುಡಿಯು, ಇದು ಆದಿನಾಥನದೇ ಬಿಂಬವೆಂಬ ಸತ್ಯವನ್ನು ಬಿಂಬಿಸುತ್ತಿದೆ. ಆದರೆ ಸ್ಥಳೀಕರು ಈ ಆದಿನಾಥನ ಬಿಂಬದ ಕೆಳಗೆ ಚಂದ್ರಲಾಂಛನವನ್ನು ರೇಖೆಯಲ್ಲಿ ಮೂಡಿಸಿ ಬಸದಿಯನ್ನು ಚಂದ್ರನಾಥ ಬಸದಿ ಎಂದು ಪ್ರಚುರಪಡಿಸಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ.

ಈ ಹಿನ್ನೆಲೆಯಲ್ಲಿ ಹೇಳುವುದಾದರೆ, ಪ್ರಸ್ತುತ ಚಿಕ್ಕಬೆಟ್ಟದ ಮೇಲಿರುವ ಚಂದ್ರಪ್ರಭಾನಾಥ ಬಸದಿಯು ಮೊದಲಿಗೆ ಮಹಾವೀರನ ಬಸದಿಯಾಗಿದ್ದು, ಕಾಲಾಂತರದಲ್ಲಿ ಚಂದ್ರಪ್ರಭನಾಥ ಬಸದಿಯಾಗಿ ರೂಪಾಂತರ ಹೊಂದಿದೆಯೆಂಬುದರಲ್ಲಿ ಸಂಶಯವಿಲ್ಲ.

---

14 ಎ. ಕ., ಸಂ ೨, ಶಾಸನ ಸಂಖ್ಯೆ ೪೭೪, ಪು. ೨೬೨

ಕೆ. ಆರ್. ಕುಮಾರಸ್ವಾಮಿ

# ದೇವಸ್ಥಾನಾದಿ ಕಟ್ಟಡ ರೂವಾರಿಯರು ಮತ್ತು ಅವರ ಕಾರ್ಯವಿಧಾನ

ಕರ್ನಾಟಕದ ಒಳ ಹೊರಗಷ್ಟೇ ಅಲ್ಲದೆ ವಿದೇಶಗಳಲ್ಲಿಯೂ ಪ್ರಸಿದ್ಧವಾದ ನವಿರಾದ ಕುಸುರಿ ಕೆಲಸಕ್ಕೂ, ಅತ್ಯುತ್ತಮ ಕಲಾವಂತಿಕೆಗೂ ಹೆಸರಾದ ಬೇಲೂರಿನ ಚನ್ನಕೇಶವ ದೇವಸ್ಥಾನ, ಹಳೇಬೀಡಿನ ಹೊಯ್ಸಳೇಶ್ವರ ದೇವಸ್ಥಾನ, ಸೋಮನಾಥಪುರದ ಕೇಶವ ದೇವಾಲಯ, ದೊಡ್ಡಗದ್ದವಳ್ಳಿಯ ಮಹಾಲಕ್ಷ್ಮೀ ಗುಡಿಗಳಷ್ಟೇ ಅಲ್ಲದೆ ಇನ್ನೂ ಇತರ ನೂರಾರು ಪ್ರಾಚೀನ ದೇವಾಲಯಗಳು ಅಲ್ಲಲ್ಲಿಯೇ ಕನ್ನಡನಾಡಿನಾದ್ಯಂತ ಕಂಡುಬರುತ್ತವೆ. ದೇವಸ್ಥಾನಗಳ ಸೌಂದರ್ಯಕ್ಕೆ ಕನ್ನಡದ ಜನಮನ ಎಷ್ಟು ಆಶ್ಚರ್ಯಗೊಂಡಿತ್ತೆಂದರೆ ಅದು ಮನುಷ್ಯನ ರಚನೆ ಎಂಬುದನ್ನೇ ಮರೆಯಿತು; ಪವಾಡವನ್ನು ಹೆಣೆಯಿತು; ಕೇವಲ ಉದ್ಗಾರಗಳಲ್ಲಿ ಮೈಮರೆಯಿತು.

ಮೊದಲಿಂದಂ ಕಳಶಂಬರಂ ಮೆರೆವ ನಾನಾ
ಚಿತ್ರ ಪತ್ರಂಗಳಿಂ
ಮುದಮಂ ಬೀರುವ ಭಾರತಾದಿ ಕಥೆಯಂ
ಮೆಯ್ವೆತ್ತ ಕೂಟಂಗಳಿಂ
ದಿದು ಪಾಂಚಾಳಿಕೆ ಕಳ್ತ ಮೇರುಗಿರಿಯೋ
ಪೇಳೆಂಬಿಸಂ ವಿಭ್ರಮಾ
ಸ್ಪದಮಾಗಿರ್ಪುದು ಮಲ್ಲಿಕಾರ್ಜುನ ದೇವರ
....ದೇವಾಲಯಂ[1]

ಎಂಬುದಾಗಿ ಮನುಷ್ಯನ ಮನಸ್ಸು ವಿಭ್ರಮೆಗೊಂಡಿತು. ಇದು ಸಹಜವೇ ಆದರೂ ವಾಸ್ತವವನ್ನು ಮರೆಯಬಾರದು. ಈ ಎಲ್ಲ ಭ್ರಮೆಯ ತೊಗಟೆಯನ್ನು ಒಡೆದು ಬಿಡಿಸಿ ಇದರೊಳಗೆ ಇರುವ ಬೀಜಸದೃಶವಾದ ಸತ್ಯವನು ಗುರುತಿಸಬೇಕು ಅಷ್ಟೆ.

ಈ ದೇವಾಲಯಗಳು 'ಪಾಂಚಾಳಿಕೆ' – ಪಂಚಾಳರ + ಇಕೆ – ಪಂಚಾಳರ ಮಾಡುವಿಕೆಯು—ಅವರ ಕಲಾವಂತಿಕೆಯು 'ಕಳ್ತು' > ಕಳಿತು= ಪಕ್ವವಾಗಿ ಈ ಎಲ್ಲ ದೇವಾಲಯಾದಿಗಳ ರಚನೆಯಾಯಿತು ಎಂಬುದಂತೂ ನಿಜ. ದೇವಶಿಲ್ಪಿ ಮಯ ವಿಶ್ವಕರ್ಮನೇ ಬಂದು ಸೃಷ್ಟಿಸದಿದ್ದರೂ ವಿಶ್ವಕರ್ಮಮತೀಯರಾದ ಅನೇಕ ಕುಶಲ ಕಾರ್ಮಿಕರ ತೋಳುಗಳು ಶ್ರಮವಹಿಸಿ ಕಟ್ಟಿದವು, ಅವರ ಬೆರಳುಗಳು ಸೂಕ್ಷ್ಮವಾಗಿ ಬಿಡಿಸಿದವು, ಅವರ ಜಾಣ್ಮೆ ದುಡಿಯಿತು. ಇಂಥ ವಾಸ್ತುಶಿಲ್ಪಿಗಳನ್ನು ಗುರುತಿಸುವುದು ಈ ಶೀರ್ಷಿಕೆಯ ಉದ್ದೇಶ.

ವಾಸ್ತುಶಿಲ್ಪಿಗಳು – ಎಂದರೆ ದೇವಸ್ಥಾನಗಳನ್ನು, ಮಂಟಪಗಳನ್ನು, ಗೋಪುರಗಳನ್ನು, ಮನೆ, ಅರಮನೆಗಳನ್ನು–ಒಟ್ಟಿನಲ್ಲಿ ಕಟ್ಟಡವನ್ನು ಕಟ್ಟಿದವರನ್ನು (Builders) ಎಂದು ಇಲ್ಲಿ ಮಿತಿಗೊಳಿಸಿಕೊಳ್ಳಬಹುದು. ಈ ವಿಷಯವನ್ನು ಪ್ರವೇಶಿಸುವ ಮೊದಲು ಕೆಲವು ಸಮಸ್ಯೆಗಳು ಎದುರಾಗುತ್ತವೆ. ಅವಾವುವೆಂದರೆ : ೧. ಶಾಸನದ ಒಡಲಿನಲ್ಲಿ ದೇವಸ್ಥಾನವನ್ನು ಕಟ್ಟಿಸಿ ಅದಕ್ಕೆ ದಾನ ಬಿಟ್ಟ ವಿಷಯವಿರುತ್ತದೆ. ಕೊಟ್ಟಕೊನೆಗೆ ಓಜನ ಹೆಸರು ಮಾತ್ರ ಹೇಳಲಾಗಿರುತ್ತದೆ. ಇಂಥ ಕಡೆ

---

1. ಬಿ. ವೆಂಕೋಬರಾವ್ : ಮೈಸೂರು ದೇಶದ ವಾಸ್ತುಶಿಲ್ಪ, ಪು. ೧೪೩

ಯಲ್ಲಿ ಈತನೇ ಶಾಸನದ ಒಡಲೊಳಗೆ ಹೇಳಲ್ಪಟ್ಟ ಗುಡಿಯನ್ನು ಕಟ್ಟಿದವನೋ ಅಥವಾ ಕೇವಲ ಶಾಸನವನ್ನು ಕಂಡರಿಸಿದವನೋ ಸಂಶಯ ಉಂಟಾಗುತ್ತದೆ.[2] ೨. ಕೆಲವು ಕಡೆ ಗುಡಿಯ ಬರೀ ಗೋಡೆಯ ಮೇಲೆ (ವಿಗ್ರಹಗಳ ಕೆಳಗಲ್ಲ) ಅಲ್ಲಲ್ಲಿಯೇ ಕೆಲವು ಓಜರುಗಳ ಹೆಸರು ಮಾತ್ರ ಕೆತ್ತಲ್ಪಟ್ಟಿರುತ್ತದೆ. ಇಂಥ ಸಂದರ್ಭದಲ್ಲಿ ಈತನೇ ಆ ಗುಡಿಯನ್ನು ಅಥವಾ ಗುಡಿಯ ಆ ಭಾಗದ ಗೋಡೆಯನ್ನು ರಚಿಸಿದವನು ಎಂಬ ನಿರ್ಣಯಕ್ಕೆ ಬರುವುದು ಕಷ್ಟವಾಗುತ್ತದೆ.[3] ೩. ಮತ್ತೆ ಕೆಲವುಕಡೆ ಶಿಲ್ಪಿಯು ತಾನು ಪ್ರಾಸಾದ ವಿಮಾನಾದಿಗಳನ್ನು ನಿರ್ಮಿಸುವುದರಲ್ಲಿ ನಿಷ್ಣಾತನೆಂದು ಹೇಳಿಕೊಂಡಿರುತ್ತಾನೆ. ಇದು ಇಲ್ಲಿ ಆತ ತನ್ನ ಹೆಗ್ಗಳಿಕೆಯನ್ನು ಮಾತ್ರ ಹೇಳಿಕೊಂಡಿರುವಂತೆನ್ನಿಸುತ್ತದೆ. ಆದರೆ ಆತನ ರಚನೆ ಯಾವುದು ? ಅವನು ಏನನ್ನಾದರೂ ರಚಿಸಿದನೋ ಇಲ್ಲವೋ ? ಎಂದು ಅನುಮಾನ ವಾಗುತ್ತದೆ.[4]

ಹೀಗೆ ನಿರ್ಣಯ ತೆಗೆದುಕೊಳ್ಳಲು ಸದ್ಯಕ್ಕೆ ಸಾಧ್ಯವಾಗಿಲ್ಲದ ಇಂಥ ಅನೇಕ ಶಿಲ್ಪಿಗಳನ್ನು ಇಲ್ಲಿ ಎತ್ತಿಕೊಂಡಿಲ್ಲ. ನೇರವಾಗಿ "ದೇಗುಲಮಾನ್ ಮಾಡಿದ ಸೂತ್ರಧಾರಿ,"[5] "ಲಕನಾಚಾರಿ ಮಾಡಿದ ದೇಗುಲ,"[6] "ದೇವಾಲ್ಯ ತುಂಬುವಗೆಯ್ದು",[7] "ಗುಡಿಯ ಕಟ್ಟಿದಕೆ ಬಡಗಿ ಲಿಂಗೋಜಗೆ"[8] ಎಂದು ನಿಸ್ಸಂಶಯವಾಗಿ ಈತ ದೇವಾಲಯವನ್ನೋ, ಮಂಟಪವನ್ನೋ, ಮನೆಯನ್ನೋ ಕಟ್ಟಿದ್ದಾನೆ ಎಂದು ಖಾತ್ರಿಯಾಗಿರುವ ರೂವಾರಿಗಳನ್ನು ಮಾತ್ರ ಇಲ್ಲಿ ಸದ್ಯಕ್ಕೆ ಗುರುತಿಸಲಾಗಿದೆ.

ಕ್ರಿ. ಶ. ೭–೮ ನೆಯ ಶತಮಾನದಿಂದ ೧೮ನೇ ಶತಮಾನದವರೆಗೆ ಸು. ೫೫–೬೦ ವಾಸ್ತುಶಿಲ್ಪಿಗಳು ಬೆಳಕಿಗೆ ಬರುತ್ತಾರೆ. ಕ್ರಿ.ಶ. ೧೨–೧೩ನೆಯ ಶತಮಾನದಲ್ಲಿ ಅಧಿಕ ಸಂಖ್ಯೆಯಲ್ಲಿ ಸಿಕ್ಕುತ್ತಾರೆ. ಇದಕ್ಕೆ ಮೊದಲು ಮತ್ತು ಅನಂತರದ ಅವಧಿಯಲ್ಲಿ ವಿರಳವಾಗಿ ಅಲ್ಲಲ್ಲಿಯೇ ಮಿನುಗುತ್ತಾರೆ.

ಈ ಒಂದು ವಾಸ್ತುಶಿಲ್ಪಿ ಶ್ರೇಣಿಯಲ್ಲಿ ಪಟ್ಟದಕಲ್ಲಿನ ೮ನೆಯ ಶತಮಾನದ ವಿರೂಪಾಕ್ಷ ಮತ್ತು ಪಾಪನಾಥ ದೇವಾಲಯಗಳನ್ನು ಕಟ್ಟಿದ ವಾಸ್ತುಶಿಲ್ಪಿಗಳಾದ ಶ್ರೀ ಗುಂಡನ್–ಅನಿವಾರಿತಾಚಾರಿ, ಆದಿತ್ಯ ಶ್ರೀಪಾದ ದೇವನ ಪುತ್ರನ್, ಸರ್ವಸಿದ್ಧಿ ಆಚಾರ್ಯ ರೇವಡಿ ಒವಜ್ಜರ್ ಮೊಟ್ಟಮೊದಲಿಗರಾಗುತ್ತಾರೆ. ಈ ದೇವಸ್ಥಾನಗಳ ನಿರ್ಮಾಣದ ಆಧಾರದ ಮೇಲೆ, ಆ ಒಂದು ನಿರ್ಮಾಣ ಕಾಲದಲ್ಲೋ ಹೆಚ್ಚು ಕಡಿಮೆ ಒಟ್ಟಾಗಿ ದುಡಿದಿರುವ ಇವರನ್ನೂ ಎಲ್ಲರನ್ನೂ ೮ನೆಯ ಶತಮಾನದವರೆಂದು ಪರಿಗಣಿಸಬಹುದು. ಪುನಃ ಇವರೊಳಗೆ ಕಾಲಾನುಕ್ರಮಣಿಕೆಯನ್ನು ಗುರುತಿಸುವುದು ಕಷ್ಟವಾಗುತ್ತದೆ. ಪಟ್ಟದಕಲ್ಲಿನ ಈ ಗುಡಿಗಳಲ್ಲಿ ದುಡಿದ ಈ ಶಿಲ್ಪಿ ಸಂದೋಹವು ತಮಿಳುನಾಡಿನ ಕಂಚೀಪುರದಿಂದ ಕರೆತರಲ್ಪಟ್ಟವರಾಗಿರಬೇಕು[9] ಎಂಬ ಅಭಿಪ್ರಾಯವೂ ಉಂಟು.

ಶ್ರೀ ಗುಂಡನ್ ಅನಿವಾರಿತಾಚಾರಿಯ ಉಲ್ಲೇಖವು ವಿರೂಪಾಕ್ಷ ಗುಡಿಯ ಹತ್ತಿರವಿರುವ ಅರ್ಧ ಮಂಟಪದ ಎಡ ಕಂಬದ ಮೇಲಿದೆ. ಪ್ರಿಥ್ವೀವಲ್ಲಭ ಚಾಳುಕ್ಯ ವಿಕ್ರಮಾದಿತ್ಯನ ಮಹಾದೇವಿ ದೇಗುಲ(ಲೋಕೇಶ್ವರ ಗುಡಿ)ವನ್ನು ಸೂತ್ರಧಾರಿಯಾದ ಗುಂಡ–ಅನಿವಾರಿತಾಚಾರಿಯು ಮಾಡುತ್ತಾನೆ. ಆದ್ದರಿಂದ ಈತನಿಗೆ 'ಪೆರ್ಜ್ಜೆ

---

2 EC. XI, Hk. 127

3 EC. XII, Tp. 19

4 ಎ. ಎಂ. ಅಣ್ಣಿಗೇರಿ (ಸಂ): ಐಹೊಳೆ : ಸಂಸ್ಕೃತಿ ಮತ್ತು ಕಲೆ, ಪು. ೧೭೨, ಸ. ೪೬

5 ಎ. ಎಂ. ಅಣ್ಣಿಗೇರಿ (ಸಂ): ಪಟ್ಟದಕಲ್ಲ ಗುಡಿಗಳು, ಪು. ೭೦, ಸ ೨

6 EC. VII, ಚಿಕ್ಕಬೆಮ್ಮತ್ತಿ, p. 196, No. 146 (ಪರಿಷ್ಕೃತ)

7 SII. IX (i), p. 237, No. 233

8 EC. XI, Jl. 42

ಚಿಪು' ಎಂಬ ಪಟ್ಟವನ್ನು ಕಟ್ಟಿ 'ತ್ರಿಭುವನಾಚಾರಿ' ಎಂಬ ಬಿರುದನ್ನು ಕೊಟ್ಟು ಗೌರವಿಸುತ್ತಾರೆ.

ಶ್ರೀ ಸರ್ವಸಿದ್ಧಿ ಆಚಾರಿ ಮತ್ತೊಬ್ಬ ಅಷ್ಟೇ ಮುಖ್ಯನಾದ ಶಿಲ್ಪಿ. ಈತನ ಉಲ್ಲೇಖವು ಅದೇ ಗುಡಿಯ ಅದೇ ಮಂಟಪದ ಬಲಕಂಬದ ಮೇಲಿದೆ. ಅದೇ ಚಾಳುಕ್ಯ ವಿಕ್ರಮಾದಿತ್ಯ ಮಹಾರಾಜನು ತಮಿಳುನಾಡಿನ ಕಂಚಿಯ ಪಲ್ಲವರನ್ನು ಮೂರು ಸಾರಿ ಗೆಲ್ಲುತ್ತಾನೆ. (ಹೀಗೆ ಗೆದ್ದ ಸಂದರ್ಭದಲ್ಲಿಯೇ ಆ ಶಿಲ್ಪಕಲಾ ಕೇಂದ್ರವಾಗಿದ್ದ ಕಂಚಿಯಿಂದ ಈ ಶಿಲ್ಪಿಗಳನ್ನು ಮೆಚ್ಚಿ ಅಲ್ಲಿಂದ ತನ್ನ ಜೊತೆಯಲ್ಲಿ ಇಲ್ಲಿಗೆ ಕರೆದುಕೊಂಡು ಬಂದಿರಬೇಕು). ಆ ದಿಗ್ವಿಜಯದ ಸ್ಮರಣಾರ್ಥ ಅವನ ಮಹಾರಾಣಿಯಾದ ಲೋಕಮಹಾದೇವಿಯು ತನ್ನ ಹೆಸರಿನಲ್ಲಿ ಲೋಕೇಶ್ವರ ದೇವಾಲಯವನ್ನು ಕಟ್ಟಿಸುತ್ತಾಳೆ. ಆ ಗುಡಿಯನ್ನು ಕಟ್ಟಿದ ಈ ಸೂತ್ರಧಾರಿಯಾದ ಸರ್ವಸಿದ್ಧಿ ಆಚಾರಿಗೆ ಮೂರು ಸಾರಿ 'ಪೆರ್ಜ್ಜೆಱಿಪು' ಎಂಬ ಒಂದು ಬಗೆಯ ಸನ್ಮಾನವನ್ನು ಮಾಡುತ್ತಾರೆ. ಈತನನ್ನು ಮೂರ್ತಿಶಿಲ್ಪ ಮತ್ತು ವಾಸ್ತು ಶಿಲ್ಪಗಳಲ್ಲಿ ಪಿತಾಮಹನೆಂದೂ, ಪರಿಶುದ್ಧ ಸೂಕ್ಷ್ಮ ಭಾಷಿಯೆಂದೂ, ವಾಸ್ತು, ಪ್ರಾಸಾದ, ಯೋಗಾಸನ, ಶಯನ (ಮಂಚ) ಮೊದಲಾದವುಗಳನ್ನು ತಯಾರಿಸುವುದರಲ್ಲಿ 'ಮಣಿಮುಕುಟ ಚೂಡಾಮಣಿ' ಎಂದೂ ಈ ಶಾಸನವು ಇವನ ಬಗ್ಗೆ ಹೆಮ್ಮೆ ಪಡುತ್ತದೆ. 'ತೆಂಕಣ ದೆಸೆಯಾ ಸೂತ್ರಧಾರಿ' ಎಂದು ಕೂಡಾ ಹೇಳುತ್ತದೆ. ಇದನ್ನು ಕೆಲವು ವಿದ್ವಾಂಸರು ಇವನು ಕರ್ನಾಟಕದ ದಕ್ಷಿಣ ಭಾಗದಲ್ಲಿರುವ ಕಂಚಿಯಿಂದ ಬಂದವನಾದ್ದರಿಂದ ಹೀಗೆ ಹೇಳಲಾಗಿದೆ ಎಂದು ಹೇಳಿದರೆ, ಮತ್ತೆ ಕೆಲವರು ದೇವಸ್ಥಾನದ ದಕ್ಷಿಣ ಭಾಗವನ್ನು ಈತನೇ ಮಾಡಿದವನು ಎಂಬ ಅರ್ಥವಿರಬೇಕು ಎಂದು ತಿಳಿಯುತ್ತಾರೆ.

ಈತನ ಬಗ್ಗೆ ಅಲ್ಲೇ ನಂದಿಮಂಟಪದ ಹೊರಗೋಡೆಯ ಮೇಲೆ ಮತ್ತೊಂದು ಶಾಸನವಿದೆ. ಇದು ಪುಟ್ಟ ಶಾಸನವಾಗಿದ್ದು ಪುನಃ ಇವನನ್ನು 'ತೆಂಕಣ ದೆಶೆಯಾ ಸೂತ್ರಧಾರಿ' ಎಂದು ಕರೆಯುತ್ತದೆ.

ಇಲ್ಲಿ ಗಮನಿಸಬೇಕಾದ ಒಂದು ಅಂಶವೇನೆಂದರೆ, ಶ್ರೀ ಗುಂಡ ಅನಿವಾರಿತಾಚಾರಿ ಮತ್ತು ಸರ್ವಸಿದ್ಧಿ ಆಚಾರ್ಯ–ಈ ಇಬ್ಬರು ಅತ್ಯಂತ ಮುಖ್ಯರಾದ ಸ್ಥಪತಿಗಳಾಗಿದ್ದು, ಈ ಇಬ್ಬರ ಬಗ್ಗೆಯೂ ಒಂದೇ ಸ್ಥಳದ ಎಡ-ಬಲ ಕಂಬಗಳ ಮೇಲೆ ಶಾಸನಗಳಿದ್ದು ಈ ಇಬ್ಬರೂ ಅದೇ ಲೋಕೇಶ್ವರ ಗುಡಿಯನ್ನು ಮಾಡಿದುದಾಗಿಯೂ, ಈ ಇಬ್ಬರಿಗೂ ಮೂರುಸಾರಿ ಪೆರ್ಜ್ಜೆರವು ಎಂಬ ಪಟ್ಟವನ್ನು ಕಟ್ಟಲಾಯಿತು ಎಂದೂ ಹೇಳಲಾಗಿದೆ. ಅಂದರೆ ಇವರಿಬ್ಬರೂ ಸಮಾನ ಸಾಮರ್ಥ್ಯವನ್ನು, ಗೌರವವನ್ನು, ಗುಡಿ ನಿರ್ಮಾಣಕಾರ್ಯದಲ್ಲಿ ಸಮಾನ ಸ್ಥಾನ-ಮಾನವನ್ನು ಹೊಂದಿದ್ದು, ಒಂದೇ (ಲೋಕೇಶ್ವರ ಗುಡಿ) ಗುಡಿಯ ಕೆಲಸದಲ್ಲಿ ಭಾಗವಹಿಸಿದ್ದರು, ಬಹುಶಃ ಹಂಚಿಕೊಂಡು ಒಬ್ಬ ದಕ್ಷಿಣದ ಭಾಗವನ್ನು ಮತ್ತೊಬ್ಬ ಉತ್ತರದ ಭಾಗವನ್ನು ಮಾಡಿರಲಿಕ್ಕೆ ಸಾಧ್ಯವಿದೆ.

ಈ ಪ್ರಧಾನರಿಬ್ಬರ ಜೊತೆಗೆ ಇತರ ಕೆಲವು ಪುಟ್ಟ ಶಿಲ್ಪಿಗಳೂ ಇಲ್ಲಿ ಕೆಲಸ ಮಾಡಿದ್ದಾರೆ. ಆದಿತ್ಯ ಶ್ರೀಪಾದ ಪುತ್ರನ್[12] ಎಂಬ ಶಿಲ್ಪಿಯು ಅದೇ ಗುಡಿಯ 'ಮೇಲ್ಗಂಡು ಛತ್ತನ್ನು ಮಾಡಿದ್ದಾನೆ. ಇವನಿಗೆ ಯಾವ ಬಿರುದು ಬಾವಲಿಗಳೂ ಇಲ್ಲ. ಈತನು ಸಕರೇಸಿವಾದಿಗಳು ಎಂಬವರ 'ಪಾದಧೂಳಿ' (=ಶಿಷ್ಯ)ನಾಗಿದ್ದನು.

ಈ ವಾಸ್ತು ಶಿಲ್ಪಿ ಪ್ರಧಾನರ ಜೊತೆಯಲ್ಲಿ ಇದೇ ಗುಡಿಯ ಮೇಲೆ ಕೆಲಸ ಮಾಡುವ ಮತ್ತೊಂದೆರಡು ಮೂರು ಸಣ್ಣ ಶಿಲ್ಪಿಗಳೆಂದರೆ ದಾಮೋದರ.[13] ಬಲದೇವ.[14] ಬಲದೇವರ ಮಗ 'ತಗನ ಪರಿಸಾಗರ' (?)[15] ಮೊದಲಾದವರು. ಇವರು ಇಲ್ಲಿ ಕೇವಲ ಮೂರ್ತಿಶಿಲ್ಪಿಗಳಾಗಿದ್ದಾರೆ. (ಇವರ ವಿಷಯವನ್ನು ಮುಂದೆ ಕೊಟ್ಟಿದೆ).

---

10 ಎ. ಎಂ. ಅಣ್ಣಿಗೇರಿ : ಪಟ್ಟದಕಲ್ಲ ಗುಡಿಗಳು, ಪು. ೨೬, ಸ ೨

11 ಅದೇ, ಪು ೨೮, ಸ ೧; ಪು. ೨೯, ಸ ೩

12 ಅದೇ, ಪು. ೮೨, ಸ ೯

ರೇವಡಿ ಒವಜ್ಜರ್.[16] ಈತನು ಅದೇ ಪಟ್ಟದಕಲ್ಲಿನಲ್ಲಿ ಅದೇ ಕಾಲದಲ್ಲಿ ಆದರೆ ಪಕ್ಕದ ಮತ್ತೊಂದು ದೇವಸ್ಥಾನವಾದ ಪಾಪನಾಥಗುಡಿಯಲ್ಲಿ ದುಡಿದ ವಾಸ್ತುಶಿಲ್ಪಿ. ಈ ಗುಡಿಯ ಆಗ್ನೇಯದ ಮೂಲೆಯಲ್ಲಿರುವ ಶಾಸನವು ಇವನನ್ನು ಪರಿಚಯ ಮಾಡಿಕೊಡುತ್ತದೆ. ಇವನ ಗುರು ಮೇಲಿನ ವಿರೂಪಾಕ್ಷ ಗುಡಿಯಲ್ಲಿ ದುಡಿದು ಪಟ್ಟಬಂಧನಾದ ಸೂತ್ರಧಾರಿ ಸರ್ವಸಿದ್ಧಿ ಆಚಾರ್ಯ ಅದಾರೋ ಶಿಲೆಮುದ್ದ ಎನ್ನುವವನ ಮೊಮ್ಮಗ ಈ ರೇವಡಿ ಒವಜ. ಇವನು ಈ ಗುಡಿಯ ದಕ್ಷಿಣ ಭಾಗವನ್ನು ಮಾಡಿರುತ್ತಾನೆ ಅಥವಾ ದಕ್ಷಿಣ ದೇಶದಿಂದ ಬಂದವನಾಗಿದ್ದಾನೆ.

ಪಟ್ಟದಕಲ್ಲಿನ ಗುಡಿಯ ಶಿಲ್ಪಿಗಳನ್ನು ಬಿಟ್ಟರೆ ಅನಂತರ ವಾಸ್ತುಶಿಲ್ಪಿಯನ್ನು ಭೇಟಿಯಾಗುವುದು, ಚಿಕ್ಕಬಳ್ಳಾಪುರ ತಾಲ್ಲೂಕು ನಂದಿ ಗ್ರಾಮದ ಭೋಗನಂದೀಶ್ವರದ ಗುಡಿಯಲ್ಲಿ, ಕ್ರಿ.ಶ. ೮೮೦ರಲ್ಲಿ. ಈತ 'ಪಳಿಯಣ'[17] ಎಂದು. ಇವನು ಐನೂರ್ಬಾಚಾರಿ ಎನ್ನುವವನ ಮಗ. ನಂದೀಶ್ವರ ಗುಡಿಯ ಗೋಪುರ ಇವನ ಕೃತಿ. ಧರ್ಮಶಕ್ತಿ ಪಂಡಿತ, ಗೌಡುಗಳು ಮತ್ತಿತರರ ಸಮಕ್ಷಮ ತನ್ನ ಕೃತಿಗೆ ಪ್ರತಿಯಾಗಿ ಸ್ವಲ್ಪ ಭೂಮಿಯನ್ನು ಪಡೆಯುತ್ತಾನೆ.

ಚಂದ್ರಶೇಖರನೆಂಬ[18] ವಾಸ್ತುಶಿಲ್ಪಿಯು 'ಬಿದಿಚೋರರಸರ' ದೇವಾಲಯವನ್ನು ಬಹುಶಃ ಈಗಿನ ಪಾವಗಡ ತಾಲ್ಲೂಕು ನಿಡುಗಲ್ಲು ಬೆಟ್ಟದ ಕಾಳಹಸ್ತೀಶ್ವರ ಗುಡಿಯನ್ನು ಕಟ್ಟುತ್ತಾನೆ. ಇವನ ತಂದೆ ಜಕ್ಕಿಯೋವೈಜ್ಜ. ಇವನ ಕಾಲ ಕ್ರಿ.ಶ. ೯೦೦.

ಕ್ರಿ.ಶ. ೯೬೬ರಲ್ಲಿ ಮಾಗಡಿ ತಾಲ್ಲೂಕಿನಲ್ಲಿ ಗಾವುಂಡನೊಬ್ಬನ ಮಗ ವೈಕುಂಟವಾಸಿಯಾದದ್ದರಿಂದ ತನ್ನ ಮಗನ ಹೆಸರಿನಲ್ಲಿ ದಡಿಗೇಶ್ವರ ಎಂದು ದೇಗುಲವನ್ನು ಕಟ್ಟಿಸುತ್ತಾನೆ. ಈ ದೇಗುಲವನ್ನು ಗಂಗಾಚಾರಿಯು[19] ಮಾಡಿಕೊಡುತ್ತಾನೆ.

೧೧ನೆಯ ಶತಮಾನದಲ್ಲಿ ಬಮ್ಮೋಜ,[20] ಮಾಣಿಕ ಪೊಯ್ಸಳಾಚಾರಿ[21] ಮತ್ತು ಲಕನಾಚಾರಿ[22]–ಎಂದು ೪ ಮಂದಿ ವಾಸ್ತುಶಿಲ್ಪಿಗಳು ಸಿಕ್ಕುತ್ತಾರೆ. ಇವರ ಕಾಲ ಕ್ರಮವಾಗಿ ಕ್ರಿ.ಶ. ೧೦೩೩, ೧೦೬೩ ಮತ್ತು ೧೧೯೪. ಬಮ್ಮೋಜನು ಸೊರಬ ತಾಲ್ಲೂಕಿನಲ್ಲೂ, ಮಾಣಿಕ ಹೊಯ್ಸಳಾಚಾರಿಯು ಮೂಡಗೆರೆ ತಾಲ್ಲೂಕಿನಲ್ಲೂ, ಲಕನಾಚಾರಿಯು ಚಿಕ್ಕಬೆಮ್ಮತ್ತಿಯಲ್ಲಿಯೂ ಕೆಲಸ ಮಾಡುತ್ತಾರೆ. ಬಮ್ಮೋಜನು ದೇವಸ್ಥಾನದ ಸ್ಥಾನಪತಿಗಳು ಮತ್ತಿತರ ಪ್ರಮುಖರು ಹೇಳಿದ್ದರಿಂದ ಇವನು ರಾಮಲಿಂಗಗುಡಿಯನ್ನು ಕಟ್ಟುತ್ತಾನೆ. ಈತನ ತಂದೆ ಪೊಯ್ಸಳಾಚಾರಿ. ಬಹುಶಃ ಈತ ಮಾಣಿಕ ಎಂಬ ಊರಿಗೆ ಸೇರಿದವನು. ಇವನು ತಾನು ವಿದ್ಯಾವಂತನೆಂದು ಹೇಳುತ್ತಾನೆ. ಈತನ ವಿನಯ ಮೆಚ್ಚುವಂಥಾದ್ದು. ಸಾಮಾನ್ಯವಾಗಿ ಈ ಕಲಾವಿದ ಓಜುಗಳು ಶತ್ರುರೂವಾರಿಗಳ ಗಂಡ, ಮತ್ಸರಪಡುವ ರೂವಾರಿಗಳಿಗೆ ಭೇರುಂಡ ಎಂದು ಮುಂತಾಗಿ ಹೇಳಿಕೊಳ್ಳುವುದು ವಾಡಿಕೆ. ಆದರೆ ಈತ ತನ್ನನ್ನು 'ಉಳಿಬಳ್ಳಿಯನ್ನು ಹಿಡಿದು ಕೆಲಸ ಮಾಡುವ ಶಿಲ್ಪಿಗಳ ಶಿಷ್ಯ' ಎಂದೆಂದು ಹೇಳುತ್ತಾನೆ. ಈತ ವಿನಯಶೀಲನಿರಬೇಕು. ಈತ ಒಂದು ಜಿನಬಸದಿಯನ್ನು ರಚಿಸುತ್ತಾನೆ. ಕ್ರಿ.ಶ. ೧೦೭೭ರಲ್ಲಿ ಸಾಗರ ತಾಲೂಕಿನ ಶಾಸನವೊಂದು ಹೇಳುವ ಪ್ರಕಾರ[23] ಕಾಮೋಜ ಎಂಬ ಶಿಲ್ಪಿಯು ಒಂದು ದೇವಸ್ಥಾನವನ್ನು ಕಟ್ಟಿಕೊಡುತ್ತಾನೆ. ಲಕನಾಚಾರಿ ಎಂಬ ಮತ್ತೊಬ್ಬ ಶಿಲ್ಪಿಯು ಶೆಟ್ಟಿಯೊಬ್ಬನು ಪಲ್ಲವೇಶ್ವರ ಗುಡಿಯನ್ನು ಕಟ್ಟಿಸಲಾಗಿ ಅವನ ಮೊಮ್ಮಗಳು

---

16 ಎ. ಎಂ. ಅಣ್ಣಿಗೇರಿ: ಪಟ್ಟದಕಲ್ಲ ಗುಡಿಗಳು, ಪು ೮೨, ಸ ೨೯
17 EC. X, Cb. 26
18 EC. XII, Pg. 45
19 EC. IX, Ma. 75
20 EC. VII, Sb. 184
21 EC. VI, Mg. 13
22 EC. VII, ಚಿಕ್ಕಬೆಮ್ಮತ್ತಿ, p. 196, No. 146
23 EC. VIII, Sa. 109

ಆದಕ್ಕೆ ನಂದಿಮಂಟಪ, ಭೈರವ ಮತ್ತು ನಂದಿಯ ಪ್ರಧಾನಮೂರ್ತಿಗಳನ್ನು, ಭೈರವ, ಭಗವತಿ, ನಾರಾಯಣ ಮೊದಲಾದ ಪರಿವಾರ ದೇವತೆಗಳನ್ನು ಮಾಡಿಸುತ್ತಾಳೆ. ಈ ಸಂದರ್ಭದಲ್ಲಿ ಈ ಶಾಸನ ಲಕನಾಚಾರಿಯು ದೇಗುಲ ವನ್ನು ಮಾಡಿದುದಾಗಿ ಹೇಳಿದೆ. ಈ ಲಕನಾಚಾರಿಯೇ ಈ ಇತರ ಕೆಲಸಗಳನ್ನು ಮಾಡಿರಲಿಕ್ಕೆ ಸಾಕು.

ಎಬೋಜ[24]ನೆಂಬ ಕುಶಲಕರ್ಮಿಯು ಕ್ರಿ.ಶ. ೧೧೦೪ರಲ್ಲಿ ತರೀಕೆರೆ ತಾಲ್ಲೂಕು ಶಿವನೆ ಹೋಬಳಿ ಬಂಕನ ಕಟ್ಟೆ ಗ್ರಾಮದ ಬಂಕೇಶ್ವರ ದೇವಸ್ಥಾನವನ್ನು ಮಾಡು ತ್ತಾನೆ, ಇದನ್ನು ಮಾಡಿಸಿದ ಕೆಲವು ಗೌಡುಗಳು ಎಬೋಜನಿಗೆ ಗದ್ದೆ ಕೊ ೧೦ನ್ನು ಬಿಟ್ಟುಕೊಡುತ್ತಾರೆ. ಇವನ ಜೊತೆಯಲ್ಲಿ ಬಿಲೋಜನೆಂಬ ಶಿಲ್ಪಿಯೂ ದುಡಿ ದಿರಬೇಕು. ಇವನಿಗೆ ಖ। ಗದ್ದೆಯನ್ನು ಕೊಟ್ಟಿರುತ್ತಾರೆ. ಅಥವಾ ಈತ ಈ ಶಾಸನವನ್ನು ಕೊರೆದ ಕಂಡರಿಣೆಕಾರ ನಿದ್ದಿರಲೂಬಹುದು.

ಇಕುಲೋಜ/ಇಕ್ಕುದ :[25] ಈ ಹೆಸರು ೪ ಶಾಸನಗಳಲ್ಲಿ ಉಲ್ಲೇಖಗೊಂಡಿದೆ :

೧. 'ಸರಸ್ವತೀ ಗಣದಾಸಿ ಭುಗೋಜನ ಪುತ್ರ ಇಕುಲೋಜ.'

೨. 'ಖಣ್ಡರಿಸಲು ಕೇಇಕ್ಕುದನೆ ಬಲ್ಲನ್.'

೩. 'ಸರಸ್ವತೀ ಗಣದಾಸಿ ಬೆಂಗೋಜನ ಪುತ್ರ ಇಕ್ಕುಡಾಚಾರಿ.'

೪. 'ಚೆಂಗೋಜರ ಈಂತಿನಿಬರ ಕೆಲಸ ಇಕ್ಕು ಡೋಜನ ಬರಪ.'

ಈತನ ತಂದೆಯ ಹೆಸರನ್ನು ಕುರಿತಂತೆ ಇರುವ ವ್ಯತ್ಯಾಸವನ್ನು ಅಕ್ಷರ ಸ್ಖಾಲಿತ್ಯವೆಂದು ತಿಳಿಯವುದಾದರೆ, ಈ ನಾಲ್ಕೂ ಶಾಸನಗಳಲ್ಲಿ ಕೆಲಸ ಮಾಡಿದ ಇಕ್ಕುಡಾ ಚಾರಿಯು ಒಬ್ಬನೇ ಆಗಿದ್ದಾನೆಂದು ತಿಳಿಯಲು ಅಡ್ಡಿಯಿಲ್ಲ ಇವನ ತಂದೆಯನ್ನು 'ಬೆಂಗೋಜ' ಎಂದು ಇಟ್ಟುಕೊಳ್ಳ ಬಹುದು. ಮೊದಲಿನ ಮೂರು ಶಾಸನಗಳೂ ಕ್ರಮ ವಾಗಿ ಕ್ರಿ.ಶ. ೧೧೦೭, ೧೧೧೩, ೧೧೨೪ರಲ್ಲಿ ದಾವಣ ಗೆರೆ ತಾಲ್ಲೂಕಿನಲ್ಲಿಯೇ ರಚನೆಯಾಗಿವೆ. ಆದರೆ ನಾಲ್ಕನೆ ಯದು ಮಾತ್ರ ೧೮ ವರ್ಷಗಳ ಅನಂತರ ಕ್ರಿ.ಶ. ೧೧೪೨ ರಲ್ಲಿ ಅರಸೀಕೆರೆ ತಾಲ್ಲೂಕಿನಲ್ಲಿ ರಚನೆಯಾಗಿದೆ. ಆದರೂ ಒಬ್ಬ ಮನುಷ್ಯನ ಜೀವನಾವಧಿಯೊಳಗೇ ಬರುತ್ತದೆ ಯಾದ್ದರಿಂದಲೂ, ಬೇರೆ ಕೆಲವಾರು ಶಿಲ್ಪಿಗಳು ವಲಸೆ ಹೋಗಿರುವುದಕ್ಕೆ ಉದಾಹರಣೆಯಿರುವುದರಿಂದಲೂ ಈತನು ಅರಸೀಕೆರೆಯ ಬಳಿಗೆ ಬಂದಿದ್ದನೆಂದೂ ತಿಳಿಯ ಬಹುದು. ಈ ಶಾಸನದಲ್ಲಿ ಈತನ ತಂದೆಯ ಹೆಸರು ಹೇಳಿ ರುವುದಿಲ್ಲ. ಆದರೆ ಈ ಶಾಸನದಲ್ಲಿ ಈತನು ಶಾಸನವನ್ನು ಕಟೆದಿರುವಲ್ಲಿ ಚೆಂಗೋಜನೆನ್ನುವವನು ಗುಡಿಯನ್ನು ಕಟ್ಟು ತ್ತಾನೆ. ಈ ಚೆಂಗೋಜನು ಬಹುಶಃ ಈತನ ತಂದೆ ಬೆಂಗೋಜನಿದ್ದಿರಲಿಕ್ಕೂ ಸಾಕು.

ಮೊದಲಿನ ಎರಡು ಮತ್ತು ಕೊನೆಯ ಒಂದು ಶಾಸನದಲ್ಲಿ ಈತ ಶಾಸನವನ್ನು ಕಂಡರಿಸಿಕೊಡುತ್ತಾನೆ. ಬರೀ ಶಾಸನವನ್ನು ಕಂಡರಿಸುವುದಷ್ಟೆ ಅಲ್ಲದೆ ಒಂದು ಕಡೆ ಈತನು ಎರಡು ದೇವಾಲಯಗಳನ್ನು ಮಾಡುತ್ತಾನೆ. (ಇಲ್ಲಿ ಕೂಡ ಈತನು ತಾನೇ ಶಾಸನವನ್ನೂ ಕಂಡರಿಸು ತ್ತಾನೆ). ಇವನು ಸರಸ್ವತಿ ಗಣದಾಸಿ ಗುಂಪಿಗೆ ಸೇರಿದ ವನು. ಈತನ ಒಟ್ಟು ಕೃತಿಗಳು-೪ ಶಿಲಾ ಶಾಸನಗಳು ಹಾಗೂ ೨ ದೇವಸ್ಥಾನಗಳು. ದಾವಣಗೆರೆ ತಾಲ್ಲೂಕಿನ ನಲ್ಲಿಯೇ ಬರುವ ಹೂವಿನಮಡಗು, ಕೊಡಗನೂರು ಮತ್ತು ಕಬೂರು ಎಂಬ ಬೇರೆ ಬೇರೆ ಗ್ರಾಮಗಳಲ್ಲಿ ಶಾಸನ ರಚನೆ ಮಾಡಿಕೊಡುತ್ತಾನೆ. ಕೊನೆಯದನ್ನು ಅರಸೀಕೆರೆ ತಾಲೂಕು ಕೆಲ್ಲಂಗೆರೆಯಲ್ಲಿ ಕಂಡರಿಸುತ್ತಾನೆ. ಈತನ ಎಲ್ಲ ಶಾಸನಗಳಲ್ಲಿಯೂ ೨೬ ರಿಂದ ೪೨ ಬಂತಿಯ ಒಳಗೆ ಬರುತ್ತವೆ. ಈತನಲ್ಲಿ ಕಾಗುಣಿತದ ತಪ್ಪುಗಳಿಲ್ಲ. ಎಲ್ಲ ಶಾಸನಗಳೂ ಕನ್ನಡದಲ್ಲಿವೆ. ಈತ ವಿದ್ಯಾವಂತ, ಅಕ್ಷರಸ್ಥ. ಈತನಿಗೆ ತನ್ನ ವೃತ್ತಿಯನ್ನು ಚೆನ್ನಾಗಿ ಮಾಡಬೇಕೆಂಬ ಪರಿಜ್ಞಾನವಿತ್ತು.

---

24 EC. XI, Tk. 62

25 EC. XI, Dg. 128, 149, 155; EC. V, Ak.

"ಪೊಕ್ಕಳು ತಲೆಕಟ್ಟುಮನನ್ತಕ್ಕರದವಯವಮನ ಱಿಂದು ಖಣ್ಡರಿಸಲು ಕೇ ಇಕ್ಕುದನೆ ಬಲ್ಲನಱಿಯ ಮ್ರ್ಮಕ್ಕವರೆನ್ದೊಸೆದು ಧರಣಿ ಬಣ್ಣಿಸುತಿರ್ಕ್ಕುಂ"–ಎಂಬ ಮಾತು ಲಿಪಿಶಾಸ್ತ್ರದ ದೃಷ್ಟಿಯಿಂದ ಬಹಳ ಮುಖ್ಯ ವಾಗಿದೆ. ಮಹಾಪ್ರಾಣಾಕ್ಷರಗಳಲ್ಲಿ ಬರುವ ಹೊಕ್ಕಳು, ತಲೆ ಕಟ್ಟು–ಮೊದಲಾದ ಅಕ್ಷರದ ಬೇರೆ ಬೇರೆ ಅಂಗಾಂಗ ಗಳನ್ನು ಸರಿಯಾಗಿ ತಿಳಿದುಕೊಂಡು ಅವನ್ನು ಶಿಲೆಯ ಮೇಲೆ ಮೂಡಿಸುತ್ತಿದ್ದನು. ಈ ವಿಷಯ ಇಕ್ಕುಡನನ್ನು ಬಿಟ್ಟು ಇತರರಿಗೆ ಗೊತ್ತಿರಲಿಲ್ಲ ಎಂದು ಜಗತ್ತು ಈತನನ್ನು ಹೊಗಳುತ್ತಿತ್ತು. ಈತ ಜನಪ್ರಿಯ ಕಂಡರಣೆಕಾರ ನಾಗಿದ್ದ.

ಇಲ್ಲಿ ಗಮನಿಸಬೇಕಾದ ಒಂದು ಅಂಶವೇನೆಂದರೆ ಇಷ್ಟು ಚನ್ನಾಗಿ ಬರೆಯುವುದನ್ನು ಕಲಿತವನಾಗಿದ್ದರೂ ಕೂಡ ಇವನ ಜೊತೆಯಲ್ಲಿ ಶಿಲಾಫಲಕದ ಮೇಲೆ ಬಳಪ ದಿಂದ ಬರೆಯುವ ಲಿಪಿಕಾರನು ಮಾತ್ರ ಬಂದೇ ಬರುತ್ತಾನೆ. ಇದರಿಂದ ನಮಗೆ ಸ್ಪಷ್ಟವಾಗುವ ವಿಷಯ ವೇನೆಂದರೆ ಕವಿ, ಲಿಪಿಕಾರ, ಕಂಡರಣೆಕಾರ ಈ ಮೂವರೂ ಸೇರಿ ಒಂದು ಶಾಸನವನ್ನು ರಚನೆ ಮಾಡ ಬೇಕೆಂಬುದು ಆಗಿನ ಕಾಲದ ಒಂದು ಪದ್ಧತಿ (Proceedure) ಆಗಿದಿತೆಂದೆನ್ನಿಸುತ್ತದೆ. ಈತನ ಮತ್ತೊಂದು ಮುಖ್ಯವಾದ ಸಾಧನೆಯೆಂದರೆ ಈತ ಎರಡು ದೇವಸ್ಥಾನ ಗಳನ್ನು ಮಾಡಿರುತ್ತಾನೆ. ಹೀಗೆಂದು ಈತ ಒಂದೇ ಕಡೆ ಹೇಳಿದ್ದಾನೆ. ಈ ಗುಡಿಗಳಾವುವೆಂಬುದೇನೂ ತಿಳಿಯುವು ದಿಲ್ಲ. ದಾವಣಗೆರೆ ತಾಲ್ಲೂಕು ಕಬ್ಬೂರು ಗ್ರಾಮದಲ್ಲಿರುವ ಕಲ್ಲೇಶ್ವರ ದೇವಸ್ಥಾನವೇ ಈತನು ಕಟ್ಟಿದ ೨ ಗುಡಿಗಳಲ್ಲಿ ಒಂದಾಗಿರಬೇಕು.

**ಮಲ್ಲೋಜ–ಮಾಣಿಯೋಜ** :[26] ಈತ ಗಮ ನಾರ್ಹ ಸ್ಥಪತಿ. ಬಹುಜನ ಪ್ರಸಿದ್ಧವಾದ ದೊಡ್ಡಗದ್ದ ವಳ್ಳಿಯ ಮಹಾಲಕ್ಷ್ಮಿಯ ದೇವಸ್ಥಾನವನ್ನು ನಿರ್ಮಿಸಿದ ವನು ಮಲ್ಲೋಜ–ಮಾಣಿಯೋಜ. ಮಹಾಲಕ್ಷ್ಮೀ ದೇವಸ್ಥಾನದ ಎಲ್ಲ ಕಲಾವಂತಿಕೆ, ಸೊಗಸುಗಾರಿಕೆಯೂ ಪ್ರಧಾನವಾಗಿ ಈತನಿಗೇ ಸಲ್ಲುತ್ತದೆ. ಈತನ ಕಾಲ ಕ್ರಿ.ಶ. ೧೧೧೩. ಈತನು ತಾನು "ವಿಶ್ವಕರ್ಮ ನಿರ್ಮಿತ ಸುಭಾಷಿತನು" ಎಂದು ಹೇಳಿದ್ದಾನೆ. ಈ ಗುಡಿಯನ್ನು ಕಟ್ಟಿಸಿದ ದಾತರು ಇವನಿಗೆ ಕೆರೆಯ ಕೆಳಗಿನ ೪ ಸಲಗೆ ಗದ್ದೆಯನ್ನು ಸರ್ವನಮಶಿಶಿವಾಯವಾಗಿ ಬಿಟ್ಟುಕೊಡುತ್ತಾರೆ. ಮಲ್ಲೋಜ-ಮಾಣೆಯೋಜ ಒಬ್ಬನೋ ಅಥವಾ ಇಬ್ಬರ ಹೆಸರೋ ಗೊತ್ತಾಗುವುದಿಲ್ಲ. (ಶಾಸನ ಸಂಪುಟದ ಸಂಪಾದಕರು ಮಾಣಿಯೋಜನು ಮಲ್ಲೋಜನ ಮಗ–ಎಂದೇ ತಿಳಿಯುತ್ತಾರೆ). ಈ ಶಾಸನದ ಕೊನೆಯಲ್ಲಿ ಒಂದು ಶ್ಲೋಕ ಬರುತ್ತದೆ :

ವಿಮಾನ ಸವ್ವತೋ ಭದ್ರ ವ್ರಿ ಸ್ವಭಾವತಿಕ ಶಿಕ್ತಂ
ಎತ್ತುಂಗ ವೈ
ರಾಜಗರುಡವರ್ಧಮಾನ ಶಂಖವ್ರಿತ್ತಪುಜಾಕ
ಗ್ರಿಹರಾಜಸ್ವಸ್ತಿ

ಶಿಲ್ಪಿಗಳು ಶಿಲ್ಪಶಾಸ್ತ್ರಗಳನ್ನು ಓದಿಕೊಂಡಿರುತಿರು ತ್ತಿದ್ದರೆ ? ಎಂಬ ವಿಷಯವನ್ನು ಚರ್ಚಿಸುವಲ್ಲಿ ಪ್ರೊ॥ ಎಂ. ಚಿದನಾಂದಮೂರ್ತಿ ಅವರು ಇದು ಅದಾವುದೋ ಶಿಲ್ಪಶಾಸ್ತ್ರದ ಶ್ಲೋಕವಿರಬೇಕೆಂದು ಹೇಳುತ್ತಾರೆ.[27] ಅಂದರೆ ಮಲ್ಲೋಜ-ಮಾಣಿಯೋಜನು ಶಿಲ್ಪಶಾಸ್ತ್ರವನ್ನು ಓದಿಕೊಂಡಿದ್ದವನೆಂದು ಊಹಿಸಲು ಅವಕಾಶವಿದೆ.

ಮಲ್ಲೋಜ–ಮಾಣಿಯೋಜನು ಇದನ್ನು ಅಪ ರೂಪದ ಚತುಷ್ಕೂಟವಾಗಿ ರಚಿಸಿದ್ದಾನೆ. ಇದು ಇವನ ವಿಶೇಷ. ಗುಡಿಗೆ ೪ ಶಿಖರಗಳಿವೆ. ಶಿಖರಗಳು ಮೆಟ್ಟಿಲು ಮೆಟ್ಟಿಲಾಗಿವೆ. ಜಗತಿ ಇಲ್ಲ. ಗೋಡೆಯು ಕೆಳಗಡೆ ೬ ಪಟ್ಟಿಕೆಗಳಿವೆ. ಸಿಂಹಲಲಾಟದ ನಾಗತೋರಣಗಳಿವೆ. ದ್ವಾರಪಾಲಕರು, ಕೀರ್ತಿಮುಖ ಅಂಕಣದ ನವರಂಗ, ದುಂಡಾಗಿಯೂ ಘಂಟೆಯಾಕಾರವೂ ಇರುವ ಸ್ತಂಭಗಳೂ ಇವೆ. ಇದರ ಒಳಗಿನ ಕಾಳೀ ಗರ್ಭಗುಡಿಯ ದ್ವಾರಪಾಲಕ ರಾಗಿ ಎರಡು ಭೇತಾಳಗಳನ್ನು ಭೀಕರವಾಗಿ ಬಿಡಿಸಿದ್ದಾನೆ. ಹಿಂದೆ ಇದು ಲಕ್ಷ್ಮಿಯ ಗುಡಿ ಎಂದು ಕಟ್ಟಿಸಲಾಗಿದ್ದರೂ ಇಂದು ಶ್ರೀಕಾಳಿಕಾದೇವಿಯೇ ಪ್ರಧಾನ ದೇವತೆಯಾಗಿದೆ. ಶಾಕ್ತಾಗಮಗಳ ದೃಷ್ಟಿಯಿಂದ ಇದು ಬಹಳ ಮುಖ್ಯ

---

26 EC, V, Hn. 149

27 ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೬೪

ವಾದ ದೇವಾಲಯ ಎಂದು ಪ್ರೊ॥ ಎಸ್. ಶ್ರೀಕಂಠಶಾಸ್ತ್ರಿಯವರು ಹೇಳಿದ್ದಾರೆ.[28]

ಕ್ರಿ. ಶ. ೧೧೧೭ ರಲ್ಲಿ ಜಕ್ಕೋಜನು[29] ಅರಸೀಕೆರೆ ತಾಲೂಕು ಶಂಕರಹಳ್ಳಿಯಲ್ಲಿ ಒಂದು ಶಿವಾಲಯವನ್ನು ಕಟ್ಟುತ್ತಾನೆ. ಅದಕ್ಕಾಗಿ ಇವನಿಗೆ ಹೊನ್ನನ್ನು ಕೊಡುತ್ತಾರೆ. ಅದರಲ್ಲಿ ಸ್ವಲ್ಪ ಭಾಗವನ್ನು ತಾನು ಕಟ್ಟಿದ ಶಿವಾಲಯಕ್ಕೆ ಬಿಟ್ಟುಕೊಡುತ್ತಾನೆ. ಇದು ಈತನ ಔದಾರ್ಯವನ್ನು ತೋರಿಸುತ್ತದೆ. ಮುಂದೆ ಕ್ರಿ. ಶ. ೧೧೩೬ ರಲ್ಲಿ ದೇವರಾಸಿ ಆಚಾರ್ಯ್ಯ[30]ನೆಂಬುವನು ಧಾರವಾಡ ತಾಲ್ಲೂಕು ವೆಂಕಟಪುರಿ ಎಂಬ ಊರಿನಲ್ಲಿ ಕೆಸರುಕಲ್ಲನ್ನು ಇಟ್ಟು 'ದೇರುಮ್ಮ' ಎಂಬ ದೇಗುಲವನ್ನು ಕಟ್ಟಿ ಲಿಂಗಪ್ರತಿಷ್ಠೆಯನ್ನು ಮಾಡುತ್ತಾನೆ. ಇಲ್ಲಿ ಇವನನ್ನು ಕಾಳತ್ರಯ ಎಂದೂ ಕರೆಯಲಾಗಿದೆ. ಅನಂತರ ಕ್ರಿ. ಶ. ೧೧೩೬–೩೭ರಲ್ಲಿ ಕೃಷ್ಣರಾಜನಗರ ತಾಲ್ಲೂಕು ಮಳಲಿ ಗ್ರಾಮದ ಮಲ್ಲೇಶ್ವರ ದೇವಸ್ಥಾನದಲ್ಲಿ ಆಯ್ತಾಚಾರಿ[31] ಎನ್ನುವವನು ಒಂದು ಮಂಟಪವನ್ನು ರಚನೆ ಮಾಡುತ್ತಾನೆ. ಇದಕ್ಕಾಗಿ ಇವನಿಗೆ ಸ್ವಲ್ಪ ಭೂಮಿಯನ್ನು ಅನುದಾನ ಮಾಡುತ್ತಾರೆ. ೧೫ ಕೊಳಗ ಬೆಳೆಯುವ ಭೂಮಿಯನ್ನು ಕೊಂಡು ಈ ಆಚಾರಿಗೆ ದಾನ ಮಾಡುತ್ತಾರೆ.

ಬೂಚೋಜ (ಕ್ರಿ. ಶ.೧೧೪೯)[32]ನು ಸೂತ್ರಧಾರಿ. ಇವನ ತಮ್ಮ ಮೈಲೋಜ. ಕಲ್ಯಾಣದುರ್ಗ ತಾಲೂಕು ಎರಡುಕೆರೆ ಗ್ರಾಮದಲ್ಲಿರುವ ಶಂಕರಸ್ವಾಮಿ ದೇವಸ್ಥಾನದಲ್ಲಿರುವ ಶಾಸನದ ಪ್ರಕಾರ ಈತನು ಒಂದು ದೇವಸ್ಥಾನವನ್ನು ಮಾಡಿದುದಕ್ಕಾಗಿ ಸ್ವಲ್ಪ ಗದ್ದೆಯನ್ನು, ನಿವೇಶನವನ್ನು ಪಡೆಯುತ್ತಾನೆ. ಈತ ಕೆರೆಯ ತೂಬನ್ನು ಕೂಡ ಮಾಡಿದ್ದಿರಬೇಕು.

ರಂನೋಜ[33]ನೆಂಬ ಶಿಲ್ಪಿಯು ಕ್ರಿ. ಶ. ೧೨ರಲ್ಲಿ ನಾಂದೇಡು ಜಿಲ್ಲಾ, ಬಿಲೋಳಿ ತಾಲ್ಲೂಕು ಜುನ್ನೀ ಎಂಬ ಗ್ರಾಮದಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಕೊಟ್ಟುದಕ್ಕಾಗಿ '೨ ವೃತ್ತಿ' ಜಮೀನನ್ನು ಪಡೆಯುತ್ತಾನೆ. ಬಹುಶಃ ಮಾಯಿಪೋಜನೆಂಬ ಮತ್ತೊಬ್ಬ ಶ್ರಮಿಕನೂ ಇವನ ಜೊತೆ ದುಡಿದಿದ್ದಿರಬಹುದು. ಇವನು ಕೂಡ '೨ ವೃತ್ತಿ' ಜಮೀನು ಅನುದಾನ ಪಡೆಯುತ್ತಾನೆ.

ಕಲ್ಲೋಜ[34] (ಕ್ರಿ. ಶ. ೧೧೮೬) ಎಂಬ ಬಡಗಿ ಸ್ವಲ್ಪ ವಿಶೇಷ. ಏಕೆಂದರೆ ಈತ ದೇವಸ್ಥಾನವನ್ನಲ್ಲ–ಮನೆಯನ್ನು ಕಟ್ಟಿದ ಅಪರೂಪದ ಉಲ್ಲೇಖ. ಈತ ಮೊಕದೇವರ ದೇವರಿಗೆ ಸೇರಿದ ತೋಟ ಮತ್ತು ಗದ್ದೆಯಲ್ಲಿ ಒಂದು ಮನೆಯನ್ನು ರಚನೆ ಮಾಡುತ್ತಾನೆ. ಅದಕ್ಕಾಗಿ ಅದೇನು ಕೂಲಿ ಬರಬೇಕಾಗಿತ್ತು ಅದೆಲ್ಲವನ್ನೂ ದೇವರ ನೈವೇದ್ಯ ಖರ್ಚಿಗೆಂದು ಬಿಟ್ಟುಕೊಡುತ್ತಾನೆ. ಇಲ್ಲಿ 'ಕೂಲಿ'ಯ ಕಲ್ಪನೆ ಇರುವುದು ಗಮನಾರ್ಹ. ಈ ಕಲ್ಲೋಜ ಉದಾರಿ. ಇವನು ಮನೆ ಕಟ್ಟಿದ ತನ್ನ ಎಲ್ಲ ದುಡಿಮೆಯನ್ನು ದೇವರ ಸೇವೆಗಾಗಿ ಬಿಟ್ಟುಕೊಡುತ್ತಾನೆ.

ಬಿಸಡೋಜ, ಚಾವೋಜ ಮತ್ತು ಸಿಂಗೋಜರೆಂಬ[35] ಮೂವರು ವಾಸ್ತುಶಿಲ್ಪಿಗಳು ಒಟ್ಟಿಗೆ ಸೇರಿ ಶಿಕಾರಿಪುರ ತಾಲೂಕು ಬಳ್ಳಿಗಾವೆಯ ಇತಿಹಾಸ ಪ್ರಸಿದ್ಧವಾದ ಕೇದಾರ ದೇವಸ್ಥಾನದ ಮಂಟಪವನ್ನು ಕ್ರಿ. ಶ. ೧೧೯೭ರಲ್ಲಿ ಕಟ್ಟುತ್ತಾರೆ. ಇಲ್ಲಿ 'ಮೂವಗ್ಗ' ಎಂಬುದಾಗಿ ಮೂವರು ಸೇರಿ ಒಂದು ಕಟ್ಟಡವನ್ನು ಕಟ್ಟಿರುವ ಉಲ್ಲೇಖವಿರುವುದು ಗಮನಾರ್ಹ. ಈ ಮೂವರು ಸಹೋದ್ಯೋಗಿಗಳು ಗೊತ್ತಾದ ಅವಧಿಯಲ್ಲಿ ಇದನ್ನು ಮಾಡಿ ಮುಗಿಸಿಕೊಟ್ಟದ್ದಾಗಿ ಶಾಸನ ಹೇಳುತ್ತದೆ. ಆದಕಾರಣ ಶ್ರೀಮದ್ರಾಜಗುರುದೇವರು ೧೨೦ ತಮ್ಮ ಗದ್ದೆಯನ್ನು ಸರ್ವ್ವನಮಸ್ಯವಾಗಿ ಸಲ್ಲುವಂತೆ ಮಾಡಿಕೊಡುತ್ತಾರೆ. 'ಅವಧಿಯಲ್ಲಿ ನಿರ್ವಾಣ' ಮಾಡಿಕೊಡುತ್ತಾರೆ. 'ನಿರ್ವಾಣ' ಎಂದರೆ ಕಟ್ಟಡವನ್ನು ಕಟ್ಟುವ

28 ಹೊಯ್ಸಳ ವಾಸ್ತುಶಿಲ್ಪ, ೧೯೬೫, ೧೭೭-೧೮೨
29 EC. V, Ak. 56
30 SII. XV, p. 227, No. 277
31 EC. V, p. 8, No. 9 (ಪರಿಷ್ಕೃತ)
32 SII. IX(i), p. 237, No. 233
33 Srinivasa Ratti (Ed.) : I. N. D., p. 76, No. 39
34 SII. XV, p. 95, No. 69
35 EC. VII, Sk. 96 & 97

ಹಂತದಲ್ಲಿರುವಾಗ ಏನು ಮರೆಮಾಡಿಕೊಂಡಿರುತ್ತಾರೆ ಅದು ಪೂರ್ಣವಾದ ಮೇಲೆ ಅದನ್ನು ಅನಾವರಣ ಮಾಡಿ ಕೊಡುವ ಒಂದು ಆಚರಣೆಯಾಗಿದೆ. ಇದು ಈ ಹಂತದ ಒಂದು 'ರಿಚುಯಲ್ಲು' ಆಗಿದ್ದಿರಬೇಕು.

**ಮಾರೋಜ ಮತ್ತು ಮಸಣೋಜ :** [36] ಇವರ ಕಾಲ ಕ್ರಿ. ಶ. ೧೧೮೬. ಚನ್ನರಾಯಪಟ್ಟಣದ ಕಬ್ಬಳ್ಳಿ ಎಂಬ ಗ್ರಾಮವು ಇವರು ಕೆಲಸ ಮಾಡಿದ ಜಾಗವಿರಬೇಕು. ಇಲ್ಲಿ ಈ ಇಬ್ಬರು ಒಂದು ದೇವಸ್ಥಾನದ ಕೆಸರು ಕಲ್ಲಿನಿಂದ ಪ್ರಾರಂಭಿಸಿ 'ಕಳಸ ನಿದ್ಧರ್ಣ' ಪರಿಯಂತ ಪೂರ್ಣ ಇವರದೇ ಕೈಚಳಕವಾಗಿದೆ. ಇವರನ್ನು ಇಲ್ಲಿ 'ಬಿನ್ನಾಣಿ'ಗಳು ಎಂದು ಕರೆಯಲಾಗಿದೆ. ಇಲ್ಲಿ ಬರುವ ಈ ಮಾರೋಜನಿಗೆ ಬಹುಶಃ ಮಾಕೋಜ[37] ಎಂಬ ಮಗನಿದ್ದಿರಬೇಕು. ಆತ ವೀರಗಲ್ಲುಗಳನ್ನು ಮಾಡುತ್ತಿದ್ದಿರಬೇಕು. ಏಕೆಂದರೆ ಇಲ್ಲಿಂದ ಸ್ವಲ್ಪ ದೂರದ ಅರಸೀಕೆರೆಯಲ್ಲಿ ಸುಮಾರು ೫೦ ವರ್ಷಗಳ ಅನಂತರ ಒಬ್ಬ ಮಾರೋಜನ ಮಗ 'ರೂವಾರಿ ಮಾಕೋಜ'ನೆನ್ನುವವನು ಒಂದು ವೀರಗಲ್ಲನ್ನು ಮಾಡುತ್ತಾನೆ. ಇದು ಇಲ್ಲದೆಯೂ ಇರಬಹುದು.

**ಸೇನೋಜ, ಬೈಗೋಜ ಮತ್ತು ಸೋವೋಜ**-[39] ಕ್ರಿ. ಶ. ೧೧೮೮, ಬೈಗೋಜನು ಸೇನೋಜನ ಮಗ. ಸೋವೋಜ ಬಹುಶಃ ಕಟ್ಟಡ ನಿರ್ಮಾಣಕಾರ್ಯವನ್ನು ಚೆನ್ನಾಗಿ ಬಲ್ಲವನಾಗಿದ್ದಿರಬೇಕು. ಸೇನೋಜನು ಬಹುಶಃ ಪ್ರಖ್ಯಾತನಾಗಿದ್ದನು. ಈತನನ್ನು ಕುರಿತು 'ವಿನುತಂ' ಎಂದು ಹೇಳಿದೆ. ಪುನಃ ಈ ಮೂವರನ್ನೂ ಕುರಿತು 'ಓಜಂಗಳ್ ವಿನಯ ನಿಧಾನರ್' ಎಂದು ಕೂಡ ಮೆಚ್ಚಿಕೆಯ ಮಾತನ್ನಾಡಿದ್ದಾರೆ. ಸವಿನಯವೇ ಇವರ ಸಂಪತ್ತಾಗಿತ್ತು. ಅಹಂಕಾರಿಗಳಲ್ಲ. ಇವರು ಚಟ್ಟೇಶ್ವರ ದೇವರ ನಿವಾಸವನ್ನು 'ಮನಃಪ್ರೀತಿ'ಯಿಂದ 'ಎತ್ತಿ' ಮಾಡಿಕೊಡುತ್ತಾರೆ. ಇವರ ಜೊತೆಯಲ್ಲೇ ಇವರ ಈ ಒಂದು ಕೃತಿಯನ್ನು 'ಬ್ಯ(?)ರೋಜ'ನೆನ್ನುವವನ್ನು ಪ್ರೀತಿಯಿಂದ ಶಿಲಾಶಾಸನದ ಮೇಲೆ 'ಟಂಕಿಸು'ತ್ತಾನೆ, ದಾಖಲೆ ಮಾಡುತ್ತಾನೆ. ಈ ಶಾಸನದ ಕಂಡರಣೆಕಾರನಾದ ಇವನಿಗೆ ಸಂಬಂಧಿಸಿದಂತೆ ಕೂಡ "ಶ್ರೀ ಸೋಡಲ ಭಕ್ತಿ ಮಹಾಪ್ರಾಸಾದಪಾಳಿತ, ನಿಜವನೆನೆಗರ್ದ, ಭಾಸುರ ಯಶಂ" ಎಂದು ಮೆಚ್ಚಿ ಮಾತನಾಡಲಾಗಿದೆ.

ಕ್ರಿ. ಶ. ೧೧೮೧ ರಲ್ಲಿ ಸೋವೋಜ ಮತ್ತು ಹರಿಯೋಜ [38] ಎಂಬ ತಂದೆ ಮಕ್ಕಳು ಸೇರಿ ಚನ್ನರಾಯಪಟ್ಟಣ ತಾಲ್ಲೂಕು ಈಗಲೂ ಇರುವ ಶಾಂತಲೇಶ್ವರ ಗುಡಿಯನ್ನು ಮಾಡಿದ ಶಿಲ್ಪಿಗಳು ಎಂಬುದನ್ನು ಅದೇ ಗುಡಿಯಲ್ಲಿರುವ ಶಾಸನವೊಂದು ಹೇಳುತ್ತದೆ. ಇವರು ಆಸಂದಿ ಎಂಬ ಊರಿನವರು ಎಂದು ಕೂಡ ಹೇಳುತ್ತದೆ. ದೇವಸ್ಥಾನ ನಿರ್ಮಾಣವನ್ನು ಮುಗಿಸಿಕೊಟ್ಟ ಮೇಲಿ ಬಹುಶಃ ಈ ವಿಷಯಕ್ಕೆ ಸಂಬಂಧಿಸಿದಂತಿರಬೇಕು. ಮಗ ಹರಿಯೋಜನು ಎರಡು ತಾಮ್ರಶಾಸನಗಳನ್ನು ಕೂಡ ಮಾಡಿಕೊಡುತ್ತಾನೆ. ಇದನ್ನು ನೋಡಿದರೆ ಓಜುಗಳಲ್ಲಿ ಶಿಲಾಕರ್ಮವನ್ನು ಮಾಡುವುದರ ಜೊತೆಗೆ ಅವರು ಲೋಹಕರ್ಮದಲ್ಲಿಯೂ ತೊಡಗಿರುತ್ತಿದ್ದರೆಂದು ಭಾವಿಸಬಹುದು. ಕಲೆಯನ್ನು ಬಿಡಿಸುವ ಇವರು ಸರ್ಕಾರದ ದಾಖಲೆಗಳನ್ನು ರಚನೆ ಮಾಡುವಷ್ಟು ನಿಷ್ಪುಷ್ಟವಾದ ಅಕ್ಷರಜ್ಞಾನವನ್ನು ಬಲ್ಲವರಾಗಿದ್ದರು. ಶಾಂತಲ ಮಹಾದೇವಿಯು ತಾನು ತನ್ನ ಹೆಸರಿನಲ್ಲಿ ಸೋವೋಜ ಮತ್ತು ಹರಿಯೋಜರ ಕೈಯಲ್ಲಿ ಗುಡಿಯನ್ನು ಕಟ್ಟಿಸಿ ಕೊನೆಗೆ ಅವರಿಗೆ '೧೦ ಕೊ' ಗದ್ದೆಯನ್ನು ಅನುದಾನ ಮಾಡುತ್ತಾಳೆ.

ರೇವೋಜನೆಂಬ [40] ವಾಸ್ತುಶಿಲ್ಪಿಯು ಕ್ರಿ. ಶ. ೧೧೯೨ ರಲ್ಲಿ ರಾಣೇಬೆನ್ನೂರು ತಾಲ್ಲೂಕು ಚೌದದನ್ನಪುರಿ

---

36 EC. V, Cn. 263

37 EC. V, Ak. 184

38 EC. V, Cn. 161

39 EC. V, Ak. 22

40 SII. XVIII, p. 399, No. 299

ಎಂಬ ಊರಿನಲ್ಲಿರುವ ಮುಕ್ತೇಶ್ವರ ದೇವಸ್ಥಾನದಲ್ಲಿರುವ ಶಾಸನವು ಹೇಳುವ ಪ್ರಕಾರ ಒಂದು ಕಲ್ಲಿನ ಹಂದರವನ್ನು ಮಾಡುತ್ತಾನೆ. 'ಹೊಱಥರಸಹಿತ' ಎಂದು ಬರುವ ಪದ ಅರ್ಥವಾಗುವುದಿಲ್ಲ. ಈ ಶಾಸನನ ಒಡಲಿನಲ್ಲಿ ಗುಡಿಗೆ ದಾನಬಿಟ್ಟ ಉಲ್ಲೇಖ ಮಾತ್ರವಿದೆಯೇ ಹೊರತು ಗುಡಿಯನ್ನು ಕಟ್ಟಿಸಿದ ವಿಷಯವಿಲ್ಲ. ಆದ್ದರಿಂದ ಈ ರೇವೋಜನು ಗುಡಿಯನ್ನು ಕಟ್ಟಿದ್ದರ ಬಗ್ಗೆ ಅನುಮಾನವಾಗುತ್ತದೆ. ಆದರೆ ಕಲ್ಲಿನ ಹಂದರವನ್ನು ಕಟ್ಟಿದ್ದರಲ್ಲಿ ಯಾವ ಸಂಶಯವೂ ಇಲ್ಲ. ಈ ತಾಲೂಕಿಗೆ ಹತ್ತಿರವಾದ ಶಿರಹಟ್ಟಿ ತಾಲೂಕು ಲಕ್ಷ್ಮೇಶ್ವರದಲ್ಲಿ, ಕ್ರಿ. ಶ. ೧೧೬೬ ರಲ್ಲಿ, 'ಸೂತ್ರಧಾರಿ ರೇವೋಜ'[41]ನೊಬ್ಬನಿಗೆ ಬ್ರಹ್ಮಪುರಿಯನ್ನು ಕಟ್ಟಿ ಅದನ್ನು ಅನೇಕ ಜನ ಬ್ರಾಹ್ಮಣರಿಗೆ ನಿವೇಶನಗಳನ್ನು ಕೊಡುವಲ್ಲಿ ನಡುವೆ 'ಸೂತ್ರಧಾರಿ ರೇವೋಜ' ನಿಗೂ ಕೊಟ್ಟುದಾಗಿ ಹೇಳಲಾಗಿದೆ. ಈ ಇಬ್ಬರು ರೇವೋಜರು ಬಹುಶಃ ಒಬ್ಬನೇ ಇರಬಹುದೇ ?

ಕ್ರಿ. ಶ. ೧೧೯೪ರಲ್ಲಿ **ಕೇತೋಜ-ಗಣವೋಜ**[42]ರೆಂಬುವರು ಬಾಚೋಜನೆಂಬುವನ ಮಕ್ಕಳು (ಕಲ್ಲು ತೃಟಿತವಾಗಿದೆ). ಅರಸೀಕೆರೆ ತಾಲೂಕು ಕೋಳಿಗುಂದ ಎಂಬ ಗ್ರಾಮದಲ್ಲಿ ಒಂದು ಶಿವಾಲಯವನ್ನು ಸೃಷ್ಟಿ ಮಾಡುತ್ತಾರೆ. ಪ್ರತಿಯಾಗಿ ಇವರಿಗೆ ಕೆರೆಯ ತೂಬಿನ ಹತ್ತಿರದಲ್ಲಿ 'ಹೆಗ್ಗದ್ದೆ'ಯೂ ಮತ್ತೊಂದು ಕಡೆ ೧ ಗದ್ದೆಯೂ ಸಿಕ್ಕುತ್ತದೆ. ಇಷ್ಟೇ ಅಲ್ಲದೆ ಇವರು ಬಹುಶಃ ಎರಡು ಕೆರೆಗಳನ್ನು ಕೂಡ ಕಟ್ಟಿಕೊಟ್ಟಿರಬಹುದು.

ಕಡೂರು ತಾಲೂಕು ಮತ್ತಿಹಟ್ಟಿ ಗ್ರಾಮದಲ್ಲಿ ಕ್ರಿ.ಶ. ೧೨೦೨ ರಲ್ಲಿ ಬಲೋಜ[43]ನೆಂಬುವನು ಅದಾವುದೊ ಒಂದು ಗೃಹವನ್ನು ಮಾಡುತ್ತಾನೆ. ಇದು ಬಹುಶಃ ದೇವಸ್ಥಾನವೇ ಇರಬೇಕು, ಗರ್ಭಗೃಹವಿರಬಹುದು. ಕ್ರಿ. ಶ. ೧೨೧೩-೧೪ರಲ್ಲಿ **ಬೈರೋಜ**[44]ನೆಂಬೊಬ್ಬ ವಾಸ್ತು ಶಿಲ್ಪಿಯು 'ಶಿಲಾಕೂಟ'(=ಶಿಲಾಮನೆ)ಯನ್ನು ಕಟ್ಟುತ್ತಾನೆ. ಶ್ರವಣಬೆಳಗೊಳದ ಹತ್ತಿರದ ಜಿನನಾಥಪುರ ಎಂಬ ಗ್ರಾಮದಲ್ಲಿರುವ ಒಂದು ಸಮಾಧಿ ಮಂಟಪದ ಹಿಂದೆ ಈ ಶಾಸನವಿದೆ. ಶಾಸನದ ಒಡಲಿನಲ್ಲಿ ಕಾಳಬ್ಬೆ ಎನ್ನುವವರು ಸಮಾಧಿ ಮರಣ ಹೊಂದಿದ ವಿಷಯವಿದೆ. ಆಕೆ ಗತಿಸಲು ಬೈರೋಜನು ಆಕೆಯ ಸ್ಮರಣೆಯಲ್ಲಿ ಈ ಸಮಾಧಿಯ ಶಿಲಾಕೂಟವನ್ನು ಮಾಡುತ್ತಾನೆ.

**ಮಾದಿಯೋಜ** (ಕ್ರಿ. ಶ. ೧೨೧೬)[45] ಎಂಬ ಶಿಲ್ಪಿಯು, ಕಲಿದೇವ ಮತ್ತು ಸೋಮನಾಥ ದೇವಸ್ಥಾನವನ್ನು ಕಟ್ಟಲಾಗಿ, ಹಿರಿಯೂರಿನ ಆರು ಮಂದಿ ಗೌಡರು ಮತ್ತು ಕಲಿದೇವರ ದೇವಸ್ಥಾನದ ಸ್ಥಾನಪತಿಯಾದ ಸೋಮಜೀಯರು ಒಟ್ಟಾಗಿ ಸೇರಿ ಕಲ್ಲುಕುಟ್ಟಿಗ ಮಾದಿಯೋಜನಿಗೆ, ಅದೇ ಆ ದೇವರಿಗೆ ಸೇರಿದ ಭೂಮಿಯಲ್ಲಿ ಐದು ಕೊಳಗ ಗದ್ದೆ ಮತ್ತೊಂದು ಕಡೆ '೧೦ ಕೊ' ಜಮೀನನ್ನು ಧಾರಾಪೂರ್ವಕವಾಗಿ ಚಂದ್ರಸೂರ್ಯರಿರುವವರೆಗೂ ದತ್ತಿಯನ್ನು ಕೊಡುತ್ತಾರೆ.

**ಬೊಮ್ಮೋಜ** (ಕ್ರಿ. ಶ. ೧೨೧೮).[46] ಇವನು ಈಶ್ವರ ದೇವರ ದೇವಾಲಯವನ್ನು ಮಾಡುತ್ತಾನೆ. ಆದ್ದರಿಂದ ಅದನ್ನು ಮಾಡಿಸಿದ ಬೊಮ್ಮಗವುಡನು ಶಿಲ್ಪಿಗೆ "ದೇವಾಲ್ಯದ ರಥವಣಂ, ಮೂಲಿಗಕೆಯ್ಯ ಬಿಳಗಣಕೆಯನು" ಆಚಂದ್ರಾರ್ಕ ತಾರಂಬರಂ ಕೊಡುತ್ತಾನೆ. ಇಲ್ಲಿ ದೇವಾಲ್ಯದ ರಥವಣ ಎಂದರೇನೆಂದು ಸ್ಪಷ್ಟವಾಗುವುದಿಲ್ಲ. ಬಹುಶಃ ಈ ಶಿಲ್ಪಿಯು ದೇವಸ್ಥಾನಕ್ಕೆ ರಥವನ್ನು ಕೂಡ ಮಾಡಿಕೊಟ್ಟಿರಬೇಕು. ಆದ್ದರಿಂದ ಈ ರಥ ಬಾಬತ್ತು ಕೂಡ ಹಣವನ್ನು ದಾತನು ಕೊಟ್ಟಿರಬೇಕು.

ಕ್ರಿ. ಶ. ೧೨೩೩-೪೪ರಲ್ಲಿ ಬಡಗಿ **ಕಲ್ಲೋಜ**[47]ನಿಗೆ ಸ್ವಯಂಭು ಕಲಿದೇವರ ದೇವಾಲಯವನ್ನು ಮಾಡಿದ್ದಕ್ಕೆ

41 SII. XX, p. 183, No. 144
42 EC. V, Ak. 193
43 EC. VI, Kd. 127
44 EC. II, Sb. 539 (ಪರಿಷ್ಕೃತ)
45 EC. VI, Kd. 137
46 SII. IX (i), p. 356, No. 335
47 SII. XV, p. 222, No. 180

ಪ್ರೀತಿಯಿಂದ ಆಚಂದ್ರಾರ್ಕವಿರುವಂತೆ ದೇವರಿಗೆ ಸೇರಿದ ಗದ್ದೆಯಲ್ಲಿ ೬ ಕಂ ಮತ್ತ ಭೂಮಿಯನ್ನೂ ಹಣವನ್ನೂ ಕೊಟ್ಟು, ಭೂಮಿಗೆ ಚಕ್ಕುಬಂದಿಯನ್ನು ಕೂಡ ಗುರುತಿಸಿ ಕೊಡಲಾಗಿದೆ. ಈ ಶಾಸನವು ರೋಣ ತಾಲ್ಲೂಕು ನಿಡು ಗುಂದ ಗ್ರಾಮದ ಬಸವಣ್ಣ ದೇವಸ್ಥಾನದಲ್ಲಿದೆ.

ಸೌದತ್ತಿ ತಾಲ್ಲೂಕು ಮುನವಳ್ಳಿ ಗ್ರಾಮದ ಕೋಟೆಯಲ್ಲಿರುವ ಉಡಚವ್ವ ದೇವಸ್ಥಾನದಲ್ಲಿರುವ ಕ್ರಿ. ಶ. ೧೨೫೨ರ ಶಾಸನವು ಹೇಳುವ ಪ್ರಕಾರ,ನಾಗೋಜ[48]ನೆಂದು ಈ ಶಿಲ್ಪಿಯು ಉನ್ನತವಾದ ಶಿವಾಲಯವನ್ನು ಕಟ್ಟುತ್ತಾನೆ. ಈ ನಾಗೋಜನು ಅದಾರೋ ಗುರುಪಾದಗಳ ಭಕ್ತನಾಗಿದ್ದನು. ಶಾಸನದ ಒಡಲಿನಲ್ಲಿ ಜಗದೀಶ್ವರ ಗುಡಿಯ ಸ್ಥಾನಪತಿಗಳಿಗೆ ದಾನಬಿಟ್ಟ ವಿಷಯವಿದೆ. ಬಹುಶಃ ನಾಗೋಜನ, ಕಟ್ಟಿದ ದೇವಾಲಯ ಈ ಜಗದೀಶ್ವರ ಗುಡಿಯೇ ಆಗಿದ್ದಿರಬಹುದು.

೧೩–೧೪ನೆಯ ಶತಮಾನದ ಪಾಂಡವಪುರ ಕನ್ನಂಬಾಡಿಯ ಗೋಪಾಲಕೃಷ್ಣಗುಡಿ ಮುಖಮಂಟಪದಲ್ಲಿರುವ ಶಾಸನವು ಹೇಳುವ ಪ್ರಕಾರ **ಚಿಕಬಾಚಯ**[49] ಎನ್ನುವವನು ಪಟ್ಟಹೋಜನ ಮಗ. ಇವನು ಅದೇ ದೇವಸ್ಥಾನದ ಮಂಟಪವನ್ನು ನಿರ್ಮಾಣ ಮಾಡುತ್ತಾನೆ. ಕ್ರಿ. ಶ. ೧೨೬೦ರಲ್ಲಿ ಚನ್ನರಾಯಪಟ್ಟಣದ ಸಂತೇಶಿವರ ಗ್ರಾಮದ ಗಂಗೇಶ್ವರ ಗುಡಿಯ ಮುಂದೆ ನೆಟ್ಟಿರುವ ಕಲ್ಲು ಮಾತನಾಡುವ ಪ್ರಕಾರ, ಈ ದೇವಾಲಯದ ಕೆಸರುಗಲ್ಲಿನಿಂದ ಆರಂಭಿಸಿ ಎಲ್ಲ ಕೆಲಸವನ್ನು ರೂವಾರಿಗಳಾದ ಹಂಪೋಜ-ಬೊಂಮೋಜ[50]ರುಗಳು ಮಾಡುತ್ತಾರೆ. ಈಗ ಇರುವ ಗಂಗೇಶ್ವರ ಗುಡಿಯೇ ಈ ಇಬ್ಬರು ಓಜರುಗಳ ಸೃಷ್ಟಿ.

ಈಗ ೧೨೬೪ರ **ಕಾಳಾಚಾರಿ**[51] ಎನ್ನುವವನು ರಾಜಚಾರಿಯ ಮಗ. ಇವನು ಶ್ರೀ ಸೋಮನಾಥದೇವಸ್ಥಾನದ ದೇವರಿಗೆ ಸೇರಿದವನು. ಇವನು ನಂಜನಗೂಡು–ಸುತ್ತೂರು ಗ್ರಾಮದಲ್ಲಿರುವ ಸೋಮೇಶ್ವರ ದೇವರ ದೇವಸ್ಥಾನದ ನೃತ್ಯಮಂಟಪವನ್ನು ಸೃಷ್ಟಿಸುತ್ತಾನೆ.

**ಬೊಮ್ಮೋಜ**[52] ಒಬ್ಬ ವಾಸ್ತುಶಿಲ್ಪಿ. ಈತನ ಕಾಲ ಕ್ರಿ. ಶ. ೧೩೦೦. ಈ ಬೊಮ್ಮೋಜಿ ಮತ್ತು ರಾಮೋಜಿಯವರು ಶಿವಾಲಯವನ್ನು ಕಟ್ಟಿಸುತ್ತಾರೆ. ಪಟ್ಟಾಭಿಷಿಕ್ತ ಪಾಂಡ್ಯ ದೇವರಾಯನು ಇವರಿಗೆ ಮೆಲನಬ್ಬೆ ಎನ್ನುವವಳು ಇವರಿಗೆ ದಾನ ಮಾಡುತ್ತಾಳೆ. ಪುನಃ ಇಲ್ಲಿ ಮಲಿಕಜೀಯನ ಮೊಮ್ಮಗನೂ ಅಮಿತಜೀವನ ಮಗನೂ ಆದ ಬೋಮ್ಮೋಜಿಯನಿಗೆ ಆತನು ಮಾಡಿದ ಬಡಗಿ ಕೆಲಸಕ್ಕಾಗಿ ದಾನ ಕೊಡಲಾಗಿದೆ

**ರಾಮೋಜ**[53]ನೆಂಬ ಮತ್ತೊಬ್ಬ ಶಿಲ್ಪಿಯು ಕಲ್ಲಿನ ಕೆಲಸದ ಉಯ್ಯಾಲೆಯನ್ನು, ಕಲ್ಲಿನ ಉಪ್ಪರಿಗೆಯನ್ನು, ಶಿಖರವನ್ನು ಮಾಡಿದ್ದಲ್ಲದೆ ಪ್ರಸ್ತುತ ಶಿಲಾಶಾಸನವನ್ನು ಕೂಡ ಕೊರೆಯುತ್ತಾನೆ. ಹೀಗೆ ಈತ ಹಲವಾರು ಕೆಲಸಗಳನ್ನು ಮಾಡಿತೋರಿಸಿದ್ದಾನೆ. ಚಿತ್ರದುರ್ಗ ಬೆಟ್ಟದ ಸಂಪಿಗೆ ಸಿದ್ದೇಶ್ವರ ದೇವಸ್ಥಾನವು ಇವನ ಕಾರ್ಯಕ್ಷೇತ್ರ. ಕಾಲ ಕ್ರಿ.ಶ. ೧೩೫೫. ಇಷ್ಟೆಲ್ಲ ಮಾಡಿಯೂ ತನ್ನ ಬಗ್ಗೆ ಏನನ್ನೂ ಹೇಳದೆ ಕೇವಲ 'ಕಲ್ಲುಕುಟಿಗ' ಎಂದು ಮಾತ್ರ ಹೇಳಿಕೊಂಡಿದ್ದಾನೆ. ಇದೇ ಶಾಸನದ ಮತ್ತೊಂದು ಮಗ್ಗುಲಲ್ಲಿ ಪುನಃ ಕಲ್ಲುಕುಟಿಗ ಜಡೆಯ ರಾಮೋಜನು ಈ ಶಾಸನವನ್ನು ಹೊಯ್ದಿದ್ದಾನೆಂದು ಹೇಳುತ್ತಾನೆ. ಈತ ಬಹುಶಃ ಜಡೆ ಎಂಬ ಊರಿನವನು. ಅಂದರೆ ರಾಮೋಜ ಆ ಸಂಪಿಗೆ ಸಿದ್ಧೇಶ್ವರ ದೇವಸ್ಥಾನದ ಬಹುಪಾಲು ಕೆಲಸವನ್ನು ಮಾಡಿದ್ದಾನೆ.

**ಸಿರಿಗಿರಿ....ಚಾರ್ಯನ**[54] ಕಾಲ ಕ್ರಿ.ಶ. ೧೩೮೭.

---

48 KI· I, p. 71, No. 31
49 EC. VI, p. 126, No. 32 (ಪರಿಷ್ಕೃತ)
50 EC. V, Cn. 224
51 EC. III, Nj. 227 (ಪರಿಷ್ಕೃತ)
52 EC. VII, Nr. 14
53 EC. XI, Cd. 2
54 EC. XI, Hk.

ಹೊಳಲ್ಕೆರೆ ತಾಲ್ಲೂಕು, ಬಲ್ಲಾಳಸಮುದ್ರವೆಂಬ ಗ್ರಾಮದ ಕೇಶವ ದೇವಸ್ಥಾನ ಈತನ ಕಾರ್ಯಕ್ಷೇತ್ರ. ಮಹಾ ಮಂಡಲೇಶ್ವರನೊಬ್ಬನ ನಿರೂಪದಂತೆ ಪೆದ್ದರಸನು ಕೇಶವ ದೇವರಿಗೆ ದೇವಾಲಯವನ್ನು ಮಾಡಿಸುತ್ತಾನೆ. ಈ ಕೆಲಸವನ್ನು ಮಾಡಿದ ಸಿರಿಗಿರಿ....ಚಾರ್ಯನಿಗೆ ಅರಸು ಗಳೂ ಗೌಡಪ್ರಜೆಗಳೂ ಒಡಂಬಟ್ಟು ೮ ಕೊಳಗವನ್ನು ಕೊಟ್ಟು ಎಂದೆಂದಿಗೂ ಸಲ್ಲಿಸುವುದಾಗಿ ಆಶ್ವಾಸನೆ ಕೊಡು ತ್ತಾರೆ. ಸಿರಿಗಿರಿ....ಚಾರ್ಯನು ಕೇಶವದೇವರ ಶಿವಾ ಲಯದ ಕಲ್ಲು ಕೆಲಸ, ದೀಪದ ಮಾಲೆಯು ಕಲ್ಲುಕಂಬದ ಪ್ರತಿಷ್ಠೆ ಮೊದಲಾದುವನ್ನು ಮಾಡಿಕೊಟ್ಟ ದಿನದಂದು ಅವನಿಗೆ ಮಾನ್ಯವನ್ನು ಮಾಡುತ್ತಾರೆ.

ನಾಯುಂಡೆ, ಕಾವೋಜ ಮತ್ತು ಬೈರೋಜ[55]— ಕ್ರಿ.ಶ. ೧೫೭೨ರ ಈ ಮೂವರು ತಿರುಮಲಪುರದಲ್ಲಿ ಪ್ರಸನ್ನ ತಿರುಮಲದೇವರ ಕಲ್ಲಿನ ದೇವಾಲಯವನ್ನು ಮಾಡುತ್ತಾರಾದ್ದರಿಂದ ಇವರಿಗೆ ಕೋಟೆಯ ಚತುಸ್ಸೀಮೆ ಒಳಗಾದ ಭೂಮಿಯನ್ನು ಸಾಮಂತರು ಮತ್ತು ದಾಯಾದಿಗಳ ಅನುಮತದಿಂದ ಧಾರಾಪೂರ್ವಕವಾಗಿ ಧರ್ಮ ದಾನ ಮಾಡುತ್ತಾರೆ.

ಕ್ರಿ.ಶ. ೧೫೭೫ರಲ್ಲಿ ಕಳನಿಯೂರ ಪ್ರಭು ಚವುಡಿ ಜೀಯರ ಮಗ ಚೊಕ್ಕಪ್ಪನೆಂಬುವನು ತನ್ನ ಊರಿನಲ್ಲಿಯೇ ಇದ್ದ 'ಬಡಗಿ ಕುಲ'ಕ್ಕೆ ಸೇರಿದ ಗುಂಡೋಜಿ-ನಾಚೋಜನ ಮಗನಾದ ಶಿವಡಿಯೋಜ[56] ನೆಂಬುವವನಿಗೆ, ಆತ ಮಳಿಗೆ ಯನ್ನು 'ಎತ್ತಿ' ಚೊಕ್ಕಪ್ಪನಿಗಾಗಿಯೇ ಮಾಡಿಕೊಟ್ಟಿದ್ದ ರಿಂದ 'ಪ್ರಿಯವಾಗಿ' ತನ್ನ ಕೊಡಗಿಯ ಹೊಲದಲ್ಲಿ ೪ ಕೊಳಗವನ್ನು ಕೊಡುತ್ತಾನೆ. ಅದೇ ಊರಿನಲ್ಲಿದ್ದ ಈ ಬಡಗಿಯು ತಾನಿದ್ದ ಊರಿನಲ್ಲಿಯೇ ಮಾಳಿಗೆಯನ್ನು ಮಾಡಿಕೊಡುತ್ತಾನೆ. ಇಲ್ಲಿ ದಾತನು 'ನಮಗೆ' ಎಂದು ಹೇಳಿಕೊಂಡಿರುವುದರಿಂದ ಇದು ಜನರು ವಾಸಿಸುವ ಮಾಳಿಗೆಮನೆ ಎಂದು ತಿಳಿಯಬಹುದು. ಮತ್ತು ಈ ದಾತನು ಕೊಳಾವನಾಡಿನ ಒಳಗಿನ ಕಳನಿಪೂರಿನ 'ಪ್ರಭು' ಆಗಿರುವುದರಿಂದ ಇಲ್ಲಿ ಶಿವಡಿಯೋಜನು ಮಾಡಿಕೊಟ್ಟ ಮಾಳಿಗೆ ಮನೆಯು ಸ್ವಲ್ಪ ಮಟ್ಟಿಗೆ ದೊಡ್ಡದಾಗಿರುವ ಚಿಕ್ಕ ಅರಮನೆಯೇ ಇರಬೇಕು. ಹಾಗೂ ಶಿವಡಿ ಯೋಜನು ಬಡಗಿಯಾಗಿರುವುದರಿಂದಲೂ, ಕಟ್ಟಿದ್ದು ಮಾಳಿಗೆ ಮನೆಯಾಗಿದ್ದುದರಿಂದಲೂ ಇಲ್ಲಿ ಶಿವಡಿ ಯೋಜನು ಮರದ ಮಾಳಿಗೆಯ ಮನೆಯನ್ನು ಮಾಡಿದನು ಎಂದು ಭಾವಿಸಬಹುದು. 'ಬಡಗಿಕುಲ' ಎಂಬ ಮಾತು ಬಂದಿರುವುದರಿಂದ ಇದು ಒಂದು ಸಾಂಘಿಕ ಕೆಲಸವಾಗಿದ್ದು, ಶಿವಡಿಯೋಜನು ಈ ಯೋಜನೆಯ ಪ್ರಧಾನ ನಿರ್ಮಾಪಕ ನಾಗಿದ್ದಿರಬೇಕು.

ಕ್ರಿ.ಶ. ೧೪೦೦ರಲ್ಲಿ ಸಿರಿಯೋಜ[57]ನೆನ್ನುವವನು ಇಲ್ಲಿ ಒಂದು ದೇವಾಲಯವನ್ನು ಕಟ್ಟುತ್ತಾನೆ. ಇವನು ಮಲ್ಲೋಜನ ಮಗ. ಇವನ ತಂದೆ ಮಲ್ಲೋಜ. ಇವನು ಈ ಒಂದು ಶಾಸನವನ್ನು ಕೂಡ ಕಂಡರಿಸಿದ್ದಾನೆ. ಈತನು ಗಾಜನೂರಿನವನಾಗಿದ್ದು ಅದೇ ಊರಿನಲ್ಲಿ ಕೆಲಸ ಮಾಡಿದ್ದಾನೆ.

ಮಲ್ಲೋಜ (ಕ್ರಿ.ಶ. ೧೪೦೪) :[58] ಕೆಲವು ಗೌಡು ಗಳು ದೇವರ ದೇವಾಲಯವನ್ನು ಮಾಡಿಸಲಾಗಿ ಇವನು ಮಾಡಿಕೊಡುತ್ತಾನೆ. ಚನ್ನಗಿರಿ ತಾಲ್ಲೂಕು ನೀತಿಗೆರೆ ಎಂಬ ಗ್ರಾಮದಲ್ಲಿರುವ ವೀರಭದ್ರ ಗುಡಿಯ ಒಳಭಾಗದಲ್ಲಿ ಈ ಶಾಸನವಿರುವುದರಿಂದ ಈ ಮಲ್ಲೋಜ ನಿರ್ಮಿತ ಗುಡಿ ಇದೇ ಆಗಿರಬೇಕು.

ಮುದೋಜ – ಕ್ರಿ. ಶ. ೧೪೦೮[59] ಇವನ ಕಾಲ. ತಿಪೋಜ ಇವನ ತಂದೆ. ಗೋರಿಬಿದನೂರು ತಾಲ್ಲೂಕು ಗುಲಗಂಜಿಯ ವಿಶ್ವೇಶ್ವರ ಗುಡಿಯು ಬಹುಶಃ ಈತನ ಕಾರ್ಯಕ್ಷೇತ್ರ. ದೇವಾಲಯ ಒಂದು ಇವನ ಸೃಷ್ಟಿ. ಕಟ್ಟಿಸಿದವರಿಂದ ಗದ್ದೆಯನ್ನು ಪಡೆಯುತ್ತಾನೆ.

55 EC. X, Bg. 15
56 EC. X, Kl. 150
57 EC. VII, Sh. 11
58 EC. VII, Ci. 28
59 EC. X, Gd. 59

**ದೇವೋಜ ಮತ್ತು ಲಿಂಗೋಜ**[60] : ಕ್ರಿ. ಶ. ೧೪೩೧ ಇವರ ಕಾಲ. ಮಾಲೂರು ತಾಲ್ಲೂಕು ತೇಕಲ್ಲು ಗ್ರಾಮದ ವರದರಾಜಸ್ವಾಮಿಯ ಗುಡಿ ಇವರ ಕಾರ್ಯ ಕ್ಷೇತ್ರ. ಇದೇ ತೇಕಲ್ಲು ಗ್ರಾಮ ಇವರ ಸ್ವಸ್ಥಳ. ಇವರು ಈ ದೇವಸ್ಥಾನದ ಗೋಪುರದ ಕೆಲಸವನ್ನು ಮಾಡುತ್ತಾರೆ. ಚೋಜದೇವೋಜ–ಅವನ ತಂದೆ ಬೇವೋಜ. ಈತ ತೇಕಲ್ಲು ಗ್ರಾಮದಲ್ಲೇ ಇದ್ದ ಬಡಗಿ. ಇವನ ಕೈಯಲ್ಲಿ ಸಂಬಂಧಿಸಿದ ಮರಗೆಲಸವನ್ನು ಮಾಡಿಸಲಾಗುತ್ತದೆ. ಲಿಂಗೋಜನು ಅಂಜಲ ಎಂಬ ಊರಿನವನಿರಬೇಕು. ಇವನು ಕಮ್ಮಾರ. ಇವನ ಕೈಯಲ್ಲಿ ಈ ಸಂಬಂಧ ಕಬ್ಬಿಣದ ಕೆಲಸವನ್ನು ಮಾಡಿಸಲಾಗಿದೆ. ಕೆಲಸ ಆದಮೇಲೆ ಚೋಜದೇವೋಜನಿಗೆ ಗದ್ದೆಯನ್ನು, ಹೊಲವನ್ನು ಕೊಡಲಾಗಿದೆ. ಕಬ್ಬಿಣದ ಕೆಲಸವನ್ನು ಮಾಡಿದ ಲಿಂಗೋಜಗೆ ಗದ್ದೆಯನ್ನು (ಹೊಲ ಕೊಟ್ಟಂತೆ ಅನ್ನಿಸುವುದಿಲ್ಲ. ಬಹುಶಃ ಇವನ ಕೆಲಸ ಬಡಗಿಯದಕ್ಕಿಂತ ಕಡಿಮೆ ಇರಬಹುದು) ಕೊಡಲಾಗಿದೆ. ಈ ಓಜುಗಳ ಗಮನಾರ್ಹವಾದ ವಿಷಯವೇನೆಂದರೆ, ಇವರಿಗೆ ಇಲ್ಲಿ ದಾತನು ಕುದುರೆಯನ್ನೂ ಛತ್ರಿಯನ್ನೂ ಕೊಡುತ್ತಾನೆ. ಇದು ರಾಜಚಿಹ್ನೆಯಾಗಿದ್ದಿರಬೇಕು. ಅಂದರೆ ಈ ಓಜುಗಳಿಗೆ ಇಲ್ಲಿ ಬಹು ಹೆಚ್ಚಿನ ರಾಜಮರ್ಯಾದೆಯನ್ನು ಮಾಡಲಾಗಿದೆ.

**ಬಡಗಿ ಲಿಂಗೋಜನ:**[61] ಕ್ರಿ. ಶ. ೧೪೮೦/೧೫೧೫ರಲ್ಲಿ ಜಗಳೂರು ತಾಲ್ಲೂಕು ನಿಬಗೂರಿನಲ್ಲಿ ಆಂಜನೇಯ ಗುಡಿಯನ್ನು ಕಟ್ಟುತ್ತಾನೆ. ಆದ್ದರಿಂದ ಗೌಡನು ಇವನಿಗೆ ಅರವತ್ತು ಒಕ್ಕಲು ಮಾನ್ಯವನ್ನು ಕೊಡುತ್ತಾನೆ. ಸಾಗರ ತಾಲ್ಲೂಕು ಗೋವರ್ಧನಗಿರಿಯ ವೆಂಕಟರಮಣ ಗುಡಿಯ ಹತ್ತಿರವಿರುವ ಈಶ್ವರ ಗುಡಿ–ಇವೆರಡರಲ್ಲಿ ಯಾವುದೊಂದು–ವೆಂಕಟಯ್ಯ[62] (ಕ್ರಿ. ಶ. ೧೫೬೭) ಎಂಬುವನ ಕೆಲಸ. ಈಗಿನ ಹುಂಚ ಈತನ ಸ್ವಂತ ಸ್ಥಳ. ಕಡೂರು ತಾಲ್ಲೂಕು ಕೆರೆಕುಂಟೆ ಗ್ರಾಮದ ಜನಾರ್ಧನ ದೇವಸ್ಥಾನದಲ್ಲಿ ಕಲ್ಲಯ್ಯ[63] ಎಂಬ ಶಿಲ್ಪಿಯು ಕೆಲಸ ಮಾಡಿದ್ದಾನೆ. ಇವನ ಕಾಲ ಕ್ರಿ. ಶ. ೧೫೯೧. ರಂಗಮಂಟಪವು ಇವನ ಕೃತಿ. ಬಾಣೂರು ಈತನ ತವರು. ಜೊತೆಗೆ ಇವನು ಈ ಶಾಸನವನ್ನು ಕೂಡ ಕಂಡರಿಸಿದ್ದಾನೆ.

ಕ್ರಿ.ಶ. ೧೫೯೧ರ **ಗೌರಯ್ಯ**[64]ನು ಸೊಂಡೆಕೆರೆಯ ಬಡಗಿಯಾಗಿದ್ದ ಪರವೋಜನ ಮಗ. ಈತನು ಹನುಮಂತ ದೇವರ ಗುಡಿಯನ್ನು ಕಟ್ಟಿಕೊಟ್ಟಿದ್ದರಿಂದ ಹೊಲವನ್ನು ಮಾನ್ಯವಾಗಿ ಪಡೆಯುತ್ತಾನೆ. ಚಿತ್ರದುರ್ಗ ತಾಲ್ಲೂಕು ಜಂಪಳನಾಯ್ಕನಕೋಟೆಯ ಕೆರೆಯ ಹಿಂದಿರುವ ಹನುಮಂತ ದೇವಸ್ಥಾನವೇ ಈತನ ಕೃತಿ.

ಕ್ರಿ. ಶ. ೧೬ನೇ ಶತಮಾನದ ಪಿರಿಯಾಪಟ್ಟಣ-ಬೆಟ್ಟದಪುರ ಕೋಟೆಗೆ ಈಶಾನ್ಯ ದಿಕ್ಕಿನಲ್ಲಿ ಇರುವ ಶಾಸನದ ಪ್ರಕಾರ, ಕವಿಸಳದವರು ಅರವಟ್ಟಿಗೆಯನ್ನು ಕಟ್ಟಿದುದಾಗಿಯೂ ಅವರು ಪ್ರಯಾಣಿಕರಿಗೆ ಅಲ್ಲಿ ನೀರೆರೆಯುವ ಕೆಲಸವನ್ನು ಮಾಡಬೇಕೆಂದೂ ಹೇಳಿ ಆದೇಶಿಸಲಾಗಿದೆ. (ಸಂಪುಟದ ಸಂಪಾದಕರು ಇಲ್ಲಿ 'ಕವಿಸಳದವರು'[65] ಎಂದರೆ ಬಡಗಿಗಳು ಎಂದು ಅರ್ಥೈಸಿದ್ದಾರೆ). ಕ್ರಿ.ಶ. ೧೭ನೇ ಶತಮಾನದ ಪಿರಿಯಾಪಟ್ಟಣ—ಕಿತ್ತೂರಿನಲ್ಲಿರುವ ಈಶ್ವರ ಗುಡಿಯ ಹತ್ತಿರವಿರುವ ಶಾಸನು ಅರ್ಧ ಕಟ್ಟಿದ್ದ ಶಿವಾಲಯ ಒಂದನ್ನು (ಬಹುಶಃ ಅದೇ ಗುಡಿ ಇರಬಹುದು) "....ಕಲಿಗಂ"ನು[66] ಪೂರ್ತಿ ಮಾಡಿದ ಎಂದು ಮಾತ್ರ ಹೇಳುತ್ತದೆ.

ಬಸವಯ್ಯ.[67] ಕ್ರಿ. ಶ. ೧೯೯೧ರ ಕಾಲದ ಈತನ

---

60 EC XVII, Mr. 3
61 EC. XI, Jl. 42
62 EC. VIII, Sa. 56
63 EC. VI, Kd. 91
64 EC. XI, Cd. 41
65 EC. IV, p. 540, No. 60 (ಪರಿಷ್ಕೃತ)
66 EC. IV p. 582, No. 141 (ಪರಿಷ್ಕೃತ)
67 EC. XI, Jl.

ಕಾರ್ಯಕ್ಷೇತ್ರ ಜಗಳೂರು ತಾಲ್ಲೂಕು ಸಿದ್ದವನಹಳ್ಳಿಯ ಆಂಜನೇಯ ದೇವಸ್ಥಾನ. ಗುಡಿಯನ್ನು ಕಟ್ಟಿಸಿದ ಅಯ್ಯಂಗಾರ್ರು ಇವನಿಗೆ '೧ ಗಳೆದ' ಹೊಲವನ್ನು ಮಾನ್ಯ ಮಾಡುತ್ತಾರೆ. ಶಾಸನವು ಈ ಬಸವಯ್ಯನನ್ನು 'ಪಂಚಾಲಕುಲ'ದವನು ಎಂದು ಗುರುತಿಸುತ್ತದೆ.

ಶಿಲ್ಪಿ ಬಸವನ ಮಗ **ಮಲ್ಲಾಚಾರಿ.**[68] ಗೌಡನೊಬ್ಬನು ಕ್ರಿ. ಶ. ೧೬೯೩ರಲ್ಲಿ ಮಾರಮ್ಮನ ದೇವಸ್ಥಾನವನ್ನು ಕಟ್ಟಿಸುತ್ತಾನೆ. ೪ ಬಂತಿಗಳನ್ನು ಮಾತ್ರ ಹೊಂದಿರುವ ಈ ಶಾಸನದ ೪ನೆಯ ಬಂತಿಯಲ್ಲಿ 'ಶಿಲ್ಪಿ ಬಸವನ ಮಗ ಮಲ್ಲಾಚಾರಿ' ಎಂದಿದೆ. ಕ್ರಿ. ಶ. ೧೭೧೨ರಲ್ಲಿ ಚಿತ್ರದುರ್ಗ ತಾಲ್ಲೂಕು ಯೆಂಣೆಗೆರೆ ಗ್ರಾಮದ ಕರೀಲಕ್ಕದಿಣ್ಣೆಯಲ್ಲಿರುವ ಶಾಸನವು ಹೇಳುವಂತೆ, ಲಿಂಗಯ್ಯ ಗೌಡನೆಂಬುವನು (?) ಪಲ್ಲಕ್ಕಿ ತಿಂಮ್ಮವೀರಗಾರ್ರಿಗೆ ಕಲ್ಲಿನಗುಡಿಯನ್ನು ಕಟ್ಟಿಸುತ್ತಾನೆ. (ಇಂಥ ಗುಡಿಗಳು ಅಲ್ಲಲ್ಲಿಯೇ ಸಿಕ್ಕುತ್ತವೆ. ಇವನ್ನು ಇಂದೂ ಜನ 'ವೀರಗಾರ್ರಗುಡಿ' ಎಂದು ಕರೆಯುತ್ತಾರೆ ಮತ್ತು ನಡೆದು ಕೊಳ್ಳುತ್ತಾರೆ. ಸತ್ತ ವೀರನ ಸಮಾಧಿಯ ಮೇಲೆ ಇಂಥ ಗುಡಿಗಳನ್ನು ಕಟ್ಟಿಸುವುದು ಅಂದಿನ ವಾಡಿಕೆಯಾಗಿತ್ತು). ಇಲ್ಲಿ ಶಿವಮೂರ್ತಿ ರುದ್ರಮೂರ್ತಿ[69] ಎನ್ನುವವನು ಈ ಗುಡಿಯನ್ನು ಕಟ್ಟುತ್ತಾನೆ.

**ಲಿಂಗಾಚಾರಿ**[70]–ಇವನು ಬೋಗಾಚಾರಿಯ ಮಗ. ಕ್ರಿ. ಶ. ೧೭೫೩ರ ಈತನಿಗೆ ಮೈಸೂರಿನ ಕೋಟೆ ವೆಂಕಟರಮಣ ಗುಡಿಯು ಕಾರ್ಯಕ್ಷೇತ್ರ. ಇಲ್ಲಿ ಗೋಪುರದ ಕೆಲಸವನ್ನು ಬೋಗಾಚಾರಿಯ ಮಗನಾದ ಲಿಂಗಾಚಾರಿಯು ಮಾಡುತ್ತಾನೆ. ಇಲ್ಲಿ ಬರುವ 'ವೇಮೂರು' ಎಂಬುದು ಬಹುಶಃ ಈತನ ಊರಿನ ಹೆಸರಾಗಿರಬೇಕು.

ಕಾಲವನ್ನು ಹೇಳಿಲ್ಲದ ಶಾಸನಗಳು ಕೆಲವು ಕಟ್ಟಡ ನಿರ್ಮಾತೃಗಳ ಬಗ್ಗೆ ಮಾತನಾಡುತ್ತವೆ. ಅವುಗಳನ್ನು ಇಲ್ಲಿ ಪ್ರತ್ಯೇಕವಾಗಿ ಪಟ್ಟಿಮಾಡಿ ಪರಿಚಯಿಸಲು ಪ್ರಯತ್ನಿಸಿದೆ.

**ದೇವಜ.**[71] ಈ ಶಾಸನವು ಇವನನ್ನು 'ಬಿನ್ನಾಣಿ 'ಕಲ್ಕುಟಿಗ' ಎಂದು ಕರೆದಿದೆ. ಶೆಟ್ಟಿಯೊಬ್ಬನು ಇವನ ಕೈಯಲ್ಲಿ ಬಾಚೇಶ್ವರ ದೇವಸ್ಥಾನವನ್ನು ಮಾಡಿಸುತ್ತಾನೆ. ಇಲ್ಲಿ ಈತ ಇಟ್ಟಿಗೆಯ ಕೆಲಸವನ್ನು ಮಾಡಿದ್ದಾನೆ (ಕಲ್ಲಿನಲ್ಲಲ್ಲ). ಇದು ವಿಶೇಷ. ಈ ಓಜುಗಳು ಕೇವಲ ಕಲ್ಲಿನ ಮತ್ತು ಮರದ ಕೆಲಸವಷ್ಟೇ ಅಲ್ಲದೆ ಇಟ್ಟಿಗೆ ಕೆಲಸವನ್ನು ಕೂಡ ಮಾಡುತ್ತಿದ್ದರು. ಈ ಶಿಲ್ಪಿಯು ಇಲ್ಲಿ ಕೇವಲ ಗುಡಿ ಕಟ್ಟಿದ್ದಷ್ಟೇ ಅಲ್ಲದೆ, ಈತನೇ ಆ ದೇವಸ್ಥಾನದ. 'ಪಡಿಸಲುವ' ಕೆಲಸವನ್ನು ಕೂಡ ನಿರ್ವಹಿಸುತ್ತಾನೆ. ಅಂದರೆ ಬಹುಶಃ ಆಗಿಂದಾಗ್ಗೆ ಬರುವ ಗುಡಿಯ ದುರಸ್ತಿಯ ಕೆಲಸ. ಆ ಕಾರಣಕ್ಕಾಗಿ ಇವನಿಗೆ '೧ ಮತ್ತರು' ಭೂಮಿಯನ್ನು ಬಿಡುತ್ತಾರೆ. ಇಲ್ಲಿ ಅಕ್ಷರ ಸ್ಖಾಲಿತ್ಯದಿಂದ ದೇವೋಜ ಎಂಬುದು ದೇವಜ ಎಂದಾಗಿರಬಹುದು. ಮತ್ತು ಇದು ಚಾಲುಕ್ಯ ಜಗದೇಕಮಲ್ಲನ ಕಾಲ. ಬೌರಿಂಗ್‌ಪೇಟೆ ತಾಲ್ಲೂಕು ಗಟ್ಟುಕಾಮದೇವಹಳ್ಳಿಯ ಈಶ್ವರ ಗುಡಿಯ ತಳಪಾಯದಲ್ಲಿರುವ ಶಾಸನವು ಶೆಟ್ಟಿಯೊಬ್ಬನು ದೇವಾಲಯವನ್ನು ಮಾಡಿಸಿ ಲಿಂಗ ಪ್ರತಿಷ್ಠೆಯನ್ನು ಮಾಡಿಸಿದುದನ್ನು ಹೇಳುತ್ತದೆ. ಇದನ್ನೆಲ್ಲ ಮಾಡಿದ **ನಟಂಬಾಚಾರಿ**[72] ಎಂಬುವನಿಗೆ ಖಂಡುಗ ಗದ್ದೆಯನ್ನು ಇಲ್ಲಿ ಕೊಡಲಾಗಿದೆ.

**ಚಾವುಂಡೋಜರಾಚಾರಿ**[73] 'ವೈರಿ ಭೇರುಂಡ', 'ಗೋತ್ರ ಪವಿತ್ರ', 'ಶಂತ್ರುಭಯಾವಹ' ಎಂದು ಮುಂತಾದ ವಿಶೇಷಣಗಳಿಂದ ಈತನನ್ನು ಪರಿಚಯಿಸಲಾಗಿದೆ. ಸಾಮಾನ್ಯವಾಗಿ ಶಿಲ್ಪಿಗಳು ಹೇಳಿಕೊಳ್ಳುವಂತೆ ಇತರ ಶಿಲ್ಪಿಗಳ ಮೇಲೆ ಈತ ಸ್ಪರ್ಧೆ ಮಾಡುವ ವಿಷಯವಲ್ಲ. ಈತ ಇಲ್ಲಿ ಗುಡಿ ನಿರ್ಮಾಣವಷ್ಟೇ ಅಲ್ಲದೆ

---

68 EC. X, Kl. 179
69 EC. XI, Cd. 40
70 EC. V, My. 85 (ಪರಿಷ್ಕೃತ)
71 SII. XVIII, p. 206, No. 154
72 EC. XVII, Bp. 100
73 EC. VIII, Sa. 42

ಯುದ್ಧವೀರನೂ ಆಗಿರಲಿಕ್ಕೆ ಸಾಕು. 'ಮಚ್ಚರ ಗಂಡ' ಎಂಬ ಬಿರುದಾಂತ ಘರುಳೋಜ ಇವನ ಅಜ್ಜ. ಕಟು ಕೋಜ ಇವನ ತಂದೆ. ಈತ ಸಾಗರ ತಾಲ್ಲೂಕು ತಾಳ ಗುಪ್ಪ ಗ್ರಾಮದ ಕಡಂಬೇಶ್ವರ ಗುಡಿಯ ಕಂಭದಲ್ಲಿರುವ ಶಾಸನವು ಇವನು ದೇವಾಲಯವನ್ನು ಮಾಡಿದುದಾಗಿ ಹೇಳುತ್ತಿದೆ. ಈತನಿಗೆ ಗೋತ್ರದ ಪರಿಕಲ್ಪನೆಯೂ ಇದ್ದಿತು. ತಾನು 'ಗೋತ್ರ ಪವಿತ್ರ'ನೆಂದು ಕೂಡ ಹೇಳಿಕೊಂಡಿದ್ದಾನೆ.

ಕಬುಳ[74]—ಕಾಲವನ್ನು ಹೇಳಿಲ್ಲದ ಮಾಗಡಿ ತಾಲ್ಲೂಕು ಬಿಸ್ಕೂರು ಗ್ರಾಮದ ಪಾಳುಬಿದ್ದಿರುವ ಈಶ್ವರ ಗುಡಿಯಮೇಲಿರುವ ಶಾಸನವು ಹೇಳುವಂತೆ ಆ ಒಂದು ಶಿವಾಲಯವು 'ಕಬುಳ ಕೃತ', 'ಶ್ರೀಮಾನೂವುರಗ ಶ್ವಾನ್ಯಯು'ಎಂಬ ಓದು ಸರಿಯಾಗಿ ಅರ್ಥವಾಗುವುದಿಲ್ಲ. ಬಹುಶಃ ಈತ ಅದಾವುದೋ ತನ್ನ ವಂಶವನ್ನು ಹೇಳಿಕೊಳ್ಳುತ್ತಾನೆ.

ಗಂಗೋಜ.[75] ಈತ ಮಾರೋಜನ ಮಗ. ಅದಾರೋ ವ್ಯಕ್ತಿಯೊಬ್ಬ ಅದೇನೋ ಕಾರಣಕ್ಕೆ ಸತ್ತಿರ ಲಾಗಿ ಅಲ್ಲಿ ಸಮಾಧಿಯ ಮೇಲೆ ಒಂದು ವೃಂದಾವನ ವನ್ನು ಮಾಡುತ್ತಾರೆ. ಗಂಗೋಜನ ಕೈಯಲ್ಲಿಯೇ ಅದನ್ನು ಮಾಡಿಸುತ್ತಾರೆ. ಇಲ್ಲಿ 'ಸೇವೆ' ಎಂದು ಬಂದಿ ರುವುದರಿಂದ, ಗಂಗೋಜನು ಇದನ್ನು ಸೇವೆ ಎಂದೇ ಉಚಿತವಾಗಿ ಮಾಡಿಕೊಟ್ಟಿರಬೇಕು.

ಪೋಲೋಜ.[76] ಚಿತ್ರದುರ್ಗ ಜಿಲ್ಲೆ, ಐಮಂಗಳ ಹೋಬಳಿ ಸಿಂಡ್ಲಯಸಕೋಟೆ ಗ್ರಾಮದ ಬ್ರಹ್ಮದೇವರ ದೇವಾಲಯದಲ್ಲಿ ಬಿದ್ದಿರುವ ಕಲ್ಲು ಹೇಳುವಂತೆ, ಕಲ್ಲು ಕುಟ್ಟಿಗನಾದ ಪೋಲೋಜನು ಈ ಗುಡಿಯ ಕೆಲಸವನ್ನು ಮಾಡುತ್ತಾನೆ. ಈ ಬ್ರಹ್ಮದೇವರ ದೇವಾಲಯವೇ ಈ ಪೋಲೋಜನ ಕೆಲಸ.

ವಾಸ್ತುಶಿಲ್ಪಿಗಳ ಕಾರ್ಯವಿಧಾನ : ಶಾಸನದ ಮಾತಿನಲ್ಲಿಯೇ ಹೇಳುವುದಾದರೆ 'ಗರ್ಭಗ್ರಿಹ', 'ಮಂಟಪ', 'ನೃತ್ಯಮಂಟಪ', 'ಪ್ರಾಸಾದ', 'ಉಯ್ಯಾಲೆ ಮಂಟಪ', 'ವೃಂದಾವನ', 'ಮನೆ ಮಳಿಗೆ', 'ದೇವಾ ಲನ', 'ಶಿಲಾಕೂಟ', 'ಶಿಲಾಮಯ ದೇವತಾ ಭವನ', 'ಮುಖಮಂಟಪದ ಗೋಪುರ', 'ರಾಜಗೃಹ' 'ಕಳಸ', 'ಚಿತ್ರಪತ್ರ', 'ತಳಗಂಬ', 'ಕಲ್ಲು ಉಪ್ಪರಿಗೆ' ಮೊದ ಲಾದವು ಕರ್ನಾಟಕದ ವಾಸ್ತುಶಿಲ್ಪಿಗಳ ರಚನೆಗಳಾಗಿವೆ.

ಮರ, ದಾರು, ಕಲ್ಲು, ಇಷ್ಟಗೆ, ಕಬ್ಬುನ, ಇತ್ಯಾದಿ ಮೂಲ ಸಾಮಗ್ರಿಗಳನ್ನು ತಮ ನಿರ್ಮಾಣ ಕಾರ್ಯ ದಲ್ಲಿ ಉಪಯೋಗಿಸುತ್ತಿದ್ದರು.

ಕಂಭವನ್ನು ನಿಲ್ಲಿಸಿ 'ಕಳಶವನ್ನು ಎತ್ತಿ', 'ದಾರು ಕರ್ಮವನ್ನು ಮಾಡಿ', 'ಕಲುಗೆಲ್ಸವನ್ನು ಗೆಯ್ದು', 'ಕಬುನದ ಕೆಲಸವ ಮಾಡಿ' ಕಟ್ಟುತ್ತಿದ್ದರು. 'ಲೇಸಾಗಿ ಚಿತ್ರಪತ್ರ ಸಮೇತ'[77] ದೇಗುಲವನ್ನು ಬೆಸಗೆಯು ತ್ತಿದ್ದರು.[78]

ಗುಡಿಯ ನಿರ್ಮಾಣವನ್ನು ಮಾಡಿಸುವಾತನೂ ಊರಿನ ಮತ್ತು ಪರಊರಿನ ಆಧ್ಯರುಗಳೆಲ್ಲರೂ ಸೇರಿರು ವಾಗ[97] ವಾಸ್ತುಶಿಲ್ಪಿಯು ಗುಡಿಯ ಕೆಸರುಗಲ್ಲನ್ನು ಶುಭಮುಹೂರ್ತದಲ್ಲಿ ಪ್ರಾರಂಭಿಸುತ್ತಿದ್ದನು. 'ಕೆಸಱು ಕಲ್ಲು' ಎಂದರೆ ಅಡಿಗಲ್ಲು, ತಳಪಾಯದ ಕಲ್ಲು, ಅಸ್ತಿ ಭಾರದ ಶಿಲೆ ಎಂದು ಅರ್ಥ.[80] 'ಕೆಸಱಗಲ್ಲಾದಿಯಾಗಿ[81] ಎಂಬುದಾಗಿ ಶಾಸನಗಳಲ್ಲಿ ಬರುವ ಮಾತಿನಿಂದ ಯಾವುದೇ

74 EC. IX, Ma. 53
75 EC. X, Cb. 52
76 EC. XI, p. 296, No. 23
77 EC. XI, 81
78 KI. V, 81
79 ಒಡ್ಡಿಉ
80 ಕನ್ನಡ ನಿಘಂಟು, ಕ. ಸಾ. ಪ. ಪ್ರಕಟಣೆ
81 SII. XI, 177-103, 1124 AD

ಕಟ್ಟಡ ನಿರ್ಮಾಣವು ಕೆಸರುಗಲ್ಲನ್ನು ಇಡುವ ಮುಹೂರ್ತ ದಿಂದ ಪ್ರಾರಂಭವಾಗುತ್ತಿತ್ತು. ದೇವಸ್ಥಾನವು ಇಟ್ಟಿಗೆಯು ದಾಗಿದ್ದರೆ ಇಟ್ಟಿಗೆಯನ್ನಿಟ್ಟು[82], ಕೆಲಸವನ್ನು ಪ್ರಾರಂಭಿ ಸುತ್ತಿದ್ದರು. ಹೀಗೆಯೇ ಒಂದು ಗೊತ್ತಾದ ಶುಭ ದಿನ ದಂದು ಗುಡಿಯನ್ನು ಕಟ್ಟಿ ಮುಗಿಸಿ 'ಕಳಸನಿಬ್ಬಾಣ'[83] ಮಾಡಿ 'ಪ್ರತಿಷ್ಠೆ'ಯನ್ನು ಮಾಡಿ 'ದೇವಾಲ್ಯ'ವನ್ನು ಬಿಟ್ಟುಕೊಡುತ್ತಿದ್ದರು. ಹೀಗೆ ಪ್ರತಿಷ್ಠೆಯನ್ನು ಮಾಡಿ ಕೊಡುವ ಸಂದರ್ಭದಲ್ಲಿಯೇ ಶಿಲ್ಪಿಗೆ 'ಪೂರ್ವ ಮರ್ಯಾದೆ' ಮಾಡಿ ದಾನ ದತ್ತಿಗಳನ್ನು ಬಿಡಲಾಗುತ್ತಿತ್ತು.[84] 'ಕರು' ಎಂದರೆ ತಳಪಾಯ, ತಲೆಗಂಬ, ಮೂಲಸ್ತಂಭ, ಮುಹೂರ್ತ ಕಂಬ ಎಂಬ ಅರ್ಥ ಉಂಟು.[85] ಶಬ್ದಾನು ಶಾಸನವು "ಕರುಶಬ್ದಃ............ ಗೃಹಾದಿ ನಿರ್ಮಾಪಣೇ ಸುಲಗ್ನ ಸ್ಥಾಪಿತ ಪ್ರಥಮ ಸ್ತಂಭವಾಸಿ"[86] ಎಂದು ಅರ್ಥೈಸಿದೆ. ಕೆಲವು ಶಾಸನಗಳ ಪ್ರಕಾರ ವಾಸ್ತುಶಿಲ್ಪಿ ಗಳು ಕಾಡನ್ನು ಕಡಿದು ಮಾಡಿದ ಪುರದಲ್ಲಿ ಕೆರೆಯನ್ನು, ದೇವತಾಭವವನ್ನು 'ಕರುವಿಟ್ಟು'[87] ಮಾಡಿಕೊಡುತ್ತಾರೆ. ಶಾಸನಗಳಲ್ಲಿ ಬರುವ ಈ ಸಂಗತಿಗಳನ್ನು ದೇವಸ್ಥಾನದ ನಿರ್ಮಾಣದ ವಿವಿಧ ಹಂತಗಳಲ್ಲಿ ಮಾಡುತ್ತಿದ್ದ ಕೆಲವು ಆಚರಣೆಗಳನ್ನು (Rituals) ಎಂದು ತಿಳಿಯಬಹುದು. ಭಾರತೀಯ ಶಿಲ್ಪಶಾಸ್ತ್ರಗಳಲ್ಲಿ ಬರುವ ಕೆಲವಾರು ಆಚರಣೆ ಗಳನ್ನು ಕುರಿತು ಹೇಳುವ ಸ್ಟೆಲ್ಲಾಕ್ರಾಮ್ರಿಶ್[88] ಅಭಿ ಪ್ರಾಯವನ್ನು ಈ ರೀತಿ ಸಂಗ್ರಹಿಸಬಹುದು : ಗುಡಿಯ ನಿರ್ಮಾಣಕ್ಕಾಗಿ ಸಿದ್ಧಪಡಿಸಿದ ಪ್ರದೇಶದಲ್ಲಿ ವಾಸ್ತು ಪುರುಷನ ಸಾಂಕೇತಿಕ ಚಿತ್ರವನ್ನು ಬಿಡಿಸಬೇಕು. ಇದನ್ನು 'ವಾಸ್ತುಪುರುಷಮಂಡಲ' ಎಂದು ಕರೆಯುತ್ತಾರೆ. ಇದು ಕಟ್ಟಬೇಕಾಗಿರುವ ಗುಡಿಯ ನಕಾಶೆಯೂ ಆಗಿರುತ್ತದೆ. ಇದನ್ನು 'ಯಂತ್ರ' ಎಂದು ಕೂಡ ಕರೆಯುತ್ತಾರೆ. ಈ ಯಂತ್ರವು ರೇಖಾಗಣಿತಬದ್ಧವಾಗಿರುತ್ತದೆ. 'ಹಳೇಬೀಡು ಪುರಾತನ ಚರಿತ್ರೆ' ಎಂಬ ಪುಸ್ತಕದಲ್ಲಿ ಪಟೇಲ್ ಶಿವನಂಜೇಗೌಡರು ಹೊಯ್ಸಳೇಶ್ವರ ಗುಡಿಯನ್ನು ಕುರಿತು ಅದು ಶ್ರೀಚಕ್ರದಿಂದ ನಿರ್ಮಿತವಾಗಿದೆ ಎಂದು ಹೇಳಿರುವ ಮಾತನ್ನು ಇಲ್ಲಿ ಸ್ಮರಿಸಬಹುದು. ಆದರೆ ಶಾಸನ ಗಳಲ್ಲಿ ಈ ವಿವರ ಬಂದಿರುವಂತೆ ತಿಳಿಯುವುದಿಲ್ಲ. ಬಹುಶಃ ಮೇಲೆ ಹೇಳಿದ 'ಕರುವಿಡು'ವ ಕ್ರಿಯೆಯಲ್ಲಿ ಈ ಎಲ್ಲ ವಿವರಗಳು ಸೇರುತ್ತಿದ್ದಿರಬಹುದು.

ಗೊತ್ತಾದ ಅವಧಿಯಲ್ಲಿ ಮುಗಿಸಿಕೊಟ್ಟ ಶಿಲ್ಪಿಯ ಬಗ್ಗೆ ಪ್ರೀತಿಯುಂಟಾಗಿ ಆತನನ್ನು ಗೌರವಿಸುತ್ತಿದ್ದರು.[89] ರೂವಾರಿಗಳು ವರ್ಷಗಟ್ಟಲೇ ಕಟ್ಟುತ್ತಿದ್ದರು. ಲಿಂಗರಾಜ ಮಹಾರಾಜರ ಅರಮನೆಯನ್ನು ನಿರ್ಮಿಸಲು ೨ ವರ್ಷ, ೧ ತಿಂಗಳು, ೨ ದಿನಗಳನ್ನು ತೆಗೆದುಕೊಂಡಳೆಂದು ನಿಖರವಾಗಿ ಲೆಕ್ಕಹಾಕಿ ಒಂದು ಶಾಸನ ಹೇಳುತ್ತದೆ.[90] ಇವರು 'ಉಳಿ'ಯನ್ನೂ 'ಬಳ್ಳಿ' ಯನ್ನೂ ಹಿಡಿದು ಕೆಲಸ ಮಾಡುತ್ತಿದ್ದರು.[91] ಕಟ್ಟಿಸುವಾತನು ನೋಡಿ ಒಪ್ಪುವಂತೆ ಮಾಡುತ್ತಿದ್ದರು.[92]

ಕೆಲವು ಕಡೆ ಒಬ್ಬನೇ ವಾಸ್ತುಶಿಲ್ಪಿಯು ಇಡೀ ಗುಡಿಯನ್ನು ಕಟ್ಟಿದರೆ ಮತ್ತೆ ಕೆಲವೆಡೆ ಅನೇಕರು ಕೂಡಿ ಮಾಡಿದ್ದಾರೆ. ಒಂದು ಕಡೆ ಒಬ್ಬನು ಕೆಸರುಗಲ್ಲಾದಿಯಾಗಿ 'ಕಳಸ ನಿರ್ಬಾಣ'ದವರೆಗೆ ತಾನೊಬ್ಬನೇ ನಿರ್ವಹಿಸಿದ್ದಾನೆ.[93] ಲಕನಾಚಾರಿ ಎಂಬ ಮತ್ತೊಬ್ಬ ರೂವಾರಿಯು

---

82 EC. XII, Si. 38, 878 AD
83 EC. V, Ak. 34, 1121 AD
84 Ibid
85 ಕನ್ನಡ ನಿಘಂಟು, ಕ. ಸಾ. ಪ. ಪ್ರಕಟಣೆ
86 ಶಬ್ದಾನು ಶಾಸನ : ೨೯೭, ವಾಖ್ಯಾ
87 EC. V, 175, 1186 AD
88 Stella Kramrish 'The Hindu Temple'
89 EC. VII, Sk. 1197 AD
90 EC. I, ಮಡಿಕೇರಿ ೭, ೧೮೧೨ AD (ಪರಿಷ್ಕೃತ)
91 EC. XII, Si. 878 AD
92 EC. V, Bl. 147, 1121 AD
93 EC. V, Cn. 263

ನಂದಿ ಮತ್ತು ನಂದಿ ಮಂಟಪ, ಭೈರವ ಮತ್ತು ಭೈರವ ದೇಗುಲ, ಭಗವತಿ ಮತ್ತು ನಾರಾಯಣ ದೇವರುಗಳ ಮೂರ್ತಿಗಳನ್ನೂ ಹಾಗೂ ಆ ಗುಡಿಯಲ್ಲಿರುವ ಪರಿವಾರ ದೇವರುಗಳನ್ನೂ ತಾನೊಬ್ಬನೇ ಮಾಡಿರುತ್ತಾನೆ.[94] ಹೀಗೆ ಒಬ್ಬನೇ ಕಾರ್ಮಿಕನಿಂದ ಗುಡಿಯ ಬೇರೆ ಬೇರೆ ಭಾಗಗಳ ಕೆಲಸಗಳನ್ನೆಲ್ಲ ಮಾಡಲಾಗುತ್ತಿತ್ತು. (ಒಬ್ಬನೇ ವಾಸ್ತು ಶಿಲ್ಪಿ ಎಂದರೆ ಪ್ರಧಾನವಾದ ಒಬ್ಬ ಓಜ ಎಂದು ಇಟ್ಟು ಕೊಳ್ಳಬೇಕಾಗುತ್ತದೆ. ಓಜರಲ್ಲದ ಇತರ ಅನೇಕರು ಅವನಿಗೆ ಸಹಾಯ ಮಾಡಿದ್ದಿರಬೇಕು.) ಮತ್ತೊಂದು ಕಡೆ ಇಬ್ಬರು ವಾಸ್ತುಶಿಲ್ಪಿಗಳು ಸೇರಿ ಇಡೀ ಗುಡಿಯನ್ನು ಕಟ್ಟಿರುವುದೂ ಉಂಟು.[95] ಮತ್ತೆ ಕೆಲವು ಕಡೆ ಶಿಲ್ಪಿಯು ತಾನು ಗುಡಿಯ ಯಾವುದೋ ಒಂದು ಭಾಗವನ್ನು ಮಾತ್ರ ಮಾಡುತ್ತಿದ್ದನು. ಉದಾಹರಣೆಗೆ ಶ್ರೀ ಸರ್ವ್ವ ಸಿದ್ಧಿ ಆಚಾರ್ಯ್ಯನ್[96] ಎಂಬುವನು ಗುಡಿಯ ದಕ್ಷಿಣ ಭಾಗವನ್ನು ಮಾತ್ರ ಮಾಡಿದ್ದಾನೆಂದು ತಿಳಿಯಬಹುದು. ಹೀಗೆ ಕೆಲವೊಮ್ಮೆ ಗುಡಿಯ ದಿಕ್ಕಿಗನುಸಾರವಾಗಿ ಹಂಚಿ ಕೊಂಡು ಮೂರು ನಾಲ್ಕು ಮಂದಿಯೂ ಮಾಡು ತ್ತಿದ್ದರು.

ಹಾಗೆಯೇ ಮತ್ತೊಂದು ಶಾಸನದ ಮಂತ್ರಿ ಸಿಂಗರಾಜನೆಂಬುವನು 'ಮ(ವ)ರದರಾಜರ ದೇವರ ಗುಡಿ'ಯ ಬೇರೆ ಬೇರೆ ಕೆಲಸವನ್ನು ವಿಶ್ವಕರ್ಮ ಕುಲಕ್ಕೆ ಸೇರಿದ ಬೇರೆ ಬೇರೆ ಕುಶಲ ಕಾರ್ಮಿಕರಿಂದ ಮಾಡಿಸಿದಂತೆ ಹೇಳಿವೆ. ಆವಿಕಲ್ಲ ಬಾಚಿ ಬೈಚೋಜನ ಕೈಯಲ್ಲಿ ಗುಡಿಯ ಮರಗೆಲಸವನ್ನೂ, ಕಂಮಾರ ಅಂಜಲ ದೀವಿಂಗೋಜುವಿನ ಕೈಯಲ್ಲಿ ಕಬ್ಬಿಣದ ಕೆಲಸವನ್ನು ಮಾಡಿಸಿ ಕದವನ್ನು ಹಾಕಿಸಿ ಆವೋಜುಗಳಿಗೆ ಕುದುರೆ ಸತ್ತಿಗೆಗಳನ್ನೂ ಗದ್ದೆ ಯನ್ನೂ ಕೊಟ್ಟು ಗೌರವಿಸಲಾಗಿದೆ. ಹೀಗೆ ಬಡಗಿ, ಕಂಮಾರ, ಕಲ್ಲುಕುಟಿಗ ಓಜುಗಳೆಲ್ಲರೂ ಸೇರಿ ತಮಗೆ ಸಂಬಂಧಿಸಿದ ಕೆಲಸವನ್ನು ಮಾಡಿ ಗುಡಿಯನ್ನು ಕಟ್ಟು ತ್ತಿದ್ದರು.[97] ಹೀಗೆ ವಾಸ್ತುಶಿಲ್ಪಿಗಳು ಶ್ರಮವಿಭಜನೆ ಯನ್ನು ಮಾಡಿಕೊಂಡು ಗುಡಿಯನ್ನು ಕಟ್ಟುತ್ತಿದ್ದರು.

ವಾಸ್ತುಶಿಲ್ಪಿಗಳು ಸಾಮಾನ್ಯವಾಗಿ ಹೊಸ ದೇವಾಲಯಗಳನ್ನು ಕಟ್ಟುತ್ತಿದ್ದರೂ ಕೂಡ, ಅಲ್ಲಲ್ಲಿಯೇ ಹಳೆಯ ಕಟ್ಟಡಗಳನ್ನು ದುರಸ್ತಿಗೊಳಿಸಿರುವುದನ್ನೂ ಕಾಣುತ್ತೇವೆ. ಒಬ್ಬನು ಇಟ್ಟಿಗೆಯಲ್ಲಿದ್ದ ಹಳೆಯ ದೇಗುಲವನ್ನು ಕೆಡವಿ ಹೊಸದಾಗಿ ಕಲ್ಲಿನಲ್ಲಿ ಕಟ್ಟು ತ್ತಾನೆ.[98]

ಕೆಲವು ಕಡೆ ಅಪರೂಪಕ್ಕೆ ದಾರುಮಯ ಬಸದಿಯು ನಿರ್ಮಾಣವಾದ ವಿಷಯವೂ ಬರುತ್ತದೆ. ಆದರೆ ಹೀಗೆ ಮರದಲ್ಲಿ ಮಾಡಿಸಿದ ವ್ಯಕ್ತಿಗೆ ಕರೆದು, ಅನಂತರ ಶಿಲಾ ಮಯ ಬಸದಿಯನ್ನು ಮಾಡಲು ಬುದ್ಧಿಯನ್ನು ಕಲಿಸು ತ್ತಾರೆ.[99] ಇದನ್ನು ನೋಡಿದರೆ ಆಗಿನ ಕಾಲದಲ್ಲಿ ಮರದ ಕೆಲಸಕ್ಕಿಂತ ಕಲ್ಲಿನ ಕೆಲಸಕ್ಕೆ ಹೆಚ್ಚಿನ ಮನ್ನಣೆಯಿತ್ತೆಂದು ತಿಳಿಯಬಹುದಾಗಿದೆ. ಕೆಲವು ಸಾರಿ ಬಿದ್ದುಹೋದ ಅರ್ಧ ಗುಡಿಯನ್ನು ಕಟ್ಟಿ ಪೂರ್ತಿ ಕೂಡ ಮಾಡಿರುತ್ತಾರೆ.

ಕಟ್ಟಡ ನಿರ್ಮಾಣಕ್ಕೆ ಬೇಕಾದ ಕಲ್ಲು ಮೊದಲಾದ ಮೂಲ ಸಾಮಗ್ರಿಗಳನ್ನು ಹೊಂದಿಸಿಕೊಳ್ಳುತ್ತಿದ್ದರು. ಇದಕ್ಕೆ ಆಗಿನ ಕಾಲದಲ್ಲಿ ಒಂದು ವ್ಯವಸ್ಥೆಯೇ ಇದ್ದಂತೆ ಕಾಣುತ್ತದೆ. ಕೆಲವೊಮ್ಮೆ ತಾನು ದಾನವಾಗಿ ಕೊಟ್ಟ ಪ್ರದೇಶದಲ್ಲಿರುವ ಕಲ್ಲುಬಂಡೆಯನ್ನು ಕೆರೆ, ಬಾವಿ–ಬಚ್ಚಲು, ಮಾಳಿಗೆ–ಗುಡಿ ಆ ಪ್ರದೇಶದಿಂದ ಹೊಸ ಗುಡಿಯನ್ನು ಕಟ್ಟುತ್ತಿರುವ ಜಾಗಕ್ಕೆ ಸಾಗಿಸಲು ಅನುಮತಿ ಯಿರುತ್ತಿತ್ತು. ದಾನ ಕೊಡುವಾಗಲೇ ದಾನಿಯು ಅಂಥ ನಿರ್ಮಾಣಕಾರ್ಯಕ್ಕೆ ಅನುಕೂಲವಾಗುವಂತೆ ಮೊದಲೇ ಮಾಡಿಕೊಳ್ಳುತ್ತಿದ್ದರು.[100] ಬೇರೆ ಒಂದು ದೇವಸ್ಥಾನದ

94 EC. VIII, p. 146, 1094 AD (ಪರಿಷ್ಕೃತ)
95 EC. V, Ak. 110
96 SII. XV, 488, c 8th AD
97 EC. VI, 66, 117 AD
98 EC. XI, Cd. 27, 962 AD
99 EC. I, 19, 1544 AD
100 EC. XII, Tp. 2, 1263 AD

ಪೌಳಿಯಲ್ಲಿ ಹುಟ್ಟುಗಲ್ಲು ಇದ್ದಿದ್ದು ಮತ್ತೊಂದು ದೇವಸ್ಥಾನವನ್ನು ಕಟ್ಟಲು ಸೇವೆ ಎಂದು ಭಾವಿಸಿ ಅದನ್ನು ಒಡೆದು, 'ಹೊಡೆಯಿಸಿ' ಕೊಡಲಾಗುತ್ತಿತ್ತು.[101] ಕ್ರಿ.ಶ. ೧೨೯೪ರಲ್ಲಿ ವಾರಂಗಲ್ಲಿನ ರಾಣಿಯಾಗಿದ್ದ ರುದ್ರಮ ದೇವಿಯ ಆಜ್ಞೆಯ ಮೇರೆಗೆ ಕೋಟೆಯನ್ನು ಕಟ್ಟಲಾಗುತ್ತದೆ. ಈ ಕೋಟೆಯ ಪಕ್ಕದಲ್ಲಿರುವ ಶಾಸನದಲ್ಲಿ ಕಲ್ಲು ಚಪ್ಪಡಿಗಳನ್ನು ಹೇಗೆ ಆ ಸ್ಥಳಕ್ಕೆ ಎತ್ತಿನ ಗಾಡಿಯಲ್ಲಿ ಸಾಗಿಸುತ್ತಿದ್ದರೆಂಬುದನ್ನು ಚಿತ್ರದಲ್ಲಿ ತಿಳಿಸಿದೆ.[102] ಹಾಗೆಯೇ ಮತ್ತೊಂದು ಶಾಸನವು ಇಟ್ಟಿಗೆಗೆಂದು ಅಗೆದು ಕೆರೆಗಳಾದವು, ಕಲ್ಲಿಗೆಂದು ಕತ್ತರಿಸಿದ್ದರಿಂದ ಬೆಟ್ಟ ಕರಗಿ ಸಮತಟ್ಟಾಯಿತು. ಸುಣ್ಣದ ಭಂಡಿ ವರ್ಷಗಟ್ಟಲೇ ಓಡಾಡಿದ್ದರಿಂದ ರಸ್ತೆಗಳೆಲ್ಲವೂ ಹಳ್ಳ ಬಿದ್ದು ಹೋದವು[103] ಎಂಬುದಾಗಿ ಹೇಳುತ್ತದೆ. ವಾಸ್ತುಶಿಲ್ಪಿಗಳು ಕಷ್ಟಕರವಾದ ಕಲ್ಲು ಕೆಲಸವನ್ನು ಮಾಡುತ್ತಿದ್ದರು. ಪಟೇಲ್ ಶಿವನಂಜೇಗೌಡರು ತಮ್ಮ ಪುಸ್ತಕದಲ್ಲಿ "ಈತನು (ವಿನಯಾದಿತ್ಯ) ಕಟ್ಟಿಸಿದ ದೇವಾಲಯಗಳಿಗೆ ಕಿತ್ತ ಕಲ್ಲಿನ ಗುಂಡಿಯೇ ಕೆರೆ ತೊರೆ ಆದುವು" ಎಂದು ಹೇಳಿರುವ ಮಾತನ್ನು ಇಲ್ಲಿ ಉಲ್ಲೇಖಿಸಬಹುದು.

ರಾಘವಾಂಕನ 'ಸಿದ್ಧರಾಮಚಾರಿತ್ರ'ದಲ್ಲಿ ಸಿದ್ಧರಾಮನು "ಧೃತಿ ಮಾಡಿ ಇಲ್ಲಿ ತಲ್ಲಣವಿಲ್ಲದೀ ಕ್ಷೇತ್ರವ ಬಿಟ್ಟುಹೋಗದಿರಿ ಕಲುಗೆಲಸಕ್ಕೆ ಜಾರಿ"[104] ಎಂಬುದಾಗಿ ಬಹುಶಃ ಕಲ್ಲುಗೆಲಸವನ್ನು ಮಾಡಲಾರದೆ ತಪ್ಪಿಸಿಕೊಂಡು ಹೋಗುತ್ತಿದ್ದ ಜನರನ್ನು ಹೀಗೆ ಕರೆಯುತ್ತಾನೆ. ಅನೇಕರು ಹಿಂದೆಗೆಯಬಹುದಾದ ಕಷ್ಟಸಾಧ್ಯವಾದ ನಿರ್ಮಾಣ ಕಾರ್ಯವನ್ನು ಶಿಲ್ಪಿಗಳು ಕೈಗೊಳ್ಳುತ್ತಿದ್ದರು.

ಇಂಥ ಇವರಿಗೆ ಸಲ್ಲುತ್ತಿದ್ದ ಕೂಲಿ, ದಾನದತ್ತಿಗಳ ಬಗ್ಗೆ ಇಲ್ಲಿ ಯೋಚಿಸುವುದಾದರೆ, ಪತಿ ಓಜನೆಂಬ ರೂವಾರಿಯು ಗರುಡಗಂಬವನ್ನು ತೊತ್ತುಗೆಲಸವಾಗಿ ಮಾಡಿಕೊಟ್ಟಿದಾನೆ.[105] ಮತ್ತೊಂದು ಕಡೆ ಕೇತೋಜನೆಂಬ ಕಲುಕುಟ್ಟಿಗನಿಗೆ ಕಲುಕುಟ್ಟಿಗ ಕೆಲಸಕ್ಕಾಗಿ ಜಮೀನಿನ ಜೊತೆಗೆ 'ಲ ಹಿಟ್ಟನ್ನೂ' (?) ಕೊಡುತ್ತಾರೆ.[106] ಕಲ್ಲೋಜನೆಂಬ ಬಡಗಿಯು ತಾನು ಕಟ್ಟಿದ ಗುಡಿಗೆ ಸೇರಿದ ತೋಟದ ಮನೆಯನ್ನು ಕಟ್ಟಿದ್ದಕ್ಕಾಗಿ ತಾನು ಕೂಲಿಯನ್ನು ಪಡೆಯುತ್ತಾನೆ[107] ದೇವಾಲಯವನ್ನು ಮಾಡುವುದಕ್ಕಾಗಿ ರೂವಾರಿಗಳಿಗೆ ವಸ್ತ್ರವನ್ನೂ, ಅನ್ನವನ್ನೂ ಕೊಟ್ಟು ಸ್ವಲ್ಪ ಕಾಲ ನಿಲ್ಲಿಸಿ ಕಲ್ಪವೃಕ್ಷದಂತಿರುವ ದಾನಿಗಳು ಆಂಧ್ರದ ಲೇಪಾಕ್ಷಿಯ ಕೂರ್ಮಶೈಲ ಎಂಬ ಬೆಟ್ಟದಲ್ಲಿ ನಾಥೇಶ್ವರನೇ ಮೊದಲಾದ ಗುಡಿಗಳ ಸಮುದಾಯವೂ ನಾಟ್ಯಮಂಟಪವೂ ಕಲ್ಯಾಣಮಂಟಪವೂ ಇದೆ. ಪಾಕಶಾಲೆಯಲ್ಲಿ ಶಿಲ್ಪಿಗಳಿಗೆ ಭೋಜನ ವ್ಯವಸ್ಥೆಯನ್ನು ಮಾಡಲಾಗಿತ್ತು ಎಂದು ಅಲ್ಲಿಯ ಜನ ಈಗಲೂ ಹೇಳುತ್ತಾರಂತೆ.[108] ಹೀಗೆ ಬೇರೆ ಬೇರೆ ಊರುಗಳಿಂದ ಬಂದೂ ಕೆಲಸ ಮಾಡುತ್ತಿದ್ದ ಶಿಲ್ಪಿಗಳಿಗೆ ಊಟ, ವಸತಿ ಹಾಗೂ ಕೂಲಿಯ ವ್ಯವಸ್ಥೆಯನ್ನೂ ಮಾಡಲಾಗುತ್ತಿದ್ದಿರಬೇಕು.

---

101 Ibid. 73, 1748 AD
102 ಎಂ. ವೆಂಕೋಬರಾವ್ : ಮೈಸೂರು ದೇಶದ ವಾಸ್ತುಶಿಲ್ಪ, ಪು. ೧೬೦
103 EC. II, (ಹಳೇ ಆವೃತ್ತಿ) 142, ೧೧೩೯ AD
104 ಸಿದ್ಧರಾಮಚಾರಿತ್ರ್ಯ : ೯-೬೦
105 EC. IX, Dv. 39, 140 AD
106 SII. XV, 163, 1218 AD
107 SII. XV, 69, 1186 AD
108 ಎಂ. ವಿ. ಕೃಷ್ಣರಾವ್: ಕರ್ನಾಟಕ ಇತಿಹಾಸ ದರ್ಶನ, ಪು. ೧೦೪೮

ಆರ್. ಆರ್. ಜೋಶಿ

# ಧಾರವಾಡದ ವಿದ್ಯಾಗಿರಿಯಲ್ಲೊಂದು ಮೈಲಾರದೇಗುಲ : ಒಂದು ಅಧ್ಯಯನ

ಮೈಲಾರದೇವರು ಮೈಲಾರಲಿಂಗ, ಮಲ್ಲಾರಿ, ಮಾರ್ತಾಂಡ, ಭೈರವ, ಖಂಡೋಬಾ ಇತ್ಯಾದಿ ಹೆಸರುಗಳಿಂದ ಪ್ರಸಿದ್ಧನಾಗಿದ್ದಾನೆ. ಆರಂಭದಲ್ಲಿ ಚಿಕ್ಕ ಗ್ರಾಮ ದೇವತೆಯಾಗಿ ಕಾಲಾಂತರದಲ್ಲಿ ತನ್ನದೇ ಆದ ಮಹತ್ವವನ್ನು ಮತ್ತು ಬಹುಸಂಖ್ಯಾತ ಅನುಯಾಯಿಗಳನ್ನು ಪಡೆದ ಈತ ಶಿವನ ಸ್ವರೂಪಿಯಾಗಿದ್ದಾನೆ. ಇವನ ಮಹಿಮೆಯನ್ನು ಕೊಂಡಾಡಲು ಮಲ್ಲಾರಿ ಮಹಾತ್ಮೆಯಲ್ಲದೆ 'ಮಾರ್ತಾಂಡ ವಿಜಯ,' 'ಮಲ್ಲಾರಮಣಿಗಿರಿ ವಿಜಯ,' 'ಜಯಾದ್ರಿ ಮಹಾತ್ಮೆ' ಮುಂತಾದ ಮಹಾತ್ಮೆಗಳು ರಚಿತವಾಗಿವೆ. ಇವನಿಗೆ ಇಬ್ಬರು ಹೆಂಡಿರು ; ಇವರಲ್ಲಿ ಒಬ್ಬಳು ಮಾಳಚಿದೇವಿ, ಮೈಲಾರನಷ್ಟೆ ಪ್ರಸಿದ್ಧಳು. ಇನ್ನೊಬ್ಬಳು ತುಪ್ಪದಮಾಳವ್ವ. ಇವನ ಭಕ್ತರನ್ನು ಅಥವಾ ಇವನ ಅನುಯಾಯಿಗಳನ್ನು ಗೊರವ, ಗ್ವಾರೆಪ್ಪ, ಗೊಗ್ಗಯ್ಯ, ಒಗ್ಗಯ್ಯ ಎಂದು ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಗೊರವ, ಅಥವಾ ಗ್ವಾರಪ್ಪಗಳಿಗೆ ವಿಶಿಷ್ಟವಾದ ವೇಷಭೂಷಣಗಳಿವೆ. ಮೈಲಾರಪಂಥದ ಭಕ್ತರು, ಮೈಲಾರಕ್ಷೇತ್ರಗಳು ಇಂದು ವಿಪುಲವಾಗಿವೆ. ಅವುಗಳಲ್ಲಿ ರಾಯಚೂರ ಜಿಲ್ಲೆಯ ಆನೆಗುಂದಿ, ಬೆಳಗಾಂವ ಜಿಲ್ಲೆಯ ಮಂಗಸೂಳಿ, ಕಾರಿಮನಿ, ಶಿವಮೊಗ್ಗ ಜಿಲ್ಲೆಯ ಕುಬಟೂರು, ಬಳ್ಳಾರಿ ಜಿಲ್ಲೆಯ ಮೈಲಾರ, ಬಿದರ ಜಿಲ್ಲೆಯ ಮೈಲಾರಪೂರ ಹಾಗೂ ಧಾರವಾಡ ಜಿಲ್ಲೆಯ ದೇವಿಹೊಸೂರು, ಮೈಲಾರದೇವರಗುಡ್ಡ (ದೇವರುಗುಡ್ಡ) ಖ್ಯಾತವಾಗಿವೆ.

ಮೈಲಾರ ಕ್ಷೇತ್ರಗಳಲ್ಲಿ ಧಾರವಾಡದ ಮೈಲಾರಲಿಂಗನ ಗುಡಿಯು ಒಂದು ಆಗಿದ್ದು, ಸಾಕಷ್ಟು ಜನಜನಿತವಾಗಿಲ್ಲ. ಇದರ ವಾಸ್ತುಶಿಲ್ಪ ಸಂಯೋಜನೆ, ಧಾರ್ಮಿಕ ಸ್ವಾರಸ್ಯಗಳು ಇನ್ನೂ ಹಲವರಿಗೆ ಗೊತ್ತಿಲ್ಲ. ಅಂತೆಯೇ ಅದರ ಬಗೆಗೆ ಒಂದು ಸಂಕ್ಷಿಪ್ತ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ಈ ಮೈಲಾರಲಿಂಗನ ಗುಡಿ ಧಾರವಾಡದ ದಕ್ಷಿಣ ಭಾಗದ ವಿದ್ಯಾಗಿರಿಯ ಮೇಲಿದೆ. ಗುಡ್ಡದ ಮೇಲೆ ಮೈಲಾರನ ಗುಡಿ ಇರುವುದರಿಂದ ಇದು 'ಮೈಲಾರದೇವರ ಗುಡ್ಡ'ವೆಂದೇ ಹೆಸರಾಗಿದೆ. ಪೂರ್ವಾಭಿಮುಖವಾಗಿರುವ ಈ ದೇಗುಲ ಮೂಲತಃ ಕಲ್ಯಾಣ ಚಾಲುಕ್ಯರ ಒಂದು ದೊಡ್ಡ ವಾಸ್ತುಕೃತಿ. ಮೂರು ಮುಖ್ಯ ಘಟ್ಟಗಳಲ್ಲಿ ಇದರ ಬೆಳವಣಿಗೆ ಅಥವಾ ಪರಿವರ್ತನೆ ಹೊಂದಿದ ಬಗೆಯನ್ನು ಅಭ್ಯಸಿಸಬಹುದು :

೧. ಒಂದನೆಯ ಘಟ್ಟ : ಕಲ್ಯಾಣ ಚಾಲುಕ್ಯರ ಕಾಲದ್ದು (೧೧-೧೨ನೆಯ ಶತಮಾನ)

೨. ಎರಡನೆಯ ಘಟ್ಟ : ಬಿಜಾಪೂರ ಆದಿಲಶಾಹಿ ಕಾಲದ್ದು (೧೬೭೦ : ೧೭ನೆಯ ಶತಮಾನ)

೩. ಮೂರನೆಯ ಘಟ್ಟ : ಮೂರನೆಯ ಬಾಲಾಜಿ ಬಾಜಿರಾವನ ಕಾಲದ್ದು (೧೭೫೩ : ೧೮-೧೯ನೆಯ ಶತಮಾನ).

ಗರ್ಭಗೃಹ, ಅಂತರಾಳ ಹಾಗೂ ನವರಂಗಗಳಿರುವ ಈ ಗುಡಿಯಲ್ಲಿ ಹಲವು ಕಲ್ಯಾಣ ಚಾಲುಕ್ಯರ ಶೈಲಿಯ ಲಕ್ಷಣಗಳನ್ನು ಗುರುತಿಸಬಹುದು. ಗರ್ಭಗುಡಿ ಹಾಗೂ

ಅಂತರಾಳ ಸಂಪೂರ್ಣವಾಗಿ ಪರಿವರ್ತನೆಗೊಂಡಿದೆ. ಗರ್ಭಗುಡಿಯು ಈಗ ಒಂದು ಚಿಕ್ಕಗೂಡಾಗಿ ಉಳಿದಿದೆ. ಇದರ ಬಾಗಿಲುವಾಡ ಸರಳವಾಗಿದ್ದು, ಇದರ ಮೇಲಿನಭಾಗದ ಮಕರತೋರಣ ಇರುವ ಫಲಕ ಕೆಲವು ವಾಸ್ತುಶಿಲ್ಪ ವಿನ್ಯಾಸಗಳಿಂದ ಅಲಂಕೃತವಾಗಿದೆ. ನಾಗರಶೈಲಿಯ ನಾಲ್ಕು ಶಿಖರಮಾದರಿಗಳು, ಅವುಗಳ ಮಧ್ಯ ಚಾಲುಕ್ಯ ಶೈಲಿಯ ಶಿಖರ ಮಾದರಿ(ಈಗ ನಶಿಸಿದೆ)ಗಳಿವೆ. ಈ ಶಿಖರಗಳ ಮಧ್ಯೆ ಮುತ್ತಿನ ಕುಚ್ಚನ್ನು ಕಟ್ಟಿಕೊಂಡಿರುವ ಸಿಂಹಮುಖಗಳು ಆಲಂಕಾರಿಕವಾಗಿವೆ.

ಅಂತರಾಳದ ಮೇಲ್ಭಾವಣಿ ಚತುರಸ್ರ ವಿನ್ಯಾಸದಲ್ಲಿದ್ದು, ಮಧ್ಯದಲ್ಲಿ ಅರಳಿದ ಕಮಲ ಫಲಕವಿದೆ. ಈ ಅಂತರಾಳದ ಎಡ ಮತ್ತು ಬಲ ಬದಿಗಳ ಅಂಕಣಗಳನ್ನು ಅನಂತರ ಸೇರಿಸಿರಬಹುದು. ಕಾರಣ ದೇವಸ್ಥಾನದ ಬಿಡಿಭಾಗಗಳನ್ನು ಇದಕ್ಕೆ ಬಳಸಿ ಕಟ್ಟಲ್ಪಟ್ಟಿದೆ.

**ಮೈಲಾರಲಿಂಗ ಮೂರ್ತಿ :** ಗರ್ಭಗುಡಿಯ ಮೈಲಾರಲಿಂಗ ಮೂರ್ತಿ ಸ್ವಾರಸ್ಯಕರವಾಗಿದೆ. ಇದು ಒಂದು ಉಬ್ಬುಶಿಲ್ಪ. ಮೂರ್ತಿಯು ಸುಖಾಸನದಲ್ಲಿ ಕುಳಿತಿದೆ. (ಉನ್ನತ ಆಸನದ ಮೇಲೆ) ಬಲಗಾಲನ್ನು ಮಡಿಸಿ, ಎಡಗಾಲನ್ನು ಇಳಿಬಿಟ್ಟಿದೆ. ಮೈಲಾರ ನಾಲ್ಕು ಕೈಗಳಲ್ಲಿ ಆಯುಧಗಳನ್ನು ಹಿಡಿದಿದ್ದಾನೆ. ಎಡಭಾಗದ (ಮೇಲಿನ) ಕೈಯಲ್ಲಿ ತ್ರಿಶೂಲ, ಬಲಭಾಗದ (ಮೇಲಿನ) ಕೈಯಲ್ಲಿ ನಾಗನಿಂದ ಅಲಂಕೃತಗೊಂಡ ಡಮರು, ಕೆಳಗಿನ ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಭಿಕ್ಷಾಪಾತ್ರೆ (ಇದು ತಲೆ ಬುರಡೆಯಲ್ಲ) ಇವೆ. ಎಡತೊಡೆಯ ಮೇಲೆ ಚತುರ್ಭುಜ ಗಣಪತಿ ಹಾಗೂ ಬಲತೊಡೆಯ ಮೇಲೆ ಗಂಗೆಮಾಳ್ವ ಕುಳಿತಿದ್ದಾರೆ. ಬಲಗಾಲಿನ ಕೆಳಗಿನ ಪಾದಕ್ಕೆ ಮುಖಮಾಡಿ ನಿಂತ ನಾಯಿಯ ಸ್ಪಷ್ಟ ಚಿತ್ರವಿದೆ. ಎಡಗಾಲ ಕೆಳಗೆ ಸರ್ವಾಲಂಕೃತವಾದ ಜೂಲ, ಕಡಿವಾಣಗಳಿರುವ ಕುದುರೆಯು ಜಿಗಿಯುವ ಭಂಗಿಯಲ್ಲಿ ಇದೆ. ಪ್ರಭಾವಳಿಯ ಮೇಲೆ ತ್ರಿಶೂಲಕ್ಕೆ ಹೊಂದಿಕೊಂಡು ಈಶ್ವರ ಲಿಂಗವಿದೆ. ಎಡಭಾಗದಲ್ಲಿ ಡಮರಿಗೆ ಹೊಂದಿಕೊಂಡು ನಂದಿವಾಹನನ ಚಿಕ್ಕ ಉಬ್ಬುಶಿಲ್ಪಗಳಿವೆ. ಮೇಲ್ತುದಿಯಲ್ಲಿ ಬಲಕ್ಕೆ ಸೂರ್ಯ ಹಾಗೂ ಎಡಕ್ಕೆ ಚಂದ್ರನ ಶಿಲ್ಪಗಳಿವೆ. ಮೈಲಾರದೇವರು ಕಿರೀಟ ಧರಿಸಿದ್ದಾನೆ. ಈ ಕಿರೀಟದ ಮುಂಭಾಗದಲ್ಲಿ ಒಂದು ತ್ರಿಶೂಲ, ಮೇಲೆ ತುದಿಯಲ್ಲಿ ಒಂದು ರುಂಡದ ಚಿತ್ರವಿದೆ. ಕೊರಳಲ್ಲಿ ಕಂಠೀಹಾರ ಮಣಿಸರ ಹಾಗೂ ಕೈ ಮತ್ತು ಕಾಲುಗಳಿಗೆ ಬಳೆ, ಭುಜಕ್ಕೆ ಭುಜಬಂಧಗಳನ್ನು ತೊಡಿಸಲಾಗಿದೆ. ಉದ್ದನೆಯ ವೈಜಯಂತಿಮಾಲೆಯಲ್ಲಿ ಏಳು ರುಂಡಗಳನ್ನು ಪೋಣಿಸಲಾಗಿದೆ. ತುಸು ದಪ್ಪಹೊಟ್ಟೆಯ, ಕುಡಿಮೀಸೆಯ ಈ ಮೈಲಾರನ ಮುಖದಲ್ಲಿ ಯೌವನದ ಭಾವ ವ್ಯಕ್ತವಾಗುತ್ತದೆ. ಕಿರೀಟದ ಅಲಂಕರಣೆ ಮತ್ತು ವಿವಿಧ ಆಭರಣಗಳ ಶೈಲಿ ಹಾಗೂ ಒಟ್ಟು ಶಿಲ್ಪಸಂಯೋಜನೆ ಆಧರಿಸಿ ಇದನ್ನು ಸುಮಾರು ೧೮ನೆಯ ಶತಮಾನದ್ದೆಂದು ಹೇಳಬಹುದು. ಈ ಉಬ್ಬುಶಿಲ್ಪವನ್ನು ಗಾರೆಯಿಂದ ಮಾಡಿದ ದೇವಕೋಷ್ಟದಲ್ಲಿ ಇಡಲಾಗಿದೆ. ಮೂಲತಃ ಕಲ್ಯಾಣ ಚಾಲುಕ್ಯರ ಕಾಲದ ಗರ್ಭಗುಡಿಯು ಭಾಗವಾಗಿದ್ದು ಪರಿವರ್ತನೆ ಹೊಂದಿದೆ. ಈ ವಿಗ್ರಹದ ಎದುರಿಗೆ ಅಂತರಾಳದಲ್ಲಿ ಒಂದು ಲಿಂಗ ಪ್ರತಿಷ್ಠಾಪಿಸಲಾಗಿದೆ.

**ನವರಂಗ :** ಅಂತರಾಳದ ದ್ವಾರಬಂಧ (೧೮ನೆಯ ಶತಮಾನ) ಮರಾಠ ಶೈಲಿಯಲ್ಲಿ ಇದೆ. ಆದರೆ ಮೇಲ್ಛಾವಣಿ ಮಕರತೋರಣ ಫಲವನ್ನು ಇಲ್ಲಿ ಉದಹರಿಸಬಹುದು.

ವಿಶಾಲವಾದ ನವರಂಗ ಒಂಬತ್ತು ಅಂಕಣಗಳಿಂದ ಕೂಡಿದ ಸಭಾಮಂಟಪವಾಗಿದ್ದು, ಇದರ ಮಧ್ಯಭಾಗದಲ್ಲಿ ನಾಲ್ಕು ಕಡಾಯಿ ಹಿಡಿದ ಶಿಲಾಸ್ತಂಭಗಳು ಆಕರ್ಷಕವಾಗಿವೆ. ದಂತ ವಿನ್ಯಾಸವುಳ್ಳ ಪೀಠಭಾಗ, ಹರಿತವಾದ ಅಲಗಿನಂತೆ ಕಡಾಯಿ ಹಿಡಿದ ಬಳೆಗಳು, ಅವುಗಳ ಮೇಲೆ ಗಂಟೆಯ ಆಕೃತಿಯ ಕಾಂಡ ಭಾಗ ಮತ್ತು ಇದರ ಮೇಲ್ಭಾಗದಲ್ಲಿ ಅನೇಕ ಬಳೆಗಳನ್ನು ಪೋಣಿಸುವಂತೆ ಮಾಡಿದ ಸ್ತಂಭವಿನ್ಯಾಸ, ಚಪ್ಪಟೆಯ ದಿಂಬಿನ ಆಕಾರದ ಶಿರೋಭಾಗ ಮತ್ತು ಅಗಲವಾದ, ಚೌಕಾಕಾರದ ಮೇಲೆ ವೃತ್ತಾಕಾರದ ಕೆತ್ತನೆಯ ಫಲಕಗಳುಳ್ಳ ಸ್ತಂಭಶಿರವು ಇವೇ ಮುಂತಾದವು ಈ ನಾಲ್ಕು ಕಂಬಗಳ ಲಕ್ಷಣಗಳಾಗಿವೆ. ಈ ಕಂಬಗಳನ್ನು ಹೊತ್ತ ಬೋದಿಗೆಗಳು ಕೆತ್ತನೆಗಳಿಂದ ಅಲಂಕೃತಗೊಂಡಿವೆ. ಗೋಡೆಗೆ ತಾಗಿರುವ ಇತರ ೧೦ ಕಂಬಗಳು ಬೇರೆ ಬಗೆಯಾಗಿವೆ. ಮುಂಭಾಗದ ಎರಡು ಕಂಬಗಳು ಮಾತ್ರ ಕಡಾಯಿ ಹಿಡಿದ ಕಂಬಗಳ ಅನುಕರಣೆಯಂತೆ ಇವೆ. ನವರಂಗದ ತೊಲೆಗಳು ಕಂಬದ ವಿನ್ಯಾಸ ನಾಲ್ಕು ದಳದ ಪುಷ್ಪವಿನ್ಯಾಸ ಹಾಗೂ ದಂತವಿನ್ಯಾಸಗಳಿಂದ ಅಲಂಕೃತವಾಗಿವೆ.

ಮೇಲ್ಭಾಗದ ವಿನ್ಯಾಸ ಎರಡು ಬಗೆಯದು. ನವರಂಗದ ಕೇಂದ್ರಸ್ಥಾನದಲ್ಲಿರುವ ನೃತ್ಯಮಂಟಪದ ಮೇಲ್ಭಾವಣಿ ಚೌರಸದ ಮೇಲೆ ಚೌರಸವನ್ನು ಹೊಂದಿಸಿಟ್ಟ ಪರಿಕ್ರಮದಲ್ಲಿದೆ. ಇದರ ಪ್ರತಿಯೊಂದು ಮೂಲೆ ಕಲ್ಲಿನ (ತ್ರಿಕೋನ ಆಕಾರದ) ಫಲಕದ ಮೇಲೆ ಕಮಲ, ಹೂಬಳ್ಳಿಗಳು, ಮಾಲಾಕಾರರು, ಸಿಂಹಮುಖ ಮುಂತಾದ ಅಲಂಕರಣೆಗಳಿಂದ ತುಂಬಿದೆ. ಮಧ್ಯದ ಕಮಲಶಿಲೆ ತುಸು ಗೋಳಾಕೃತಿಯಲ್ಲಿದ್ದು ಇದನ್ನು ಗುಂಡಿ ಬಟ್ಟಲಿಗೆ ಹೋಲಿಸಬಹುದು. ಉಳಿದ ಮೇಲ್ಭಾವಣಿಗಳನ್ನು ಕಮಲ ವಿನ್ಯಾಸಗಳಿಂದ ಹಾಗೂ ನಾಲ್ಕು ಮೂಲೆಗಳ ಸಿಂಹಮುಖ ವಿನ್ಯಾಸಗಳಿಂದ ತುಂಬಲಾಗಿದೆ. ಒಟ್ಟಾರೆ ಈ ನವರಂಗದ ಮೇಲ್ಭಾವಣಿ ಸುಮಾರು ೪೯ ಕಮಲಗಳಿಂದ ಶೋಭಿಸುತ್ತದೆ. ಈ ಕಮಲಗಳ ನಡುವೆ ಉಬ್ಬಿದ ಸಣ್ಣ ಕುಸುಮಗಳಿವೆ. ಕೆಲವು ಕುಸುಮಗಳು ಭಗ್ನವಾದರೆ ಇನ್ನು ಕೆಲವು ಪೂರ್ಣ ನಾಶಗೊಂಡಿವೆ. ಇವುಗಳ ಕೆತ್ತನೆಯಲ್ಲಿ ಮೈಮಾಟ ಕಲ್ಯಾಣ ಚಾಲುಕ್ಯರ ಶೈಲಿಯ ಪ್ರೌಢಮೆ ಹಾಗೂ ವಿನ್ಯಾಸವನ್ನು ನೋಡಬಹುದು.

ನೃತ್ಯಮಂಟಪದ ಮಧ್ಯದಲ್ಲಿ ಇತ್ತೀಚೆಗೆ ಕೆತ್ತಿದ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದಲ್ಲಿ (ಅಂತರಾಳದ್ವಾರದ ಬಲಭಾಗದಲ್ಲಿ) ಶೇಷಶಾಯಿ ಅನಂತನ ವಿಗ್ರಹ ನೋಡಬಹುದು. ಅರೆಬರೆ ಕೆತ್ತಿದ ಈ ಶಿಲ್ಪ ಶಿಲಾಫಲಕವನ್ನು ಬೇರೆ ಕಡೆಯಿಂದ ಇಲ್ಲಿಗೆ ತಂದು ಇಟ್ಟಿರಬಹುದು. ಏಳುಹೆಡೆ ಹಾವಿನ ಮೇಲೆ ಚತುರ್ಭುಜ ವಿಷ್ಣು ಮಲಗಿದ್ದಾನೆ. ಈ ಶಿಲಾಫಲಕವನ್ನು ಪೂರ್ತಿಯಾಗಿ ಕೆತ್ತಿದ್ದರೆ ಇದೊಂದು ಶಿಲ್ಪರತ್ನವಾಗಬಹುದಾಗಿತ್ತು. ಈಗಿನ ಸ್ಥಿತಿಯಲ್ಲಿಯೂ ಈ ವಿಗ್ರಹದ ರೂಪ-ರೇಷೆಗಳು ಸ್ಪಷ್ಟವಾಗಿವೆ. ಹಿಂದಿನ ಬಲಗೈಯನ್ನು ಎದೆಗೆ ಆನಿಸಿ ಮುಂದಿನ ಬಲಗೈಯನ್ನು ತಲೆಗೆ ದಿಂಬಾಗಿ ಮಾಡಿ ಮಲಗಿದ ವಿಷ್ಣು ತನ್ನ ಚಕ್ರವನ್ನು ಬಲಬದಿಯಲ್ಲಿ ಇಟ್ಟುಕೊಂಡಿದ್ದಾನೆ. ಶಂಖವನ್ನು ಹಿಂದಿನ ಎಡಗೈಯಲ್ಲಿ ಹಿಡಿದುಕೊಂಡಿರುವನು. ಮುಂದಿನ ಎಡಗೈಯನ್ನು ಎಡತೊಡೆಯ ಮೇಲೆ ಆನಿಸಿ ಇಟ್ಟಂತಿದೆ. ವಿಷ್ಣುವಿನ ನಾಭಿ ಕಮಲ ಮತ್ತು ಅದರ ಮೇಲೆ ಬ್ರಹ್ಮ ವಿಗ್ರಹ ಸ್ಪಷ್ಟವಾಗಿ ಕೆತ್ತಲ್ಪಟ್ಟಿವೆ. ವಿಷ್ಣುವಿನ ಕೆಳಭಾಗದಲ್ಲಿ ಬಲಕ್ಕೆ ಭೂದೇವಿಯು ಸುಖಾಸನದಲ್ಲಿ ಕುಳಿತಿದ್ದಾಳೆ; ಎಡ ಭಾಗದಲ್ಲಿ ಶ್ರೀದೇವಿಯು ಸುಖಾಸನದಲ್ಲಿ ಕುಳಿತು, ತನ್ನ ಬಲತೊಡೆಯ ಮೇಲೆ ಇಟ್ಟ ವಿಷ್ಣುವಿನ ಪಾದವನ್ನು ನಿಧಾನವಾಗಿ ಒತ್ತುತ್ತಿರುವ ಭಂಗಿಯಲ್ಲಿ ಇದ್ದಾಳೆ. ಆಯತಾಕಾರದ ವಿಷ್ಣುವಿನ ಈ ಶಿಲಾಫಲಕ ಬಹುಶಃ ಕಲ್ಯಾಣ ಚಾಲುಕ್ಯರ ಕಾಲದ ಒಂದು ಒಳ್ಳೆಯ ಮಾದರಿಯಾಗಿದೆ ಎಂದು ಹೇಳಬಹುದು.

**ದೇವಾಲಯದಲ್ಲಿರುವ ಶಾಸನಗಳು :** ನೃತ್ಯ ಮಂಟಪದ ತೊಲೆಗಳ ಮೇಲೆ ಎರಡು ಮೂರು ಪುಟ್ಟ ಶಾಸನಗಳು ಇವೆ. ಅಕ್ಷರಗಳ ಲಕ್ಷಣ ಮೇಲಿಂದ ಇವು ಮಧ್ಯಕಾಲದ್ದೆಂದು ಹೇಳಬಹುದು. ಆ ಶಾಸನಗಳಲ್ಲಿ 'ಮಾದಯ್ಯ-೩,' 'ಮಾದ್ಯ-೪' ಮತ್ತು 'ನವರಂಗ' ಎಂದು ಉಲ್ಲೇಖಿಸಲಾಗಿದೆ. ಮೂರು ನಾಲ್ಕು ಕಡೆ ಮಾದಯ್ಯನ ಹೆಸರು ಬರುವುದರಿಂದ ಬಹುಶಃ ಇವನು ದೇವಸ್ಥಾನದ ಪ್ರಧಾನ ಶಿಲ್ಪಿ ಇರಬಹುದು.

ನವರಂಗದ ಮುಂದಿನ ಕಂಬದ ಮೇಲೆ ಎರಡು ಪರ್ಶಿಯನ್ ಶಾಸನಗಳು ಇವೆ ಎಂದು ವರದಿಯಾಗಿತ್ತು. ಒಂದು ಶಾಸನ ಸಂಪೂರ್ಣ ನಾಶವಾಗಿದೆ ಎಡಕಂಬದ ಶಾಸನ(ಅದೂ ಈಗ ಕಾಣುತ್ತಿಲ್ಲ!)ಸಾರ ಈ ಮುಂದಿನಂತೆ ಇದೆ. (ಈ ಶಾಸನದ ಕಾಲ : ಕ್ರಿ.ಶ. ೧೬೭೦) : "ಬಿಜಾಪುರದ ಆದಿಲ್‌ಶಾನ ಆಳಿಕೆಯಲ್ಲಿ, ಧಾರವಾಡ ಕೋಟೆಯ ಸರ್ ಹವಾಲದಾರನೂ, ಬಿಜಾಪುರದ ಆದಿಲ್‌ಶಾನ ಸರದಾರ ಮಹ್ಮದಖಾನ ಉಲ್ಲಾ ಎಂಬುವನೂ ಧಾರವಾಡದ ಮುಸಲ್ಮಾನರರು ನಿರ್ಭಯದಿಂದ ನಮಾಜ ಮಾಡಲೆಂದು ಈ ಗುಡಿಯನ್ನು ಒಂದು ಮಸೀದಿಯನ್ನಾಗಿ ರೂಪಾಂತರಿಸಿದನು." ಮುಂದೆ ಧಾರವಾಡದ ಕೋಟೆಯನ್ನು ೧೭೫೩ರಲ್ಲಿ ಗೆದ್ದ ಮರಾಠರು ಈ ಮಸೀದಿಯ ಸ್ವರೂಪವನ್ನು ಬದಲಿಸಿ ಮತ್ತೆ ಗುಡಿಯನ್ನು ಮೂಲ ಸ್ವರೂಪಕ್ಕೆ ತಂದರು. ಮತ್ತು ಈಗಿನ ಮೈಲಾರಲಿಂಗನ ಅಶ್ವಾರೂಢ ಮೂರ್ತಿಯನ್ನು ಸ್ಥಾಪಿಸಿದರು. ಬಹುಶಃ ಮೂರನೆಯ ಬಾಲಾಜಿ ಬಾಜಿರಾವನ ಕಾಲದಲ್ಲಿ (೧೭೪೦-೧೭೬೦) ಇದು ಮೈಲಾರಲಿಂಗನ ಗುಡಿಯಾಗಿ ಪರಿವರ್ತನೆಗೊಂಡಿರಬಹುದು.

ಹೀಗೆ ಮೂರು ಕಾಲಘಟ್ಟಗಳಲ್ಲಿ ಈ ಗುಡಿಯು ಪರಿವರ್ತನೆ ಹೊಂದಿದೆ. ಈಗಿನ ಮೈಲಾರ ಕ್ಷೇತ್ರಗಳಲ್ಲಿ

ಒಂದು ಪ್ರಮುಖ ಹಾಗೂ ರಮ್ಯ ತಾಣವಾಗಿದೆ. ಧಾರವಾಡದ ಕೊಮಟಿಗರು ಈ ದೇವರಿಗೆ ಹೆಚ್ಚಾಗಿ ನಡೆದುಕೊಳ್ಳುತ್ತಾರೆ. ವಾರ್ಷಿಕ ಜಾತ್ರೆ ಸಾಮಾನ್ಯವಾಗಿ ಫೆಬ್ರುವರಿ ತಿಂಗಳಲ್ಲಿ ಜರುಗುತ್ತದೆ. ಮೈಲಾರ ಸಂಪ್ರದಾಯದ ತ್ರಿಶೂಲ, ಡಮರು, ಮರದ ಪಾತ್ರೆ, ದೊಡ್ಡ ಬಿಲ್ಲು, ಇತ್ಯಾದಿ ಉಪಕರಣಗಳನ್ನು ಇಲ್ಲಿ ನೋಡಬಹುದು. ಗುಡ್ಡದ ತುದಿಯಲ್ಲಿ ಸುಣ್ಣದ ಲೇಪನದಿಂದ ಕೂಡಿದ ನವೀನ ಕಟ್ಟಡ ದೂರದಿಂದಲೆ ನಮ್ಮ ಗಮನ ಸೆಳೆಯುತ್ತದೆ. ಒಳಗೆ ಪ್ರವೇಶಿಸಿದೊಡನೆ ಇದು ಕಲ್ಯಾಣ ಚಾಲುಕ್ಯರ ಗುಡಿಯೆಂದು ಗೋಚರವಾಗುತ್ತದೆ. ಹೀಗೆ ಧಾರವಾಡದ ಸಾಮಾಜಿಕ, ಧಾರ್ಮಿಕ ಜೀವನದಲ್ಲಿ ಹಾಸು ಹೊಕ್ಕಾಗಿರುವುದರಿಂದ ಇದೊಂದು ಸ್ವಾರಸ್ಯಕರ ಹಾಗೂ ಅಧ್ಯಯನಯೋಗ್ಯ ದೇಗುಲವಾಗಿದೆ.

ಡಾ॥ ಚೂಡಾಮಣಿ ನಂದಗೋಪಾಲ್

# ಕರ್ನಾಟಕಶಿಲ್ಪದಲ್ಲಿ ನಾಟ್ಯಶಾಸ್ತ್ರದ ಪ್ರಯೋಗ

ಕರ್ನಾಟಕದ ಉದ್ದಗಲಕ್ಕೂ ದೇವಾಲಯಗಳ ಶಿಲ್ಪಗಳನ್ನು ವೀಕ್ಷಿಸಿದಾಗ ನಮಗೆ ವಿಪುಲ ಸಂಖ್ಯೆಯಲ್ಲಿ ನಾಟ್ಯಶಿಲ್ಪಗಳು ಕಂಡುಬರುತ್ತವೆ. ಈ ಸುಂದರ ಭಂಗಿಗಳು ಕಣ್ಮನಗಳನ್ನು ಸೆಳೆಯುವುದರೊಂದಿಗೆ ದೇವಾಲಯಗಳ ನಿರ್ಮಾಣಕ್ಕೆ ಒಂದು ಹೊಸ ಆಯಾಮವನ್ನೇ ಇತ್ತಿವೆ. ನಾಟ್ಯಶಿಲ್ಪಗಳ ಬಳಕೆ, ದೇವಾಲಯಗಳ ಆಕಾರ, ರಚನೆಗಳಲ್ಲಿ ವೈವಿಧ್ಯತೆಯನ್ನು ತಂದಿವೆ. ಶಿಲ್ಪಶಾಸ್ತ್ರದ ಆಧಾರದೊಂದಿಗೆ ನಾಟ್ಯಶಾಸ್ತ್ರದ ಹಲವು ಸ್ತರಗಳು ಮಿಳಿತವಾಗಿ ಕರ್ನಾಟಕದ ಶಿಲ್ಪಗಳು ತಮ್ಮದೇ ಒಂದು ಸ್ಥಾನವನ್ನು ಪಡೆಯುವಂತೆ ಮಾಡಿವೆ. ಕರ್ನಾಟಕದಲ್ಲಿ ನಾಟ್ಯಶಾಸ್ತ್ರದ ಸಂಪ್ರದಾಯ ಕ್ರಿಸ್ತಶಕದ ಪ್ರಾರಂಭ ದಿಶೆಯಿಂದಲೂ ಬಳಕೆಗೆ ಬಂದಿರಬಹುದೆಂದು ತಿಳಿಯುತ್ತದೆ. ಒಂದೇ ಸ್ಥಳ ಮತ್ತು ರಚನೆಯಲ್ಲಿ ಶಿಲ್ಪ ಮತ್ತು ನಾಟ್ಯ ಈ ಯುಗಳ ಕಲೆಗಳು ಹೊಸ ರೀತಿಯಲ್ಲಿ ವಿಕಸನಗೊಳ್ಳುತ್ತಾ ಬಂದಿರುವುದನ್ನು ನಾವು ಕಂಡುಕೊಳ್ಳಬಹುದು. 'ಒಬ್ಬ ಉತ್ತಮ ಶಿಲ್ಪಿಯಾಗಲು ಅಥವಾ ಚಿತ್ರಕಾರನಾಗಲು ನಾಟ್ಯಶಾಸ್ತ್ರದ ಅರಿವು ಅವಶ್ಯಕ' ಎಂಬ ಮಾತು ನಾವು ಶಿಲ್ಪಗಳನ್ನು ಪರಿಶೀಲಿಸಿದಾಗ ತಿಳಿದು ಬರುತ್ತದೆ. ದೇವಾಲಯವನ್ನು ಕಟ್ಟಲು ಸಹಾಯಕನಾದ ಪೋಷಕ ಮತ್ತು ರೂವಾರಿ ಇಬ್ಬರಿಗೂ ನಾಟ್ಯಶಾಸ್ತ್ರದಲ್ಲಿ ಆಸಕ್ತಿ ಇದ್ದಾಗ, ಅವರ ರಚನೆ ನಾಟ್ಯಕಲೆಗಾಗಿಯೇ ನಿರ್ಮಿತವಾದ ದೇವಾಲಯಗಳೇನೋ ಎನ್ನುವಂತೆ ಭಾಸವಾಗುತ್ತದೆ.

ಭಾರತದ ಇತರ ಪ್ರದೇಶಗಳ ಶಿಲ್ಪಶೈಲಿಗಳ ಬೆಳವಣಿಗೆಯನ್ನು ಅಧ್ಯಯನ ಮಾಡತೊಡಗಿದಾಗ, ಕರ್ನಾಟಕದ ಶಿಲ್ಪಗಳಲ್ಲಿ ಮಾತ್ರ ಇಷ್ಟೊಂದು ವೈವಿಧ್ಯತೆ, ವಿವಿಧ ಹಂತಗಳ ಬೆಳವಣಿಗೆಯನ್ನು ಗಮನಿಸಬಹುದು. ಯಾವುದೇ ವಿಷಯವನ್ನು ನಾಟ್ಯ ಭಂಗಿಗಳ ಮೂಲಕ ನಿವೇದಿಸುವಲ್ಲಿ ಕರ್ನಾಟಕ ಶಿಲ್ಪಿಗಳು ಯಶಸ್ವಿಯಾಗಿದ್ದಾರೆ. ಆದ್ದರಿಂದಲೇ ಕರ್ನಾಟಕ ಶಿಲ್ಪಕ್ಷೇತ್ರದಲ್ಲಿ ನಾಟ್ಯಶಿಲ್ಪಗಳು ಒಂದು ಹೊಸ ಸಂಶೋಧನಾ ರಂಗವನ್ನೇ ಸೃಷ್ಟಿಸಿವೆ ಎಂದರೆ ತಪ್ಪಾಗಲಾರದು.

ಕರ್ನಾಟಕ ಶಿಲ್ಪ, ಸಾಹಿತ್ಯ, ಚಿತ್ರ, ಶಾಸನಗಳ ಅಧ್ಯಯನದಿಂದ ಕಂಡುಬರುವ ವಿಷಯವೆಂದರೆ, ದಕ್ಷಿಣ ಭಾರತದಲ್ಲಿ ಮೊದಲಿಗೆ ಕರ್ನಾಟಕದಲ್ಲಿಯೇ ನೃತ್ಯಕಲೆಯು ಭರತನ ನಾಟ್ಯಶಾಸ್ತ್ರದ ಪದ್ಧತಿಗೆ ಅನುಸಾರವಾಗಿ ಪ್ರಚಲಿತವಿದ್ದು, ಅನಂತರ ಇತರ ಪ್ರದೇಶಗಳಿಗೆ ಪಸರಿಸಿರಬೇಕು. ಭರತನ ಬಗ್ಗೆ, ಅವನ ಸ್ಥಳ, ಕಾಲದ ಬಗ್ಗೆ, ನಾಟ್ಯಶಾಸ್ತ್ರದ ರಚನೆಯ ಬಗ್ಗೆ, ಪ್ರತಿಯ ಬಗ್ಗೆ ಅನೇಕ ವಾದ ವಿವಾದಗಳಿವೆ. ಅವುಗಳನ್ನು ಬದಿಗಿಟ್ಟು ಮೂಲವಿಷಯಕ್ಕೆ ಬರೋಣ. ಭರತನ ನಾಟ್ಯಶಾಸ್ತ್ರ ರಚಿತವಾದ ಕಾಲ ಕ್ರಿ.ಪೂ. ೨ನೇ ಶತಮಾನದಿಂದ ಕ್ರಿ.ಶ. ೨ನೇ ಶತಮಾನದ ಮಧ್ಯದಲ್ಲಿ ಎಂಬುದು ವಿದ್ವಾಂಸರ ಮತ. ಭಾರತದಾದ್ಯಂತವಿರುವ ಶಿಲ್ಪ, ಸಾಹಿತ್ಯಶೈಲಿಗಳನ್ನು ಪರಿಶೀಲಿಸಿದಾಗ ಈ ಮತವು ಸರಿ ಎನಿಸುತ್ತದೆ.

ಕರ್ನಾಟಕದಲ್ಲಿ ಕದಂಬರ ಕಾಲದಲ್ಲಿ ಶಿಲ್ಪಗಳ ಸೃಷ್ಟಿ ವಿಕಸನಗೊಂಡಿಲ್ಲದ್ದರಿಂದ ನಮಗೆ ಆ ಕಾಲದ ನಾಟ್ಯ ಶಿಲ್ಪಗಳು ದೊರೆಯುವುದಿಲ್ಲ. ಬಾದಾಮಿ ಚಾಲುಕ್ಯರ ಕಾಲದ ಹೆಚ್ಚಿನ ಸಾಹಿತ್ಯ ಕೃತಿಗಳು ದುರ್ಲಭ

ವಾಗಿರುವುದರಿಂದ ಶಿಲ್ಪಗಳ ಆ ಕಾಲದ ಲಲಿತಕಲೆಗಳ ಮೇಲೆ ಮತ್ತು ಸಾಮಾಜಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ.

ಭರತನ ಅಭಿಮತದಂತೆ, ಯಾವುದೇ ಒಂದು ವಿಷಯ ವನ್ನು ಆಂಗಿಕ, ವಾಚಿಕ, ಆಹಾರ್ಯ ಮತ್ತು ಸಾತ್ವಿಕಾದಿ ಚತುರ್ವಿಧ ಅಭಿನಯಗಳ ಮೂಲಕ ಪರಿಣಾಮಕಾರಿ ಯಾಗಿ ಪ್ರತಿಬಿಂಬಿಸುವುದೇ ನಾಟ್ಯವೆನಿಸುತ್ತದೆ. ಆಂಗಿಕ ಎಂದರೆ ಅಂಗ, ಪ್ರತ್ಯಾಂಗ ಮತ್ತು ಉಪಾಂಗಗಳ ಚಲನ ವಲನಗಳು; ವಾಚಿಕವೆಂದರೆ ಒಂದು ಪ್ರಸಂಗವನ್ನು ಆಧರಿಸಿದ ಸಾಹಿತ್ಯ ಅಥವಾ ಸಂಗೀತ ರಚನೆ; ಆಹಾರ್ಯ ವೆಂದರೆ ವೇಷಭೂಷಣಗಳು, ಅಲಂಕರಣಗಳು, ಕೇಶ ವಿನ್ಯಾಸ, ರಂಗಮಂಟಪಸಂಯೋಜನೆ ಇತ್ಯಾದಿ ಹಾಗೂ ಸಾತ್ವಿಕ ಅಂದರೆ ವಿಷಯವನ್ನು ನಿವೇದಿಸುವಾಗ ಹೊರ ಹೊಮ್ಮುವ ಭಾವ, ವಿಭಾವ, ಅನುಭಾವಗಳು ಇತ್ಯಾದಿ. ಈ ಚತುರ್ವಿಧ ಅಭಿನಯಗಳಲ್ಲಿ ಯಾವುದರ ಕೊರತೆಯಾದರೂ ನಾಟ್ಯ ಪೂರ್ಣವಾಗುವುದಿಲ್ಲ. ಎಲ್ಲ ಅಭಿನಯಗಳ ಸಂಪೂರ್ಣ ಸಮನ್ವಯದ ಪ್ರಯೋಗವನ್ನು ನಾವು ಕರ್ನಾಟಕ ಶಿಲ್ಪಗಳಲ್ಲಿ ಅತ್ಯಂತ ಸೂಕ್ತ ರೀತಿಯಲ್ಲಿ ವಿನಿಯೋಗಿಸಿರುವುದನ್ನು ಕಾಣುತ್ತೇವೆ.

ಪ್ರತಿಯೊಂದು ನಾಟ್ಯಶಿಲ್ಪವೂ ಯಾವುದಾದರೂ ಪ್ರಸಂಗವನ್ನು ಆಧರಿಸಿ ರಚಿತವಾಗಿದ್ದು, ಆಯಾ ಕಾಲದಲ್ಲಿ ಪ್ರಚಲಿತವಾಗಿದ್ದ ಸಂಗೀತವಾದ್ಯಗಳ ರಚನೆ, ನುಡಿಸುವ ಪದ್ಧತಿಗಳ ಮೇಲೆ ಬೆಳಕು ಚೆಲ್ಲುತ್ತವೆ. ಆಭರಣಗಳು, ವೇಷಭೂಷಣಗಳು, ಕೇಶವಿನ್ಯಾಸ ಎಲ್ಲವೂ ಶಿಲ್ಪ ರಚನೆಗೆ ಮೆರಗನ್ನು ಕೊಡುವುದರ ಜೊತೆಗೆ ವೈವಿಧ್ಯತೆಯನ್ನುಂಟು ಮಾಡುತ್ತವೆ. ಹಲವು ಶಿಲ್ಪಗಳಲ್ಲಿ ಮುಖಭಾವ ಮತ್ತು ನಿಂತ ಭಂಗಿಯಲ್ಲಿ ವಿಶೇಷವಾದ ಭಾವವು ವ್ಯಕ್ತಗೊಳ್ಳು ತ್ತದೆ. ಹೀಗೆ ಪ್ರತಿಯೊಂದು ನಾಟ್ಯಶಿಲ್ಪವನ್ನು ಈ ನಾಲ್ಕು ಅಭಿನಯಗಳ ಆಧಾರದ ಮೇಲೆ ಒರೆಹಚ್ಚಿ ನೋಡುತ್ತ ಹೋಗುವುದರಿಂದ ಕಾಲಕಾಲಕ್ಕೆ ಉಂಟಾಗು ತ್ತಿರುವ ಬೆಳವಣಿಗೆಯನ್ನು ಕಂಡುಕೊಳ್ಳಲು ಸಾಧ್ಯವಾಗು ತ್ತದೆ.

ಭರತನ ನಾಟ್ಯಶಾಸ್ತ್ರದಲ್ಲಿ ವಿವರಿಸಲ್ಪಟ್ಟಿರುವ ಅಂಗ, ಪ್ರತ್ಯಾಂಗ, ಉಪಾಂಗಗಳ ಚಲನೆಗಳು, ಕರ್ನಾಟಕ ಶಿಲ್ಪಗಳಲ್ಲಿ ಸ್ಫುಟವಾಗಿ ಮೂಡಿವೆ. ಶಿರಸ್ಸು, ನೇತ್ರ, ಕುತ್ತಿಗೆ, ಕೈ, ಕಾಟಿ, ಕಾಲ, ಪಾದಗಳ ಚಲನೆಗಳು ನಾಟ್ಯ ಶಾಸ್ತ್ರ ಪದ್ಧತಿಗೆ ಅನುಸಾರವಾಗಿ ಪ್ರತಿಬಿಂಬಿಸಲ್ಪಟ್ಟಿವೆ. ಭರತನ ೧೦೮ ಕರಣಗಳಲ್ಲಿ ಹಲವು ಕರಣಗಳು ಹಸ್ತಗಳ ವಿನಿಯೋಗ, ಪಾದಚಾರಿಗಳು ಶಾಸ್ತ್ರೀಯ ರೀತಿಯಲ್ಲಿ ಪ್ರತಿಬಿಂಬವಾಗಿವೆ. ಬಾದಾಮಿ ಚಾಲುಕ್ಯರ, ರಾಷ್ಟ್ರ ಕೂಟರ ಕಾಲದ ನಾಟ್ಯಶಿಲ್ಪಗಳು ಭರತನ ನಾಟ್ಯ ಸಂಪ್ರ ದಾಯಕ್ಕೆ ಅಂಟಿಕೊಂಡು ವಿಸ್ತೃತಗೊಂಡಿದ್ದರೆ, ಕಲ್ಯಾಣ ಚಾಲುಕ್ಯರ ಮತ್ತು ಹೊಯ್ಸಳರ ಕಾಲದಲ್ಲಿ ಭಂಗಿಗಳ ಚಲನೆಗಳಲ್ಲಿ ಹೆಚ್ಚು ಹೆಚ್ಚಾಗಿ ಲಾಲಿತ್ಯ ಮತ್ತು ಲಾಸ್ಯ ಹಾಸುಹೊಕ್ಕಾಗಿ ಮೂಡಿದಂತೆ ಕಂಡುಬರುತ್ತದೆ. ಇದಕ್ಕೆ ಕಾರಣ ಕನ್ನಡ ಸಾಹಿತ್ಯದ ಬೆಳವಣಿಗೆ, ಸಂಗೀತ ರಚನೆ ಯಲ್ಲಿ ಪರಿವರ್ತನೆ. ಇವುಗಳ ಆಧಾರದ ಮೇಲೆ ರಚಿತ ವಾದ ಕೃತಿಗಳನ್ನು ದೇವದಾಸಿಯರು, ರಾಜನರ್ತಕಿಯರು ಇನ್ನೂ ಹೆಚ್ಚಿನ ಹಾವಭಾವಗಳೊಂದಿಗೆ ಮಧುರ ರೂಪ ದಲ್ಲಿ ನರ್ತಿಸಲಾರಂಭಿಸಿದರು. ಇದರ ಪ್ರತಿಫಲವಾಗಿ ಸಂಗೀತವಾದ್ಯಗಳಲ್ಲೂ ಅವನದ್ಧ (ತಾಳವಾದ್ಯಗಳು) ವಾದ್ಯಗಳ ಜೊತೆಗೆ ಹೆಚ್ಚು ಹೆಚ್ಚು ತಂತಿ ಮತ್ತು ಸುಶಿರ ವಾದ್ಯಗಳ ಬಳಕೆ ಹೆಚ್ಚಾಗಿ ಆಗಲು ತೊಡಗಿತು.

ರಾಜಮನೆತನದ ಸ್ತ್ರೀಯರು ನೃತ್ಯವನ್ನು ಒಂದು ಕಲೆಯನ್ನಾಗಿ ಸ್ವೀಕರಿಸಿ ಕಲಿಯಲು ಪ್ರಾರಂಭ ಮಾಡಿ ದಾಗ ಅದು ಶಾಸ್ತ್ರೀಯ ಸ್ವರೂಪದೊಂದಿಗೆ ರಾಜಾಶ್ರಯ ದೊರಕಿ, ಉತ್ತಮ ರಚನೆಗಳೊಂದಿಗೆ ವಿಕಸನಗೊಳ್ಳುತ್ತಾ ಬಂದಿತು. ನೃತ್ಯಕಲೆ ಒಂದು ಪೂಜಾವಿಧಿ. ದೇವಾಲಯದ ಸುತ್ತಲೂ ಆಗ ಪ್ರಚಲಿತವಿದ್ದ ನೃತ್ಯ ಸಂಪ್ರದಾಯಗಳನ್ನು ಶಿಲ್ಪಗಳ ಮುಖಾಂತರ ಚಿತ್ರಿಸುವ ಅಭ್ಯಾಸ ಪರಿಪಾಠ ವಾಯಿತು. ಅದೇ ಸಮಯದಲ್ಲಿ ಭರತನ ನಾಟ್ಯಶಾಸ್ತ್ರ ವನ್ನನುಸರಿಸಿ ಸೋಮೇಶ್ವರನ ಮಾನಸೋಲ್ಲಾಸ, ಶಾರ್ಙ್ಗದೇವನ ಸಂಗೀತರತ್ನಾಕರ ಗ್ರಂಥಗಳ ರಚನೆ ಯಾಯಿತು. ಶಿವಪ್ಪನಾಯಕನ ಶಿವತತ್ವರತ್ನಾಕರ ಅಭಿನವ ಪಂಪನಿಂದ ಹಿಡಿದು ರತ್ನಾಕರವರ್ಣಿಯವರೆಗೂ ಪ್ರತಿ ಯೊಬ್ಬ ಕವಿಯೂ ತನ್ನ ಕಾವ್ಯರಚನೆಯಲ್ಲಿ ನರ್ತನಭಾಗ ವನ್ನು ವರ್ಣಿಸುವಾಗ ಭರತನ ನಾಟ್ಯಶಾಸ್ತ್ರದ ಎಲ್ಲ ಪದಗಳನ್ನೂ ಬಳಸುವುದನ್ನು ಕಾಣುತ್ತೇವೆ.

ಹೀಗೆ ಭರತನ ನಾಟ್ಯಶಾಸ್ತ್ರದ ಪ್ರಯೋಗವನ್ನು ಬಾದಾಮಿಯ ಚಾಲುಕ್ಯರ ಶಿಲ್ಪಗಳಿಂದ ಹಿಡಿದು ವಿಜಯ ನಗರ ಕಾಲದ ಶಿಲ್ಪಗಳವರೆಗೆ ವಿವಿಧ ಹಂತದಲ್ಲಿ, ರೂಪ ಗಳಲ್ಲಿ ಕಾಣಬಹುದು. ಕಾವ್ಯಗಳಲ್ಲಿ ನಾಟ್ಯಪ್ರಸಂಗದ ವರ್ಣನೆಗಳು ಈ ಒಂದು ವಿಷಯವನ್ನು ತಿಳಿಯುವಲ್ಲಿ ಒತ್ತುಗೊಡುತ್ತವೆ. ಶಿಲ್ಪ, ಕಾವ್ಯ, ಆಧಾರ ಗ್ರಂಥಗಳ ತುಲನಾತ್ಮಕ ಅಭ್ಯಾಸವು ಕರ್ನಾಟಕದ ನೃತ್ಯ ಸಂಪ್ರ ದಾಯಕ್ಕೆ ಒಂದು ನಿಶ್ಚಿತರೂಪ ಕೊಡಲು ಆಧಾರಸ್ತಂಭ ವಾಗಿದೆ.

ಗಾಃ

ಡಾ|| ನಾ. ಶಿ. ರಂಗರಾಜು

# ಅರಳಗುಪ್ಪೆಯ ಚನ್ನಕೇಶವ ದೇವಾಲಯ

ಅರಳಗುಪ್ಪೆಯು ತಿಪಟೂರು ತಾಲ್ಲೂಕು ಕಿಬ್ಬನಹಳ್ಳಿ ಹೋಬಳಿಯಲ್ಲಿರುವ ಸಣ್ಣ ಗ್ರಾಮ. ಇದು ಬೆಂಗಳೂರು–ಹುಬ್ಬಳ್ಳಿ ರೈಲುಮಾರ್ಗದಲ್ಲಿದೆ. ಬಾಣಸಂದ್ರದಿಂದ ೫.೬ ಕಿ.ಮೀ. ಹಾಗೂ ತಿಪಟೂರಿನಿಂದ ೧೬ ಕಿ.ಮೀ. ದೂರದಲ್ಲಿದೆ. ಕೆಲವು ಶಾಸನಗಳಲ್ಲಿ ಈ ಗ್ರಾಮವನ್ನು ಅಲರಿಗುಪ್ಪೆ ಎಂದೂ ಕರೆಯಲಾಗಿದೆ. ಕೇಶವದೇವರಿಗೆ ಸಮರ್ಪಿತವಾದ ಹೊಯ್ಸಳ ದೇವಾಲಯ ಗ್ರಾಮದ ಮಧ್ಯಭಾಗದಲ್ಲಿ ಎತ್ತರವಾದ ಪ್ರದೇಶದಲ್ಲಿದೆ. ಅದು ಗೋಪುರವಿರುವ ಸುಂದರವಾದ ಏಕಕೂಟ ದೇವಾಲಯವಾಗಿದೆ. ಹಳೇಬೀಡಿನ ಕೇದಾರೇಶ್ವರ ದೇವಾಲಯ ಹಾಗೂ ಹೊಸಹೊಳಲಿನ ಲಕ್ಷ್ಮೀನರಸಿಂಹ ದೇವಾಲಯದ ಅಂಶಗಳನ್ನೊಳಗೊಂಡಿರುವಂತೆ ಕಂಡುಬರುತ್ತದೆ.

ದೇವಾಲಯ ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿದೆ. ಗರ್ಭಗೃಹ, ಸುಖನಾಸಿ ಹಾಗೂ ನವರಂಗಗಳಿಂದ ಕೂಡಿದ್ದು, ಮೂರೂವರೆ ಅಡಿ ಎತ್ತರದ ಜಗತಿಯ ಮೇಲೆ ನಿರ್ಮಿತವಾಗಿದೆ. ಗರ್ಭಗೃಹದ ಹೊರಗೋಡೆ ಹಾಗೂ ವಿಮಾನ–ಇವು ಹದಿನಾರು ಮೂಲೆಗಳಿರುವ ನಕ್ಷತ್ರಾಕಾರವಾಗಿವೆ. ಭಿತ್ತಿಶಿಲ್ಪಗಳ ಆಧಾರಪೀಠದಲ್ಲಿ ಶಿಲ್ಪಿಯ ಹೆಸರಾದ 'ಹೊನೊಜ' ಎಂದು ಇರುವ ಕಾರಣ ಅದೊಂದು ಆಸಕ್ತಿ ಮೂಡಿಸುವ ಹಾಗೂ ಪ್ರಮುಖ ದೇವಾಲಯವಾಗಿದೆ. ಈ ಹೆಸರು ಬೇರೆಲ್ಲಿಯೂ ಕಂಡುಬರುವುದಿಲ್ಲ. ಕೆಲವು ಶಿಲ್ಪಗಳಲ್ಲಿ 'ಹೊ' ಮತ್ತು 'ಜ' ಎಂಬ ಅಕ್ಷರ ಮಾತ್ರ ಕಂಡುಬರುತ್ತದೆ.

ದಕ್ಷಿಣಭಾಗದಲ್ಲಿ ಉಗ್ರನರಸಿಂಹ ದೇವಾಲಯ ಸೇರ್ಪಡೆಯಾಗಿದೆ. ಇದು ಸ್ಪಷ್ಟವಾಗಿಯೇ ವಿಜಯನಗರ ರಚನೆಯಾಗಿದೆ. ಈ ಸೇರ್ಪಡೆಯಿಂದ ಚನ್ನಕೇಶವ ದೇವಾಲಯದ ಭಿತ್ತಿಶಿಲ್ಪಗಳ ಮೇಲೆ ಪರಿಣಾಮವುಂಟಾಗಿದೆ. ಇದರಿಂದ ಮುಖ್ಯ ದೇವಾಲಯದ ಸೌಂದರ್ಯಕ್ಕೆ ಕುಂದುಂಟಾಗಿದೆ.

**ಗರ್ಭಗೃಹ :** ಗರ್ಭಗೃಹದಲ್ಲಿ ಚೆನ್ನಕೇಶವನ ಸುಂದರವಾದ ಮೂರ್ತಿಯಿದ್ದು ಹೊಯ್ಸಳ ವಿಶಿಷ್ಟ ಲಕ್ಷಣಗಳೆಲ್ಲವೂ ಇದರಲ್ಲಿ ಸುಸ್ಪಷ್ಟವಾಗಿದೆ. ಹೊಯ್ಸಳ ಕಲೆಯ ಉತ್ತಮ ಮಾದರಿ ಅದಾಗಿದೆ. ಅದು ಬೇಲೂರಿನ ಚನ್ನಕೇಶವನ ಸುಂದರಮೂರ್ತಿಯನ್ನು ನೆನಪಿಗೆ ತರುತ್ತದೆ. ಶಿಲ್ಪವು ಆಭರಣಗಳು, ಅಲಂಕರಣಗಳು, ವಸ್ತ್ರವಿನ್ಯಾಸ ಮೊದಲಾದವುಗಳಿಂದ ಕೂಡಿದೆ. ಸುರುಳಿಯಲಂಕಾರ, ಲತಾಬಳ್ಳಿಗಳ ಸುರಳಿಗಳು, ಕೀರ್ತಿಮುಖ ಮೊದಲಾದವುಗಳ ಸಮೇತ ಕೆತ್ತಲಾಗಿರುವ ಪ್ರಭಾವಳಿಯು ವಿಶೇಷವಾಗಿ ಆಕರ್ಷಕವಾಗಿದೆ. ದೇವರ ಅಕ್ಕಪಕ್ಕಗಳಲ್ಲಿ ಇಬ್ಬರು ಅನುಚರೆಯರಿದ್ದಾರೆ. ವಿಗ್ರಹವು ಗರುಡಪೀಠದ ಮೇಲೆ ಸಂಭಂಗದಲ್ಲಿ ನಿಂತಿದೆ. ಗರ್ಭಗೃಹ ಬೆಳಕುಮಾಳಿಗೆ(lantern roof)ಯಿಂದ ಕೂಡಿದೆ. ಇದರ ಅತ್ಯಂತ ತಳಭಾಗದ ಅಂತಸ್ತಿನಲ್ಲಿ ಅಷ್ಟದಿಕ್ಪಾಲಕರ ಸಂಕೇತವಿದೆ. ಮೇಲ್ಛಾವಣಿಯ ಮಧ್ಯದ ಫಲಕದಲ್ಲಿ ಅಂಕಣಫಲಕದಲ್ಲಿ ಕೆತ್ತಲಾಗಿರುವ ಒಂಬತ್ತು ಪದ್ಮಗಳಿವೆ. ಗರ್ಭಗೃಹದ ದ್ವಾರದಲ್ಲಿ ಸಹ ಉತ್ತಮ ಕೆತ್ತನೆ ಕೆಲಸ ಕಂಡುಬರುತ್ತದೆ. ಅದರಲ್ಲಿ ಇಬ್ಬರು ವೈಷ್ಣವ ದ್ವಾರಪಾಲಕರು, ಚಾಚುಭಾಗದ ಮೇಲೆ ಕಿರೀಟಮುಖಗಳು ಮತ್ತು ಲತಾಸುರಳಿಗಳ ಪಕ್ಕ

ಪ್ರಾತಿನಿಧ್ಯವಿದೆ. ಚಾವಣಿ ಸಹ ಬೆಳಕುಮಾಳಿಗೆ ರೀತಿಯದೇ ಆಗಿದೆ. ಮಧ್ಯದ ಪದ್ಮದ ಸುತ್ತ ವಿವಿಧ ಅಂತಸ್ತುಗಳಲ್ಲಿ ನಿಧಿಗಳು, ಕಿರೀಟಮುಖಿಗಳು, ಮಣಿಮಾಲೆಗಳು, ಗುಲಾಬಿ ಅಲಂಕಾರದ ತೋರಣಗಳು ಮೊದಲಾದವು ಇವೆ.

**ಸುಖನಾಸಿ :** ಸುಖನಾಸಿಯ ದ್ವಾರವು ಗರ್ಭಗೃಹದ ದ್ವಾರದಂತೆಯೇ ಇರುವುದಾದರೂ ಸ್ವಲ್ಪ ವ್ಯತ್ಯಾಸವಿದೆ. ಬಾಗಿಲ ಪಕ್ಕನಿಲವಿನಲ್ಲಿ ಜಾಲಂಧ್ರಗಳಿವೆ. ಲಲಾಟಬಿಂಬದಲ್ಲಿ ಸುಖಾಸನದಲ್ಲಿ ಆದಿಶೇಷನ ಮೇಲೆ ಆಸೀನನಾಗಿರುವ ವಿಷ್ಣುವಿದ್ದು, ಚಾಚುಭಾಗ (ಮೇಲ್ಕಟ್ಟು)ದಲ್ಲಿ ಸಣ್ಣ ಗೋಪುರಗಳಿವೆ. ಎರಡು ಪಾರ್ಶ್ವಗಳಲ್ಲಿ ವೈಷ್ಣವ ದ್ವಾರಪಾಲಕರಿಬ್ಬರಿದ್ದಾರೆ.

**ನವರಂಗ :** ನವರಂಗವು ೭ ಮೀ.×೭ ಮೀ.ಗಳ ಆಯತಾಕಾರದ ಸಭಾಂಗಣ ಅಂಗಳವಾಗಿದೆ. ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಪೂರ್ವಕ್ಕೆ ಚಾಚಿಕೊಂಡಿದೆ. ಅದಕ್ಕೆ ಆಧಾರವಾಗಿ ಮತ್ತೆ ನಾಲ್ಕು ಸ್ತಂಭಗಳಿದ್ದು, ಕಕ್ಷಾಸನ ಹಾಗೂ ರಂಧ್ರಮಯ ಜವನಿಕೆ ಉಂಟಾಗಿದೆ. ನವರಂಗದ ಮಧ್ಯದ ನಾಲ್ಕು ಸ್ತಂಭಗಳು ಉರುಳೆಯಾಕಾರದವಾಗಿವೆ ಹಾಗೂ ಸಣ್ಣ ಅಲಂಕರಣಗಳಿಂದ ಕೂಡಿ ಚರಕಿಯಂತ್ರಗಳ ಸಹಾಯದಿಂದ ಮಾಡಲ್ಪಟ್ಟಿವೆ. ಅವುಗಳಲ್ಲಿ ತೋರಣಾಲಂಕಾರಗಳು,ಕೀರ್ತಿಮುಖಿಗಳು ಮತ್ತು ಲತಾಬಳ್ಳಿಗಳು ಮೊದಲಾದವು ಇವೆ. ಸುಖನಾಸಿಯ ದ್ವಾರದ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಮೇಲ್ಭಾಗದಲ್ಲಿ ಸಣ್ಣ ಗೋಪುರದ ಮೇಲ್ಕಟ್ಟುಗಳಿಂದೊಡಗೂಡಿದ ವಾಸ್ತುಶಿಲ್ಪದ ಮಾಡಗಳಿವೆ. ದಕ್ಷಿಣ ಪಾರ್ಶ್ವದ ಗೂಡಿನಲ್ಲಿ ಗಣೇಶನ ಹಾಗೂ ಉತ್ತರ ಪಾರ್ಶ್ವದ ಗೂಡಿನಲ್ಲಿ ಮಹಿಷಾಸುರಮರ್ದಿನಿ ವಿಗ್ರಹಗಳಿವೆ. ಒಟ್ಟು ಹತ್ತು ಭುವನೇಶ್ವರಿಗಳಿವೆ. ಎಲ್ಲವೂ ಭಿನ್ನ ಭಿನ್ನ ರೀತಿಯಲ್ಲಿ ಕೆತ್ತಿದುವಾಗಿವೆ. ಮಧ್ಯಭಾಗದಲ್ಲಿರುವುದು ಅತ್ಯಂತ ದೊಡ್ಡದಾಗಿದೆ ಹಾಗೂ ಅತ್ಯಂತ ಸೂಕ್ಷ್ಮವಾಗಿರುವುದಾಗಿದೆ. ಇದರ ಅತ್ಯಂತ ಕೆಳಗಣ ಅಲಂಕಾರಪಟ್ಟಿಯಲ್ಲಿ ಅಷ್ಟದಿಕ್ಪಾಲಕರನ್ನು ಅವರ ವಾಹನಗಳ ಸಮೇತ ಚಿತ್ರಿಸಲಾಗಿದ್ದು, ಇದರ ಮೇಲೆ ನಿಧಿಗಳ ಅಲಂಕಾರಪಟ್ಟಿಯಿದ್ದು ಮಧ್ಯೆಮಧ್ಯೆ ಗೋಡೆಗಂಬಗಳಿವೆ. ಮಧ್ಯದ ನಿಲವುಗಳಿವೆ. ಲಲಾಟಬಿಂಬದಲ್ಲಿ ಲಕ್ಷ್ಮೀನಾರಾಯಣನ ಭುವನೇಶ್ವರಿ (dome) ಶಿಲೆಯಲ್ಲಿರುವ ಮರದ ಭುವನೇಶ್ವರಿಯ ಯಥಾಪ್ರತಿಯಾಗಿದೆ.

**ಮಹಿಷಾಸುರಮರ್ದಿನಿ ವಿಗ್ರಹ :** ಇದು ತುಂಬ ಸುಂದರವಾಗಿ ಕೆತ್ತಲಾಗಿರುವ ವಿಗ್ರಹ. ಅಷ್ಟಭುಜಗಳಿವೆ. ಅಲಂಕೃತವಾಗಿದೆ. ಜಯಘಂಟೆ, ಬಾಣ, ಗುರಾಣಿ ಮೊದಲಾದ ಚಿಹ್ನೆಗಳು ವಾಮಹಸ್ತಗಳಲ್ಲಿವೆ. ಬಾಣ, ಚಕ್ರ, ಖಡ್ಗ ಮತ್ತು ತ್ರಿಶೂಲ ಬಲಹಸ್ತಗಳಲ್ಲಿವೆ. ರಾಕ್ಷಸನನ್ನು ಸಂಹರಿಸುತ್ತಿರುವಂತೆ ಕೆತ್ತಲಾಗಿದೆ.

ಗಣೇಶನ ವಿಗ್ರಹವನ್ನೂ ಇದೇ ಶೈಲಿ(ರೀತಿ)ಯಲ್ಲಿ ಕೆತ್ತಲಾಗಿದೆ. ಸುಮಾರು ೫ ಅಡಿ ಎತ್ತರವಿರುವ ಚೆನ್ನಕೇಶವನ ಭಗ್ನವಾದ ವಿಗ್ರಹವೊಂದನ್ನು ನವರಂಗದಲ್ಲಿರಿಸಲಾಗಿದ್ದು, ಇದು ಹೊಯ್ಸಳ ಶಿಲ್ಪದ ಸಕಲ ಲಕ್ಷಣಗಳನ್ನೂ ಪ್ರದರ್ಶಿಸುತ್ತಿದೆ.

ನವರಂಗದ ಪೂರ್ವಭಾಗದಲ್ಲಿ ಬಾಹುವಿನಂಥ ಪ್ರಕ್ಷೇಪಣ(ಚಾಚಿನಲ್ಲಿ) ನಾಲ್ಕು ಸ್ತಂಭಗಳಿವೆ. ಇವುಗಳ ಪೈಕಿ ಎರಡು ಹದಿನಾರು ಪಾರ್ಶ್ವಗಳನ್ನುಳ್ಳದ್ದಾಗಿದ್ದು, ಅರಗೋಳವಿಯಾಕಾರದ(fluted)ದ್ದಾಗಿದೆ ಮತ್ತು ಸೂಕ್ಷ್ಮವಿನ್ಯಾಸದ್ದಾಗಿದೆ ಮತ್ತು ಉಳಿಗೆಲಸ ಮಾಡಿದುದಾಗಿದೆ. ಉಳಿದವೆರಡು ತುತ್ತ ತುದಿಯಲ್ಲಿವೆ ಹಾಗೂ ಮಧ್ಯಭಾಗದಲ್ಲಿರುವ ನಾಲ್ಕು ಸ್ತಂಭಗಳಂತೆಯೇ ಇವೆ.

ದೇವಾಲಯವು ಸುಮಾರು ಮೂರೂವರೆ ಅಡಿ ಎತ್ತರದ ಜಗತಿಯ ಮೇಲೆ ನಿರ್ಮಿತವಾಗಿದೆ. ದೇವಾಲಯ ಅಲಂಕಾರಪಟ್ಟಿಗಳಿಂದ ಕೂಡಿದ ಮೇಲುಪಾಯದಿಂದ ಕೂಡಿದೆ. ಅವು ಕೆಳಗಿನಿಂದ ಗಜಾಲಂಕಾರಪಟ್ಟಿ, ಅಶ್ವದಳದವರು (ಕುದುರೆಸವಾರರು), ಲತಾಬಳ್ಳಿಗಳು, ರಾಮಾಯಣ, ಭಾಗವತದ ಕಥೆಗಳು (ಮುಂಭಾಗದಲ್ಲಿ ಮಾತ್ರ), ಸಣ್ಣಗೋಪುರದ ಮಾಡ(ಗೂಡು)ಗಳು,ದೇವಾಲಯದ ಇತರ ಭಾಗಗಳಲ್ಲಿ ಯಾಲಗಳು ಮತ್ತು ಹಂಸಗಳಿಂದ ಕೂಡಿವೆ.ಈ ಅಲಂಕಾರ ಪಟ್ಟಿಗಳ ಮೇಲೆ ದೈವ, ಅರೆ-ದೈವ ಹಾಗೂ ಮಾನವಾಕೃತಿಗಳ ಶಿಲ್ಪಗಳು ಇವೆ,

ಗೋಡೆಯ ಮೇಲಿರುವ ಶಿಲ್ಪಗಳು-ಆಗ್ನೇಯ ಪಾರ್ಶ್ವದಿಂದ :

೧. ನಿಂತಿರುವ ಭಂಗಿಯಲ್ಲಿ ಲಕ್ಷ್ಮಿ

೨. ಆದಿಶೇಷನ ಮೇಲೆ ಕುಳಿತಿರುವ (ಆಸೀನನಾಗಿರುವ) ವಿಷ್ಣು

೩. ನಾಟ್ಯಗಣೇಶ

೪. ಸ್ತ್ರೀ-ಪಾದದಿಂದ ಮುಳ್ಳು ತೆಗೆಯುತ್ತಿರುವ ಅನುಚರಳೊಡನೆ

೫. ಅನುಚರೆ

೬. ಆರು ಕೈಗಳ ನಾಟ್ಯಸರಸ್ವತಿ-ಪದ್ಮ, ಅಂಕುಶ, ಪುಸ್ತಕ, ಅಕ್ಷಮಾಲೆಗಳನ್ನು ಹಿಡಿದಿರುವುದು ; ವೀಣಾವಾದನ(ಮುರಿದಿದೆ)

೭. ಭೂದೇವಿ

೮. ನಾಲ್ಕು ಕೈಗಳವಿಷ್ಣು(ಚತುರ್ಭುಜ ವಿಷ್ಣು). ಮೇಲುಭಾಗ ಬಲಗೈಯಲ್ಲಿ ಚಕ್ರ, ಮೇಲುಭಾಗ ಎಡಗೈಯಲ್ಲಿ ಶಂಖ, ಕೆಳಭಾಗ ಎಡಗೈಯಲ್ಲಿ ಗದೆ, ಕೆಳಭಾಗ ಬಲಗೈಯಲ್ಲಿ ಅಕ್ಷಮಾಲೆ, ಕೆಳಭಾಗದಲ್ಲಿ ಶಿಲ್ಪಿಯ ಹೆಸರು 'ಹೊನೊಜ' ಎಂಬುದನ್ನು ಕನ್ನಡದಲ್ಲಿ ಕೆತ್ತಲಾಗಿದೆ

೯. ಶ್ರೀದೇವಿ—ಆಧಾರಪೀಠದಲ್ಲಿ ಶಿಲ್ಪಿಯ ಆದ್ಯಕ್ಷರ 'ಹೊ' ಎಂದಿದೆ

೧೦. ಷಟ್ಭುಜ ದೇವತೆ-ಬಲಗೈಗಳಲ್ಲಿ ಚಕ್ರ, ಪದ್ಮ, ಅಂಕುಶ, ಎಡಗೈಗಳಲ್ಲಿ ಶಂಖ, ಪಾಶ, ಪಾತ್ರ ಆಧಾರಪೀಠದಲ್ಲಿ ಶಿಲ್ಪಿಯ ಆದ್ಯಕ್ಷರ 'ಹೊ' ಎಂದಿದೆ

೧೧. ತ್ರಿಭಂಗ ಶೈಲಿಯಲ್ಲಿ ವಿಷ್ಣು-ಚತುರ್ಭುಜ, ಮೇಲುಭಾಗ ಬಲಗೈಯಲ್ಲಿ ಶಂಖ, ಮೇಲುಭಾಗ ಎಡಗೈಯಲ್ಲಿ ಚಕ್ರ, ಕೆಳಭಾಗದ ಎಡಗೈ ಹಾಗೆಯೇ ಇದೆ. ಕೆಳಭಾಗ ಬಲಗೈಯಲ್ಲಿ ಕಮಲ. ಆಧಾರಪೀಠದಲ್ಲಿ ಶಿಲ್ಪಿಯಾ ಆದ್ಯಕ್ಷರ 'ಹೊ'

೧೨. ವೇಣುಗೋಪಾಲ

೧೩. ಚತುರ್ಭುಜ ವಿಷ್ಣು-ಮೇಲುಭಾಗ-ಬಲ-ಗದೆ, ಮೇಲುಭಾಗ-ಎಡ-ಕಮಲ, ಕೆಳಭಾಗ-ಎಡ-ಚಕ್ರ ಮತ್ತು ಕೆಳಭಾಗ-ಬಲ-ಶಂಖ

೧೪. ಲಕ್ಷ್ಮೀನರಸಿಂಹ-ಲಕ್ಷ್ಮಿಯ ಪದತಲದಲ್ಲಿ ಆನೆ

೧೫. ಶ್ರೀರಾಮ, ಆರು ಕೈಗಳು. ಪದ್ಮ-ಚಕ್ರ-ಬಾಣ-ಶಂಖ-ಅಂಕುಶ-ಧನುಸ್- ಇಬ್ಬರು ಅನುಚರೆಯರೊಡನೆ

೧೬. ಸಂಭಂಗ ವಿಷ್ಣು-ನಿಂತಿರುವುದು : ಬಲಗೈಗಳು-ಶಂಖ, ಬಾಣ, ಅಭಯ ; ಎಡಗೈಗಳು-ಪದ್ಮ, ಧನಸ್ ಮತ್ತು ವರದಹಸ್ತ

೧೭. ದೇವತೆ-ಆರು ಕೈಗಳು-ಬಲಗೈಗಳು : ಚಕ್ರ, ಪದ್ಮ, ಅಂಕುಶ; ಎಡಗೈಗಳು-ಶಂಖ, ಪಾಶ ಮತ್ತು ಫಲ

೧೮. ಧ್ಯಾನಮುದ್ರೆಯಲ್ಲಿ ವಿಷ್ಣು (ಯೋಗನಾರಾಯಣ)-ಚತುರ್ಭುಜಗಳು-ಶಂಖ, ಚಕ್ರಧಾರಿ; ಧ್ಯಾನಮುದ್ರೆಯಲ್ಲಿ ಎರಡು ಕೈಗಳು. ಶಿಲ್ಪಿಯ ಹೆಸರು 'ಹೊನೊಜ' ಎಂಬುದನ್ನು ತಳಗಡೆ ಕನ್ನಡದಲ್ಲಿ ಕೆತ್ತಿದೆ

೧೯. ಪುಷ್ಪಾರ್ಪಣೆ ಮಾಡುತ್ತಿರುವ ಅನುಚರೆ

೨೦. ವಿಷ್ಣು-ಷಡ್ಭುಜಗಳು-ಎಡಗೈಗಳಲ್ಲಿ ಪಾಶ ಶಂಖ, ಬಾಣ; ಬಲಗೈ ಚಕ್ರ, ಉಳಿದೆರಡು ಕೈಗಳು ನರಸಿಂಹ ದೇವಾಲಯದ ಗೋಡೆಯಲ್ಲಿ ಸೇರಿಹೋಗಿವೆ

೨೧. ಲಕ್ಷ್ಮೀ ಮೆತ್ತೆಯ ಮೇಲೆ ಆಸೀನಳಾಗಿರುವುದು. ಶಂಖ, ಚಕ್ರ, ಫಲ ಮತ್ತು ಕಳಶಗಳನ್ನು ಹಿಡಿದಿರುವಳು. ಇಲ್ಲಿಂದ ಕೆಲವು ಶಿಲ್ಪಗಳು ಮುಚ್ಚಿಹೋಗಿವೆ. ಉಗ್ರನರಸಿಂಹ ಸಹ ಸೇರಿದಂತೆ ಉಗ್ರನರಸಿಂಹ ದೇವಾಲಯದ ಗರ್ಭಗೃಹದ ಒಳಭಾಗದಲ್ಲಿ ನೋಡಬಹುದು

೨೨. ಪದ್ಮ ಮತ್ತು ಫಲಗಳೊಡನೆ ಅನುಚರೆ

೨೩. ಅನುಚರೆ ಶಿಲ್ಪಿಯ ಆದ್ಯಕ್ಷರ ಸಮೇತ

೨೪. ನಿಂತಿರುವ ಭಂಗಿಯಲ್ಲಿ ಲಕ್ಷ್ಮಿ. ಚತುರ್ಭುಜ-ಪಾಶ, ಅಂಕುಶ, ಪದ್ಮ ಮತ್ತು ಕಳಶ. ಶಿಲ್ಪಿಯ ಹೆಸರು 'ಹೊನೊಜ' ಎಂದು ಕನ್ನಡದಲ್ಲಿದೆ.

೨೫. ಅನುಚರೆ-ಆಧಾರಪೀಠದಲ್ಲಿ 'ಹೊ' ಎಂದಿದೆ

೨೬. ವರಾಹಮೂರ್ತಿ

೨೭. ಅನುಚರೆ – ಆಧಾರಪೀಠದಲ್ಲಿ 'ಹೊ' ಎಂದಿದೆ

೨೮. ಗರುಡ–ಕನ್ನಡದಲ್ಲಿ 'ಹೊ' ಎಂಬ ಅಕ್ಷರದೊಡನೆ

೨೯. ಅನುಚರೆ – ಆಧಾರಪೀಠದಲ್ಲಿ 'ಹೊ' ಎಂದಿದೆ

೩೦. ಅನುಚರೆ – ಆಧಾರಪೀಠದಲ್ಲಿ 'ಹೊ' ಎಂದಿದೆ

೩೧. ಗೋವರ್ಧನಗಿರಿಧಾರಿ

೩೨. ಅನುಚರೆ

೩೩. ಅನುಚರೆ

೩೪. ಉಗ್ರನರಸಿಂಹ

೩೫. ಅನುಚರೆ

೩೬. ಅನುಚರೆ – ಆಧಾರಪೀಠದಲ್ಲಿ 'ಹೊ' ಎಂದಿದೆ

೩೭. ವಿಷ್ಣು–ಷಡ್ಭುಜಗಳು–ಬಲಗೈಗಳು : ಚಕ್ರ ಮುರಿದಿದೆ. ಅಂಕುಶ, ಎಡಗೈಗಳು : ಶಂಖ, ಪದ್ಮ , ಫಲ. ಶಿಲ್ಪಿಯ ಹೆಸರು 'ಹೊನೊಜ' ಎಂದಿದೆ

೩೮. ವಿಷ್ಣು–ಚತುರ್ಭುಜಗಳು–ಮೇಲೆ ಬಲಗೈ: ಶಂಖ, ಮೇಲೆ ಎಡಗೈ : ಚಕ್ರ ; ಕೆಳಗಡೆ ಎಡಗೈ : ಅಂಕುಶ ; ಕೆಳಗಡೆ ಬಲಗೈಯಲ್ಲಿ ಗದೆಯಿದೆ

೩೯. ಅನುಚರೆ

೪೦. ಅನುಚರೆ

೪೧. ವಿಷ್ಣು-ಚತುರ್ಭುಜಗಳು-ಮೇಲೆ ಬಲಗೈ-ಚಕ್ರ, ಮೇಲೆ ಎಡಗೈ–ಶಂಖ, ಉಳಿದೆರಡು ಕೈಗಳಲ್ಲಿ ದೊಡ್ಡ ಹಣ್ಣಿನಂತಿರುವ ಪದಾರ್ಥವಿದ್ದು, ಬಾಯಿ ದೊಡ್ಡದಾಗಿ ತೆರೆದಿದೆ

೪೨. ಇಂದ್ರ–ಗಜವಾಹನ

೪೩. ಅನುಚರೆ

೪೪. ಅನುಚರೆ

೪೫. ಗರುಡ-ಲಕ್ಷ್ಮೀನಾರಾಯಣರನ್ನು ಹೊತ್ತುಕೊಂಡಿರುವುದು. ಉಗ್ರನರಸಿಂಹ ದೇವಾಲಯದ ಗರ್ಭಗೃಹದ ಒಳಭಾಗದಲ್ಲಿ ಕಾಣುವ ಕೊನೆಯ ವಿಗ್ರಹ ಇದು. ಗರ್ಭಗೃಹದ ಪಶ್ಚಿಮ ಪಾರ್ಶ್ವ

೪೬. ವರದರಾಜ–ಅಭಯ ಮತ್ತು ಶಂಖಗಳೊಡನೆ ಎರಡು ಕೈಗಳು ಮಾತ್ರ ಕಾಣುತ್ತವೆ.ಉಳಿದವು ಗೋಡೆಯಲ್ಲಿ ಸೇರಿವೆ. ಆದರೆ ಶಿಲ್ಪಿಯ ಹೆಸರು 'ಹೊನೊಜ' ಕಾಣುತ್ತದೆ

೪೭. ನಾಟ್ಯಸರಸ್ವತಿ–ಅಷ್ಟಭುಜಗಳು ; ಎಡಗೈಗಳು–ಪುಸ್ತಕ, ಪಾಶ, ವೀಣೆ (ಮುರಿದಿದೆ) ಬಲಗೈಗಳು–ತಾಳ, ಅಕ್ಷಮಾಲ, ಉಳಿದವರೆಡು ಮುರಿದಿವೆ. ಎರಡು ಪಾರ್ಶ್ವಗಳಲ್ಲಿ ಒಬ್ಬೊಬ್ಬ ಮದ್ದಲೆಗಾರ. ಕೆಳಭಾಗದಲ್ಲಿ 'ಹೊನೊಜ' ಎಂದಿದೆ

೪೮. ಪದ್ಮ ಮತ್ತು ಫಲಗಳೊಡನೆ ದೇವತೆ

೪೯. ಪದ್ಮ ಮತ್ತು ಫಲಗಳೊಡನೆ ದೇವತೆ

೫೦. ನಿಂತ ಭಂಗಿಯ ವಿಷ್ಣು–ಚತುರ್ಭುಜಗಳು–ಮೇಲೆ ಬಲಗೈ–ಚಕ್ರ ; ಮೇಲೆ–ಎಡಗೈ–ಶಂಖ, ಕೆಳಗೆ ಎಡಗೈ ಅಭಯ, ಕೆಳಗೆ ಬಲಗೈ ಖಡ್ಗ. ಆಧಾರಪೀಠದಲ್ಲಿ 'ಹೊನೊಜ' ಎಂದಿದೆ

೫೧. ವರದರಾಜ–ಚತುರ್ಭುಜಗಳು. ಮೇಲೆ ಬಲಗೈ–ಚಕ್ರ, ಮೇಲೆ ಎಡಗೈ–ಶಂಖ, ಕೆಳಗೆ ಎಡಗೈ ಅಭಯ, ಕೆಳಗೆ ಬಲಗೈ ವರದ. ಆಧಾರಪೀಠದಲ್ಲಿ 'ಹೊನೊಜ' ಎಂದಿದೆ

೫೨. ಅನುಚರೆ

೫೩. ಲಕ್ಷ್ಮಿ

೫೪. ಸೂರ್ಯ–ನಿಂತಭಂಗಿ. ಚತುರ್ಭುಜಗಳು. ಮೇಲೆ ಬಲಗೈ–ಚಕ್ರ ; ಮೇಲೆ ಎಡಗೈ–ಕಬ್ಬು ಅಥವಾ ಬಾಳೆ ; ಕೆಳಗೆ ಎಡಗೈ ತಾವರೆ, ಕೆಳಗೆ ಬಲಗೈ–ತಾವರೆ. ಸೂರ್ಯನ ತಳಭಾಗದಲ್ಲಿ ಬಿಲ್ಲು–ಬಾಣಧಾರಿಗಳಾಗಿ ಇಬ್ಬರು ಅನುಚರರು

೫೫. ತ್ರಿಮೂರ್ತಿ–ಅಷ್ಟಭುಜಗಳು-ಬಲಗೈಗಳು–ಚಕ್ರ, ತ್ರಿಶೂಲ, ಖಡ್ಗ, ಅಂಕುಶ. ಎಡಗೈಗಳು–ಶಂಖ, ಪಾಶ, ಪದ್ಮ ಮತ್ತು ಗುರಾಣಿ. ತಳಭಾಗದಲ್ಲಿ ಇಬ್ಬರು ಅನುಚರೆಯರು

೫೬. ಅನುಚರೆ

೫೭. ಅನುಚರೆ

೫೮. ವಿಷ್ಣು–ಚತುರ್ಭುಜಗಳು. ಮೇಲೆ ಬಲಗೈ ಚಕ್ರ, ಮೇಲೆ ಎಡಗೈ ಶಂಖ, ಕೆಳಗೆ ಬಲಗೈ ಪದ್ಮ ಮತ್ತು ಕೆಳಗೆ ಎಡಗೈ ಪಾಶ. ಲಕ್ಷ್ಮಿ ಎಡಭಾಗದಲ್ಲಿ ನಿಂತಿದ್ದಾಳೆ

೫೯. ವಿಷ್ಣು ಚತುರ್ಭುಜಗಳು. ಮೇಲೆ ಬಲಗೈ ಚಕ್ರ, ಮೇಲೆ ಎಡಗೈ ಶಂಖ, ಕೆಳಗೆ ಎಡಗೈ ಅಂಕುಶ, ಕೆಳಗೆ ಬಲಗೈ ಖಡ್ಗ ; ಆಧಾರಪೀಠದಲ್ಲಿ 'ಹೊ' ಎಂದಿದೆ

೬೦. ನಾಗಕನ್ನೆ (ಮೋಹಿನಿ)–ನಗ್ನೆ–ಯುವತಿ ನಾಗವನ್ನು ಹಿಡಿದಿರುವಳು

೬೧. ಅನುಚರೆ

೬೨. ವಿಷ್ಣು–ಚತುರ್ಭುಜಗಳು–ಮೇಲೆ ಬಲಗೈ ಮತ್ತು ಮೇಲೆ ಎಡಗೈ ದಂಡ ; ಕೆಳ ಎಡಗೈ ಶಂಖ ; ಕೆಳ ಬಲಗೈ ಚಕ್ರ ; ಲಕ್ಷ್ಮಿ ವಾಮಪಾರ್ಶ್ವದಲ್ಲಿ ನಿಂತಿರುವುದು. ಗರ್ಭಗೃಹದ ಉತ್ತರಭಾಗ

೬೩. ಬಲರಾಮನಾಗಿ ವಿಷ್ಣು–ಚತುರ್ಭುಜಗಳು–ಮೇಲೆ ಬಲಗೈ ಅಂಕುಶ, ಮೇಲೆ ಎಡಗೈ ಚಕ್ರ : ಕೆಳ ಎಡಗೈ ಶಂಖ, ಕೆಳ ಬಲಗೈ ಅಭಯ. ಆಧಾರಪೀಠದಲ್ಲಿ 'ಹೊ' ಅಕ್ಷರ

೬೪. ಅನುಚರೆ–ಆಧಾರಪೀಠದಲ್ಲಿ 'ಹೊ' ಎಂದಿದೆ

೬೫. ಅನುಚರೆ–'ಹೊ' ಅಕ್ಷರವಿದೆ.

೬೬. ಪರಶುರಾಮನಾಗಿ ವಿಷ್ಣು–ಚತುರ್ಭುಜಗಳು–ಮೇಲೆ ಎಡಗೈ ಚಕ್ರ, ಮೇಲೆ ಬಲಗೈ ಪರಶು, ಕೆಳ ಎಡಗೈ ಮುರಿದಿದೆ, ಕೆಳ ಬಲಗೈ ಪದ್ಮ–ಆಧಾರಪೀಠದಲ್ಲಿ 'ಹೊ' ಅಕ್ಷರವಿದೆ

೬೭. ಹಲಾಯುಧನಾಗಿ ವಿಷ್ಣು–ಚತುರ್ಭುಜಗಳು–ಮೇಲೆ ಬಲಗೈ ಅಂಕುಶ, ಮೇಲೆ ಎಡಗೈ ಗದೆ ಅಥವಾ ದಂಡ, ಕೆಳಗೆ ಎಡಗೈ ವರದ, ಕೆಳಬಲಗೈ ಚಕ್ರ. ಆಧಾರಪೀಠದಲ್ಲಿ 'ಹೊ' ಅಕ್ಷರವಿದೆ

೬೮. ಅನುಚರೆ–ಆಧಾರಪೀಠದಲ್ಲಿ 'ಹೊ' ಎಂಬ ಅಕ್ಷರವಿದೆ

೬೯. ಲಕ್ಷ್ಮಿ–ಆಧಾರಪೀಠದಲ್ಲಿ 'ಹೊ' ಎಂಬ ಅಕ್ಷರವಿದೆ

೭೦. ವಿಷ್ಣು–ಹಲಾಯುಧನಾಗಿ ಚತುರ್ಭುಜಗಳು–ಮೇಲೆ ಬಲಗೈ ಅಂಕುಶ, ಮೇಲೆ ಎಡಗೈ ಶಂಖ, ಕೆಳ ಎಡಗೈ ಗದೆ ಮತ್ತು ಕೆಳ ಬಲಗೈ ಪದ್ಮ–ಆಧಾರಪೀಠದಲ್ಲಿ 'ಹೊ' ಅಕ್ಷರವಿದೆ

೭೧. ನಿಂತಿರುವ ಭಂಗಿಯಲ್ಲಿ ವಿಷ್ಣು, ಚತುರ್ಭುಜಗಳು, ಶಂಖ, ಚಕ್ರ, ಅಭಯ, ಮುರಿದಿದೆ. 'ಹೊ' ಎಂದು ಕನ್ನಡದಲ್ಲಿದೆ

೭೨. ಅನುಚರೆ

೭೩. ವಿಷ್ಣು–ಅಷ್ಟಭುಜಗಳು – ಬಲಗೈಗಳು : ಸರ್ಪ, ಪದ್ಮ, ಚಕ್ರ, ಅಕ್ಷಮಾಲೆ ; ಎಡಗೈಗಳು : ಶಂಖ, ಅಂಕುಶ, ಅಭಯ ಮತ್ತು ಪದ್ಮ

೭೪. ಸಂಭಂಗ ಮತ್ತು ಧ್ಯಾನಮುದ್ರೆಯಲ್ಲಿ ನಿಂತಿರುವ ವಿಷ್ಣು. ಚತುರ್ಭುಜಗಳು. ಮೇಲೆ ಬಲಗೈ ಚಕ್ರ, ಮೇಲೆ ಎಡಗೈ ಶಂಖಧಾರಿ, ಉಳಿದೆರಡು ಕೈಗಳು (ಹಸ್ತಗಳು) ಯೋಗಮುದ್ರೆಯಲ್ಲಿವೆ

೭೫. ಅನುಚರೆ–ಆಧಾರಪೀಠದಲ್ಲಿ 'ಹೊ' ಎಂಬ ಅಕ್ಷರವಿದೆ

೭೬. ಅನುಚರೆ

೭೭. ವಿಷ್ಣು–ಚತುರ್ಭುಜಗಳು–ಮೇಲೆ ಬಲಗೈ ಗದೆ, ಮೇಲೆ ಎಡಗೈ ಚಕ್ರ, ಕೆಳಗೆ ಬಲಗೈ ಪದ್ಮ, ಕೆಳಗೆ ಎಡಗೈ ಶಂಖ

೭೮. ಅನುಚರೆ

೭೯. ಅನುಚರೆ

೮೦. ಕಾಳಿಂಗಮರ್ದನ–ಅತ್ತಿತ್ತ ಸಖಿಯರು

೮೧. ಪದ್ಮ, ಫಲಸಮೇತ ಅನುಚರೆ

೮೨. ಅನುಚರೆ–ಶಿಲ್ಪಿಯ ಹೆಸರಿನ ಆದ್ಯಕ್ಷರ 'ಚ' ಎಂದು ಕನ್ನಡದಲ್ಲಿದೆ

೮೩. ಅದೇ ಆದ್ಯಕ್ಷರ 'ಚ'ದೊಡನೆ ಗರುಡ

೮೪. ಅನುಚರೆ

೮೫. ನಿಂತಭಂಗಿಯಲ್ಲಿ ವಿಷ್ಣು–ಚತುರ್ಭುಜಗಳು–ಮೇಲೆ ಬಲಗೈ–ಪದ್ಮ, ಮೇಲೆ ಎಡಗೈ–ಗದೆ, ಕೆಳಬಲಗೈ–ಮುರಿದಿದೆ, ಕೆಳಎಡಗೈ ಚಕ್ರ. ಎರಡು ಪಾರ್ಶ್ವಗಳಲ್ಲಿ ಸಖಿಯರು

೮೬. ಅನುಚರೆ

೮೭. ವಿಷ್ಣು– ನಿಂತಭಂಗಿ– ಚತುರ್ಭುಜಗಳು– ಚಕ್ರ, ಪದ್ಮ, ಫಲ, ಮುರಿದಿದೆ

೮೮. ಅನುಚರೆ

೮೯. ಕಪಿಪೀಡಿತ ಮೋಹಿನಿ

೯೦. ವಿಷ್ಣು–ಮಾಧವನಾಗಿ–ನಿಂತಭಂಗಿ. ಮೇಲೆ ಬಲಗೈ ಚಕ್ರ, ಮೇಲೆ ಎಡಗೈ ಶಂಖ, ಕೆಳಬಲಗೈ ಗದೆ ಮತ್ತು ಕೆಳಎಡಗೈ ಪದ್ಮ

೯೧. ವರದರಾಜನಾಗಿ ವಿಷ್ಣು–ಚತುರ್ಭುಜ ಗಳು–ಮೇಲೆ ಬಲಗೈ ಚಕ್ರ, ಮೇಲೆ ಎಡಗೈನಲ್ಲಿ ಶಂಖ, ಕೆಳಗೆ ಬಲಗೈ ಅಭಯ. ಕೆಳ ಎಡಗೈ ವರದ. ಲಕ್ಷ್ಮಿ ಬಲಭಾಗದಲ್ಲಿ ನಿಂತಿರುವಳು

೯೨. ಅನುಚರೆ–ಶಿಲ್ಪಿಯ ಹೆಸರಿನ ಆದ್ಯಕ್ಷರ 'ಚ' ಎಂದು ಕನ್ನಡದಲ್ಲಿದೆ

೯೩. ಅನುಚರೆ–ಅದೇ ಆದ್ಯಕ್ಷರ 'ಚ' ಇದೆ

೯೪. ವಿಷ್ಣು–ನಿಂತಿರುವ ಭಂಗಿ–ಎಡಗೈಗಳು ಧನುಸ್ಸು

೯೫. ಅನುಚರೆ

೯೬. ನಿಂತಿರುವ ಭಂಗಿಯ ದೇವರು–ಚತು ರ್ಭುಜಗಳು–ಮೇಲೆ ಬಲಗೈ ವಜ್ರಾಯುಧ, ಮೇಲೆ ಎಡಗೈ ಪಾತ್ರೆ, ಕೆಳ ಎಡಗೈ ಮುರಿದಿದೆ, ಕೆಳ ಬಲಗೈ ಅಕ್ಷಮಾಲಾ ಸಮೇತ ಅಭಯ

೯೭. ಅನುಚರೆ

೯೮. ಚತುರ್ಭುಜ ವಿಷ್ಣು–ಮೇಲೆ ಬಲಗೈ ಶಂಖ ; ಮೇಲೆ ಎಡಗೈ ಚಕ್ರ, ಕೆಳ ಬಲಗೈ ಅಭಯ, ಕೆಳ ಎಡಗೈ ಕಠಿಹಸ್ತ, ಶಿಲ್ಪಿಯ ಹೆಸರು 'ಹೊನೊಜ' ಎಂದು ತಳದಲ್ಲಿದೆ

೯೯. ಹರಿಹರನಾಗಿ ವಿಷ್ಣು–ಚತುರ್ಭುಜಗಳು– ಮೇಲೆ ಬಲಗೈ ಚಕ್ರ, ಮೇಲೆ ಎಡಗೈ ಶಂಖ, ಕೆಳ ಬಲಗೈ ಪದ್ಮ, ಕೆಳ ಎಡಗೈ ಪಾಶ. ತಳಭಾಗದಲ್ಲಿ 'ಹೊನೊಜ' ಎಂದಿದೆ

೧೦೦. ವಿಷ್ಣು–ಚತುರ್ಭುಜಗಳು–ಮೇಲೆ ಬಲಗೈ ಚಕ್ರ–ಮೇಲೆ ಎಡಹಸ್ತ ಶಂಖ, ಕೆಳ ಬಲಗೈ ಪದ್ಮ, ಕೆಳ ಎಡಗೈ–ಪಾಶ. 'ಹೊನೊಜ' ಎಂದು ತಳಭಾಗದಲ್ಲಿದೆ

೧೦೧. ವಿಷ್ಣು–ಚತುರ್ಭುಜಗಳು. ಮೇಲೆ ಬಲಗೈ ಚಕ್ರ, ಮೇಲೆ ಎಡಗೈ ಶಂಖ, ಕೆಳ ಎಡಗೈ ಹಸ್ತ ವರದ ಮತ್ತು ಕೆಳ ಬಲಗೈ ದಂಡ.

೧೦೨. ಲಕ್ಷ್ಮೀನಾರಾಯಣ

೧೦೩. ಸೂರ್ಯನಾರಾಯಣ– ಚತುರ್ಭುಜ ಗಳು–ಮೇಲೆ ಬಲಗೈ ಚಕ್ರ, ಮೇಲೆ ಎಡಗೈ ಶಂಖ, ಕೆಳ ಎಡಗೈ ಪದ್ಮ, ಕೆಳ ಬಲಗೈ ಪದ್ಮ, ತಳಭಾಗದಲ್ಲಿ 'ಹೊನೊಜ' ಎಂದಿದೆ

೧೦೪. ಸಂಭಂಗದಲ್ಲಿ ನಿಂತಿರುವ ವಿಷ್ಣು– ಚತುರ್ಭುಜಗಳು–ಮುಂದಿನ ಎರಡು ಕೈಗಳು ಅಂಜಲಿ ಬದ್ಧವಾಗಿವೆ ; ಹಿಂದೆ ಮೇಲೆ ಬಲಹಸ್ತ–ಚಕ್ರ, ಮೇಲೆ ಎಡಹಸ್ತ–ಶಂಖ. ತಳಭಾಗದಲ್ಲಿ 'ಹೊನೊಜ' ಎಂದಿದೆ

೧೦೫. ಶ್ರೀರಾಮನಾಗಿ ವಿಷ್ಣು–ಚತುರ್ಭುಜ ಗಳು–ಮೇಲೆ ಬಲಹಸ್ತ ಶಂಖ, ಮೇಲೆ ಎಡಹಸ್ತ ಚಕ್ರ ; ಕೆಳಗೆ ಬಲಹಸ್ತ ಬಾಣ, ಕೆಳಗೆ ಎಡಗೈ ಧನುಸ್ಸು ತಳ ಭಾಗದಲ್ಲಿ 'ಹೊನೊಜ' ಎಂದಿದೆ

೧೦೬. ಸಂಭಂಗದಲ್ಲಿ ನಿಂತಿರುವ ಅಷ್ಟಭುಜ ವಿಷ್ಣು–ಬಲಗೈಗಳು : ಚಕ್ರ, ಗದೆ, ದಂಡ, ತ್ರಿಶೂಲ ; ಎಡಗೈಗಳು : ಶಂಖ, ಅಂಕುಶ, ದಂಡ, ಪರಶು. ತಳ ಭಾಗದಲ್ಲಿ 'ಹೊನೊಜ' ಎಂದಿದೆ

೧೦೭. ಅನುಚರೆ

೧೦೮. ವಿಷ್ಣು–ಚತುರ್ಭುಜಗಳು–ಮೇಲೆ ಬಲ ಹಸ್ತ ಚಕ್ರ, ಮೇಲೆ ಎಡಹಸ್ತ ಶಂಖ, ಕೆಳ ಬಲಹಸ್ತ ಶಂಖ, ಕೆಳ ಎಡಹಸ್ತ ಪದ್ಮ

೧೦೯. ಅನುಚರೆ

೧೧೦. ವಿಷ್ಣು ಸಂಭಂಗದಲ್ಲಿ ನಿಂತಿರುವುದು ಮತ್ತು ವೀಣಾವಾದನ ಮಾಡುತ್ತಿರುವುದು ; ಚತುರ್ಭುಜ ಗಳು–ಮೇಲೆ ಬಲಹಸ್ತ ಚಕ್ರ ಮತ್ತು ಮೇಲೆ ಎಡಹಸ್ತ ಶಂಖ

೧೧೧. ಅನುಚರೆ

೧೧೨. ಅನುಚರೆ–'ಚ' ಅಕ್ಷರ ಇದೆ

೧೧೩. ನೃತ್ಯ ಭಂಗಿಯಲ್ಲಿರುವ ಅಷ್ಟಭುಜ ವಿಷ್ಣು ; ಬಲಹಸ್ತಗಳು–ಚಕ್ರ, ಮುರಿದಿದೆ. ಅಭಯ, ಅಕ್ಷಮಾಲೆ, ಅಂಗುಷ್ಠ ಮತ್ತು ಅನಾಮಿಕಗಳು ಸೇರಿದಂತಿ

ರುವ ಮುದ್ರೆ ; ಎಡಹಸ್ತಗಳು–ಶಂಖ, ನರ್ತನ ಸಮಮುದ್ರ, ಲಂಬಹಸ್ತ, ಕಳಶ, ಮತ್ತು ವಾಮ ಎಡ ಭಾಗದಲ್ಲಿ ಲಕ್ಷ್ಮಿ

೧೧೪. ವಿಷ್ಣು–ಸಮಭಂಗದಲ್ಲಿ ನಿಂತಿರುವ ವಿಷ್ಣು, ಮೇಲೆ ಬಲಗೈ ಚಕ್ರ, ಮೇಲೆ ಎಡಗೈ ಶಂಖ, ಕೆಳ ಎಡಗೈ ತ್ರಿಶೂಲ ಮತ್ತು ಕೆಳಗೆ ಬಲಗೈ ಪದ್ಮ ; ತಳ ಭಾಗದಲ್ಲಿ ಅನುಚರರು

೧೧೫. ಅನುಚರೆ.

ಭಿತ್ತಿಶಿಲ್ಪಗಳನ್ನು ಬಹುಮಟ್ಟಿಗೆ ಒಂದೇ ತೆರನಾಗಿ ಕೆತ್ತಲಾಗಿದೆ. ಅಲಂಕರಣದ ವೈವಿಧ್ಯ ಹಾಗೂ ಸೂಕ್ಷ್ಮತೆಯು ಹೊಯ್ಸಳರ ಕಾಲದಲ್ಲಿ ಚತುರಶಿಲ್ಪಿಗಳು ಪಡೆದಿದ್ದ ಕಲಾಕೌಶಲ್ಯಕ್ಕೆ ಸಾಕ್ಷಿಯಾಗಿದೆ. ಇಲ್ಲಿ ಕಂಡು ಬರುವ ಬಹುಮಟ್ಟಿನ ಶಿಲ್ಪಗಳೆಲ್ಲ ಲಕ್ಷಣದಲ್ಲಿ ವೈಷ್ಣವ ಶಿಲ್ಪಗಳಾಗಿವೆ. ವಿಷ್ಣುವಿನ ಎಲ್ಲ ರೂಪಗಳನ್ನು ಬಹುಮಟ್ಟಿಗೆ ಇಲ್ಲಿ ಚಿತ್ರಿಸಲಾಗಿದ್ದು ಎಲ್ಲೋ ಕೆಲವನ್ನುಳಿದರೆ ಮಿಕ್ಕವೆಲ್ಲವು ಸಮಭಂಗ ರೂಪದಲ್ಲಿ ಕೆತ್ತಲಾಗಿದೆ. ಪ್ರಮುಖ ದೇವತೆಗಳನ್ನೆಲ್ಲ ಗೋಡೆಯ ಮೇಲ್ಮೈನ ಮುನ್‌ಚಾಚಿನಲ್ಲಿ ಕೆತ್ತಲಾಗಿದ್ದು ಅವುಗಳಲ್ಲಿ ಪ್ರತಿಯೊಂದಕ್ಕೂ ತಳಭಾಗದಲ್ಲಿ ಇಬ್ಬರು ಸಣ್ಣ ಸಣ್ಣ (ಚಿಕ್ಕ) ಅನುಚರರನ್ನು ಕೆತ್ತಲಾಗಿದೆ. ಇವುಗಳಲ್ಲದೆ, ಮುಖ್ಯ ದೇವತೆಗಳಿಗೆ ಅನುಚರರಾಗಿ ಕೈಗಳಲ್ಲಿ ತಾವರೆ (ಕಮಲ) ಮತ್ತು ಫಲವನ್ನು ಹಿಡಿದುಕೊಂಡಿರುವ ಶ್ರೀದೇವಿ ಅಥವಾ ಭೂದೇವಿಯರ ಶಿಲ್ಪಗಳಿವೆ (ವಿಗ್ರಹಗಳಿವೆ). ಬಹುಮಟ್ಟಿಗೆ ಎಲ್ಲ ಶಿಲ್ಪಗಳ ಮುಖಭಾವ ಒಂದೇ ರೀತಿಯಾಗಿದೆ. ಈ ವಿಗ್ರಹಗಳ ಸರಾಸರಿ ಎತ್ತರ ಸುಮಾರು ಮೂರು ಅಡಿಗಳಾಗಿವೆ.

ಎಲ್ಲ ಶಿಲ್ಪಗಳಿಗೂ ವಿಪುಲ ವೈವಿಧ್ಯದ ಸಸ್ಯರಾಶಿಯ ಅರ್ಧವೃತ್ತಾಕಾರದ ಪ್ರಭಾವಳಿಯಿದೆ. ಈ ದೇವಾಲಯದ ಭಿತ್ತಿಶಿಲ್ಪಗಳ ಗಮನಾರ್ಹವಾದ ವಿಶಿಷ್ಟ ಲಕ್ಷಣವೆಂದರೆ ಅನೇಕ ಶಿಲ್ಪಗಳ ಆಧಾರಪೀಠದಲ್ಲಿ ಕನ್ನಡದಲ್ಲಿ 'ಹೊನೊಜ' ಅಥವಾ ಅವನ ಹೆಸರಿನ ಆದ್ಯಕ್ಷರ 'ಹೊ' ಎಂಬುದು ಇರುವುದಾಗಿದೆ. ಈ ಸುಂದರ ದೇವಾಲಯದ ಬಹುಪಾಲು ಶಿಲ್ಪಗಳನ್ನು ಕೆತ್ತುವುದರಲ್ಲಿ ಅವನ ಪಾಲು ಹಿರಿದಾಗಿರುವಂತಿದೆ. ಈ ಹೆಸರಿನ ಜೊತೆಗೆ ಕೆಲವು ಶಿಲ್ಪಗಳಲ್ಲಿ 'ಚ' ಎಂಬ ಆದ್ಯಕ್ಷರವೂ ಕಂಡುಬರುತ್ತಿದ್ದು. ಈತ ಹೊನೊಜನ ಜೊತೆ ಕೆಲಸ ಮಾಡಿದ ಮತ್ತೊಬ್ಬ ಶಿಲ್ಪಿಯಿರಬೇಕು. 'ಚ' ಎಂಬ ಅಕ್ಷರ ಮಾತ್ರದಿಂದಲೇ ಶಿಲ್ಪಿಯನ್ನು ಗುರುತಿಸುವುದು ಕಷ್ಟಕರ.

ಈ ಶಿಲ್ಪಗಳ ಅಂಕಣಫಲಕಗಳ ಮೇಲೆ ಸಣ್ಣ ಕಪಾಟವಿದ್ದು, ಇದು ಕೂಡುಗಳು, ಪುಷ್ಪವಿನ್ಯಾಸಗಳ ಮಣಿಸರಗಳು, ಅಲಂಕಾರಪಟ್ಟಿಗಳು ಮತ್ತು ಅಲಂಕರಣ ಕುಂಡಲ(drops)ಗಳಿಂದ ಶೃಂಗರಿಸಲ್ಪಟ್ಟಿದೆ. ಇದರ ಮೇಲ್ಭಾಗದಲ್ಲಿ ಗೋಡೆಯ ಮೇಲ್ಮೈ(ಮೇಲೆ) ಸಣ್ಣ ಗೋಪುರಗಳಿರುವ ಚಾಚುಭಾಗಕ್ಕೆ ಆಧಾರವಾಗಿರುವಂಥ ಗೋಡೆಗಂಬಗಳ ಜೋಡಿಗಳಿವೆ. ಮುಖ್ಯದ್ವಾರದ ಮೇಲಣ ಕೈಪಿಡಿಯಲ್ಲಿ(parapet) ಲಕ್ಷ್ಮಿಯ ಸಣ್ಣ ವಿಗ್ರಹವಿದ್ದು ಇದು ಪಡ್ಬುಜಗಳಿಂದ ಕೂಡಿದ್ದು, ನರ್ತನ ಭಂಗಿಯಲ್ಲಿದೆ. ದಕ್ಷಿಣ ಕೈಪಿಡಿಯ ಮಧ್ಯಭಾಗದಲ್ಲಿ ಲಕ್ಷ್ಮಿ ಮತ್ತು ಸರಸ್ವತಿಯರ ನರ್ತನಭಂಗಿಯ ವಿಗ್ರಹಗಳಿವೆ. ಉತ್ತರ ಕೈಪಿಡಿಯ ಮಧ್ಯದಲ್ಲಿ ಶ್ರೀದೇವಿ ಭೂದೇವಿಯರ ಸಮೇತವಾಗಿರುವ ವಿಷ್ಣುವಿನ ವಿಗ್ರಹಗಳಿವೆ.

ವಿಮಾನದ ಪೀಠದಲ್ಲಿ ೧೨ ಚೌಕಟ್ಟು(stillate) ಕೋನಗಳಿದ್ದು, ಸುಖನಾಸಿ ಮುಂಚಾಚಿನಲ್ಲಿ ಮತ್ತೆರಡು ಕೋನಗಳನ್ನು ಸೇರಿಸಲಾಗಿದ್ದು, ಮೇಲ್ಭಾಗದಲ್ಲಿ ಒಟ್ಟು ಹದಿನಾಲ್ಕು ಇವೆ. ಎಲ್ಲ ಕೋನಗಳನ್ನೂ ಮೇಲಿನವರೆಗೂ ಸಾಗಿಸಲಾಗಿದ್ದು, ಅಂತಿಮವಾಗಿ ಸೂಪ್ತಿಯಂಥ ತಲೆಕೆಳಗು ಮಾಡಿದ ತಾವರೆಯಲ್ಲಿ ಒಡ್ಡು ಮಾಡಲಾಗಿದೆ.

ಶಿಖರದ ಪೂರ್ವಕ್ಕೆ ಮೇಲ್ಭಾಗದಲ್ಲಿ ಸುಖನಾಸಿ ಚಾಚು ಇದ್ದು, ಗೇಬಲ್ಲು ತುದಿಯಲ್ಲಿ ವೀರಾಸನದಲ್ಲಿರುವ ಗರುಡ ವಿಗ್ರಹ ಇರುವುದು.

ಜಗತಿಗೆ ಇರುವ ಏಕೈಕ ಉಪಾನ(ಮೆಟ್ಟಿಲು) ಎಂದರೆ ಪೂರ್ವ ಪಾರ್ಶ್ವದಿಂದಾಗಿದೆ. ಜಗತಿಗೆ ಇರುವ ಮೆಟ್ಟಲು ಸಾಲಿನ ಆಚೆ ಈಚೆ ಮೇಲ್ಭಾಗದಲ್ಲಿ ಸಣ್ಣ ಗೋಪುರಗಳಿರುವ ಚಾಚುಭಾಗಗಳಿಂದ ಕೂಡಿದ ಸಣ್ಣ ದೇವಾಲಯಗಳಿವೆ. ದೇವಾಲಯದ ಮುಖ್ಯದ್ವಾರ ತನ್ನ ಮೂಲ ಲಕ್ಷಣವನ್ನು ಕಳೆದುಕೊಂಡಿದೆ.

ವಿಶಿಷ್ಟ ಶಿಲ್ಪಗಳಿಂದ ಕೂಡಿರುವ ಪ್ರಮುಖ

ಹೊಯ್ಸಳ ದೇವಾಲಯ ಇದಾಗಿದೆಯಾದರೂ ಈ ದೇವಾಲಯದ ಕಾಲವನ್ನು ನಿಗದಿಪಡಿಸಲು ಅನುಕೂಲವಾಗುವಂಥ ಯಾವ ಶಾಸನಗಳೂ ಇಲ್ಲ. ಸು. ಕ್ರಿ.ಶ. ೧೧೨೦ ರದು ಎನ್ನಬಹುದಾದ ವಿಷ್ಣುವರ್ಧನನ ಶಾಸನ ಈ ಸ್ಥಳದಲ್ಲಿದೆಯಾದರೂ ಈ ದೇವಾಲಯದ ನಿರ್ಮಾಣದ ಬಗ್ಗೆ ಅದು ಏನೂ ಉಲ್ಲೇಖಿಸಿಲ್ಲ. ಶೈಲಿಯ ದೃಷ್ಟಿಯಿಂದಲೂ ಇದು ವಿಷ್ಣುವರ್ಧನನ ಕಾಲದ್ದೆಂದು ಕಂಡುಬರುವುದಿಲ್ಲ. ಹಳೇಬೀಡಿನ ಕೇದಾರೇಶ್ವರ ದೇವಸ್ಥಾನ ಹಾಗೂ ನುಗ್ಗೇಹಳ್ಳಿ ಮತ್ತು ಹೊಸಹೊಳಲಿನ ಲಕ್ಷ್ಮೀನರಸಿಂಹ ದೇವಾಲಯಗಳಿಗೂ ಇದಕ್ಕೂ ಇರುವ ಸಾಮ್ಯದಿಂದಾಗಿ ಇದನ್ನು ಹದಿಮೂರನೇ ಶತಮಾನದ ಪೂರ್ವಾರ್ಧದಲ್ಲಿ ಕಟ್ಟಲಾಗಿದೆ ಎಂದು ಸಾಕಷ್ಟು ಖಚಿತವಾಗಿ ಸೂಚಿಸಬಹುದಾಗಿದೆ.

ಡಾ॥ ಎಚ್. ಆರ್. ರಘುನಾಥ ಭಟ್

# ಅಭಿಷೇಕಲಕ್ಷ್ಮಿ ಶಿಲ್ಪ-ಶಾಸನ ಶೋಧನೆ

ಭಾರತೀಯ ಕಲಾಪರಂಪರೆಯಲ್ಲಿ ಪ್ರಾಚೀನತಮ, ಜನಪದೀಯ, ಜನಪ್ರಿಯ ಹಾಗೂ ವೈಶಿಷ್ಟ್ಯಪೂರ್ಣ ಪರಿಕಲ್ಪನೆಗಳಲ್ಲಿ ಅಭಿಷೇಕಲಕ್ಷ್ಮಿ ಅಥವಾ ಗಜಲಕ್ಷ್ಮಿ ಗಣನೀಯವಾಗಿದೆ. ಎರಡು ಸಾವಿರಕ್ಕೂ ಹೆಚ್ಚು ವರ್ಷಗಳ ಇತಿಹಾಸ ಇದಕ್ಕಿದೆ. ಮೊದಲು ಸಾಂಕೇತಿಕವಾಗಿ ಬರುಬರುತ್ತ ಪ್ರತಿಮಾ ರೂಪಲಾವಣ್ಯ ಪಡೆದು ವಿಕಸಿತವಾದ ಅಭಿಷೇಕಲಕ್ಷ್ಮಿಯನ್ನು 'symbol-cum-image' ಆಗಿ ಪರಿಗಣಿಸಬಹುದು. ಕೇವಲ ವಿಷ್ಣುಪತ್ನಿ, ವೈಷ್ಣವೀಯಾಗಿ ಮಾತ್ರ ನೋಡದೆ, ಮೂಲತಃ ಆರ್ಯಪೂರ್ವ ಕಾಲದಿಂದ ಬೆಳೆದು ಬಂದ, ಆರ್ಯೇತರ ದೇವತೆಯಾಗಿ, ಮಾತೃದೇವತೆಯಾಗಿ, ಪ್ರಕೃತಿ, ಫಲವತ್ತತೆ, ಸಮೃದ್ಧಿಯನ್ನು ಪ್ರತಿರೂಪಿಸುವ ಆರಾಧ್ಯದೇವಿಯಾಗಿ, ಜನಪದ ಜೀವನದಲ್ಲಿ ಜನಜನಿತ 'ಗ್ರಾಮದೇವಿ'ಯಾಗಿ ವಿವಿಧ ನಾಮರೂಪಗಳನ್ನು ಪಡೆದು ಇಂದಿಗೂ ಕರ್ನಾಟಕದ ಬಯಲು, ಮಲೆನಾಡ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡು ಬರುವ ಶಿಲ್ಪವಾಗಿ ಸರ್ವಗ್ರಾಹಿ ದೃಷ್ಟಿಕೋನದಿಂದ ಪರಿಶೋಧಿಸಬೇಕಾಗಿದೆ. ಬಾಗಿಲುವಾಡದ ಲಲಾಟಬಿಂಬವಾಗಿ ಗಜಲಕ್ಷ್ಮಿ ಸಾಮಾನ್ಯವಾಗಿ ನಮಗೆ ಗೊತ್ತು. ಕೆಲವು ವಿದ್ವಾಂಸರು ಹೇಳುವಂತೆ ವೈಷ್ಣವ ದೇಗುಲಗಳ ದ್ವಾರಬಂಧದ ಲಲಾಟಬಿಂಬವಾಗಿ ಮಾತ್ರವಲ್ಲದೆ ಶೈವ, ಬೌದ್ಧ, ಜೈನ ಮತೀಯ ವಾಸ್ತುಶಿಲ್ಪದ ಚೌಕಟ್ಟಿನಲ್ಲೂ ಇದು ಗೋಚರಿಸುತ್ತದೆ. ಅಷ್ಟೇ ಅಲ್ಲ, ಭಿತ್ತಿಶಿಲ್ಪವಾಗಿ, ಆವೆಮಣ್ಣಿನ ಮೂರ್ತಿಯಾಗಿ, ನಾಣ್ಯ-ತಾಮ್ರಪಟಗಳ ಮುದ್ರಿಕೆಯಾಗಿ, ಶಿಲಾಶಿಲ್ಪ, ಕಂಚುಶಿಲ್ಪ, ಕಾಷ್ಠಶಿಲ್ಪವಾಗಿ, ವರ್ಣಚಿತ್ರಕಲೆಯಲ್ಲೂ ಕೂಡ ಅಭಿಷೇಕಲಕ್ಷ್ಮಿ ಬಿಂಬಿತಳಾಗಿದ್ದಾಳೆ. ಇಷ್ಟಾದರೂ (ಜಿನಬಿಂಬಗಳಲ್ಲಿ ಸಾಮಾನ್ಯವಾಗಿ ಕಂಡುಬರುವಂತೆ) ಪೀಠಶಾಸನ ಸಹಿತ ಇರುವ ಅಭಿಷೇಕಲಕ್ಷ್ಮಿಯ ಬಿಡಿಶಿಲ್ಪ ಫಲಕ ಅಪೂರ್ವವೆಂದೇ ಹೇಳಬಹುದು. ನಾನು ಇದುವರೆಗೆ ಗಮನಿಸಿದ ಶಿಲ್ಪಫಲಕಗಳಲ್ಲಿ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನಲ್ಲಿರುವ ಕುಪ್ಪಗಡ್ಡೆ ಶಿಲ್ಪ, ಶಿವಮೊಗ್ಗ ಹಾಗೂ ಕಿತ್ತೂರಿನ ವಸ್ತು ಸಂಗ್ರಹಾಲಯಗಳಲ್ಲಿರುವ ಶಿಲ್ಪಗಳು, ಧಾರವಾಡ ಜಿಲ್ಲೆಯ ಹಾನಗಲ್ಲು ತಾಲೂಕಿನಲ್ಲಿರುವ ಬಾಳೂರು ಕೆರೆತೂಬಿಗೆ ಸೇರಿಸಿರುವ ಬಾದುಬ್ಬೆ ಶಾಸನ-ಶಿಲ್ಪ, ಕಲಘಟಗಿ ತಾಲೂಕಿನ ಕಂದಲಿಯಲ್ಲಿರುವ ಶಾಸನೋಲ್ಲೇಖ 'ಬಾದುಬ್ಬೆಶಿಲ್ಪ'ಗಳನ್ನು ಇಲ್ಲಿ ಉದಹರಿಸಬಹುದು. ಈ ಪಟ್ಟಿಗೆ ಈಚಿನ ನನ್ನ ಕ್ಷೇತ್ರಕಾರ್ಯದಲ್ಲಿ ಸಂಶೋಧಿತವಾದ ಒಂದು ಅಭಿಷೇಕಲಕ್ಷ್ಮಿ ಶಿಲ್ಪ-ಶಾಸನವನ್ನು ಸೇರಿಸಬೇಕು. ಅದರ ಸಂಕ್ಷಿಪ್ತ ಸಮೀಕ್ಷೆಯನ್ನು ಇಲ್ಲಿ ನೀಡಲಾಗಿದೆ.

ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಮಡಸೂರ ದೀವಗೇರಿಯಂಚಿನ ಕಾನಿನಲ್ಲಿ ಭೂಗತವಾಗಿದ್ದ ಈ ಶಿಲ್ಪ-ಶಾಸನ ಫಲಕವನ್ನು ಊರವರ ನೆರವಿನಿಂದ ಹೊರತೆಗೆಯಲಾಯಿತು. ಬಹುದಳಗಳ ವಿಶ್ವಪದ್ಮದ ಮೇಲೆ 'ಪದ್ಮಾಸನ'ದಲ್ಲಿ ಕುಳಿತ ದ್ವಿಭುಜ(ಲಕ್ಷ್ಮೀ)ದೇವಿಯು ಎರಡೂ ಕೈಗಳಲ್ಲಿ ಕಮಲಗಳನ್ನು ಭುಜವೆತ್ತರಕ್ಕೆತ್ತಿ ಹಿಡಿದಿದ್ದಾಳೆ. ಆಚೀಚೆ, ಹಿಂಗಡೆ ಎರಡು ಆನೆಗಳು ನಿಂತು, ತಮ್ಮ ಸೊಂಡಿಲಲ್ಲಿ ಹಿಡಿದ ಕಲಶದಿಂದ ಜಲಾಭಿಷೇಕ ಮಾಡುತ್ತಿವೆ. ಇವುಗಳ ಹಿಂಗಡೆ ಇಬ್ಬರು ಚಾಮರ ಧಾರಣೆಯರು ನಿಂತು ಚಾಮರಸೇವೆಗೆಯ್ಯುತ್ತಿದ್ದಾರೆ. ಈ ಅಭಿಷೇಕ ನಿರತ ಆನೆಗಳ ಕೆಳಭಾಗದಲ್ಲಿ ಮತ್ತೆರಡು

ಆನೆಗಳು ಪೂರ್ಣಕುಂಭಗಳಲ್ಲಿ ನೀರನ್ನು ಮಗೆಮಗೆದು ಕೊಡುತ್ತಿವೆ. ಇದೊಂದು ಅಪೂರ್ವ ಸಂಯೋಜನೆ. ಇದಕ್ಕೆ ಪೂರಕವಾಗಿ ಶಿಲ್ಪ ಫಲಕದಂಚಿನಲ್ಲಿ, ಅಭಿಷೇಕ ಲಕ್ಷ್ಮಿಗೆ ಮುಖ ಮಾಡಿ, ಬಾಯಿತೆರೆದು ನಿಂತ ಎರಡು ಭರ್ಜರಿ ಮಕರಗಳು, ಅವುಗಳ ಮೇಲೆ ಕುಳಿತು ಮುನ್ನಡೆಸುತ್ತಿರುವ ಮಾವುತರು, ಮಕರಗಳ ಬಾಯಿಂದ ಹೊರಟ ಕಮಾನು ತೋರಣ–ಎಲ್ಲವೂ ಕೇಂದ್ರಶಿಲ್ಪಕ್ಕೆ ಅಲಂಕಾರಿಕವಾಗಿವೆ ; ಅರ್ಥಪೂರ್ಣವಾಗಿ ಮೂಡಿ ಬಂದಿವೆ.

ಅಭಿಷೇಕಲಕ್ಷ್ಮಿಯ ಯೋಗಾಸನದಲ್ಲಿ ಕುಳಿತ ಭಂಗಿ, ತೊಟ್ಟ ಕೆಲವೇ ಆಭರಣಗಳು, ಪುಟ್ಟ ಕರಂಡ ಕಿರೀಟ ಹಾಗೂ ಪ್ರಭಾವಲಯ, ಕಮಲ ವಿನ್ಯಾಸ-ಎಲ್ಲವೂ ಆಕರ್ಷಣೀಯ, ಮನೋಹರ : ಶಿಲ್ಪ ಸಂಯೋಜನೆ ಸಪ್ರಮಾಣಬದ್ಧವಾಗಿದೆ. ಈ ಬಗೆಯ ಬಿಡಿ ಶಿಲ್ಪ ಫಲಕಗಳಲ್ಲಿ ಇದೊಂದು ಎದ್ದುಕಾಣುವ ಲಕ್ಷಣವೂ ಹೌದು.

ಇಲ್ಲಿ ಮುಖ್ಯವಾಗಿ ದ್ವಿಭುಜ(ಲಕ್ಷ್ಮೀ)ದೇವಿ ಕಮಲಧಾರಿಣಿಯಾಗಿ, ಪದ್ಮ, ಪೂರ್ಣಕಲಶ, ಜಲ, ಆನೆ, ಮೊಸಳೆಗಳೊಡನೆ ಸಂಯೋಜಿತಗೊಂಡದ್ದು ವಿಶ್ವ ಸೃಷ್ಟಿಯ ಸಂಕೇತ; ಫಲವತ್ತತೆ–ಸಮೃದ್ಧಿಗಳ ಸಾಂಕೇತಿಕ ಪ್ರತಿಬಿಂಬ. ಅಂತೆಯೇ ಇವಳು ಜನಪದ ಮೂಲ ಕಲ್ಪನೆಯ ಮಾತೃದೇವತೆ, ಸಿರಿಮಾದೇವಿ, ಗ್ರಾಮೀಣರ ಗ್ರಾಮದೇವಿ, ಬಾಡಬ್ಬೆ (ಬಾದುಬ್ಬೆ, ಬನದಬ್ಬೆ), ಗಡಿ (ಸೀಮೆ)ಲಕ್ಕವ್ವ ಎಂದು ಮುಂತಾಗಿ ಜನಪ್ರಿಯಳಾಗಿ ನಾಮಾಂಕಿತಳು. ಮೂಲ ಜನಪದ ಪರಿಕಲ್ಪನೆಯೊಂದು ಶಿಷ್ಟರೂಪ ಪಡೆದು 'ಗಜಲಕ್ಷ್ಮಿ' ಎಂದು ವೈಭವೀಕರಣಗೊಂಡದ್ದನ್ನು ಒಂದೆಡೆ ನೋಡಿದರೆ, ಆ ಪರಿಕಲ್ಪನೆಯೇ ಮತ್ತೆ ಜನಪದರಲ್ಲಿ ಬಾದುಬ್ಬೆಯಾಗಿಯೋ, ಕಚ್ಚವತಿಯಾಗಿಯೋ ಜನಪದೀಯ ಆರಾಧನೆಗೆ ಒಳಗಾಗಿಯೋ ಉಳಿದಿರುವುದನ್ನು ಮತ್ತೊಂದೆಡೆ ನೋಡಬಹುದಾಗಿದೆ. ಈ ಪರಿಕಲ್ಪನೆಯ ಪರಿಭ್ರಮಣ, ಪ್ರಕ್ರಿಯೆ ನಾವು ತಿಳಿದಿರುವುದಕ್ಕಿಂತ ನಿಗೂಢವಾಗಿದೆ. ಸಾಲದ್ದಕ್ಕೆ ಈ ತರಹದ ಅಭಿಷೇಕಲಕ್ಷ್ಮೀ ಶಿಲ್ಪಫಲಕ ಇರುವ ಕಡೆಗಳಲ್ಲಿ ಹೆಚ್ಚಾಗಿ 'ಕೋಣನತಲೆ'ಕಲ್ಲು ಎಂದು ಕರೆಯಲಾದ ದುರ್ಗೆಯ ಸಾಂಕೇತಿಕ ಶಿಲ್ಪಫಲಕ ಇರುವುದನ್ನು ನಾವು ಅಲಕ್ಷಿಸುವಂತಿಲ್ಲ. ಮಲೆನಾಡು–ಬಯಲುನಾಡ ಪ್ರದೇಶದಲ್ಲಿ ಮುಖ್ಯವಾಗಿ ಸಾಗರ, ಸಿದ್ದಾಪುರ-ಸಿರಸಿ, ಯಲ್ಲಾಪುರ, ಬೆಳಗಾಂವ್, ಧಾರಾವಾಡ ಭಾಗದಲ್ಲಿ ಊರ ಹೊರವಲಯದ ಕಾನಂಚಿನಲ್ಲೊ, ಕೆರೆಯಂಚಿನಲ್ಲೊ ಸಾಮಾನ್ಯವಾಗಿ ನೋಡಸಿಗುವ ಅಭಿಷೇಕಲಕ್ಷ್ಮಿ ಕಲ್ಲು ಹಾಗೂ ಕೋಣನತಲೆಕಲ್ಲುಳ್ಳ ಜಾಗ 'ಗ್ರಾಮದೇವಿಬನ'ವಾಗಿದೆಯೆಂಬುದು ಇಲ್ಲಿ ಸ್ವಾರಸ್ಯಕರವಾಗಿದೆ. ಜನಪದರು ಸೇರಿ ಆರಾಧಿಸುವುದು(ಸಮಾರಾಧನೆ) ಸಂತರ್ಪಣೆ ಮಾಡುವುದು ಕೆಲವೆಡೆಗೆ ಇಂದಿಗೂ ಉಳಿದುಕೊಂಡು ಬಂದಿರುವುದುಂಟು. ಮಳೆ ಬೆಳೆ ಹೆಚ್ಚಾಗಲಿ, ಊರಿಗೆ ಬಂದ, ಬರಬಹುದಾದ ಬಾಧೆ ಪರಿಹಾರವಾಗಲಿ ಎಂದು 'ಬಾಧಾ(ಪರಿಹಾರಿಣಿ)ಅಬ್ಬೆ'ಯನ್ನು ಬೇಡಿಕೊಳ್ಳುವುದುಂಟು.

ಈ ಬಿಡಿಶಿಲ್ಪಗಳ ಕಾಲಮಾನ ನಿರ್ಧಾರವನ್ನು ಶಿಲ್ಪಶೈಲಿಯನ್ನಾಧರಿಸಿ ಅಂದಾಜು ಮಾಡಬಹುದಾದರೂ, ಆದಕ್ಕೆ ಸಂಬಂಧಿಸಿದಂತೆ (ಸಮಕಾಲೀನ) ಶಾಸನ ಸಿಕ್ಕರೆ ಈ ಕೆಲಸ ಇನ್ನೂ ಸುಲಭ; ಅಷ್ಟೇ ಹೆಚ್ಚಿನ ಐತಿಹಾಸಿಕ, ಸಾಂಸ್ಕೃತಿಕ ವಿವರಗಳನ್ನು ತಿಳಿಯಬಹುದು. ಮಡಸೂರಲ್ಲಿ ಪತ್ತೆಯಾದ ಪ್ರಸ್ತುತ ಶಿಲ್ಪ–ಶಾಸನ ಸಾಂತರಸರ ಕಾಲದ್ದು (ಸುಮಾರು ಹತ್ತನೆಯ ಶತಮಾನದ್ದು). ಪೀಠ ಫಲಕದ ಮೇಲೆ ಮೂರು ಸಾಲುಗಳಲ್ಲಿ ಕಂಡರಿಸಿದ ಕನ್ನಡ ಶಾಸನದ ಹಲವು ಅಕ್ಷರಗಳು ತ್ರುಟಿತ, ಅಸ್ಪಷ್ಟವಾಗಿವೆ. ಹೀಗಾಗಿ ಶಾಸನಪಾಠದ ಓದು, ಅರ್ಥಗ್ರಹಿಕೆ ತುಸು ಕಷ್ಟಸಾಧ್ಯವಾಗಿದೆ. ಆದರೂ ಸದ್ಯಕ್ಕೆ ಈ ಶಾಸನಪಾಠವನ್ನು ಹೀಗೆ ಓದಬಹುದು :

೧. ಸ್ವಸ್ತಿಶ್ರೀ ಸಾನ್ತರ ಪರ ಚಕ್ರಗಣ್ಡ ಸೆರ್ವ್ವಾಲ[೦]*ಕೃತಾ(ವ್ಯ)ಂಕರ ಪರಿಸ್ರಿಂಗಟ್ಟ ತೊಲಾ ಪುರುಷ ಸಾನ್ತರನರ

೨. ಸುಗೆಯ್ಯುತ್ತಿರೆ ಮಂಡಸುರ ಆ[ಯಂಣ]ನ ಮಗ ನಯಸಜ್ಜಿತ್ರೈಲೆಗಸು ಕಚ್ಚವತಿ [ಮೂರ್ತಿ]ಯಂ ಮಾಡಿಸಿ....

೩. ....ಪ....ನಜಗಾಮಿಗನ ಮಗ ದಾಸಿಯುಂ ಮಾಡಿಸಿದ ಧ[ರ್ಮ್ಮ]*

ಪರಚಕ್ರಗಂಡ ಸರ್ವಾಲಂಕೃತ ತುಲಾ ಪುರುಷ ಸಾನ್ತಿರಸು (ಸಾನ್ತರಸು) ಅರಸುಗೈಯುತ್ತಿರುವಾಗ, ಮಂಡಸೂರ (ಮಡಸೂರ) ಆಯಣ್ಣನ

ಮಗನಾದ ತೈಲೆಗನು ಕಚ್ಚವತಿಮೂರ್ತಿಯನ್ನು ಮಾಡಿಸಿದನೆಂದೂ, (ಯಾವುದೊ) ಗಾಮಿಗನ ಮಗ ದಾಸಯ್ಯನು ಮಾಡಿಸಿದ (ನೀಡಿದ) ಧರ್ಮ—ಎಂದು ಸದ್ಯಕ್ಕೆ ಅರ್ಥೈಸಲಾಗಿದೆ.

ಮಲೆನಾಡಿನ ಸಾನ್ತರಸರ ಮೂರ್ತಿಶಿಲ್ಪ ಕಲೆಯ ವಿವರಪೂರ್ಣ ಅಧ್ಯಯನ ಅಪೇಕ್ಷಿಸಿದಷ್ಟು ಸಮಗ್ರವಾಗಿ ಇನ್ನೂ ಆಗದ, ಆಗಬೇಕಾದ ಹಿನ್ನೆಲೆಯಲ್ಲಿ ಮಡಸೂರಿನ ಈ ಶಿಲ್ಪ-ಶಾಸನ ತನ್ನದೇ ಆದ ರೀತಿಯಲ್ಲಿ ಉಪಯುಕ್ತವಾಗಿದೆ. ಹುಮ್ಚದ ಸಾಂತರರ ಶಾಸನಗಳ ಸಂಖ್ಯೆ ಸುಮಾರು ೪೭ ಎಂದು ವರದಿಯಾಗಿದೆ. ಇವುಗಳಲ್ಲಿ ಹೆಚ್ಚಿನವು ಸಾನ್ತಳಿಗೆ ಪ್ರದೇಶದಲ್ಲಿ ಅಂದರೆ ಸಾಗರ, ತೀರ್ಥಹಳ್ಳಿ ತಾಲೂಕುಗಳಲ್ಲಿವೆ. ಈ ಪಟ್ಟಿಗೆ ಪ್ರಸ್ತುತ ಶೋಧಿತ ಶಾಸನವು ಒಂದು ಹೊಸ ಸೇರ್ಪಡೆ. ಆದರೆ ಸಾನ್ತರರ ಬಗೆಗಿನ ಹೆಚ್ಚಿನ ವಿವರಗಳು ಇಲ್ಲಿಲ್ಲ.

ಸ್ಥಳೀಯ ಮುಖಂಡ ತೈಲಗ ಮಡಸೂರಿನವನೆಂದು ಹೇಳುವ ಸಂದರ್ಭದಲ್ಲಿ ಊರ ಹೆಸರು ಆಗ (ಹತ್ತನೆಯ ಶತಮಾನದಲ್ಲಿ) ಮಂಡಸುರ ಎಂದಿತ್ತು. ಆ ಊರಿನಲ್ಲಿರುವ ರಾಷ್ಟ್ರಕೂಟ ಕೃಷ್ಣನ ಕಾಲದ 'ಗೋಸಾಸ' (?) ಶಾಸನದಲ್ಲೂ 'ಮಂಡಿಸುರ' ಎಂಬ ಉಲ್ಲೇಖವಿದೆ. ಸ್ಥಳನಾಮ ಅಧ್ಯಯನಕ್ಕೆ ಇದು ಒಂದು ಖಚಿತ ಆಧಾರವನ್ನು ಒದಗಿಸುತ್ತದೆ.

'ಕಚ್ಚವತಿ' (?) ಎಂಬ ಉಲ್ಲೇಖ ಜಿಜ್ಞಾಸೆಗೆ ಒಳಗಾಗಬಹುದು. ಈ ಸಂದರ್ಭದಲ್ಲಿ ಇದೇ ಊರಿನ ರಾಷ್ಟ್ರಕೂಟರ ಕಾಲದ 'ಗೋಸಾಸ' ಶಾಸನದಲ್ಲೂ 'ಕಚ್ಚವ(ತಿ)' (ನಾಲ್ಕನೆಯ ಅಕ್ಷರ ಹೋಗಿದೆ) ಎಂದಿದೆ. ಈ ಭಾಗದಲ್ಲಿ ಕಚವಿ ಎಂಬ ಊರಿದೆ. ಈ ಪ್ರದೇಶದ ಶಾಸನಗಳಲ್ಲಿ 'ಕಚ್ಚವಿಗಳೆ', 'ಕಚ್ಚವಿಕೋಲು' ಎಂದು ಮುಂತಾಗಿ ಭೂಮಾಪನ ಶಬ್ದವೂ ಕಂಡುಬರುತ್ತದೆ. ಕಚ್ಚಿಯ ಗಂಗ, ಕಂಚಲದೇವಿ ಎಂದು ಮುಂತಾಗಿ ಸಾಂತರ ಅರಸ ಅರಸಿಯರ ಹೆಸರಿರುವುದೂ ಉಲ್ಲೇಖನಾರ್ಹ. 'ಕಚ್ಚಪ' ಕುಬೇರನ ನವನಿಧಿಗಳಲ್ಲಿ ಒಂದಾಗಿದೆ. ('ಕಚ್ಚಪಿ' ವಿದ್ಯಾಧಿದೇವತೆಯ ಕೈಯಲ್ಲಿರುವ ವೀಣೆಯ ಹೆಸರು; ಇನ್ನೂ ಕೆಲವು ಅರ್ಥವಿವರಣೆ ಇರಬಹುದು). ಗಜಲಕ್ಷ್ಮಿ ವಿಷ್ಣುವಿನ ಕೂರ್ಮಾವತಾರ ಕಾಲದಲ್ಲಿ (ಕಚ್ಚಪ-ಕೂರ್ಮ) ಮೂಡಿ ಬಂದವಳೆಂದಿದೆ. ಈ ಹಿನ್ನೆಲೆಯಲ್ಲಿ 'ಕಚ್ಚವತಿ' ಎಂಬುದು ಗ್ರಾಮದೇವಿಯ (ಅಭಿಷೇಕ ಲಕ್ಷ್ಮಿ, ಗಜಲಕ್ಷ್ಮಿ ಎಂದು ಜನಜನಿತಳಾದ ದೇವಿಯ) ಮತ್ತೊಂದು ಹೆಸರಾಗಿರಬಹುದೆ ?

ಈ ಶಿಲ್ಪಶಾಸನ ಫಲಕದ ಕೆಳಭಾಗದಲ್ಲಿ ಎರಡು ತೂತುಗಳಿದ್ದು ಅದನ್ನು ಎರಡು ಕಂಬಗಳ ಮೇಲೆ ನಿಲ್ಲಿಡಿಸಲು ಮಾಡಿರಬೇಕು. ಇದೂ ಕೂಡ ಕುಪ್ಪಗಡ್ಡೆ ಗಜಲಕ್ಷ್ಮಿ ಶಿಲ್ಪ-ಶಾಸನದಲ್ಲಿ ಉಲ್ಲೇಖವಾದಂತೆ ತೋರಣ ಫಲಕವಾಗಿರಬೇಕು. ಊರ ಅಗಸೆಬಾಗಿಲಲ್ಲೋ, ಕೆರೆ ತೂಬಿಗೋ ಸಂಬಂಧಿಸಿದಂತೆ ಬಳಸಲಾದ ದೊಡ್ಡ ತೋರಣ ಶಿಲ್ಪಫಲಕ ಆಗಿದ್ದಿರಬೇಕು. ಇದರಿಂದ ಲಲಾಟಬಿಂಬವಾಗಲ್ಲದೆ, ಈ ಬಗೆಯ ಅಭಿಷೇಕಲಕ್ಷ್ಮಿ ಶಿಲ್ಪ ಒಂದೆಡೆ ಜನಪದ ಗ್ರಾಮದೇವಿಯಾಗಿ ಆರಾಧಿಸಿಕೊಂಡರೆ, ಇನ್ನೊಂದೆಡೆ ತೋರಣಶಿಲ್ಪವಾಗಿ ಶೋಭೆಯನ್ನು, ಸಮೃದ್ಧಿ ಫಲವತ್ತತೆಯನ್ನು ಸಂಕೇತಿಸಬಹುದು. ಮಡಸೂರಲ್ಲಿ ಪತ್ತೆಯಾದ ಶಾಸನಸಹಿತ ಶಿಲ್ಪಗಳಂತೆ, ಶಾಸನರಹಿತ ಬಿಡಿಶಿಲ್ಪಗಳು, ಕೋಣನತಲೆಕಲ್ಲುಗಳು ಸಾಕಷ್ಟು ಸಂಖ್ಯೆಯಲ್ಲಿ ನನ್ನ ಗಮನಕ್ಕೆ ಬಂದಿವೆ. ಇದರಿಂದ ವೀರಗಲ್ಲು, ಮಾಸ್ತಿಕಲ್ಲು, ನಿಶಿದಿಗಲ್ಲು, ಗೋಸಾಸ ಕಲ್ಲು ಎಂದು ವರ್ಗೀಕರಿಸಿದಂತೆ 'ಕೋಣನತಲೆಕಲ್ಲು', 'ಅಭಿಷೇಕಲಕ್ಷ್ಮಿಕಲ್ಲು' ಅಥವಾ 'ಬಾದುಬ್ಬೆಕಲ್ಲು' (?) ಎಂದೂ ವಿಭಾಗಿಸಿಕೊಂಡು ಪ್ರತ್ಯೇಕವಾಗಿ ಅಧ್ಯಯನ ಮಾಡುವುದು ಯೋಗ್ಯವಾಗಿದೆಯಲ್ಲವೆ ?*

## ಆಯ್ದ ಗ್ರಂಥಾಧಾರಗಳು

೧. ಎಂ.ಎ.ಆರ್., ೧೯೨೩, ನಂ. ೮೧,೮೨, ೮೩, ೮೪; ೧೯೨೯, ನಂ. ೭೮
೨. ಎ. ಎಸ್., II, ೧೯೭೭, ಪು. ೮೭
೩. ಸಿ. ಶಿವರಾಮಮೂರ್ತಿ : ಶ್ರೀ ಲಕ್ಷ್ಮಿ ಇನ್ ಇಂಡಿಯನ್ ಆರ್ಟ್ ಎಂಡ್ ಥಾಟ್, ನವದೆಹಲಿ, ೧೯೮೨
೪. ಎಂ. ಚಿದಾನಂದಮೂರ್ತಿ:ವಾಗರ್ಥ, ಬೆಂಗಳೂರು, ೧೯೮೧
೫. ಕೆ.ಐ., V (೧೯೬೯), ನಂ. ೯೪,
೬. ಕರ್ನಾಟಕ ಭಾರತಿ, ೬-೨ (೧೯೭೩), ಪು. ೧೨೨; ೧೭-೧ (೧೯೮೪), ಪು. ೧೬೨-೭

* ಈ ಶಾಸನ ಶೋಧನೆಯಲ್ಲಿ ನೆರವಾದ ಶ್ರೀ ಎಲ್. ಟಿ. ಹೆಗಡೆ ಹಾಗೂ ಊರ ಜನರಿಗೆ, ಪ್ರೊ॥ ಶ್ರೀನಿವಾಸ ರಿತ್ತಿ, ಡಾ॥ ಕೆ. ವಿ. ರಮೇಶ್ ಮುಂತಾದವರಿಗೆ ಕೃತಜ್ಞತೆಗಳು.

ಡಿ. ವಿ. ಪರಮಶಿವಮೂರ್ತಿ

# ಬೇಲಿಮಠದ ಶಾಸನ

ಪ್ರಸ್ತುತ ಶಾಸನವು ಬೆಂಗಳೂರು ನಗರದ ಬಿನ್ನಿಮಿಲ್ಲಿನ ಬಲಪಕ್ಕಕ್ಕಿರುವ ಬೇಲಿಮಠದಲ್ಲಿದೆ. ಮಠದ ಆವರಣದಲ್ಲಿರುವ ದೇವಾಲಯದ ಬಲಪಕ್ಕಕ್ಕಿರುವ ಬಸವನ ಮಂಟಪದ ಹಿಂಭಾಗದ ಗೋಡೆಯ ತಳಭಾಗದಲ್ಲಿ ಈ ಶಾಸನವಿದೆ. ಇದು ಎಲ್ಲೂ ಪ್ರಕಟವಾಗಿರುವುದಿಲ್ಲ. ಶಾಸನದ ಕಾಲ ಕ್ರಿ. ಶ. ೧೭೬೧. ಶಾಸನದ ಉದ್ದ ೮೮ ಸೆಂ. ಮೀ., ಅಗಲ ೨೦ ಸೆಂ. ಮೀ. ಇದೆ. ಶಾಸನದ ಪಾಠ ಐದುಸಾಲುಗಳಿದ್ದು, ಲಿಪಿಯು ಸ್ಫುಟವಾಗಿದೆ. ಈ ಶಾಸನದ ಹಿಂಭಾಗದಲ್ಲಿ ಮಂಟಪದ ಒಳಗೆ ಉತ್ತರಕ್ಕೆ ಅಭಿಮುಖವಾಗಿರುವ ಶಿಲೆಯ ಪಾದಗಳನ್ನು ಕೆತ್ತಲಾಗಿದೆ.

ಈ ಶಾಸನದಲ್ಲಿ ಹೊಸಕೋಟೆಯ ಮಹಂತೇಶ್ವರ ಪ್ರಭು ಮತ್ತು ಅವರ ಆಪ್ತಶಿಷ್ಯರಾದ ಮರಿಸಿದ್ದಲಿಂಗ ದೇಶಿಕರ ಉಲ್ಲೇಖವಿದೆ. ಮಹಂತೇಶ್ವರಪ್ರಭುವು ಶಿವೈಕ್ಯರಾದಾಗ ಶಿಷ್ಯರಾದ ಮರಿಸಿದ್ಧಲಿಂಗ ದೇಶಿಕರು ಸಮಾಧಿಯನ್ನು ನಿರ್ಮಿಸಿದ ವಿಷಯವನ್ನು ಇದು ಹೇಳುತ್ತದೆ. ಶಾಸನದಲ್ಲೇ ಅಲ್ಲದೆ ಕಾವ್ಯಗಳಲ್ಲಿಯೂ ನಾವು ಈ ಗುರು –ಶಿಷ್ಯರ ಸಂಬಂಧವನ್ನು ಗುರುತಿಸಬಹುದು. ಈ ಮರಿಸಿದ್ಧಲಿಂಗ ದೇಶಿಕರು ಹಲವಾರು ಕೃತಿಗಳನ್ನೂ ರಚಿಸಿದ್ದಾರೆ. ಇವರ ಕೃತಿಗಳಾದ 'ಮಾಲಾಟೀಕೆ' ಮತ್ತು 'ಏಕೋತ್ತರಶತಸ್ಥಲ ವಾಖ್ಯಾನ'ಗಳಲ್ಲಿ ತಮ್ಮ ಗುರುಗಳಾದ ಹೊಸಕೋಟೆ ಮಹಂತೇಶ್ವರ ಪ್ರಭುಗಳನ್ನು ಉಲ್ಲೇಖಿಸಿದ್ದಾರೆ :

ವರ ಹೊಸಕೋಟೆಯ ಮಹಾಂತೇ
ಶ್ವರನನು ಭವದೊಳಗೆ ಪೇಳ್ದ ಶಬ್ದ ಸಮೂಹನ
ಪರಿವಿಡಿಗಳಿಂದ ಸೇರಿಸಿ
ಬರೆದೆ ಮರಿಸಿದ್ಧಲಿಂಗ ದೇಶಿಕದೇವಂ[1]

ಶಿವಾನುಭಾವಿಗಳಾದ ಹೊಸಕೋಟೆಯ
ಮಹಾಂತಸ್ವಾಮಿಯವರ ವಂಶೋದ್ಭವ
ರಾದ ಮರಿಸಿದ್ಧಲಿಂಗಯ್ಯನವರು
ಬರೆಸಿದ ಸ್ಥಲದ ವ್ಯಾಖ್ಯಾನದ ಯಥಾಪ್ರತಿಯು[2]

ಮೇಲೆ ಉಲ್ಲೇಖವಾಗಿರುವ 'ಮಹಂತೇಶ್ವರನನು ಭವದೊಳಗೆ ಪೇಳ್ದ ಶಬ್ದ ಸಮೂಹನ....', 'ಶಿವಾನುಭವಿಗಳಾದ' ಮುಂತಾದ ಮಾತುಗಳಿಂದ ಮತ್ತು ಶಾಸನದಲ್ಲಿ ಬಂದಿರುವ 'ಸಡುಸ್ತಲ ಚಕ್ರವರ್ತಿ' (ಷಟ್‌ಸ್ಥಲ ಚಕ್ರವರ್ತಿ) ಎಂಬ ಉಲ್ಲೇಖಗಳಿಂದ ಮಹಂತೇಶ ಪ್ರಭುಗಳು ಅನುಭಾವಿಗಳೂ, ದಾರ್ಶನಿಕರೂ ಮತ್ತು ಧಾರ್ಮಿಕ ಸಾಧನೆ ಸಿದ್ಧಿಯನ್ನು ಪಡೆದವರೂ ಆಗಿದ್ದರು ಎಂದು ಹೇಳಬಹುದು.

ಡಾ|| ವೀರಣ್ಣ ರಾಜೂರ ಅವರು 'ಮಹಂತಿನ ತಾರಾವಳಿ' ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ಇದರ ಕರ್ತೃ ಮರಿಸಿದ್ಧಲಿಂಗ ದೇಶಿಕ ಎಂಬುವನೇ. ಅವರು ತಮ್ಮ ಕೃತಿಯ ಪ್ರಸ್ತಾವದಲ್ಲಿ "........ಇವನು ತೋಂಟದ ಸಿದ್ಧಲಿಂಗ ಯತಿಗಳ ಶಿಷ್ಯ ಪರಂಪರೆಗೆ ಸೇರಿದವನಾಗಿದ್ದು, ಸುಮಾರು ೧೭ನೇ ಶತಮಾನದಲ್ಲಿ ಆಗಿ

1 ಜಿ. ಎಮ್. ಉಮಾಪತಿಶಾಸ್ತ್ರಿ (ಸಂ.) : ಮರಿಸಿದ್ಧಲಿಂಗನ 'ಮಾಲಾಟೀಕೆ', ಅಂತ್ಯೋಲ್ಲೇಖ (೧೦೭-೧೩)

2 ಡಾ|| ಬಿ.ಆರ್. ಹಿರೇಮಠ: ಹಸ್ತಪ್ರತಿ–ಲಿಪಿಕಾರರು (ಏಕೋತ್ತರ ಶತಸ್ಥಲದ ಉಲ್ಲೇಖ) ಸಾಧನೆ, ೧೨-೨ (೧೯೮೩), ಪು.೪೮

ಹೋದವನಿರಬೇಕೆಂದು ಊಹಿಸಬಹುದಾಗಿದೆ” ಎಂದಿದ್ದಾರೆ.[3] ಈ ತಾರಾವಳಿಯ ಕೊನೆಯಲ್ಲಿರುವ ಒಂದು ಕಂದ ಪದ್ಯ ಹೀಗಿದೆ :

ಧರೆಯೊಳು ಗುರುಮಹಂತಿನ
ಬಿರುದಾವಳಿ ಮಹಿಮೆಯೆನಿಪ ತಾರಾವಳಿಯಂ
ಶರಣರು ಬರೆದೋದೆ ಮೋಕ್ಷವು
ದೊರೆವುದು ಮರಿಸಿದ್ಧಲಿಂಗದೇಶಿಕ ರಜತಂ। [4]

ಈ ಪದ್ಯದಿಂದ ಮಹಂತಿನ ತಾರಾವಳಿಯನ್ನು ಬರೆದವರು ಯಾರೆಂಬುದು ಸ್ಪಷ್ಟವಾಗುತ್ತದೆ. ಈ ಶಾಸನದಲ್ಲೂ ಇದೇ ಹೆಸರಿರುವುದರಿಂದ ಇವರಿಬ್ಬರೂ ಒಬ್ಬನೇ ಆಗಿರಬೇಕು. ಶಾಸನದ ಕಾಲ ಕ್ರಿ. ಶ. ೧೭೬೧ ಎಂದು ಖಚಿತವಾಗಿರುವುದರಿಂದ, ಮೇಲಿನ ತಾರಾವಳಿಯ ಸಂಪಾದಕರು ಹೇಳಿರವಂತೆ ಮರಿಸಿದ್ಧಲಿಂಗ ದೇಶಿಕರ ಕಾಲ ಸುಮಾರು ೧೭ ನೇ ಶತಮಾನವಲ್ಲ; ಅದು ೧೮ನೇ ಶತಮಾನ (ಕ್ರಿ.ಶ. ೧೭೬೧) ಎಂದು ಹೇಳಬಹುದಾಗಿದೆ.[5] ಕವಿಚರಿತಕಾರರು ಉಲ್ಲೇಖ ಮಾಡಿರುವ ಪಟ್ಟುಗಂಬಳಿ ಸಿದ್ಧಲಿಂಗಸ್ವಾಮಿ[6] (ಕಾಲ : ಕ್ರಿ. ಶ. ೧೭೦೦) ಯನ್ನು ಶ್ರೀ ಎಸ್. ಶಿವಣ್ಣನವರು ಇವನು ಮರಿಸಿದ್ಧಲಿಂಗ ದೇಶಿಕನಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಮತ್ತು 'ಅಷ್ಟಾವರಣ ಪ್ರಶಸ್ತಿ' ಹಾಗೂ 'ಭಾವಚಿಂತಾರತ್ನ ಟೀಕೆ' ಎಂಬ ಕೃತಿಗಳನ್ನು ಅವನ ಹೆಸರಿನಲ್ಲಿ ಉಲ್ಲೇಖಿಸಿದ್ದಾರೆ.[7]

ಈ ಶಾಸನದ ಮತ್ತೊಂದು ಮುಖ್ಯ ವೈಶಿಷ್ಟ್ಯವೆಂದರೆ, ಈ ಶಾಸನದಲ್ಲಿ 'ಶಿವಾನುಭಾವಿ', 'ಶಿವಯೋಗ', 'ಶೂನ್ಯಸಿಂಹಾಸನ', 'ಅನುಭವ ಮಂಟಪ', ಸಡುಸ್ತಲ ಚಕ್ರವರ್ತಿ' (ಪಟ್‌ಸ್ಥಲ ಚಕ್ರವರ್ತಿ), 'ಮುಕ್ತಿ ಮಂಟಪ' ಮುಂತಾದ ವೀರಶೈವ ಪಾರಿಭಾಷಿಕ ಶಬ್ದಗಳ ಪ್ರಯೋಗಗಳಿವೆ. ಒಂದೇ ಶಾಸನದಲ್ಲಿ ಇಷ್ಟೊಂದು ವೀರಶೈವ ಪಾರಿಭಾಷಿಕ ಪದಗಳ ಪ್ರಯೋಗ ಅಪರೂಪವಾದುದಾಗಿದೆ. ಈ ದೃಷ್ಟಿಯಿಂದ ಈ ಶಾಸನ ಬಹಳ ಪ್ರಾಮುಖ್ಯತೆಯನ್ನು ಪಡೆಯುತ್ತದೆ.

ಶಾಸನದಲ್ಲಿ ಮಹಂತೇಶ್ವರ ಪ್ರಭುಗಳನ್ನು 'ಹೊಸಕೋಟೆಯ ಮಹಂತೇಶ್ವರಪ್ರಭು' ಎಂದು ಕರೆದಿರುವುದರಿಂದ, ಹೊಸಕೋಟೆಗೆ ಭೇಟಿಯಿತ್ತು ಪರಿಶೀಲಿಸಿದಾಗ, ಅಲ್ಲಿ ಮಹಂತೇಶ್ವರಮಠವಿರುವುದು ಕಂಡುಬಂದಿವೆಯಾದರೂ ಶಾಸನಕ್ಕೆ ಪೂರಕವಾದ ಯಾವ ದಾಖಲೆಗಳೂ ಕಂಡುಬರುವುದಿಲ್ಲ.[8] ಆದರೂ ಹೊಸಕೋಟೆಯ ಮಹಂತೇಶಮಠಕ್ಕೂ, ಬೆಂಗಳೂರಿನ ಬೇಲಿಮಠಕ್ಕೂ ಯಾವ ರೀತಿಯದಾದರೂ ಸಂಬಂಧ ಇದ್ದಿರಬಹುದು. ಈ ಎಲ್ಲ ವಿಷಯಗಳ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ.

ಶಾಸನ ಪಾಠ

೧ ಶ್ರೀಮತು ಶಿವಾನುಭಾವಿಗಳಾದ ಹೊಸಕೋಟೆಯ ಮಹಂತೇಶ್ವರ ಪ್ರಭು ಉವಿಸು ಸಂವತ್ಸರ

೨ ದ ಮಾರ್ಗಶಿರ ಮಾಸ ಶುದ್ಧ ಪಂಚಮಿಯು ಸೋಮವಾರದಲ್ಲಿ ಶಿವಯೋಗದೊಳು ನೆಲಸಿ

೩ ದ ಶೂನ್ಯಸಿಂಹ್ವಾಸನದ ಮೇಲಣ ಅನುಭವ ಮಂಟಪ ಪಾಲ್ಗುಣದಲ್ಲಿ ನಿರ್ಮಿತವಾಯ್ತು

೪ ಶ್ರೀಮತು ಸಡುಸ್ತಲ ಚಕ್ರವರ್ತಿ ಯೆಂನೊಡೆಯ ಹೊಸಕೋಟೆಯ ಮಹಂತ ಗುರುಮೂರ್ತಿಯ ಪಾದಾ

೫ ಂಬುಜಭೃಂಗ ಮರಿಸಿದ್ಧಲಿಂಗ ದೇಸಿಕ ರಚಿತ

3 ಡಾ॥ ವೀರಣ್ಣ ರಾಜೂರ : ಮಹಂತಿನ ತಾರಾವಳಿ, ಪರಂಜ್ಯೋತಿ, ೧೬-೪ (೧೯೮೩), ಪು. ೨೮೪

4 ಅದೇ, ಅಂತ್ಯದ ಕಂದ ಪದ್ಯ, ಪು. ೨೦೯

5 ಇವರು ತಮ್ಮ 'ಮಹಂತಿನ ತಾರಾವಳಿ'ಯ ಅನೇಕ ಕಡೆ 'ಗುರುಮಹಂತ', 'ಮಹಂತಿನ' ಎಂಬ ಮಾತುಗಳನ್ನು ಬಳಸಿರುವುದರಿಂದ, ಅವರು 'ಮಹಂತೇಶ್ವರ ಪ್ರಭುಗಳು' ಆಗಿರಬಹುದು ಎಂದು ಊಹಿಸಬಹುದು

6 ಆರ್. ನರಸಿಂಹಚಾರ್ : ಕರ್ಣಾಟಕ ಕವಿಚರಿತೆ, ಸಂ. ii, ಪು. ೪೯೮

7 ಎಸ್. ಶಿವಣ್ಣ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ-೪, ಅನುಬಂಧ, ಪು. ೪೭೬

8 ಇಂದು ಆ ಮಠ ಮನೆಯಾಗಿ ಪರಿವರ್ತನೆಯಾಗಿ ಅಸ್ತಿತ್ವ ಕಳೆದುಕೊಂಡಿದೆ

ಮುಕ್ತಿಮಂಟಪ ಕುಸುಮ ತವ ಚರಣ
ಸಮರ್ಪಣಂ.

**ಸಾರಾಂಶ :** ಶಿವಯೋಗಿಗಳಾದ ಹೊಸಕೋಟೆಯ ಮಹಾಂತೇಶ್ವರ ಪ್ರಭುಗಳು ಶಿವೈಕ್ಯರಾದಾಗ ಈ ಶೂನ್ಯಸಿಂಹಾಸನದ ಮೇಲಣ ಅನುಭವಮಂಟಪ ಫಾಲ್ಗುಣದಲ್ಲಿ ನಿರ್ಮಿತವಾಯಿತು. ಇದನ್ನು ಷಟ್‌ಸ್ಥಲ ಚಕ್ರವರ್ತಿಯಾದ ಮಹಂತೇಶ್ವರ ಪ್ರಭುಗಳ ಆಪ್ತ ಶಿಷ್ಯನಾದ ಮರಿಸಿದ್ಧಲಿಂಗದೇಶಿಕನು ರಚಿಸಿ ಅವರ ಪಾದಗಳಿಗೆ ಅರ್ಪಿಸಿದನು.*

* ಈ ಶಾಸನ ಪ್ರಕಟನೆಗೆ ಅನುಮತಿಯಿತ್ತು ಸಹಕರಿಸಿದ ಬೇಲಿಮಠದ ಪೂಜ್ಯರಾದ ಶ್ರೀ ಶ್ರೀ ಶಿವರುದ್ರಸ್ವಾಮಿಗಳಿಗೂ, ಶಾಸನವನ್ನು ಮತ್ತು ಮರಿಸಿದ್ಧಲಿಂಗದೇಶಿಕನ ಕೃತಿಗಳನ್ನು ನನ್ನ ಗಮನಕ್ಕೆ ತಂದು ಎಲ್ಲ ನೆರವು ನೀಡಿದ ಶ್ರೀಎಸ್. ಶಿವಣ್ಣನವರಿಗೂ, ಶಾಸನಪಾಠವನ್ನು ಪರಿಷ್ಕರಿಸಿಕೊಟ್ಟ ಗುರುಗಳಾದ ಶ್ರೀ ದೇವರ ಕೊಂಡಾರೆಡ್ಡಿಯವರಿಗೂ ಹಾಗೂ ಲೇಖನದ ಅಂತಿಮ ರೂಪಕ್ಕೆ ನೆರವು ನೀಡಿದ ಶ್ರೀ ನಾ. ಗೀತಾಚಾರ್ಯ ಅವರಿಗೂ ನಾನು ಆಭಾರಿಯಾಗಿದ್ದೇನೆ.

ಪಿ. ವಿ. ಕೃಷ್ಣಮೂರ್ತಿ

# ಪುರಧರ್ಮ ಶಾಸನಗಳು-ಒಂದು ಅವಲೋಕನ

ಶಾಸನ ಪ್ರಪಂಚದಲ್ಲಿ ದಾನಶಾಸನಗಳದೇ ಮೇಲುಗೈ. ಹಾಗೆಯೇ ಅವುಗಳನ್ನು ಅವಲೋಕಿಸಿದರೆ, ಅನೇಕ ಪ್ರಕಾರ, ಒಳಪ್ರಕಾರಗಳು ಗೋಚರಿಸುತ್ತವೆ. ಅಲ್ಲದೆ ಅವು ವೈವಿಧ್ಯಮಯವಾಗಿಯೂ ಇರುವುದು ಕಂಡು ಬರುತ್ತದೆ. ಆದ್ದರಿಂದ ಈ ದಿಸೆಯಲ್ಲಿ ಒಂದು ಸಮಗ್ರ ಅಧ್ಯಯನ ಇನ್ನೂ ನಡೆಯಬೇಕಾದ ಅಗತ್ಯವಿದ್ದು, ಕರ್ನಾಟಕದ ದಾನಶಾಸನಗಳ ಸ್ವರೂಪ, ನೆಲೆ, ಹಿನ್ನೆಲೆಗಳು ಪ್ರಕಾಶಗೊಳ್ಳಬೇಕಾಗಿದೆ.

ಹಲವಾರು ದಾನಶಾಸನಗಳಲ್ಲಿ ಕಂಡುಬರುವ ಪುರಧರ್ಮ ಶಾಸನ,[1] ಪುರವಾಗಿ ಕೊಟ್ಟ,[2] ಪುರವ ಮಾಡಿ,[3] ಪುರವನು ಬಿಟ್ಟ,[4] ಪುರಮಠವಾಗಿ ಕೊಟ್ಟ,[5] ಪುರವರ್ಗ ದಾನ,[6] ಶಿವಪುರವಾಗಿ ಕೊಟ್ಟ,[7] ಪಾರ್ಶ್ವಪುರವಾಗಿ ಮಾಡಿ,[8] ಸುಧರ್ಮಪುರವಾಗಿ ಕೊಟ್ಟ,[9] ಪೆರುಮಾಳಪುರವಾಗಿ ಮಾಡಿ,[10] ಗೋಪಾಳಪುರವಾಗಿ ಕೊಟ್ಟೆವು,[11] ಇತ್ಯಾದಿ ಉಲ್ಲೇಖಗಳು ನಮ್ಮ ಗಮನ ಸೆಳೆಯುತ್ತವೆ.

ಈ ಹಿನ್ನೆಲೆಯಲ್ಲಿ ಪುರಧರ್ಮಗಳ ಪ್ರಾಚೀನ ಉಲ್ಲೇಖಗಳನ್ನು ಗಮನಿಸಿದಾಗ, ಆ ಕಾಲದಲ್ಲಿ ವ್ಯಕ್ತಿಯೋರ್ವನನ್ನು ಗೌರವಿಸುವ ಅಂದರೆ ಪುರಸ್ಕರಿಸುವ ಕುರುಹಾಗಿ ಪುರಧರ್ಮಗಳನ್ನು ನೀಡುತ್ತಿದ್ದರೆಂಬ ಅಂಶ ಗೋಚರವಾಗುತ್ತದೆ.

ಪರಮ ಭಾಗವತ ಕವಿಯಾದ ಪೋತನನು ತನ್ನ 'ಆಂಧ್ರ ಮಹಾಭಾಗವತ'ದಲ್ಲಿ ತನ್ನ ಕಾವ್ಯವನ್ನು ಮನುಜೇಶ್ವರಾಧಮರಿಗೆ ಕೊಟ್ಟು ಪುರ, ವಾಹನ, ಆಭರಣ ಇತ್ಯಾದಿಗಳ ಗೌರವವನ್ನು ಆಶಿಸುವುದಿಲ್ಲವೆಂದಿರುವುದು ಅಂದಿನ ಸಮಾಜದಲ್ಲಿ ಪುರಗಳನ್ನು ಗೌರವಸೂಚಕವಾಗಿ

1 ಎಪಿಗ್ರಾಫಿಯ ಕರ್ನಾಟಿಕ, ಸಂಪುಟ IX, ಕಾಸಕಾನಹಳ್ಳಿ ೮, ಕ್ರಿ.ಶ. ೧೪೮೫
2 ಅದೇ, XVI, ತುಮಕೂರು ೧೨೮; ಅದೇ, VII (ಹೊಸ ಆವೃತ್ತಿ), ಮಳವಳ್ಳಿ ೪೩, ಕ್ರಿ.ಶ. ೧೫೧೩
3 ಅದೇ, VII, ಮಳವಳ್ಳಿ ೨೪, ಕ್ರಿ.ಶ. ೧೫೭೩ (ಹೊಸ ಆವೃತ್ತಿ)
4 ಅದೇ, XVI, ಚಿಕ್ಕನಾಯಕನಹಳ್ಳಿ ೮೩, ಕ್ರಿ.ಶ. ೧೫೨೮; ಅದೇ, XI, ಚಿತ್ರದುರ್ಗ ೬೭, ಕ್ರಿ.ಶ. ೧೩೪೫
5 ಅದೇ, IX, ಚನ್ನಪಟ್ಟಣ ೧೫೮, ಕ್ರಿ.ಶ. ೧೪೭೮ ?
6 ಅದೇ, VII, ನಾಗಮಂಗಲ ೬ (ಹೊಸ ಆವೃತ್ತಿ); ಅದೇ, IX, ನೆಲಮಂಗಲ ೮೧
7 ಅದೇ, XVI, ಗುಬ್ಬಿ ೭೬, ಕ್ರಿ. ಶ. ೧೫೫೫; ಅದೇ VII, ಮಂಡ್ಯ ೩೪, ಕ್ರಿ.ಶ. ೧೨೫೧ (ಹೊಸ ಆವೃತ್ತಿ)
8 ಅದೇ, VII, ನಾಗಮಂಗಲ ೧೬೯ ಕ್ರಿ.ಶ. ೧೧೪೨
9 ಅದೇ, VII, ಮಂಡ್ಯ ೪೩, ಕ್ರಿ.ಶ. ೧೪೭೭
10 ಅದೇ, XI, ಚಿತ್ರದುರ್ಗ ೭
11 ಅದೇ, ಚಿತ್ರದುರ್ಗ ೮, ಕ್ರಿ.ಶ. ೧೨೬೦

ಕೊಡುತ್ತಿದ್ದುದರ ಸುಳಿವು ನೀಡುತ್ತದೆ.[12] ಇದಕ್ಕೆ ಪೂರಕವಾಗಿ ಕನ್ನಡದ ಮಹಾಕವಿ ಪಂಪನಿಗೆ ಅರಿಕೇಸರಿಯು ಅವನ 'ವಿಕ್ರಮಾರ್ಜುನವಿಜಯ' ಕಾವ್ಯಕ್ಕೆ ಪುರಸ್ಕಾರವಾಗಿ ನೀಡಿರುವ ಧರ್ಮಪುರವು ಕೂಡ ಒಂದು 'ಪುರಧರ್ಮ'ವಾಗಿರಬೇಕೆಂಬ ಅಂಶವು "ಕವಿತಾಗುಣಾರ್ಣವನ ಕೀರ್ತ್ತಿಯಮೂರ್ತಿವೋಲಾಗಿ ದಕ್ಷಿಣಾರ್ದ್ಧದ ವೃಷಭಾದ್ರಿಯ ವೃಷಭೇಶ್ವರ ಬಿಂಬಸನಾಥಮೆಂಬಲಂ ಪೊದವೆ ನಿಜ ದ್ವಿಜಾವಸಥಪರ್ವತಮಂ ಜಿನಚೈತ್ಯಮಾಗೆ ಮಾಡಿದ" ಮತ್ತು "ವಿನುತ ಚಾಳುಕ್ಯ ವಂಶಪತಿ ಮಿಕ್ಕರಿಕೇಸರಿ ವಿಕ್ರಮಾರ್ಜುನವಿಜಯಕ್ಕೆ ಧರ್ಮಪೂರಮೆನ್ದುಮದೀಯಮಿದೆನ್ದು ಕೀರ್ತ್ತಿಶಾಸನಮುನೆಕೊಟ್ಟ" ಎಂಬ ಪ್ರಸಿದ್ಧ ಜಿನವಲ್ಲಭನ ಕುರಿಕ್ಯಾಲಂನ ಶಾಸನದ[13] ವಾಕ್ಯವೃಂದಗಳಿಂದಲೂ ಮತ್ತು ಪಂಪನ 'ವಿಕ್ರಮಾರ್ಜುನವಿಜಯ' ಕಾವ್ಯದ ಹದಿನಾಲ್ಕನೆಯ ಆಶ್ವಾಸದಲ್ಲಿ ಬರುವ ೫೬ನೇ ಪದ್ಯದಿಂದಲೂ[14] ವ್ಯಕ್ತವಾಗುತ್ತದೆ. ಮುಂದಿನ ಪದ್ಯದಲ್ಲಿಯೇ ಬರುವ 'ಧರ್ಮದ ಧರ್ಮವುರಂ' ಎಂಬ ಉಲ್ಲೇಖವೂ ಕೂಡ ದ್ವಿಜಾವಸಥವಾಗಿದ್ದ ಅಂದರೆ ಬ್ರಾಹ್ಮಣರಿಂದ ವಾಸಿಸಲ್ಪಡುತ್ತಿದ್ದ ಅಗ್ರಹಾರವನ್ನು ಧರ್ಮಪುರವೆಂದು ಹೆಸರಿಟ್ಟು ಪಂಪನಿಗೆ ಪುರಸ್ಕಾರಪೂರ್ವಕವಾಗಿ ಶಾಸನವಾಕಿಸಿ ಕೊಟ್ಟ ವಿಷಯವನ್ನೇ ಪ್ರತಿಪಾದಿಸುತ್ತಿರುವಂತೆ ತೋರುತ್ತದೆ. ಅನೇಕ ವಿದ್ವಾಂಸರು ಭಾವಿಸಿರುವಂತೆ, ಪಂಪನಿಗೆ ಪುರಸ್ಕಾರ ಪೂರ್ವಕವಾಗಿ ದೊರೆತದ್ದು ಅಗ್ರಹಾರವಲ್ಲ ; ಆದರೆ ಅದೊಂದು ಪುರಧರ್ಮವೇ ಆಗಿದೆಯೆಂದು ಇದರಿಂದ ಮನಗಾಣಬಹುದಾಗಿದೆ.

'ಪುರ'ವು 'ನಗರ'ದಂತೆ ಪ್ರಾಚೀನಕಾಲದಿಂದಲೂ ಸ್ಥಳನಾಮಗಳನ್ನು ತಿಳಿಸುವಲ್ಲಿ ಪ್ರಭಾವಶಾಲಿಯಾದ ಪಾತ್ರವನ್ನು ವಹಿಸಿದೆ. ಋಗ್ವೇದದಲ್ಲೇ ಬಳಸಲ್ಪಟ್ಟಿರುವ 'ಪುರ' ಶಬ್ದಕ್ಕೆ ವಿಸ್ತಾರವಾದ, ಭದ್ರವಾದ ಕೋಟೆಯನ್ನುಳ್ಳ ಸ್ಥಳವೆಂಬ ಅರ್ಥವಿದೆ. ಹಿಂದೆ ಆರ್ಯರ ಕಾಲದಲ್ಲಿ ಗೋಧನವೇ ಧನವೆಂಬಂತ್ತಿದ್ದು 'ಪುರವನ'ವೆಂಬುದು ದನಗಳನ್ನು ಸಂರಕ್ಷಿಸಲು ಇದ್ದ ಹೆಬ್ಬಾಗಿಲಿನಂತಿರುತ್ತಿತ್ತು.[15] ಮಾನಸಾರದ ಪ್ರಕಾರ, ಒಂದು ಊರು ಪುರವೆನಿಸಿಕೊಳ್ಳಬೇಕಾದರೆ ಅದರ ಸುತ್ತಮುತ್ತಲು ಆರಾಮಗಳು, ತೋಟಗಳು, ಬಹುವಿಧವಾದ ಜನರು ವಾಸವಾಗಿರಬೇಕು ; ಸಪ್ತದೇವತೆಗಳ ದೇವಾಲಯಗಳಿಂದ ರಾರಾಜಿಸುತ್ತಿರಬೇಕು.[16] ಕಿಟ್ಟಲ್ ನಿಘಂಟು 'ಪುರ' ಪದಕ್ಕೆ ಪೊನಲ್, ಕಾಲುವೆ, ಕೋಟೆ, ಇತ್ಯಾದಿ ಅರ್ಥಗಳನ್ನು ನೀಡುತ್ತದೆ. ತುಮಕೂರು ಜಿಲ್ಲೆಯ ಶಾಸನವೊಂದರಲ್ಲಿ "ಗ್ರಾಮಂ ಶಿವನಗರಾಖ್ಯಾಂ ವಿದ್ವಜ್ಜನ ಮನೋಹರಂ । ವಾಪೀ ಕೂಪ ತಟಾಕಾದಿ ನಿರ್ಝರಾ

---

12 ಇಮ್ಮನುಜೇಶ್ವರಾಧಮುಲಕಿಚ್ಚಿ ಪುರಂಬುಲುವಾಹನಂಬುಲುನ್
ಸೊಮ್ಮುಲು ಕೊನ್ನಿಪುಚ್ಚುಕೊನಿ ಚೊಕ್ಕಿ ಶರೀರಮುವಾಸಿ ಕಾಲುಚೇ ।
ಸಮ್ಮೆಟ ವ್ರೇಟುಲನ್ ಬಡಕ ಸನ್ಮತಿ ಶ್ರೀಹರಿಕಿಚ್ಚಿ ಚೆಪ್ಪೆನೀ
ಬಮ್ಮೆರ ಪೋತರಾಜೊಕಡು ಭಾಗವತಂಬು ಜಗದ್ಧಿತಂಬುಗನ್
ಆಂಧ್ರಮಹಾಭಾಗವತಮು —ಅವತಾರಿಕೆಯಲ್ಲಿ

13 ಎ. ಎಂ. ಅಣ್ಣಿಗೇರಿ, ಆರ್. ಶೇಷಶಾಸ್ತ್ರಿ (ಸಂ.) : ಶಾಸನಸಂಗ್ರಹ, ಬೆಂಗಳೂರು, ೧೯೮೨, ಪು. ೧೨

14 ಬೀರದಳವಿಯ ಪನ್ನಿಯ ಚಾಗದ ಶಾಸನಂ ಚಂದ್ರಾರ್ಕ ತಾರಂಬರಂ
ಮೇರು ನಿಲ್ವಿನಂ ನಿಲವೇಳ್ಕುಂ ಕಾವ್ಯಕ್ಕೆ ತಾನಿತ್ತಂ ಶಾಸನದಗ್ರಹಾರಂ
ಸಾರಮೆಂಬಿನಂ ಪೆಸರಿಟ್ಟು ತಾನೀಯೆ ಹರಿಗನ ಧರ್ಮಭಂಡಾರದಂತೆ
ಸಾರಮಾದುದು ಬಿಟ್ಟಗ್ರಹಾರಮಾ ಬಚ್ಚೆ ಸಾಸಿರದೊಳಂ ಧರ್ಮವುರಂ ॥೫೬॥
(ಈ ಪದ್ಯದಲ್ಲಿ ಬರುವ ಬಚ್ಚೆ ಸಾಸಿರವು—ಸಬ್ಬಿ ಸಾಸಿರದ ಪಾಠಾಂತರವೇ ಆಗಿದೆ)
ವಿಕ್ರಮಾರ್ಜುನವಿಜಯ —ಚತುರ್ದಶಾಶ್ವಾಸಂ

15 S. Mulay : Studies in the Historical and Cultural Geography & Ethnography of Deccan, Poona, 1972, p 106

16 ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ೧೯೬೬, ಪು. ೩೪೯.

೧೫೩

ದಿಭಿರಂನ್ವಿತಂ । ನರಸಿಂಹಪುರಂ ಚೇತಿ ಪ್ರತಿನಾಮ್ನಾ ಪ್ರಕಾಶಿತಂ ॥" ಎಂಬ ಉಲ್ಲೇಖವಿದೆ.[17] ಇಲ್ಲಿ ಎಂತಹ ಪ್ರದೇಶವನ್ನು ಪುರವೆನ್ನುತ್ತಿದ್ದರು ಎಂಬುದನ್ನು ತಿಳಿಸುವುದಲ್ಲದೆ ಪುರದ ನಿರ್ಮಾಣದ ಬಗ್ಗೆ ಬೆಳಕು ಚೆಲ್ಲಿ 'ಪುರ' ಪ್ರತ್ಯಯವುಳ್ಳ ಹೊಸ ಹೆಸರನ್ನೂ ನೀಡುತ್ತಿದ್ದ ವಿಷಯ ತಿಳಿದು ಬರುತ್ತದೆ.

ಈ ಹಿನ್ನೆಲೆಯಲ್ಲಿ ಪಂಪನ 'ಧರ್ಮಪುರವು' "ತ್ರಿಭುವನ ತಿಲಕವೆಂಬ ಬಸದಿಯುಮಂ ಕವಿತಾಗುಣಾರ್ಣವವೆಂಬ ಕೆಱೆಯುಮಂ ಮದನವಿಳಾಸವೆಂಬ ಬನಮುಮಂ"[18] ಒಳಗೊಂಡು ನಿರ್ಮಾಣವಾಗಿದ್ದ ಒಂದು ಪುರವಾಗಿದ್ದಿತು. ಇಂತಹ ಪುರಗಳನ್ನು ನಿರ್ಮಿಸುವ ಕುಶಲರಾದ ಶಿಲ್ಪಿಗಳು ಕೂಡ ಇರುತ್ತಿದ್ದರು. ಪಟ್ಟದ ಕಲ್ಲಿನ ಶಾಸನವೊಂದರಲ್ಲಿ[19] ಉಲ್ಲೇಖಿತನಾಗಿರುವ ಸರ್ವಸಿದ್ಧಿ ಆಚಾರ್ಯರೆಂಬ ಶಿಲ್ಪಿಯು ವಾಸ್ತುಶಿಲ್ಪದಲ್ಲಿ ಮಾತ್ರವಲ್ಲದೆ ಪುರನಿರ್ಮಾಣವಿದ್ಯೆಯಲ್ಲೂ ಪ್ರೌಢಿಮೆಯನ್ನು ಪಡೆದಿದ್ದ.

ಇನ್ನು ಮಧ್ಯಕಾಲೀನ ಕರ್ನಾಟಕದ ಇತಿಹಾಸದ ಅವಧಿಯಲ್ಲಿ ಪುರಗಳನ್ನು ಹೇಗೆ ನಿರ್ಮಿಸಲಾಗುತ್ತಿತ್ತು ಎಂಬುದನ್ನು ಗಮನಿಸಿದರೆ, ಪುರಗಳನ್ನು ಕಟ್ಟಲು ಮತ್ತು ಅಭಿವೃದ್ಧಿಪಡಿಸಲು ಗುತ್ತಿಗೆಗೆ ಕೊಡುತ್ತಿದ್ದ ಅಂಶವು ನಮ್ಮ ಗಮನ ಸೆಳೆಯುತ್ತದೆ. ಮೈಸೂರು ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಶಾಸನವೊಂದು[20] "ಪುರದ ಗುತ್ತಿಗೆಯ ಶಿಲಾಶಾಸನದ ಕ್ರಮವೆಂತೆಂದರೆ" ಎಂದೇ ಪ್ರಾರಂಭವಾಗುವ ಈ ಶಾಸನದಲ್ಲಿ ಪಾಳುಬಿದ್ದ ಭೂಭಾಗದಲ್ಲಿ ಪುರವನ್ನು ಕಟ್ಟಿ, ಒಕ್ಕಲ ಹಳಕಿ ಭೂಮಿಯನ್ನು ಹೊರಮಾಡಿಕೊಂಡು ಅದನ್ನು ಊರ್ಜಿತಗೊಳಿಸಬೇಕೆಂದು ಅದರ ಸರ್ವಾದಾಯವನ್ನೂ ಗುತ್ತಿಗೆ ಪಡೆದವರಿಗೆ ನೀಡಿರುವುದು ಕಂಡುಬರುತ್ತದೆ. ಇದೇ ತಾಲ್ಲೂಕಿನ ಇನ್ನೊಂದು ಶಾಸನದಲ್ಲಿ[21] ಹೊಸದಾಗಿ ಪುರವನ್ನು ಕಟ್ಟಿಸಿ, ಕೆರೆಯನ್ನು ಕಟ್ಟಿ, ಕೆರೆಕೆಳಗೆ ಅಡಿಕೆಮರಗಳನ್ನು ಹಾಕಿಸಿ ಆ ಗ್ರಾಮವನ್ನು ಪುರವನ್ನಾಗಿಸಿ ಹನ್ನೆರಡು ಹೊನ್ನಿಗೆ ಪುರಗುತ್ತಿಗೆಯಾಗಿ ಕೊಟ್ಟಿರುವುದನ್ನು ಗಮನಿಸಬಹುದಾಗಿದೆ. ಚಾಮರಾಜನಗರ ತಾಲ್ಲೂಕಿನ ಹಲವು ಶಾಸನಗಳಲ್ಲೂ ಪುರಗುತ್ತಿಗೆಯ ವಿವರಗಳಿರುವುದು ಕಂಡುಬರುತ್ತದೆ.[22] ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೂಕಿನ ಕ್ರಿ.ಶ. ೧೩೭೦ರ ಶಾಸನವೊಂದರಲ್ಲಿ[23] ವೀರಪ್ಪನೆಂಬುವನು ತಮ್ಮ ಅಣ್ಣನ ನಿರೂಪದ ಮೇರೆಗೆ ಶ್ರೀಗಿರಿಸಮುದ್ರದ ಪುರವನ್ನು ಕಟ್ಟಿಸಿದ ವಿವರವಿದೆ. ಇದರಿಂದ ವ್ಯಕ್ತವಾಗುವ ಅಂಶವೆಂದರೆ ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ವಿವರಿಸಿರುವಂತೆ, ಗ್ರಾಮಗಳನ್ನು ಕಟ್ಟುವುದರ ಮೂಲಕ ದೇಶದ ಅಭಿವೃದ್ಧಿಯನ್ನು ಸಾಧಿಸುತ್ತಿದ್ದುದು ಕಂಡುಬರುತ್ತದೆ.[24] ಇಲ್ಲಿಯೇ ಹತ್ತನೆಯ ಶತಮಾನದ ಶಾಸನವೊಂದರಲ್ಲಿ ಊರೊಂದರ ನಿರ್ಮಾಣದ ಬಗೆಗಿನ ವಿವರಣೆಯನ್ನು ಗಮನಿಸಬಹುದಾಗಿದೆ. "ಅರುಮೊಲ್ಲದ ಕಲ್ಕಾಡಬೆಟ್ಟಂ ಸವತಳಂ ಮಾಡಿಯೋಡಿಲ ಮನೆಯು ನನ್ದನವನವುಮಂ ಮಾಡಿಸಿ ಕೆಱೆಯಂ ಕಟ್ಟಿಸಿ ತೋಱೆಯ ಸೆಱೆಯಿಟ್ಟೊವಟ ನೆಲನಂ ಪಿರಿದುಮಾಯಾಸದಿಂ ಸುಕ್ಷೇತ್ರಂ ಮಾಡಿಸಿದುದದು."[25] ಈ ವಿವರಣೆಯಿಂದ ಊರುಗಳನ್ನು ಕಟ್ಟಲು ಅರಸರು ಶ್ರಮಿಸುತ್ತಿದ್ದ ಅಂಶ ವೇದ್ಯವಾಗುತ್ತದೆ.

ಅಗ್ರಹಾರ ಅಥವಾ ಚತುರ್ವೇದಿ ಮಂಗಲಗಳೆಂಬುವು

---

17 ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟ XVI, ಮದ್ದಗಿರಿ ೧೩೧, ಕ್ರಿ.ಶ. ೧೫೦೬

18 ಶಾಸನ ಸಂಗ್ರಹ, ಪು. ೧೩

19 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೬೨

20 ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟ III (ಹೊಸ ಆವೃತ್ತಿ), ಗುಂಡ್ಲುಪೇಟೆ ೮೬, ಕ್ರಿ.ಶ. ೧೬ನೇ ಶತಮಾನ ; ಅದೇ, ಚಾಮರಾಜನಗರ ೨೧೦

21 ಅದೇ, ೧೩೫, ಕ್ರಿ.ಶ. ೧೪೯೨

22 ಅದೇ, IV, ಚಾಮರಾಜನಗರ ೩೮೬ ಮತ್ತು ೪೦೩

23 ಅದೇ, IX (ರೈಸ್ ಆವೃತ್ತಿ), ಮಾಗಡಿ ೪೯, ಕ್ರಿ.ಶ. ೧೩೭೦

24 ಡಾ॥ ಟಿ.ಜಿ. ಸಿದ್ಧಪ್ಪಾರಾಧ್ಯ (ಅನು.) : ಕೌಟಿಲ್ಯನ ಅರ್ಥಶಾಸ್ತ್ರ, ಮೈಸೂರು, ೧೯೬೫, ಪು. ೨೯೨, ೨೯೩

25 ಶಾಸನಸಂಗ್ರಹ, ಪು. ೧೮

ಬ್ರಾಹ್ಮಣರಿಗೆ ಅನುಸರಿಸಬೇಕಾದ ಷಟ್ಕರ್ಮ ಗಳಾದ ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ ಮತ್ತು ಪ್ರತಿಗ್ರಹಗಳು ಸಾಂಗವಾಗಿ ಸಾಗಿ ಅದರಿಂದ ದೇಶಕ್ಕೆ ಸನ್ಮಂಗಳವುಂಟಾಗಿ ಸಮಾಜವು ಧರ್ಮನಿರತ ವಾಗಿರಲಿ ಎಂಬ ಧ್ಯೇಯವುಳ್ಳವಾಗಿವೆ. ಬ್ರಾಹ್ಮಣರು ಕಾವ್ಯಾಲಾಪದಿ ರಸಿಕ ವಿಷಯಗಳಲ್ಲಿ ತಲ್ಲೀನರಾಗಬಾರ ದೆಂದೂ,[26] ಇಂತಹ ಐಹಿಕ ವಿಷಯಗಳು ಶೂದ್ರರಿಗೆ ಸೂಕ್ತವಾದ ಕರ್ಮಗಳೆಂದೂ ಸ್ಮೃತಿಗಳಿಂದ ತಿಳಿದು ಬರುತ್ತದೆ.[27] ಆದ್ದರಿಂದ ಅಧ್ಯಯನ ಅಧ್ಯಾಪನ ಮುಂತಾದ ಸತ್ಕರ್ಮಗಳು ಸಾಂಗವಾಗಿ ಸಾಗಲು ಕೊಡುವ ಗ್ರಾಮಗಳೇ ಅಗ್ರಹಾರಗಳು ಅಥವಾ ಚತುರ್ವೇದಿ ಮಂಗಲಗಳು. ಕವಿತ್ವ, ಮುಂತಾದ ಮನರಂಜನಾತ್ಮಕ ವಿಷಯಗಳಲ್ಲಿ ಪ್ರತಿಷ್ಠಿತರಾದ ವ್ಯಕ್ತಿಗಳಿಗೆ ಪುರಸ್ಕಾರ ರೂಪದಲ್ಲಿ ನೀಡಲಾಗುತ್ತಿದ್ದ ಗ್ರಾಮಗಳೇ ಪುರಗಳು ಎಂದು ಅನಿಸಿಕೊಳ್ಳುತ್ತಿದ್ದವು. ಆದರೆ ಕಾಲಾಂತರದಲ್ಲಿ ಇದು ತನ್ನ ಸ್ವರೂಪವನ್ನು ಮಾರ್ಪಡಿಸಿಕೊಂಡಿರುವುದು ಕಂಡುಬರುತ್ತದೆ.

ಪುರಧರ್ಮಗಳನ್ನು ಪ್ರಸ್ತಾಪಿಸುವ ಶಾಸನಗಳನ್ನು ಪರಿಶೀಲಿಸಿದರೆ, ಪೂರ್ಣವಾಗಿ ಒಂದು ಗ್ರಾಮವನ್ನು ಅಥವಾ ಅನೇಕ ಗ್ರಾಮಗಳನ್ನು ಹಿಂದಿನಂತೆ ಸಮಾಜದಲ್ಲಿ ಪ್ರತಿಷ್ಠಿತರಾದ ಅಥವಾ ಯೋಗ್ಯರಾದ ವ್ಯಕ್ತಿಗಳಿಗೆ ಅಂದರೆ ದೇವಾಲಯ, ಮಠ, ಪಂಥ (ಜಾತಿಯ) ಇತ್ಯಾದಿ ಸಂಸ್ಥೆಗಳ ನೇತಾರರಾದ ಅಯ್ಯನವರು,[28] ಯತಿಗಳು,[29] ಒಡೆಯರು[30] ಮೊದಲಾದವರಿಗೆ ಪುರಸ್ಕಾರಪೂರ್ವಕ ವಾಗಿ, ಸರ್ವಮಾನ್ಯವಾಗಿ, ಹಿರಣ್ಯೋದಕಪೂರ್ವಕವಾಗಿ ಇಲ್ಲವೇ ಧಾರಾಪೂರ್ವಕವಾಗಿ ಪುರಧರ್ಮ-ದಾನ ನೀಡಿರುವುದು ಕಂಡುಬರುತ್ತದೆ. ಕಾಲಾಂತರದಲ್ಲಿ ಇಂತಹ ಪುರಧರ್ಮಗಳನ್ನು ದೇವಾಲಯ, ಮಠ, ಅಥವಾ ಪಂಗಡಗಳಲ್ಲಿನ ಧಾರ್ಮಿಕ ಕಾರ್ಯಗಳಾದ ನೈವೇದ್ಯ, ಅಂಗ, ರಂಗವೈಭವ, ರಥೋತ್ಸವ, ಅಭಿಷೇಕ, ಪೂಜೆ, ದೀಪಾರಾಧನೆ ಮೊದಲಾದ ಅಮೃತಪಡಿಗೆ ಸಂಬಂಧಿಸಿದ ಕಾರ್ಯಗಳು ಸಾಂಗವಾಗಿ ಸಾಗಲೆಂಬ ಆಶಯದಿಂದ ಪುರ ಧರ್ಮಗಳನ್ನು ಬಿಟ್ಟಿರುವುದು ಕಂಡುಬರುತ್ತದೆ.[31]

ಸಹಜವಾಗಿಯೇ ಇಂತಹ ಪುರಧರ್ಮಗಳನ್ನು ನೀಡಿರುವವರು ಶಕ್ತರಾದ ರಾಜರೋ ಅಥವಾ ಸ್ಥಳೀಯ ಆಡಳಿತಾಧಿಕಾರಿಗಳೋ, ಮಾಂಡಲಿಕರೋ. ದಂಡಾದಿ ಪತಿಗಳೋ ಆಗಿರುತ್ತಾರೆ. ಅಲ್ಲದೆ ತಾವು ಕೊಡುವ ದಾನವು ಶಾಶ್ವತವಾಗಿ ಉಳಿಯಬೇಕೆಂಬ ಆಶಯವನ್ನು ಹೊಂದಿ ಇತರರು ಯಾರು ಇದಕ್ಕೆ ಅಡ್ಡಿಬಾರದಂತೆ "ಸ್ತ್ರೀ ಪುತ್ರ ಜ್ಞಾತಿ ದಾಯಾದಾನುಮತದಿಂದ"[32]ಎಂದು ಸ್ಪಷ್ಟಪಡಿಸಿರುತ್ತಾರೆ.

ಪ್ರಸ್ತುತ ಗಮನದಲ್ಲಿರುವ ಪುರಧರ್ಮ ಶಾಸನ ಗಳಲ್ಲಿ ಅನೇಕವು ವಿಜಯನಗರ ಅರಸರ ಕಾಲಕ್ಕೆ ಸೇರಿದ ವಾಗಿದ್ದು, ಸಾಳ್ವ ನರಸಿಂಗರಾಯ,[33] ಕೃಷ್ಣರಾಯ,[34] ಸದಾಶಿವರಾಯ,[35] ಅಚ್ಚುತರಾಯ[35]ಮೊದಲಾದ ಅರಸು ಗಳಿಗೆ ಧರ್ಮವಾಗಬೇಕೆಂದೋ ಪುಣ್ಯವಾಗಬೇಕೆಂದೋ

---

26. ಕಾವ್ಯಾಲಾಪಾಂಶ್ಚ ವರ್ಜಯೇದಿತಿ ನಿಷೇಧ ಶಾಸ್ತ್ರಸ್ಯಾಸತ್ಕಾವ್ಯ ವಿಷಯ ತಾಂ ಚ ಪಶ್ಯನ್-ಭಾರವಿ ವಿರಚಿತ ಕಿರಾತಾರ್ಜು ನೀಯಕ್ಕೆ ಮಲ್ಲಿನಾಥನ ವ್ಯಾಖ್ಯಾನ : ಪೀಠಿಕೆ
27. ನ ನೃತ್ಯೇದಥವಾ ಗಾಯೇನ್ನವಾದಿತ್ರಾಣಿವಾದಯೇತ್— ಮನುಸ್ಮೃತಿ, ಶ್ಲೋಕ ೬೪, ಅಧ್ಯಾಯ ೪, ಪು. ೧೫೭
28. ಎಪಿಗ್ರಾಫಿಯಾ ಕರ್ನಾಟಿಕ, XVI, ಚಿಕ್ಕನಾಯಕನಹಳ್ಳಿ ೫೮; ಅದೇ, ದೊಡ್ಡಬಳ್ಳಾಪುರ ೪೫
29. ಅದೇ, XVI, ಗುಬ್ಬಿ ೭೬; ಅದೇ, IX, ಕಾನಕಾನಹಳ್ಳಿ ೮, ಇತ್ಯಾದಿ
30. ಅದೇ, IX, ಚನ್ನಪಟ್ಟಣ ೧೫೮, ಕ್ರಿ. ಶ. ೧೪೭೮ ?
31. ಅದೇ, ಕಾನಕಾನಹಳ್ಳಿ ೩೬; ಅದೇ, XVI, ಚಿಕ್ಕನಾಯಕನಹಳ್ಳಿ ೮೩, ಕ್ರಿ. ಶ. ೧೫೨೮, ಇತ್ಯಾದಿ
32. ಅದೇ, IX, ಚನ್ನಪಟ್ಟಣ ೧೫೯
33. ಅದೇ
34. ಅದೇ, ಮಾಗಡಿ ೬೮, ಕ್ರಿ. ಶ. ೧೫೧೬; ಅದೇ, XVI, ತುಮಕೂರು ೧೦೪
35. ಅದೇ, ನೆಲಮಂಗಲ ೮೧, ಕ್ರಿ. ಶ. ೧೫೪೫

ಅವರ ಅಧಿಕಾರಿಗಳು ಈ ಪುರಧರ್ಮಗಳನ್ನು ವಿಶೇಷವಾಗಿ ನಡಿಸಿಕೊಟ್ಟಿರುವುದು ಕಂಡುಬರುತ್ತದೆ.

ಇಂತಹ ಕೆಲವು ಶಾಸನಗಳಲ್ಲಿ 'ಪುರಧರ್ಮ' ಮತ್ತು 'ಗ್ರಾಮದಾನ' ಎಂಬುವುಗಳಲ್ಲಿ ಅಭೇದವನ್ನು ಕಲ್ಪಿಸಿರುವುದು ಕೂಡ ಕಂಡುಬರುತ್ತದೆ.[37]

ದಾನ ಪ್ರಕಾರಗಳಲ್ಲಿ ದೇವಾದೇಯ, ಬ್ರಹ್ಮದೇಯ ಮತ್ತು ಮಠಪುರ ಮಾನ್ಯ ಎಂಬ ಮೂರು ಮುಖ್ಯ ಪ್ರಕಾರಗಳಿರುವ ಬಗ್ಗೆ 'ಶ್ರೀಕೃಷ್ಣದೇವರಾಯನ ದಿನಚರಿ' ಎಂಬ ಕೃತಿಯು ಬೆಳಕು ಚೆಲ್ಲುತ್ತದೆ.[38] ಪ್ರಸ್ತುತ 'ಮಠಪುರ ಮಾನ್ಯ'ವೆಂಬುದು ಗಮನಾರ್ಹವಾದುದು. ಕನ್ನಡ ಶಾಸನಗಳಲ್ಲಿ ಉಕ್ತವಾಗಿರುವ 'ಪುರಮಠ'[39] ಹಾಗೂ ತಮಿಳು ಶಾಸನಗಳಲ್ಲಿನ 'ಮಡಪುಱಂ' ಒಂದೇ ಆಗಿದೆ. ಕ್ರಿ. ಶ. ೧೩೦೭ರ ಹೊಯ್ಸಳ ವೀರಬಲ್ಲಾಳನ ವಿಭೂತಿಪುರದ ಶಾಸನದಲ್ಲಿ ಮಾಕಂಡಿನಾಡಿನ ಪಶ್ಚಿಮ ಭಾಗದ ಆಡಳಿತಗಾರ ಪೆರುಎರುಮೂರನು ಸಮೀಪದ ಕಾಡನ್ನು ಕಡಿಸಿ, ಭೂಮಿಯನ್ನು ಮಟ್ಟಮಾಡಿಸಿ, ಹಳ್ಳಿಯನ್ನು ಕಟ್ಟಿಸಿ, ಮರಳನ್ನು ತೆಗಿಸಿ, ಕೆರೆಯನ್ನು ಕಟ್ಟಿಸಿ ಊರಿಗೆ 'ವಾಚ್ಚಿದೇವಪುರಂ' ಎಂದು ಹೆಸರಿಟ್ಟು ವಾಚ್ಚಿದೇವರಿಗೆ 'ಮಡಪುಱಂ' ಆಗಿ ಕರರಹಿತವಾಗಿ ಕೊಟ್ಟ ಉಲ್ಲೇಖವು ಈ ದಿಸೆಯಲ್ಲಿ ಗಮನ ಸೆಳೆಯುತ್ತದೆ.[40]

ಈ ಹಿನ್ನೆಲೆಯಲ್ಲಿ ಪುರಧರ್ಮಗಳನ್ನು ಗಮನಿಸಿದರೆ ಪ್ರಾಚೀನ ಕಾಲದಲ್ಲಿ ಅವು ಪುರಸ್ಕಾರ ಮರ್ಯಾದೆಗಳ ಕುರುಹುಗಳಾಗಿರುತ್ತಿದ್ದವು. ಕಾಲಾಂತರದಲ್ಲಿ ಅಂದರೆ ಮಧ್ಯಕಾಲೀನ ಇತಿಹಾಸದ ಅವಧಿಯಲ್ಲಿ ಪುರಧರ್ಮವೆಂಬುದು ತನ್ನ ಪೂರ್ವದ ಅರ್ಥವನ್ನು ಕಳೆದುಕೊಂಡು ಅದು ಕೇವಲ ದೇವಾಲಯಗಳಿಗೋ ಮಠಗಳಿಗೋ ಬಿಡುವ ಸಾಮಾನ್ಯ ಭೂಮಿದಾನ ಶಾಸನದ ಸ್ವರೂಪವನ್ನು ಪಡೆದುಕೊಂಡಿತಷ್ಟೇ ಅಲ್ಲದೆ, ಪುರಧರ್ಮಕ್ಕೂ ಗ್ರಾಮದಾನಕ್ಕೂ ವ್ಯತ್ಯಾಸವೇ ಇಲ್ಲವೇನೋ ಎಂಬಂತೆ ಗ್ರಹಿತವಾಗಿರುವುದು ಕಂಡುಬರುತ್ತದೆ.[41]

ಈ ಮೊದಲೇ ಗಮನಿಸಿರುವಂತೆ ಪುರಗಳ ನಿರ್ಮಾಣ ಮತ್ತು ಪುರಧರ್ಮದ ಕ್ರಿಯೆಯಲ್ಲಿ 'ಪುರ' ಪ್ರತ್ಯಯವುಳ್ಳ ಊರ ಹೆಸರನ್ನು ಇಟ್ಟು ದಾನ ಕೊಡುವುದು ಒಂದು ಅವಿಭಾಜ್ಯ ಕ್ರಿಯೆಯಾಗಿದೆ.[42] ಅಂತೆಯೇ ಈ ರೀತಿ ಪ್ರತಿನಾಮಗಳನ್ನು ನೀಡಿರುವುದು ಬಹುತೇಕವಾಗಿ ಕಂಡುಬರುತ್ತದೆಯಾದರೂ, ಪುರಧರ್ಮವು ತನ್ನ ಪೂರ್ವದ ಅರ್ಥವನ್ನು ಕಳೆದುಕೊಂಡಂತೆಯೇ ಪ್ರತಿನಾಮವಿಲ್ಲದೆಯೂ ಪುರಧರ್ಮ ಕೊಟ್ಟಿರುವ ಉಲ್ಲೇಖಗಳು ಕಂಡುಬರುತ್ತವೆ.[43] ಹಾಗೆಯೇ ಪುರಧರ್ಮದ ಬಗ್ಗೆ ಉಲ್ಲೇಖವಿಲ್ಲದೆಯೇ 'ಪುರ' ಪ್ರತ್ಯಯವುಳ್ಳ ಪ್ರತಿನಾಮಗಳನ್ನು ನೀಡಿರುವುದು ಕಂಡುಬರುತ್ತದೆ.[44]

ಊರ ಹೆಸರು ಸಾಮಾನ್ಯವಾಗಿ ಸ್ವಾಭಾವಿಕ ಇಲ್ಲವೆ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರೂಪಗೊಂಡಿರುತ್ತವೆಯೆಂದು ಸ್ಥಳನಾಮ ವಿಜ್ಞಾನಿಗಳು ಅಭಿಪ್ರಾಯಪಟ್ಟಿರುತ್ತಾರೆ. ಪುರ, ಅಗ್ರಹಾರ, ಮಂಗಲ, ಇತ್ಯಾದಿಗಳು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮೂಡಿಬಂದಂತಹ ಊರ ಹೆಸರುಗಳಾಗಿವೆ. ಇಂತಹವುಗಳನ್ನು 'ಕೃತಕ' ಊರ

---

36. ಅದೇ, ೮೩
37. ಅದೇ, III (ಹೊಸ ಆವೃತ್ತಿ), ಗುಂಡ್ಲುಪೇಟೆ ೧೩೫; ಅದೇ, XVI, ತುಮಕೂರು ೮೩
38. ಡಾ॥ ವಿ. ಎಸ್. ಎಸ್. ಆಚಾರ್ಯ (ಸಂ.) : ಶ್ರೀ ಕೃಷ್ಣದೇವರಾಯನ ದಿನಚರಿ, ಬೆಂಗಳೂರು, ೧೯೮೩, ಪು. ೧೩
39. ಎಪಿಗ್ರಾಫಿಯಾ ಕರ್ನಾಟಿಕ, IX, ಚನ್ನಪಟ್ಟಣ ೧೫೮, ಕ್ರಿ. ಶ. ೧೪೭೮ ?
40. ಅದೇ, ಬೆಂಗಳೂರು ೧೩೩, ಕ್ರಿ. ಶ. ೧೩೦೭
ಅದೇ, ದೇವನಹಳ್ಳಿ ೭೮, , ೮೦ ಕ್ರಿ. ಶ. ೧೩೦೦: ಮಡಪುಱಂ ಉಲ್ಲೇಖವಿದೆ.
41. ಅದೇ, III (ಹೊಸ ಆವೃತ್ತಿ), ಗುಂಡ್ಲುಪೇಟೆ ೧೩೫, ಇತ್ಯಾದಿ
42. ಅದೇ, XI, ಚಿತ್ರದುರ್ಗ ೧೪, ಕ್ರಿ.ಶ.೧೪೧೧ (ಕಂಚಿಗನಹಳ್ಳಿ > ಮಲ್ಲಪುರ); ಅದೇ, IX, ಬೆಂಗಳೂರು ೬, ಕ್ರಿ.ಶ. ೧೨೫೩ (ವೃತ್ತಿಕಟ್ಟ > ಸೋಮಲಾಪುರ), ಇತ್ಯಾದಿ
43. ಅದೇ, IX, ನೆಲಮಂಗಲ ೨೬, ಕ್ರಿ. ಶ. ೧೫೨೧; ಅದೇ, ದೊಡ್ಡಬಳ್ಳಾಪುರ ೫೦, ಕ್ರಿ. ಶ. ೧೫೩೧, ಇತ್ಯಾದಿ
44. ಅದೇ, I (ಹೊಸ ಆವೃತ್ತಿ), ಕೊಡಗು ೫೯, ಕ್ರಿ.ಶ. ೧೩೯೦ (ಕುಮಾರನಹಳ್ಳಿ > ಭೀಮಾಪುರ; ಕಾರಗೊಡು > ಅಂಣಾಂಗಪುರ), ಇತ್ಯಾದಿ

ಹೆಸರುಗಳೆಂದು ಕರೆಯುತ್ತಾರೆ. ಇವುಗಳ ಪ್ರಚುರತೆ ಮತ್ತು ತಾಳಿಕೆ, ಸ್ವಾಭಾವಿಕ ಸ್ಥಳನಾಮಗಳಿಗೆ ಹೋಲಿಸಿದರೆ ಕಡಿಮೆಯೆಂದೇ ಹೇಳಬಹುದು.

ಒಟ್ಟಾರೆ, ಇಂದು ಉಳಿದು ಬಂದಿರುವ 'ಪುರ' ಪ್ರತ್ಯಯವುಳ್ಳ ಬಹಳಷ್ಟು ಊರುಗಳು ಯಾವುದೋ ಕಾಲದಲ್ಲಿ ಪುರಧರ್ಮ ಕ್ರಿಯೆಗೋ ಅಥವಾ ನೂತನವಾಗಿ ನಿರ್ಮಿತವಾದ ಪುರದ ಕುರುಹುಗಳಾಗಿಯೋ ಉಳಿದಿರುವ ಪಳೆಯುಳಿಕೆಗಳೆಂದು ಹೇಳಬಹುದಾಗಿದೆ. ಇಂದು 'ಪುರ' ಪ್ರತ್ಯಯವುಳ್ಳ ಹೆಸರುಗಳನ್ನು ನಗರವೊಂದರ ಭಾಗಕ್ಕೆ ಅಥವಾ ಇರುವ ಹೆಸರು ಚೆನ್ನಿಲ್ಲವೆಂದು ಭಾವನೆಯಿರುವ ಊರುಗಳಿಗೆ ಇಡುತ್ತಿರುವುದು ಸರಿಯಷ್ಟೆ. ಇಲ್ಲಿಯೂ ಕೂಡ, ಸಾಂಸ್ಕೃತಿಕ–ರಾಜಕೀಯ ಪ್ರಭಾವದ ಹಿನ್ನೆಲೆಯಲ್ಲಿ ಇವು ರೂಪುಗೊಳ್ಳುತ್ತಿರುವುದು ಕಂಡುಬರುತ್ತದೆ.

ದೇವರ ಕೊಂಡಾರೆಡ್ಡಿ

# ದೊಡ್ಡಬೇಗೂರಿನ ನಾಗತ್ತರನ ಶಾಸನ

ಈ ಶಾಸನವು ಬೆಂಗಳೂರು ದಕ್ಷಿಣ ತಾಲೂಕಿನಲ್ಲಿ ಹೋಬಳಿ ಕೇಂದ್ರವಾಗಿರುವ ದೊಡ್ಡ ಬೇಗೂರಿನ ನಾಗೇಶ್ವರ ದೇವಾಲಯದಲ್ಲಿದೆ. ಇತ್ತೀಚೆಗೆ ದೇವಾಲಯಕ್ಕೆ ಸುತ್ತುಗೋಡೆ ಹಾಕಿಸಲು ತಳಪಾಯ ತೋಡುತ್ತಿದ್ದಾಗ ಹಳೆಯ ತಳಪಾಯದ ಅವಶೇಷಗಳಲ್ಲಿ ಸೇರಿಹೋಗಿತ್ತು. ದೇವಾಲಯದ ಅರ್ಚಕರು ಶಾಸನವನ್ನು ಅಲ್ಲಿಂದ ತೆಗೆಸಿ ಸುರಕ್ಷಿತವಾಗಿ ಒಂದೆಡೆ ಇರಿಸಿ ವಿಷಯವನ್ನು ತಿಳಿಸಿದರು.

ಶಾಸನವು ೦.೯೧ ಸೆಂ.ಮೀ. ಉದ್ದ ಹಾಗೂ ೦.೯೮ ಸೆಂ.ಮೀ. ಅಗಲವಿದ್ದು, ೧೪ ಸಾಲುಗಳನ್ನು ಹೊಂದಿದೆ. ಶಾಸನವನ್ನು ಹಿಂದೆ ಸುತ್ತುಗೋಡೆಗೆ ಬಳಸಿದ್ದುದರಿಂದ ಶಾಸನದ ಅಂಚುಗಳನ್ನು ಒಡೆದಿರುತ್ತಾರೆ. ಹೀಗಾಗಿ ಅಂಚಿನಲ್ಲಿದ್ದ ಕೆಲವು ಅಕ್ಷರಗಳು ಒಡೆದಿದ್ದು ಪೂರ್ಣವಾಗಿ ಸಿಗುವುದಿಲ್ಲ.

ಶಾಸನದ ಲಿಪಿ ಈಗಾಗಲೇ ಬೆಂಗಳೂರು ವಸ್ತುಸಂಗ್ರಹಾಲಯದಲ್ಲಿದ್ದು, ಪ್ರಸಿದ್ಧವಾಗಿರುವ ಅದೇ ಊರಿನ ನೀತಿಮಾರ್ಗನ ಶಾಸನದ ಲಿಪಿಗಳನ್ನು ಹೋಲುತ್ತದೆ ಮತ್ತು ಅದೇ ಶಾಸನದಲ್ಲಿ ಉಕ್ತನಾಗಿರುವ ನಾಗತ್ತರನನ್ನು ಹೆಸರಿಸುತ್ತದೆ. ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ.

ಶಾಸನದಲ್ಲಿ ಉಕ್ತನಾಗಿರುವ ನಾಗತ್ತರನು ಆನೇಕಲ್ ತಾಲೂಕಿನ ಮತ್ತು ಬೆಂಗಳೂರು ದಕ್ಷಿಣ ತಾಲೂಕಿನ ಅನೇಕ ಶಾಸನಗಳಲ್ಲಿ ಉಕ್ತನಾಗಿದ್ದಾನಾದರೂ ಯಾವುದರಲ್ಲಿಯೂ ಕಾಲದ ಉಲ್ಲೇಖವಿಲ್ಲ. ಬೇಗೂರಿನಲ್ಲಿ ದೊರೆಯುವ ನಾಲ್ಕು ಶಾಸನಗಳಲ್ಲಿ ಇವನ ಹೆಸರು ಉಕ್ತವಾಗುತ್ತದೆ. ಈ ಶಾಸನಗಳ ಕಾಲವನ್ನು ಶ್ರೀ ಬಿ.ಎಲ್. ರೈಸ್ ಅವರು ಸು. ೮೯೦ ಎಂದು ನಿಗದಿಗೊಳಿಸಿರುತ್ತಾರೆ.

ಬೆಂಗಳೂರು ವಸ್ತುಸಂಗ್ರಹಾಲಯದ ಶಾಸನದಲ್ಲಿ ನಾಗತ್ತರನು ಸತ್ತ ಉಲ್ಲೇಖ ಬಂದಿರುವುದರಿಂದ ಇದು ಅವನ ಕೊನೆಯ ಶಾಸನವೆಂದು ಪರಿಗಣಿಸಿ ಇದರ ಕಾಲವನ್ನು ಕ್ರಿ.ಶ. ಸು ೯೦೦ ಎಂದು ಪರಿಗಣಿಸಿದರೆ, ಈಗ ದೊರೆತಿರುವ ಶಾಸನವು ನಾಗತ್ತರನು ಬೀರವರ್ಮನನ್ನು ಸಾಧಿಸಿದ ನಂತರ ದೇವಾಲಯವನ್ನು ಕಟ್ಟಿಸಿದ ಉಲ್ಲೇಖ ಬರುವುದರಿಂದ, ಅವನು ಬದುಕಿದಾಗಿನ ಅವಧಿಯ ಶಾಸನವಾದುದರಿಂದ ಇದರ ಕಾಲವನ್ನು ಕ್ರಿ.ಶ. ಸು ೮೯೦ ಎಂದು ನಿಗದಿಗೊಳಿಸುವುದು ಸೂಕ್ತವೆಂದು ಕಾಣುತ್ತದೆ.

ಪ್ರಸ್ತುತ ಶಾಸನದಲ್ಲಿ ನಾಗತ್ತರನನ್ನು ವೃಷಭಲಾಂಛನಂ, ಸಮರಪ್ರವೀಣಂ, ಕಾಮಿನೀಕಾಮಂ, ಸತ್ಯರಾಧೇಯಂ, ಸಾಮಂತಸುಂದರಂ, ಲೀಲಾಪುರಂದರಂ, ಘಟೇಯಂ ಮುಂತಾದ ವಿಶೇಷಣಗಳಿಂದ ಹೊಗಳಿದೆ. ಈ ಶಾಸನವಲ್ಲದೆ ಅಗರದ ಸತ್ಯವಾಕ್ಯ ಪೆರ್ಮಾಡಿ ಕಾಲದ ಶಾಸನದಲ್ಲಿ ಇವನ ಆಳು ಇರುಗನೆಂಬುವವನು ಕೆರೆಯನ್ನು ಕಟ್ಟಿಸಿ ಎರಡು ತೂಬುಗಳನ್ನು ಇಟ್ಟಂತೆ ಹೇಳಿದ್ದು, ಇವನನ್ನು ಆ ಶಾಸನದಲ್ಲಿ 'ಕಲಿಯುಗದ ಅಣುವ'ನೆಂದು ಕರೆದಿದೆ. ಇವನ ಶಾಸನಗಳಿಂದ ತಿಳಿದು ಬರುವ ಕೆಲವು ಮಾಹಿತಿಗಳನ್ನು ಇಲ್ಲಿ ನೀಡುವುದು ಮುಖ್ಯ. ಸತ್ಯವಾಕ್ಯ ಪೆರ್ಮಾಡಿಯ ಕಾಲದಿಂದಲೂ (೮೭೮–೯೦೭) ಈತ ಬೆಂಪೂರುನಾಡನ್ನು ನೋಡಿಕೊಳ್ಳುತ್ತಿದ್ದ. ಎರೆಯಪ್ಪನ (೮೮೬–೯೨೧) ಕಾಲದಲ್ಲಿಯೂ

ಇದೇ ನಾಡಿನ ಅಧಿಕಾರಿಯಾಗಿದ್ದ ಈತನಿಗೆ ತೊಣ್ಡಬ್ಬೆ ಎಂಬ ಮಗಳೂ, ಬುಟ್ಟಣ ಸೆಟ್ಟಿ ಎಂಬ ಮಗನೂ ಪೆಗೂರ ಎಂಬ ಮನೆಮಗನೂ ಇರುತ್ತಾನೆ. ಬುಟ್ಟಣ ಸೆಟ್ಟಿಯು ಬೆಂಗಳೂರ ಕೋಟೆ ಕಾಳಗದಲ್ಲಿ ಸತ್ತ, ಪೆಗೂರ ಸಹ ಯಾವುದೋ ತುರುಗೊಳಲ್ಲಿ ಸಾಯುತ್ತಾನೆ. ನಾಗತ್ತರ ತುಂಬೆಪಾಡಿ ಯುದ್ಧದಲ್ಲಿ ಸಾಯುತ್ತಾನೆ. ಬಹುಶಃ ಈತನ ಸಾವಿನ ನಂತರ ಇವನ ಮಗಳು ತೊಣ್ಡಬ್ಬೆ ಸನ್ಯಸನ ವಿಧಿಯಿಂದ ಮುಡಿಪಿದಂತೆ ತಿಳಿಯುತ್ತದೆ. ಈಗ ದೊರೆತಿರುವ ಈ ಶಾಸನದಲ್ಲಿ ಇವನನ್ನು ನನ್ನಿಪೆಬ್ಬಾಣನೆಂದಿದೆ. ಬಾಣ ವಂಶಸ್ಥರು ಅಲ್ಲಲ್ಲಿ ಗಂಗರ ಅಧಿಕಾರಿಗಳಾಗಿದ್ದರೆಂದು ಇತರೆ ಶಾಸನಗಳಿಂದ ತಿಳಿಯುತ್ತದೆ. ವರ್ತೂರಿನ ಮತ್ತು ಚೆಲ್ಲಂಪಟ್ಟ.....ಶಾಸನಗಳಲ್ಲಿ ಮಹಾಬಲಿವಂಶದ ನಿಜಪನ ಮಗ ಅಣ್ಣಿಗನ ಉಲ್ಲೇಖವಿದೆ. ಬಹುಶಃ ಈ ನಾಗತ್ತರನೂ ಬಾಣ ವಂಶದವನಾಗಿದ್ದು ಗಂಗರ ಅಧೀನದಲ್ಲಿ ಸೇವೆ ಸಲ್ಲಿಸುತ್ತಿದ್ದಿರಬಹುದು.

ಈ ಶಾಸನದಲ್ಲಿ ಉಕ್ತವಾಗಿರುವ ಇನ್ನೊಂದು ಹೆಸರು ಬೀರವರ್ಮ. ಈತ ಯಾರೆಂದು ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಬೀರವರ್ಮ ಎಂಬ ವ್ಯಕ್ತಿ ಆ ಕಾಲದ ರಾಜ ಮನೆತನದ ಶಾಸನಗಳಲ್ಲಿ ಕಾಣಸಿಗುವುದಿಲ್ಲ. ಆದರೆ ಇದೇ ಊರಿನಿಂದ ತಂದು ಈಗ ಬೆಂಗಳೂರು ಮ್ಯೂಸಿಯಂನಲ್ಲಿ ಇಟ್ಟಿರುವ ವೀರಗಲ್ಲಿನಲ್ಲಿ ಬೀರಮಹೇಂದ್ರ ಎಂಬ ವ್ಯಕ್ತಿಯು ಉಲ್ಲೇಖವಾಗಿದ್ದಾನೆ. ಬಹುಶಃ ಪ್ರಸ್ತುತ ಶಾಸನದಲ್ಲಿನ ಬೀರವರ್ಮ ಬೀರಮಹೇಂದ್ರನೇ ಆಗಿದ್ದಿರಬಹುದು. ಬೇರೆ ಆಧಾರಗಳು ದೊರೆಯುವವರೆಗೆ ಬೀರವರ್ಮನನ್ನು ಬೀರಮಹೇಂದ್ರನೆಂದು ಭಾವಿಸುವುದು ಸೂಕ್ತವೆಂದು ತೋರುತ್ತದೆ.

ಶಾಸನದ ವಿಷಯದಂತೆ ನಾಗತ್ತರನು ವೀರವರ್ಮನನ್ನು ಸಾಧಿಸಿಬಲ್ಲವರಸರನ್ನಟ್ಟಿ? ಬೆಂಪೂರಿನಲ್ಲಿ ಸೋಮನಾಥ ದೇವಾಲಯವನ್ನು ಮಾಡಿಸಿ ದಿವ್ಯಸಕ್ತಿ ಭಟಾರರಿಗೆ ಎಲ್ಲಾ ಕಾಲಕ್ಕೆ ಕೆಲವು ದಾನಗಳನ್ನು ಬಿಡುತ್ತಾನೆಂದಿದೆ. 'ಬಲ್ಲವರಸರಟ್ಟಲ್' ಎಂಬ ಪದ ಬಂದಿರುವುದರಿಂದ ಇಮ್ಮಡಿ ರಾಜಮಲ್ಲನ ಕಾಲದಲ್ಲಿಯೂ ಗಂಗ ರಾಷ್ಟ್ರಕೂಟರ ಯುದ್ಧ ಮುಂದುವರಿದಿರಬಹುದೇ ಎಂಬ ಸಂದೇಹ ಮೂಡುತ್ತದೆ.

### ಶಾಸನ ಪಾಠ

1. ಸ್ವಸ್ತಿ ಸಮ.......ಧಿಮದ.......
2. ....ನೆ ರೊಳ್ಗಂಡ ಶ್ರೋಣೀತಪುರವರೇಶ್ವರ ....ಶ್ವರರ
3. ....ನಾತ್ಮಜಂ ಹರವೃಷಭಲಾಂಚನಂ .... ತ್ರಿ. ತ್ಥಿ ಕೋಪನಂ ಬಲಿ
4. ಪಣಂ ನನ್ನಿ ಪೆಬ್ಬಾಣ [ಂ] ಸಮರಪ್ರವೀಣಂ ಕಾಮಿನೀಕಾಮಂ ಮಹಾ
5. ಸತ್ಯರಾಧೇಯಂ ಸಾಮನ್ತಸುನ್ದರಂ ಲೀಳಾಪುರನ್ದರಂ ಘಟೇಯ [ಂ ?]
6. ಶ್ರೀಮತ್ ನಾಗತ್ತರಂ ಬೀರವರ್ಮನ ಸಾಧಿಸಿ ಬಲ್ಲವರಸ ರಟ್ಟ....
7. ಬೆಂಪೂರೊಳ್ ಸೋಮನಾತನ ದೇಗುಲಮುಮ್ಮಾಡಿಸಿ ದಿವ್ಯಾಸಕ್ತಿ ಭಟ
8. ರ್ಗ್ಗೆಲ್ಲಾಕಾಲಕ್ಕಂ ತೆಱಿಯಾ ಬಿಟ್ಟು ಕಾಲಂಕರ್ಚ್ಚಿ ಧಾರೆಯನೆರೆದು ಬಿ....
9. ....ಕಳಿಟ್ಟಗೆಯೂ ಬಿಟ್ಟು ಕವಿಲೆ ಸರೆಯುಮಂ ಕೊಟ್ಟು [ಪ]
10. (ಟ್ಟ)ತ್ತು ಖಣ್ದುಗ ಮಣ್ಣುಮಂ ಸರ್ವ್ವಾಭ್ಯನ್ತರ ಸಿದ್ಧಿಯಾಗಿರೆ ಕೊಟ್ಟನ್....
11. ಸಿಯುಮನಟಿದೊಂ ಪಂಚಮಹಾಪಾತಕಂ ಸ್ವದತ್ತಂ ಪರದತ್ತಂ ವಾಯೋ
12. ........ಯಪಾತ ಗಾ ಯೋ[ನ]ರಮ್ ಬ್ರಹ್ಮಸ್ವನ್ತು ವಿಷಂ ಘೋರಂ ನಾದಿ
13. ಹನ್ತಿ ದೇವಸ್ವಂ ಪುತ್ರ ಪೌತ್ರಿಕಂ ಈ ಧನ ಸಮಂ[ಪೊತ್ತ] ಬಟ್ಟಗಿಕಡು
14. ದೆ........ದುಕ್ಕಂ ಕೇಡಂಗೆಯ್ವೋಸುಣ್ಣಾತನ್ನೀ ದೇಗುಲಗಳಂ ಪಡಿಸಲಿ

ಎಚ್. ಎಸ್. ಗೋಪಾಲರಾವ್

# ಕೆಲವು ಶಾಸನಗಳ ಸಾಮಾನ್ಯರು

ಕೆಲವು ಅಪ್ರಕಟಿತ ಶಾಸನಗಳನ್ನು ಪ್ರಕಟಿಸುವ ಸಂದರ್ಭದಲ್ಲಿ 'ಇದು ಅಂತಹ ಮುಖ್ಯ ಶಾಸನವಲ್ಲ. ಇದರ ಪ್ರಕಟಣೆಯಿಂದ ಯಾವ ವಿಷಯಕ್ಕೆ, ಯಾವ ಅಧ್ಯಯನಕ್ಕೆ ನೆರವು ದೊರೆಯಬಹುದು ? ಇದರಲ್ಲಿ ಹೊಸ ವಿಷಯವೇನಿದೆ ?'—ಇತ್ಯಾದಿ ಪ್ರಶ್ನೆ, ಸಂದೇಹಗಳು ನಮ್ಮ ಹಿರಿಯ ವಿದ್ವಾಂಸರನ್ನು ಕಾಡಿದ್ದಿದ್ದರೆ ಎಷ್ಟೋ ಶಾಸನಗಳು, ಅದರಲ್ಲೂ ಬಹಳ ಭಾಗ ಶಿಥಿಲವಾಗಿರುವ ಶಾಸನಗಳು ಪ್ರಕಟವಾಗುತ್ತಿರಲಿಲ್ಲ.

ಶಾಸನಗಳ ಅಧ್ಯಯನವನ್ನು ೧. ಶಾಸನಗಳ ಪರಿವೀಕ್ಷಣೆ ಮತ್ತು ೨. ಶಾಸನಗಳ ವಿಶ್ಲೇಷಣೆ ಎಂದು ಎರಡು ಸ್ತರಗಳಲ್ಲಿ ವಿದ್ವಾಂಸರು ಗುರುತಿಸುತ್ತಾರೆ. ಶಾಸನಗಳ ಪರಿವೀಕ್ಷಣೆಯ ಕಾರ್ಯ–ಅಂದರೆ ಶಾಸನಗಳ ಸಂಪಾದನೆ ಮತ್ತು ಪ್ರಕಟಣೆಯ ಕಾರ್ಯ ಅಗಾಧವಾಗಿಯೇ ಆಗಿದೆ. ಈ ನಿಟ್ಟಿನಲ್ಲಿ ಅನೇಕ ವಿದ್ವಾಂಸರು ಸಂಬಂಧಿಸಿದ ಇಲಾಖೆಗಳು, ಸಂಘ–ಸಂಸ್ಥೆಗಳು ವ್ಯಾಪಕವಾಗಿ ಕಾರ್ಯ ಸಾಧಿಸಿ, ಸಂಶೋಧಕರಿಗೆ ಸಾಕಷ್ಟು ಆಹಾರ ದೊರೆತಿದೆ. ಇಷ್ಟಾದರೂ ಅನೇಕ ಶಾಸನಗಳು ಬೆಳಕಿಗೆ ಬಾರದೆ ಉಳಿದಿವೆ.

ಶಾಸನಗಳ ಸಂಶೋಧನೆ ಮತ್ತು ಅಧ್ಯಯನಗಳು ಕೇವಲ ರಾಜವಂಶಗಳ ಇತಿಹಾಸಕ್ಕೆ ಮಿತಿಗೊಂಡಿದ್ದ ಕಾಲ ವೊಂದಿತ್ತು. ಆದರೆ ಈಗ ಸಂದರ್ಭ ಬದಲಾಗಿದೆ. ಹಲವಾರು ಭಿನ್ನಾಭಿಪ್ರಾಯಗಳಿದ್ದರೂ ರಾಜವಂಶಗಳ ಇತಿಹಾಸಕ್ಕೆ ಒಂದು ರೂಪು ದೊರೆತಿದೆ. ಅನೇಕ ಗ್ರಂಥಗಳು ಪ್ರಕಟವಾಗಿವೆ. ರಾಜಕೀಯ ಇತಿಹಾಸ ಪಡೆದಷ್ಟು ಪ್ರಾಶಸ್ತ್ಯವನ್ನು ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಇತಿಹಾಸಗಳು ಪಡೆಯಲಿಲ್ಲ. ಶಾಸನಗಳ ಅಧ್ಯಯನ ಸಮಗ್ರವಾಗಬೇಕಾದರೆ ಈಎಲ್ಲಾ ನಿಟ್ಟಿನ ಅಧ್ಯಯನ ನಡೆಯಬೇಕು. ಆ ಸಂದರ್ಭದಲ್ಲಿ ಜನಸಾಮಾನ್ಯರನ್ನು ಕುರಿತಿರುವ ಶಾಸನಗಳು ಮಹತ್ವಪೂರ್ಣ ಸ್ಥಾನವನ್ನು ಪಡೆಯುತ್ತವೆ. ಎಂತಹ ಕಾರಣದಿಂದಲೂ ಅವು ಅಧ್ಯಯನದ ವ್ಯಾಪ್ತಿಯಿಂದ ಹೊರಗುಳಿಯುವಂತಿಲ್ಲ.

ಡಾ॥ ಎಂ. ಚಿದಾನಂದಮೂರ್ತಿಯವರು ತಮ್ಮ ಸಂಶೋಧನ ನಿಬಂಧದ ಆರಂಭದಲ್ಲೇ 'ಒಂದು ನಾಡು ಎಂದರೆ ಅದನ್ನು ಆಳಿದ ರಾಜ ಅಲ್ಲ : ಅಲ್ಲಿ ಬದುಕಿದ ಜನ. ಹೀಗೆ ಬದುಕಿದ ಜನದ ಒಂದು ಗಣನೀಯವಾದ ಭಾಗ ಆ ನಾಡನ್ನಾಳಿದ ರಾಜ ಸಮೂಹ. ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ' ಎಂಬ ಮಾತುಗಳನ್ನು ದಾಖಲಿಸಿದ್ದಾರೆ.[1]

ಹೊಯ್ಸಳ ಅರಸನಾದ ಮೂರನೆಯ ಬಲ್ಲಾಳ ನಮಗೆ ಎಷ್ಟು ಮುಖ್ಯವೋ, ಅವನ ಸಾಮಂತರಾದ ಕುಕ್ಕಲನಾಡಮಯಿಲೆಯ ನಾಯಕ, ಚೆಂನೆಯ ನಾಯಕ ಕಿತ್ತನೆಲೆಯ ಪ್ರಮುಖ ಕುಟುಂಬದವಾಗಿದ್ದ ಹೊನ್ನಗವುಡ ಮತ್ತು ಅವನ ಮಕ್ಕಳೂ ಅಷ್ಟೇ ಮುಖ್ಯ ಆಗಬೇಕು.[2]

1. ಡಾ॥ ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧
2. ಎ.ಕ., IX, ಬೆಂಗಳೂರು ೧೧೦, ಕ್ರಿ. ಶ. ೧೨೯೨

ಇಂತಹ ಸಾಮಾನ್ಯರ ಪ್ರತಿನಿಧಿಗಳ ಅಧ್ಯಯನ ನಡೆಯದಿದ್ದರೆ ಸಾಂಸ್ಕೃತಿಕ ಅಧ್ಯಯನವು ಪೂರ್ಣವಾಗುವಂತಿಲ್ಲ.

'ಉಳ್ಳವರು' ಶಿವಾಲಯವ ಮಾಡುವುದು ಹಿರಿಮೆಯ ಮಾತಲ್ಲ. ದೇವಾಲಯದ ನಿರ್ಮಾಣದ ಹಿನ್ನೆಲೆಯಲ್ಲಿ ಯಾವ ಕಾರಣವೇ ಇದ್ದರೂ ಚಕ್ರವರ್ತಿಗಳು, ಮಾಂಡಲಿಕರು, ಪ್ರಧಾನಿಗಳು, ಸೇನಾಧಿಪತಿಗಳು ದೇವಾಲಯ ನಿರ್ಮಾಣ ಮಾಡಲು ಅವರಿಗೆ ಹಣದ ಕೊರತೆ ಇರಲಿಲ್ಲ. ಅವರ ಅಧಿಕಾರ ಬಲದಿಂದ ಜನಬಲವೂ ಒದಗುತ್ತಿತ್ತು. ಆದರೆ ತಲೆಯನ್ನು ತೋಳೆಯದ ಅನ್ನವನ್ನುಣ್ಣದ ವೀರವ್ರತವನ್ನು ಕೈಗೊಂಡು ದೇವಾಲಯ ನಿರ್ಮಿಸಿದ ಬಮ್ಮಣ[3], ಭಿಕ್ಷಾವೃತ್ತಿಯಿಂದ ಇಟ್ಟಿಗೆಯ ದೇವಾಲಯವನ್ನು ಕೆಡವಿಸಿ, ಕಲ್ಲಿನಲ್ಲಿ ಪುನರ್ನಿರ್ಮಾಣ ಮಾಡಿಸಿದ ಲಿಂಗಶಿವಜೀಯ,[4] ಅವನಿಯ ಸ್ಥಾನವನ್ನು ನಾಲ್ವತ್ತು ವರ್ಷ ಆಳಿ ಐವತ್ತು ದೇಗುಲಗಳನ್ನೂ ಮತ್ತು ಎರಡು ಹಿರಿಯ ಕೆರೆಗಳನ್ನೂ ಕಟ್ಟಿಸಿದ ತ್ರಿಭುವನಕರ್ತಾರ ದೇವ,[5] ಭಿಕ್ಷಾವೃತ್ತಿಯನ್ನು ಮಾಡಿ ರಂಗನಾಥಸ್ವಾಮಿಗೆ ದೀಪಮಾಲೆಯ ಕಂಬವನ್ನು ಸಮರ್ಪಿಸಿದ ರಂಗಾಪುರದ ಪರದೇಶಪ್ಪ,[6] ಮಲ್ಲಿಕಾರ್ಜುನ ದೇವರನ್ನು ಮಾಡಿಸಿದ ಪೂಜಾರಿ ಸಿಂಗಣ,[7] ಆ ದೇವರಿಗೆ ಹಿರವೂರು ಬಾಡವನ್ನು ಧರ್ಮವಾಗಿ ನೀಡಿದ ಮಾಲಗಾಜಿ ಕೊತ್ತಳಿ ತಳೆವರು, ಯಜಮಾನ ಮಾಡಿಸುತ್ತಿದ್ದ ಬಸದಿಯನ್ನು ಪೂರ್ಣ ಮಾಡಿಸಿದ ಬಾಣಸಿ ಜಕ್ಕಯ್ಯ[8] ಇವರುಗಳು ಯಾವ ಚಕ್ರವರ್ತಿ, ಮಾಂಡಲಿಕ ಅಥವಾ ಅಧಿಕಾರಿಗಳಿಗಿಂತಲೂ ಮಹತ್ವದ ವ್ಯಕ್ತಿಗಳಾಗುತ್ತಾರೆ. ಇಂತಹ ಸಾಮಾನ್ಯರೇ ನಾಡಿನ ಸಂಸ್ಕೃತಿಯ ಸೊಡರುಗಳಾಗಿ ಶೋಭಿಸುತ್ತಾರೆ. ಈ ಗುಂಪಿಗೆ ಪರದೇಸಿತನದಲ್ಲಿ ಇದ್ದು, ತಿರಿದು ತಂದು ತನ್ನ ತಂದೆ ಕಟ್ಟಿಸಿದ ಹನುಮಂತದೇವರ ಗುಡಿಗೆ 'ಕಟುಪಂಜರವ' ಮಾಡಿಸಿದ ಕಂಗಾಳದೇವನೂ ಸೇರುತ್ತಾನೆ.[9]

ಕ್ರಿ. ಶ. ೧೧೬೦ ರಿಂದ ೧೧೭೭ರ ವರೆಗಿನ ನಾಲ್ಕು ಶಾಸನಗಳ ಮೂಲಕ ತಿಳಿದುಬರುವ ಸತ್ಯಾನಂದಸ್ವಾಮಿಗಳ ಮಗ ನೀಲಕಂಠದೇವರು ಮಳೂರಿನ ಸಾಂಸ್ಕೃತಿಕ ಇತಿಹಾಸದ ಸಂದರ್ಭದಲ್ಲಿ ಪ್ರಮುಖನಾಗಿದ್ದಾನೆ. 'ಶ್ರೀ ಮಟವೂರಾನ ರಾಜೇಂದ್ರಸಿಂಹ ಚತುರ್ವೇದಿ ಮಂಗಲ" ದಲ್ಲಿ ನೀಲಕಂಠದೇವರಿಗೆ ವಿಶಿಷ್ಟ ಸ್ಥಾನವಿದ್ದ ವಿಷಯ ಶಾಸನಗಳಿಂದ ತಿಳಿದು ಬರುತ್ತದೆ. ಅಪ್ರಮೇಯ ಸ್ವಾಮಿಯ ಆಲಯಕ್ಕೆ ಸಂಬಂಧಿಸಿದಂತೆ, ಅಲ್ಲಿನ ಕೆರೆಯ ದುರಸ್ತಿಗೆ ಸಂಬಂಧಿಸಿದಂತೆ ನೀಲಕಂಠದೇವರ ಉಲ್ಲೇಖವಿದೆ.[10] ಅಪ್ರಮೇಯಸ್ವಾಮಿಯ ಆಲಯದಿಂದ ಯಾರೋ ಕಳ್ಳರು, ಹುದುಗಿಸಿಟ್ಟಿದ್ದ ದೇವರ ಆಭರಣಗಳನ್ನು ಕದ್ದು ಒಯ್ಯಲಾಗಿ, ನೀಲಕಂಠದೇವರು ಅದೇ ರೀತಿಯ ಆಭರಣಗಳನ್ನು ಮಾಡಿಸಿಕೊಟ್ಟಿದ್ದನು. ಅದಕ್ಕೆ ತಗುಲಿದ ಖರ್ಚನ್ನು ಮಹಾಜನರು ಹಿಂದಕ್ಕೆ ಕೊಟ್ಟಾಗ ನೀಲಕಂಠದೇವರು ಬಂದ ಹಣವನ್ನು ಬೇರೆ ಕಾರ್ಯಗಳಿಗೆ ವಿನಿಯೋಗಿಸಿದನು.

ದೇವಾಲಯದ ಆಭರಣಗಳನ್ನು ಕದಿಯುವ ಮಾತಿರಲಿ. ದೇವಾಲಯವನ್ನೇ ಒತ್ತೆಯಿಡುತ್ತಿದ್ದ ವಿಷಯಗಳನ್ನೂ ಶಾಸನಗಳಿಂದ ತಿಳಿಯಬಹುದು. ಗೊರೂರಿನ ವಾಸುದೇವರ ಕ್ಷೇತ್ರವನ್ನು ಹಿಂದಿನ ನಂಬಿಯಾರರು ಒತ್ತೆಯಿಟ್ಟಿದ್ದರು. ಅದನ್ನು ಪೆಣ್ಣಕ್ಕ ಎಂಬುವವಳು ಹೊನ್ನ ಕೊಟ್ಟು ಬಿಡಿಸಿ ದಿನನಿತ್ಯ ಪ್ರಸಾದಕ್ಕೆ ದಾನ ಮಾಡಿ, ಇನ್ನು ಮೇಲೆ 'ನಂಬಿಯರು ಆ ಕ್ಷೇತ್ರಂಗಳನೊತ್ತೆಯಿಟ್ಟನಾದಡೆ ರಾಜದ್ರೋಹಿ, ಸಮಯದ್ರೋಹಿ, ಹದಿನೆಂಟು

---

3 ಅದೇ, XI, ಹೊಳಲ್ಕೆರೆ ೬೮, ಕ್ರಿ.ಶ. ೧೧೨೬

4 ಅದೇ, ಮೊಳಕಾಲ್ಮೂರು ೨೭, ಕ್ರಿ.ಶ. ೯೬೨

5 ಅದೇ, X, ಮುಳಬಾಗಿಲು ೬೫, ಕ್ರಿ.ಶ. ೯೩೧

6 ಕನ್ನಡಪ್ರಭ ದಿನಪತ್ರಿಕೆ –ವಾಙ್ಮಯ ವಿಹಾರ

7 ಎ.ಕ., VII, ಶಿಕಾರಿಪುರ ೧೩೫, ಕ್ರಿ.ಶ. ೧೦೭೮

8 ಅದೇ; V, ಅರಕಲಗೂಡು ೯೭, ಕ್ರಿ.ಶ.ಸು. ೧೦೯೫

9 ಅದೇ, VII, ಚನ್ನಗಿರಿ ೧೭, ಕ್ರಿ.ಶ.ಸು. ೧೧೨೦

10 ಅದೇ, IX, ಚನ್ನಪಟ್ಟಣ ೮೯, ಕ್ರಿ.ಶ.ಸು. ೧೧೭೬.

ಸಮಯಕೂ ಹೊಱಗು ಆ ಕ್ಷೇತ್ರಗಳನ್ನು ವೊತ್ತೆ ಹಿಡಿದ ವರೂ ರಾಜದ್ರೋಹಿ ಸಮೆಯದ್ರೋಹಿಗಳು ಹದಿನೆಂಟು ಸಮಯಕೂ ಹೊಱಗು ಆ ನಂಬಿಯರು ದೇವರ ಶ್ರೀ ಕಾರ್ಯ್ಯವನೂ ನಡಸಿ...'[11] ಎಂಬ ನಿಬಂಧನೆ ಹಾಕುತ್ತಾಳೆ. ನಂಬಿಯರು ದೇವಾಲಯವನ್ನು ಒತ್ತೆ ಇಟ್ಟಿದ್ದೇಕೆ ಎಂಬುದನ್ನು ಶಾಸನ ತಿಳಿಸುವುದಿಲ್ಲ. ಆದರೆ ದೇವಾಲಯವನ್ನು ಒತ್ತೆಯಿಂದ ಬಿಡಿಸಿದ ಪೆಣ್ಣಕ್ಕ ಮಾನ್ಯಳಾಗಿದ್ದಾಳೆ.

ಮಹಾಜನಗಳಿಗೂ ಸ್ಥಾನಾಚಾರ್ಯರಿಗೂ ನಡೆದ ಭೂವಿವಾದದ ವಿವರಗಳನ್ನು ಶಾಸನಗಳು ದಾಖಲಿಸಿವೆ. ಅರಸೀಕೆರೆ ತಾಲ್ಲೂಕಿನ ಕಣಿಕಟ್ಟೆಯ ಕ್ರಿ. ಶ. ೧೨೧೫ರ ಒಂದು ಶಾಸನದಲ್ಲಿ 'ಕಳಿಕಟ್ಟೆಯ ಅಶೇಷ ಮಹಾಜನಂಗಗಳು' ಮತ್ತು 'ಅಲ್ಲಿಯ ಸ್ಥಾನಾಚಾರ್ಯ ದೇವರಾಶಿ ಗುರುಗಳ ನಾಲ್ವರು ಮಕ್ಕಳು' ಮತ್ತು ಮತ್ತೊಬ್ಬ ವ್ಯಕ್ತಿ ಐಕಮತ್ಯದಿಂದ ಕಮಟೇಶ್ವರ ದೇವಸ್ಥಾನದ ಭೂಮಿಯಲ್ಲಿ ಕುಂದುಂಟೆಂದು ವಿವಾದಕ್ಕೆ ತೊಡಗುತ್ತಾರೆ. ಆಗ 'ಆ ಸ್ಥಳದ ಪ್ರಜೆಗಳೂಂ ಆ ಪೊನ್ನಚ್ಚ ಸೆಟ್ಟಿಯರೂಂ ಆ ಗವುಡುಗಳೂಂ ಚಮುಗಾವೆಯವರೂಂ ನೆರೆದು ಆ ಸ್ಥಳವ ನೋಡಿ ಅನಾದಿ ತೊಡಗಿ ದೇವದಾನವಲ್ಲ ಎಂದು ತಿಳಿದು ನೋಡಿ ಯಿದನು ನೀವು ವಿವಾದಿಸುಹ ಮರಿಯಾದೆ ಅಲ್ಲ ಎಂದು ಆ ಸೆಟ್ಟಿಯರೂಂ ಆ ಗವುಡುಗಳೂಂ ಆ ವೂರ ಪ್ರಜೆಗಳೂಂ ಆ ಚಮುಗಾವೆಯವರೂಂ ಆ ಸ್ಥಾನಿಕರಿಗೆ ಹೇಳ(ಲಾಗಿ) ಆ ಸ್ಥಾನಿಕರು ವೊಡಂಬಟ್ಟು ವಿವಾದವ ಮಾಡೆವು ಈ ದಿನಂ ಮೊದಲಾಗಿ ತಂಮ ಎಲ್ಲಾ ಸ್ಥಾನಂಗಳ ಭೂಮಿಯಲಿ ಅನಾದಿ ತೊಡಗಿ ನಾವು ಭೋಗಿಸುವ ಭೂಮಿ ಎಂಮದು ಅಗ್ರಹಾರವಾದಂದು ತೊಡಗಿ ಮಹಾಜನಂಗಳು ಭೋಗಿಸುವ ಭೂಮಿ ಮಹಾಜನಂಗಳದು ಎವಗೆಯುಂ ಮಹಾಜನಂಗಳಿಗೆವುಂ ಭೂಮಿ ವಿ(ಷ)ಯವಾಗಿ ಹಳ್ಳಿ ಹಿರಿಯೂರಲು ಕಾವಣಕರವಿಲ್ಲೆಂದು ಆ ಮಹಾಜನಂಗಳಿಗೆ ಆ ಸ್ಥಾನಿಕರು ಕೊಟ್ಟ ವ್ರೋಲೆ'–[12] ಈ ಒಪ್ಪಂದಕ್ಕೆ ಹಲವಾರು ಸಾಕ್ಷಿಗಳಿದ್ದಾರೆ.

ದೇವಾಲಯದ ಭೂಮಿಯ ಬಗೆಗೆ ವಿವಾದವಿರುತ್ತಿದ್ದು ಅದು ಪರಸ್ಪರ ಬಗೆಹರಿಯುತ್ತಿದ್ದ ರೀತಿಗೆ ಈ ಶಾಸನವು ಒಂದು ಒಳ್ಳೆಯ ಉದಾಹರಣೆಯಾಗಿದೆ.

ಕ್ರಿ.ಶ. ೧೬೩೮ರ ಬಸ್ತಿಹಳ್ಳಿಯ ಒಂದು ಶಾಸನವು ಜೈನ ಹಾಗೂ ಶೈವ ಮತಗಳ ದ್ವೇಷ ಪರಿಸ್ಥಿತಿ ಮತ್ತು ಅದನ್ನು ನಿವಾರಿಸಲು ಮಹಾಮಹತ್ತು ಮಾಡಿದ ತೀರ್ಮಾನಗಳ ಬಗ್ಗೆ ತಿಳಿಸುತ್ತದೆ. 'ವೈಷ್ಣವ ಮತಾವಾರ್ಧಿ ಪ್ರವರ್ದ್ಧಮಾನ....ವೇಂಕಟಾದ್ರಿ ನಾಯಕರು ಬೇಲೂರು ರಾಜ್ಯವನ್ನು ಪ್ರತಿಪಾಲಿಸುತ್ತಿರುವಾಗ ಹಳೆಯಬೀಡ ವೀರವಿಜಯ ಪಾರ್ಶ್ವನಾಥಸ್ವಾಮಿಯ ಬಸದಿಯ ಕಂಬಗಳಿಗೆ ಮುಚ್ಚಪ್ಪದೇವರು ಲಿಂಗಮುದ್ರೆಯ ಹಾಕಲಾಗಿ ಆ ಲಿಂಗಮುದ್ರೆಯನು ವಿಜಯಪ್ಪನು ತೊಡೆದು ಸಜ್ಜನಶುದ್ಧ ಶಿವಾಚಾರ ಸಂಪನ್ನರಾದ ಮಹಾಮಹತ್ತಿನವರು ಬೇಲೂರ ರಾಜ್ಯದ ಜೈನ ಸೆಟ್ಟಿಗಳ ಬಿಂನಹ ಕೇಳಿ ಸಮಸ್ತರೂ ಮಹಾಮತ್ತಿನ ಅಭಿಪ್ರಾಯದೊಡನೆ ಏಕಸ್ಥರಾಗಿ ಅವರವರ ಧರ್ಮದ ರೀತ್ಯಾ ಪೂಜೆ–ಪುನಸ್ಕಾರ ಮುಂದುವರಿಸಿಕೊಂಡು ಹೋಗುವಂತೆ ಕಟ್ಟುಮಾಡಿ ಜೈನ ಮತ್ತು ಶೈವರ ಸಂಬಂಧವನ್ನು ಹಾರ್ದಿಕಗೊಳಿಸಿದರು: 'ಜೈನಧರ್ಮಕ್ಕೆ ಆವನೋರ್ವನು ವಿಘ್ನವ ಮಾಡಿದಡೆ ಆತನು ತಂದು ಮಹಾಮಹತ್ತ ಪದವ ಕೂಡಿದವನಲ್ಲ ಶಿವದ್ರೋಹಿ ಜಂಗಮದ್ರೋಹಿ ವಿಭೂತಿ ರುದ್ರಾಕ್ಷಿಗೆ ತಪ್ಪಿದವರು–'[13] ಎಂದು ಸಮಸ್ತರೂ ಎಚ್ಚರಿಸಿದ್ದಾರೆ. ಇಂತಹ ಶಾಸನಗಳು ಜನಸಾಮಾನ್ಯರಿಗಿದ್ದ ಸರ್ವಧರ್ಮ ಸಮನ್ವಯ ಮನೋಭಾವವನ್ನು ವ್ಯಕ್ತಪಡಿಸುತ್ತವೆ.

ಯುದ್ಧ, ಪೆಣ್ಬುಯ್ಯಲ್, ಊರಳಿವು, ಗೋಗ್ರಹಣ ಮುಂತಾದ ಸಂದರ್ಭಗಳಲ್ಲಿ ಮಡಿದು ವೀರರಾದವರ, ಉಲ್ಲೇಖ ಮಾಡುವ ಶಾಸನಗಳ ಸಂಖ್ಯೆ ಕಡಿಮೆಯೇನಲ್ಲ. ಸೊರಬ ತಾಲ್ಲೂಕಿನ ಹೆಚ್ಚೆ ಗ್ರಾಮದ ಕ್ರಿ.ಶ. ೯೯೧ರ ಒಂದು ಶಾಸನವು 'ಸಾನ್ತಿವರ್ಮ್ಮನು ಹೆಜ್ಜಿಸೆಯನ್ನು ಆಳುತ್ತಿದ್ದಾಗ, ಅವನಿಗೆ ಪುತ್ರಲಾಭವಾದುದರಿಂದ ಕಟಿಕನೆಂಬ ವೀರನು ಆತ್ಮಬಲಿ ಮಾಡಿಕೊಂಡ ವಿಷಯವನ್ನು ಪ್ರಸ್ತಾಪಿಸಿದೆ.[14]ಇಲ್ಲಿ 'ಆತ್ಮಬಲಿ'ಗೆ ಕೇವಲ

11 ಅದೇ, V, ಹಾಸನ ೧೭೮, ಕ್ರಿ.ಶ. – ?
12 ಅದೇ, ಅರಸೀಕೆರೆ ೪೯, ಕ್ರಿ.ಶ.೧೨೧೫
13 ಅದೇ, V, ಬೇಲೂರು ೧೨೮, ಕ್ರಿ.ಶ. ೧೬೩೮
14 ಅದೇ, VII, ಸೊರಬ ೩೭೯, ಕ್ರಿ.ಶ. ೯೯೧

ರಾಜನಿಷ್ಠೆ ಮಾತ್ರ ಕಾರಣವಾಗಿದೆ. ಒಡೆಯನಿಗೆ ಪ್ರತ್ಯೋತ್ಸವವಾದುದಕ್ಕೆ 'ಆತ್ಮಬಲಿ' ಮಾಡಿಕೊಂಡ '**ಕಟಿಕ**' ಬಹುಮಾನ್ಯನಾಗಿದ್ದಾನೆ.

ಗಂಡನು ಮೃತನಾದಾಗ ಸಹಗಮನಮಾಡಿ ಮಹಾಸತಿಯಾದವರ ಉಲ್ಲೇಖ ಅಪರೂಪವೇನಲ್ಲ. ಸೊರಬ ತಾಲ್ಲೂಕಿನ ದೂಗೂರು ಗ್ರಾಮದ ಕ್ರಿ.ಶ. ೧೩೮೮ರ ಒಂದು ಮಾಸ್ತಿಕಲ್ಲಿನಲ್ಲಿ ಉಲ್ಲೇಖವಾಗಿರುವ ಶಾಸನದ ಪ್ರಕಾರ 'ಕೋವಿಕಾಜಿ ದೇವೆಯ ನಯ್ಕನಿಗೆ' ಸರ್ಪದಂಷ್ಟ್ರವಾದಲ್ಲಿ ಆತನ ಸತಿ ಮುದ್ದೊನಕೆತಿ ಮಹಾಸತಿಯಾಗಿ ವೈಕುಂಠ ಪ್ರಾಪ್ತಳಾದಳು.[15]

ತುಮಕೂರು ಜಿಲ್ಲೆಯ ದಂಡಿನಶಿವರದ ಸಮೀಪ ಆರಕೆರೆಯ ಮುತ್ತಿನ ಆಮ್ಮನ ದೇವಾಲಯದ ಬಳಿಯ ಒಂದು ವೀರಗಲ್ಲಿನ ಶಾಸನವು ಕ್ರಿ.ಶ. ೯೬೫ರಲ್ಲಿ ಹನುಮಗೊಂಡನು ಸಿರಿವುರದ ಅಳಿವಿನ ಎಲೆನಲ್ಲೂರಿನಲ್ಲಿದ್ದಾಗ ಒಬ್ಬ ಸೆಟ್ಟಿಯ ಮಗಳು ಪೊನ್ನಕ್ಕ ಎಂಬುವಳನ್ನೂ ಇಱಿದ ವಿಷಯವನ್ನು ತಿಳಿಸುತ್ತದೆ.[16] ಇರಿಯಲು ಕಾರಣವೇನೆಂದು ತಿಳಿದಿಲ್ಲ. ಆ ಸ್ಥಳಕ್ಕೆ ಸಮೀಪದ ದಂಡಿನಶಿವರದ ಹೊನ್ನಾದೇವಿಯು ಪ್ರಸಿದ್ಧ ಗ್ರಾಮದೇವತೆ. ಆ ದೇವತೆಯ ದೇವಾಲಯದಲ್ಲಿರುವ ಕ್ರಿ.ಶ. ಸು. ೧೨೦೦ರ ಒಂದು ಶಾಸನವು, 'ಶ್ರೀಮತು ಭೈರವ ನಾಯಕರು ದಂಡಿನ ಸಿರಿವುರಕ್ಕೆ ಮುತ್ತಿಗೆ ಹಾಕಲಾಗಿ ಹೊಂನಾದೇವಿ ಹರಸಿ ಹೇಳಲಾಗಿ ಗ್ರಾಮದ ಮುತ್ತಿಗೆ ತೆಗೆಸಿ ಅದು ಕಾರಣ ಲಿಂಗಪುರದ ಸಿದಪನಾಯಕರು ಹೊಂನಾದೇ(ವಿ)ಗೆ ಕೊಟ್ಟ' ವಿಷಯವನ್ನು ಪ್ರಸ್ತಾಪಿಸಿದೆ.[17] ಆರಕೆರೆಯ ಶಾಸನದ ಪೊನ್ನಕ್ಕನೇ ಹೊನ್ನಾದೇವಿಯಾಗಿ ದೈವತ್ವಪಡೆದಿರಬಹುದೇ ಎಂಬ ಅನುಮಾನ ನಿವಾರಣೆಗೆ ಸ್ಥಳೀಯ ಜಾನಪದ ಕಥೆಗಳು ನೆರವಾಗಬಹುದು. ಸಾಮಾನ್ಯಳಾದ ಪೊನ್ನಕ್ಕ ಬಹುಶಃ ಶತ್ರುಗಳನ್ನು ಎದುರಿಸಿ ಹತಳಾಗಿ ತನ್ನ ವೀರಕಾರ್ಯದಿಂದಲೂ ದೈವತ್ವ ಪಡೆದಿರಬಹುದೆಂದು ಊಹಿಸಬಹುದಾಗಿದೆ.

ಇತ್ತೀಚೆಗೆ ಪ್ರಕಟವಾದ ತುಮಕೂರು ತಾಲ್ಲೂಕಿನ ಹೊನ್ನುಡಿಕೆಯ ಸಮೀಪದ ಒಂಡೀಪಾಳ್ಯದ ಮೂವರು ವೀರರ ಮೂರು ಹಂತದ ಶಿಲ್ಪವಿರುವ ಒಂದೇ ವೀರಗಲ್ಲಿನ ಶಾಸನದ ಮೂಲಕ ಒಬ್ಬನೇ ತಂದೆಯ ಮೂವರು ಮಕ್ಕಳು ಯಾವುದೋ ಒಂದೇ ಕಾರಣಕ್ಕೆ ಒಂದೇ ಸಂದರ್ಭದಲ್ಲಿ ಹೋರಾಡಿ ಮಡಿದುದನ್ನು ತಿಳಿಯಲಾಗಿದೆ.[18] ಇಂತಹ ದಾಖಲೆಗಳು ಪ್ರಾಚೀನ ಕರ್ನಾಟಕದ ಸಂಸ್ಕೃತಿಯ ವೀರವೌಲ್ಯದ ಪರಿಚಯು ಮಾಡುತ್ತವೆ.

---

15 ಅದೇ, ೪೮೩ ಕ್ರಿ.ಶ. ೧೩೮೮

16 ಅದೇ, XII, ಗುಬ್ಬಿ ೪೪, ಕ್ರಿ.ಶ. ೯೬೫

17 ಅದೇ, ೪೧, ಕ್ರಿ ಶ. ಸು. ೧೨೦೦

18 ಎಚ್.ಎಸ್. ಗೋಪಾಲರಾವ್ : 'ಮೂವರು ವೀರರ ಒಂದು ವೀರಗಲ್ಲು', ಸಾಧನೆ, ೧೫–೨, ಏಪ್ರಿಲ್ – ಜೂನ್ ೧೯೮೬

ಕೂ. ಸ. ಅಪರ್ಣ

# ನಾಗಮಂಗಲ ತಾಲ್ಲೂಕಿನ ಜೈನಶಾಸನಗಳು

ಕನ್ನಡ ಶಾಸನಪ್ರಪಂಚ ವಿಶಾಲವಾದುದು. ಇವುಗಳನ್ನು ಅಭ್ಯಸಿಸುವಾಗ ಒಂದು ಪರಿಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಗುತ್ತದೆ. ಒಂದೇ ಜಿಲ್ಲೆಯ ಅಥವಾ ಒಂದೇ ತಾಲ್ಲೂಕಿನ ಶಾಸನಗಳನ್ನಷ್ಟೇ ತೆಗೆದುಕೊಂಡರೂ ಅದರಲ್ಲಿ ವೈವಿಧ್ಯಮಯ ಶಾಸನಗಳನ್ನು ಕಾಣುತ್ತೇವೆ. ಇದಕ್ಕೆ ನಾಗಮಂಗಲ ತಾಲ್ಲೂಕು ಕೂಡಾ ಒಂದು ಸ್ಪಷ್ಟ ಉದಾಹರಣೆಯಾಗಬಲ್ಲದು. ದೇವಾಲಯ ನಿರ್ಮಾಣ, ದಾನಶಾಸನ, ಪುರಧರ್ಮ ಶಾಸನ, ವೀರಗಲ್ಲು, ಮಾಸ್ತಿಕಲ್ಲು, ವೈಷ್ಣವ–ಜೈನ-ಶೈವ ಮುಂತಾಗಿ ವಿವಿಧ ರೀತಿಯ ಶಾಸನಗಳನ್ನು ಹೊಂದಿರುವ ಈ ತಾಲ್ಲೂಕಿನ ಜೈನಶಾಸನಗಳನ್ನಷ್ಟೇ ಇಲ್ಲಿ ಗಮನಿಸಲಾಗಿದೆ.

ಬಸದಿ ನಿರ್ಮಾಣಕ್ಕೆ ಸಂಬಂಧಿಸಿದ ಶಾಸನಗಳು, ಬಸದಿಗೆ ಬೇರೆ ಬೇರೆ ಉದ್ದೇಶಗಳಿಂದ ದಾನ ನೀಡಿದ ಶಾಸನಗಳು, ಮುನಿಗಳಿಗೆ ಸಂಬಂಧಿಸಿದ ಶಾಸನಗಳು, ಜೈನರ ಪವಿತ್ರಕ್ಷೇತ್ರಗಳಿಗೆ (ನಿರ್ವಾಣ ಕ್ಷೇತ್ರ) ಭೇಟಿ ನೀಡಿದ ಶಾಸನಗಳು ಮತ್ತು ನಿಸಿಧಿಶಾಸನಗಳು–ಈ ಎಲ್ಲ ಅಂಶಗಳನ್ನೊಳಗೊಂಡ ಶಾಸನಗಳನ್ನು ಜೈನಶಾಸನಗಳೆಂದು ಗುರುತಿಸಬಹುದು. ಪ್ರಸ್ತುತ ನಾಗಮಂಗಲದಲ್ಲಿರುವ ಒಟ್ಟು ನೂರಾಎಂಭತ್ತೈದು ಶಾಸನಗಳಲ್ಲಿ ಇಪ್ಪತ್ತೊಂಭತ್ತು ಜೈನಶಾಸನಗಳಿವೆ. ಇವುಗಳಲ್ಲಿ ಬಸದಿ ನಿರ್ಮಾಣದ ಉಲ್ಲೇಖವಿರುವ ಶಾಸನಗಳು ಹನ್ನೊಂದು ಇದ್ದರೆ,ಹತ್ತು ದಾನಶಾಸನಗಳೂ, ಒಂದು ಜೈನಮುನಿಗಳಿಗೆ ಸಂಬಂಧಿಸಿದ ಶಾಸನವೂ, ಐದು ನಿಸಿಧಿಶಾಸನಗಳೂ ಇವೆ. ಈ ಎಲ್ಲ ಶಾಸನಗಳನ್ನು ವಿವಿಧ ದೃಷ್ಟಿಗಳಿಂದ ನೋಡಿದಾಗ ಹೊರಹೊಮ್ಮುವ ಮುಖ್ಯಾಂಶಗಳ ಸ್ಥೂಲ ಪರಿಚಯವೇ ಈ ಲೇಖನದ ಉದ್ದೇಶವಾಗಿದೆ.

**ಬಸದಿ ನಿರ್ಮಾಣ ಮತ್ತು ದಾನಶಾಸನಗಳು :** ಜೈನಧರ್ಮವು ಮೊದಮೊದಲು ಮೂರ್ತಿ ಪೂಜೆಯನ್ನು ವಿರೋಧಿಸಿದರೂ, ಕಾಲಕ್ರಮೇಣ ಅದು ಮೂರ್ತಿ ಪೂಜೆಯನ್ನು ರೂಢಿಸಿಕೊಂಡಿತು. 'ಬಸದಿ ನಿರ್ಮಾಣವು ಮೋಕ್ಷಕ್ಕೆ ದಾರಿ' ಎಂಬ ನಂಬಿಕೆಯು ಮೂಡಿ, ಅದು ಬಸದಿ ರಚನೆಗೆ ಸೂಕ್ತ ಹಿನ್ನೆಲೆಯನ್ನೊದಗಿಸುವುದರೊಂದಿಗೆ ನಾಡಿನ ಪ್ರಮುಖ ಜನರ ಧಾರ್ಮಿಕ ಭಾವನೆಗಳು ಪ್ರಕಟಗೊಳ್ಳಲು ಅನುಕೂಲವಾದವು. ಹೀಗಾಗಿ, ನಾಗಮಂಗಲ ತಾಲ್ಲೂಕಿನಲ್ಲಿ ಬಸದಿ ನಿರ್ಮಾಣಕ್ಕೆ ಸಂಬಂಧಿಸಿದಂತೆ ಅನೇಕ ಶಾಸನಗಳನ್ನು ಕಾಣುತ್ತೇವೆ.

ಇವುಗಳಲ್ಲಿ ಅತಿ ಪ್ರಾಚೀನ ಶಾಸನವೆಂದರೆ ದೇವರಹಳ್ಳಿಯ ತಾಮ್ರಶಾಸನ(೧೪೯).* ಕ್ರಿ.ಶ. ೭೭೬-೭೭೭ರ ಈ ಶಾಸನವು ಬಾಣವಂಶದ ನಿರ್ಗುಂದರಾಜನ ಅರಸಿ ಕುನ್ದಾಚ್ಚಿಯು ಶ್ರೀಪುರದಲ್ಲಿ 'ಲೋಕತಿಲಕ' ಬಸದಿಯನ್ನು ಕಟ್ಟಿಸಿ, ಅದಕ್ಕೆ ಪೊನ್ನಳ್ಳಿ ಗ್ರಾಮವನ್ನು ದಾನ ನೀಡಿದ್ದನ್ನು ಹೇಳುತ್ತದೆ. ಈ ತಾಲ್ಲೂಕಿನಲ್ಲಿ ಬಸದಿ ನಿರ್ಮಿಸಿರುವ ಸ್ತ್ರೀಯ ಉಲ್ಲೇಖವಿರುವ ಶಾಸನ ಇದೊಂದೇ.

---

* ಆವರಣದಲ್ಲಿರುವ ಸಂಖ್ಯೆಗಳು ಎಪಿಗ್ರಾಫಿಯ ಕರ್ನಾಟಿಕಾ VIIರ ನಾಗಮಂಗಲ ತಾಲ್ಲೂಕಿನ ಶಾಸನದ ಸಂಖ್ಯೆಗಳಾಗಿವೆ.

ಕ್ರಿ.ಶ. ೧೧೪೨ರ ಕಸಲಗೆರೆಯ ಶಾಸನವು (೧೬೯) ಸುಗ್ಗಗವುಣ್ಡನ ಮಗ ಸಾಮುಂತ ಸೋವೆಯನಾಯಕನು ಕಲ್ಕುಣೆನಾಡಿನ ಹೆಬ್ಬಿದಿರೂರ್ವಡಿಯಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿ ಅದಕ್ಕೆ ದಾನ ನೀಡಿದ್ದನ್ನು ಹೇಳುತ್ತದೆ. ಕ್ರಿ.ಶ. ೧೧೪೫ರ ಯಲ್ಲಾದಹಳ್ಳಿಯ ಶಾಸನವು (೬೪) ಹೊಯ್ಸಳ ವಿಷ್ಣುವರ್ಧನನ ಮಹಾಪ್ರಧಾನ ದೇವರಾಜನು ಸೂರನಹಳ್ಳಿಯಲ್ಲಿ ಪಾರ್ಶ್ವಜಿನನಿಗೆ ಬಸದಿಯನ್ನು ನಿರ್ಮಿಸಿ, ಪಾರ್ಶ್ವನಾಥನ ಹೆಸರಿನಲ್ಲಿ ಆ ಹಳ್ಳಿಯನ್ನು 'ಪಾರ್ಶ್ವಪುರ'ವನ್ನಾಗಿ ಪರಿವರ್ತಿಸಿ ದಾನ ನೀಡಿದ್ದನ್ನು ಹೇಳುತ್ತದೆ. ಕ್ರಿ.ಶ. ೧೧೭೮ರ ಹಟ್ಟಣದ ಶಾಸನವು (೧೧೮) ಪಟ್ಟಣಸ್ವಾಮಿ ಸೋವಿಸೆಟ್ಟಿಯು 'ನಿಜನಾಮದ ಹಟ್ಟಣ'ದಲ್ಲಿ ಸಾಗರಸಮಾನವಾದ ಮೂರು ಕೆರೆಗಳನ್ನೂ, ಪಾರ್ಶ್ವಜಿನಾಲಯುವೊಂದನ್ನೂ ಕಟ್ಟಿಸಿ, ಅದಕ್ಕೆ ದಾನ ನೀಡಿದ್ದನ್ನು ಹೇಳುತ್ತದೆ. ಈ ಸೋವಿಸೆಟ್ಟಿಯ ಪೂರ್ವಜರಲ್ಲಿ ಎಱೆಗಾಂಕ ಎಂಬುವವನು ಮುದುವೊಳಲ್‌ನಲ್ಲಿ ಬಸದಿ–ಕೆರೆ–ದೇವಸ್ಥಾನ ಮತ್ತು ಮಠವೊಂದನ್ನು ಕಟ್ಟಿಸಿದ್ದನ್ನೂ ತಿಳಿಸುತ್ತದೆ. ಕ್ರಿ.ಶ. ೧೧೮೩ರ ಅಳೀಸಂದ್ರದ ಶಾಸನವು (೭೨) ಭರತಿಮಯ್ಯ ಮತ್ತು ಬಾಹುಬಲಿ ದಂಡನಾಯಕರು ಅಣುವಸಮುದ್ರದಲ್ಲಿ 'ಕಂನೆವಸದಿ'ಯೊಂದನ್ನು ಕಟ್ಟಿಸಿ ದಾನ ನೀಡಿದ್ದನ್ನು ಹೇಳಿದರೆ, ಹನ್ನೆರಡನೇ ಶತಮಾನದ ಕಂಬದಹಳ್ಳಿಯ ಶಾಸನವೊಂದು (೩೨) ಗಂಗರಾಜನ ಮಗನು ಬೊಪ್ಪದೇವರಿಗೆ 'ಕಂನೆವಸದಿ'ಯನ್ನು ಕಟ್ಟಿಸಿದಂತೆ ತಿಳಿಸುತ್ತದೆ.

ಹದಿನೇಳನೇ ಶತಮಾನದ ಬೆಳ್ಳೂರಿನ ಶಾಸನವು (೯೩), 'ಶರ್ಕರ' ಎಂಬ ವರ್ತಕನು ಬೆಳ್ಳೂರಿನಲ್ಲಿ ವಿಮಲನಾಥನ ಚೈತ್ಯಾಲಯವನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ. ಈ ಚೈತ್ಯಾಲಯದ ಮೂಲಬಿಂಬದ ಮೇಲಿನ ಶಾಸನವು (೯೨), ಈ ಬಿಂಬವನ್ನು ಸಮಂತಭದ್ರಾಚಾರ್ಯರ ಶಿಷ್ಯರಾದ ಲಕ್ಷ್ಮಿಸೇನಾಚಾರ್ಯರು ಪ್ರತಿಷ್ಠಾಪಿಸಿದರೆಂದು ಸ್ಪಷ್ಟಪಡಿಸುತ್ತಿದೆ. ಈ ಬಸದಿಯ ಭಿತ್ತಿಯ ಮೇಲಿರುವ ಶಾಸನದಲ್ಲಿ, ಈ ಬಸದಿಯನ್ನು ನಿರ್ಮಿಸಿದ-ಹುಲಿಕಲ್ಲ ದೊಡ್ಡಾದಣ್ಣಶೆಟ್ಟಿಯ ಮಗನಾದ ಮತ್ತು ಪದುಮಣ್ಣಶೆಟ್ಟರ ಮೊಮ್ಮಗನಾದ-ಸಕ್ಕರೆಸೆಟ್ಟಿಯ ಉಲ್ಲೇಖವಿದ್ದು, ಈ ಸಕ್ಕರೆಸೆಟ್ಟಿ ಮತ್ತು ಮೇಲೆ ಹೇಳಿರುವ 'ಶರ್ಕರ' ಎಂಬ ವರ್ತಕ ಇಬ್ಬರೂ ಒಂದೇ ಎಂದು ಗುರುತಿಸಲಾಗಿದೆ.[1]

ಹದಿನೇಳು–ಹದಿನೆಂಟನೇ ಶತಮಾನದ ಕಂಬದಹಳ್ಳಿಯ ಶಾಸನವು (೩೭) ಬೆಟ್ಟದ ಶ್ರೀ ಚಂದ್ರಪ್ರಭಸ್ವಾಮಿಯ ಅರ್ಚನೆಗೆ ಒಂದು ಕೊಳವನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ.[2]

ಹೊಸದಾಗಿ ಬಸದಿ ನಿರ್ಮಿಸುವಂತೆಯೇ ಮೊದಲೇ ಇರುವ ಬಸದಿಯನ್ನು ಜೀರ್ಣೋದ್ಧಾರ ಮಾಡುವ ಕಾರ್ಯವೂ ನಡೆಯುತ್ತಿದ್ದಿತು.[3] ಕಂಬದಹಳ್ಳಿಯ ಕ್ರಿ.ಶ. ೧೧೬೮ರ ಶಾಸನವು (೨೬) ನೇಮದಂಡೀಶ ಮತ್ತು ಗಂಗವಂಶದ ಮುದ್ದರಸಿಯ ಮಗನಾದ ಪಾರ್ಶ್ವದೇವನು ಬಿಂಡಿಗನವಿಲೆಯ ಪಾರ್ಶ್ವಜಿನನ ಬಸದಿಯನ್ನು ಜೀರ್ಣೋದ್ಧಾರ ಮಾಡಿ, ಸುಣ್ಣ ಹೊಡೆಸಿ ನಿರಂತರ ಶೋಭಿಸುವಂತೆ ಮಾಡಿ ಪುಣ್ಯಪಡೆದನೆಂದು ಹೊಗಳುತ್ತದೆ.

ಬಸದಿ ನಿರ್ಮಾಣ ಮಾಡಿದಾಗ ಅದು ನಿರಂತರವಾಗಿ ಸುಸ್ಥಿತಿಯಲ್ಲಿರಲೆಂದು ದಾನ ನೀಡುತ್ತಿದ್ದರೆಂಬ ಅಂಶ ಮೇಲಿನ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಅಂತೆಯೇ ಮೊದಲೇ ನಿರ್ಮಿತವಾಗಿರುವ ಬಸದಿಗೆ ಸಾಂದರ್ಭಿಕವಾಗಿ ದಾನ ನೀಡಿರುವ ಮುಕ್ತ ದಾನಶಾಸನಗಳೂ ಇಲ್ಲಿವೆ.

---

1 ಎ. ಕ., VII, ಬಾ. ರಾ. ಗೋಪಾಲ್, ಪೀಠಿಕೆ, ಪು. ೭೮

2 ಇಲ್ಲಿ ಉಕ್ತವಾಗಿರುವ ಬಸದಿ ಮತ್ತು ಬೆಟ್ಟವು ಕಂಬದಹಳ್ಳಿಯ ದಕ್ಷಿಣಭಾಗದಲ್ಲಿದೆ. ಈ ಪ್ರದೇಶದಲ್ಲಿ 'ಬೋಳರೆ ಬೆಟ್ಟ' ಎಂಬ ಬೆಟ್ಟವೊಂದಿದ್ದು, ಆ ಬೆಟ್ಟದ ಮೇಲೆ ಹಾಳಾದ ಬಸದಿಯ ಅವಶೇಷಗಳು ಮತ್ತು ಜಿನಬಿಂಬಗಳು ದೊರೆತಿವೆ. ಈ ಬೆಟ್ಟದ ಹತ್ತಿರವಿರುವ ಒಂದು ಬಂಡೆಗಲ್ಲಿನ ಮೇಲಿರುವ ಈ ಶಾಸನವು ಹೇಳುತ್ತಿರುವ ಬೆಟ್ಟದ ಚಂದ್ರಪ್ರಭಸ್ವಾಮಿ ಇದೇ ಆಗಿರಬೇಕು–MAR., 1925, p. 26

3 ಲಕ್ಕುಂಡಿಯ ಬ್ರಹ್ಮಜಿನಾಲಯವು ಈ ರೀತಿ ಜೀರ್ಣೋದ್ಧಾರಗೊಂಡಿದ್ದನ್ನು ಅತ್ತಿಮಬ್ಬೆಯ ಶಾಸನದಲ್ಲಿ ಕಾಣಬಹುದು —ಬಾಂಬೆ-ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್, ಸಂ. ೧, ಭಾಗ ೧, ಸಂಖ್ಯೆ ೩೨.

ಹನ್ನೊಂದನೇ ಶತಮಾನದ (ಬೇಚಿರಾಕ್) ಮುತ್ಸಂದ್ರದ ಶಾಸನವು (೧೬೭) ಚೊಕಜಿನಾಲಯಕ್ಕೆ ಕಲುಕೇಜಿ[3] ನಾಡಾಳ್ವರು ಮತ್ತಿಕೆಜಿ[3]ಯನ್ನು ದಾನ ನೀಡಿದ್ದನ್ನು ಹೇಳುತ್ತದೆ. ಅಂತೆಯೇ ಎಲೇಕೊಪ್ಪದ ಶಾಸನವು (೧೨೧) ಹೊಯ್ಸಳದೇವನು ಬಸದಿಯೊಂದಕ್ಕೆ ದಾನ ನೀಡಿದ್ದನ್ನು ಹೇಳುತ್ತದೆ. ಕ್ರಿ. ಶ. ೧೧೧೮–೧೯ರ ಕಂಬದಹಳ್ಳಿಯ ಶಾಸನವು (೩೩) ಗಂಗರಾಜನು ಬಿಂಡಿಗನವಿಲೆಯ ಬಸದಿಗೆ ಭೂಮಿದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.ಕ್ರಿ.ಶ. ೧೧೪೪ರ ಬೋಗಾದಿಯ ಪಾಳುಬಸದಿಯ ಬಳಿ ಬಿದ್ದಿರುವ ಶಾಸನವು (೧೮೩) ಹೊಯ್ಸಳ ಒಂದನೇ ನರಸಿಂಹನು ಪಾರ್ಶ್ವದೇವರ ಶ್ರೀಕರಣ ಜಿನಾಲಯಕ್ಕೆ 'ಭೋಗವತಿ' ಎಂಬ ಗ್ರಾಮವನ್ನು ದಾನ ನೀಡಿದ್ದನ್ನು ಹೇಳಿದರೆ, ಕ್ರಿ. ಶ. ೧೧೭೩ರಲ್ಲಿ ಈ ದಾನಕ್ಕೆ ಕಾಳಬೋಪನಹಳ್ಳಿಯನ್ನೂ ಸೇರಿಸಿದ್ದನ್ನು ಬೋಗಾದಿಯ ಮತ್ತೊಂದು ಶಾಸನ ಹೇಳುತ್ತದೆ (೧೮೪). ಕ್ರಿ. ಶ. ೧೧೪೫ರ ಕಂಬದಹಳ್ಳಿಯ ಶಾಂತೀಶ್ವರ ಬಸದಿಯೊಳಗಿನ ಶಾಸನವು (೩೦), ಶಾಂತಿನಾಥದೇವರ ಪೂಜೆಗೆಂದು ಹೊಯ್ಸಳ ನರಸಿಂಹನು ಭರತಿಮಯ್ಯ ಮತ್ತು ಮಜಿ' ಯಾನೆ ದಂಡನಾಯಕರಿಗೆ ಮೊದಲಿಯಹಳ್ಳಿಯನ್ನು ದಾನ ನೀಡಿದ್ದನ್ನು ಹೇಳುತ್ತದೆ. ಭರತಿಮಯ್ಯನು ಇದೇ ಶಾಂತಿನಾಥದೇವರ ಪೂಜೆಗೆಂದು ಭೂಮಿದಾನ ನೀಡಿದ್ದನ್ನು ಕಂಬದಹಳ್ಳಿಯ ಶಾಸನವೂ (೨೯), ದಡಿಗನಕೆರೆಯ ಬಸದಿಗೆ ದಾನನೀಡಿದ್ದನ್ನು ದಡಗದ ಶಾಸನವೂ (೬೦) ಉಲ್ಲೇಖಿಸುತ್ತದೆ. ಕೆಳಗೆರೆಯ ಶಾಸನವು (೬೦) ಹೊಯ್ಸಳ ದೊರೆ ಮೂರನೇ ನರಸಿಂಹನು ದೋರಸಮುದ್ರದ ಶಾಂತಿನಾಥದೇವರಿಗೆ ಚಿಕ್ಕಕನ್ನೆಯಹಳ್ಳಿಯನ್ನು ದಾನನೀಡಿದ್ದನ್ನು ಹೇಳುತ್ತದೆ. ಕ್ರಿ.ಶ. ೧೬೮೦ರ ಬೆಳ್ಳೂರಿನ ಶಾಸನವು (೯೬) ಆ ಊರಿನ ವಿಮಲನಾಥ ಚೈತ್ಯಾಲಯಕ್ಕೆ ರಾಯಪ್ಪರಾಜನು ಆಸಿನಹಳ್ಳಿಯನ್ನು ದಾನನೀಡಿದ್ದನ್ನು ತಿಳಿಸುತ್ತದೆ.

ಈ ಮೇಲಿನ ಶಾಸವಗಳಲ್ಲಿ ಬಹುಪಾಲು ಶಾಸನಗಳು ಹನ್ನೆರಡನೇ ಶತಮಾನಕ್ಕೆ ಸೇರುತ್ತವೆ. ಅವುಗಳಲ್ಲಿ ಪಾರ್ಶ್ವನಾಥನಿಗೆ ಬಸದಿ ನಿರ್ಮಿಸಿದ ಶಾಸನಗಳು ಹೆಚ್ಚಾಗಿ ದೊರೆತರೆ, ಶಾಂತಿನಾಥನಿಗೆ ಸಂಬಂಧಿಸಿದ ದಾನಶಾಸನಗಳು ಹೆಚ್ಚಾಗಿವೆ.

ಈ ಎಲ್ಲ ಶಾಸನಗಳೂ ಬಸದಿಯ ನಿರ್ಮಾತೃಗಳ ಬಗ್ಗೆ ಮತ್ತು ಅಲ್ಲಿನ ಬಿಂಬಗಳ ಬಗ್ಗೆ ಉಲ್ಲೇಖಿಸುವುದರೊಂದಿಗೆ ಅವುಗಳ ಹೆಸರಿನ ವಿಶೇಷತೆಗಳು, ರಚನಾತ್ಮಕ ರೀತಿ ಮತ್ತು ಉದ್ದೇಶಗಳ ಬಗ್ಗೆಯೂ ಮಾಹಿತಿಯನ್ನೊದಗಿಸುತ್ತವೆ.

**ಬಸದಿ ವಾಸ್ತುಶಿಲ್ಪ ಮತ್ತು ಶಿಲ್ಪ :** ಇಲ್ಲಿ 'ಬಸದಿ' ಎಂಬ ಪದಕ್ಕೆ ಪರ್ಯಾಯವಾಗಿ ಚೈತ್ಯಾಲಯ (೯೨, ೯೩, ೯೪), ತೀರ್ಥ (೩೩, ೩೧), ಜಿನಗೇಹ (೬೪) ಎಂಬುವುದರೊಂದಿಗೆ ಚೊಕ–ಜಿನಾಲಯ (೧೬೭), ಲೋಕತಿಲಕ ಬಸದಿ (೧೪೯), ಕಂನೆವಸದಿ[4] (೭೨, ೩೨) ಎಂಬ ವಿಶೇಷನಾಮಗಳೂ ಪ್ರಯೋಗವಾಗಿವೆ.

ಜೈನ ಸಂಘಗಳ ವಿವಿಧ ಗಣ–ಶಾಖೆಗಳಿಗೆ ಸೇರಿದಂತೆ ಬೇರೆ ಬೇರೆ ಬಸದಿಗಳ ಗುಂಪುಗಳಿವೆ ಎಂಬ ಅಂಶ ಇಲ್ಲಿನ ಕೆಲವು ಶಾಸನಗಳಿಂದ ಸ್ಪಷ್ಟವಾಗುತ್ತದೆ. ದಡಗದ ಶಾಸನವು (೬೮) ಅಲ್ಲಿನ ಪಂಚಬಸದಿಗೆ ನೀಡಿದ ದಾನವನ್ನು ಹೇಳುತ್ತಾ, ಆ ದಾನವು 'ದೇಶೀಯಗಣದ ಬಸದಿ ನಾಲ್ಕಕ್ಕೆ', 'ಕಾಣೂರ್ಗ್ಗಣದ ಬಸದಿ ಒಂದಕ್ಕೆ' ಎಂದು ಹೇಳುತ್ತದೆ. ಕಂಬದಹಳ್ಳಿಯ ಶಾಸನವು (೩೧) 'ಮೂಲಸಂಘ ದೇಶೀಯಗಣದ ಪುಸ್ತಕಗಚ್ಛದ ಕಂಬದಹಳ್ಳಿ ತೀರ್ಥ' ಎಂದಿದೆ. ಇಲ್ಲಿ ಪ್ರಸ್ತಾಪವಾಗಿರುವ ಬಸದಿಯು ಮೇಲೆ ಹೇಳಿದ ಗುಂಪಿಗೆ ಸೇರಿದ್ದುದಾಗಿದೆ.[5]

---

4 ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ–ಕನ್ನಡ ನಿಘಂಟಿನಲ್ಲಿ 'ಕಂನೆವಸದಿ' ಎಂಬ ಪದಕ್ಕೆ 'ಹೊಸಬಸದಿ' ಎಂದೂ ಡಾ॥ ಎಂ. ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದಲ್ಲಿ 'ಮೊದಲ ಬಸದಿ (?)' ಎಂದೂ ಅರ್ಥವನ್ನು ಕೊಡಲಾಗಿದೆ.

5 ಚಿಕ್ಕಹನಸೋಗೆಯ ಶಾಸನವೊಂದು ಹನಸೋಗೆಯ ಅನ್ವಯಕ್ಕೆ ಸೇರಿದ ಅರವತ್ತನಾಲ್ಕು ಬಸದಿಗಳು ಆ ಊರಲ್ಲಿವೆ ಎಂದು ಹೇಳುತ್ತದೆ—ಎ. ಕ., IV, ಕೃಷ್ಣರಾಜಪೇಟೆ ೩೨.

ಬಸದಿ ರಚನೆಗೆ ಸಂಬಂಧಿಸಿದಂತೆ ತ್ರಿಕೂಟ-ಪಂಚ ಕೂಟ ಮುಂತಾದ ಪದಗಳನ್ನು ಇಲ್ಲಿ ಬಳಸಲಾಗಿದೆ. ಯಲ್ಲಾದಹಳ್ಳಿಯ ಶಾಸನವು (೬೪) ದೇವರಾಜನು ಕಟ್ಟಿಸಿದ ಬಸದಿಯನ್ನು 'ಉತ್ತುಂಗಕೂಟಂ ಜಿನಗೇಹಂ ಶೋಭಿಸಲು ಮಾಡಿಸಿ' ಎಂದಿದೆ. ಅಂತೆಯೇ ಕೆಳಗೆರೆಯ ಶಾಸನವೊಂದರಲ್ಲಿ (೬೦) 'ದೋರಸಮುದ್ರದ ತ್ರಿಕೂಟ ರತ್ನತ್ರಯದ ಶ್ರೀ ಶಾನ್ತಿನಾಥ ದೇವರು' ಎಂಬ ಪ್ರಯೋಗ ವಿದೆ. ದಡಿಗನಕೆರೆಯ ಶಾಸನವೊಂದು (೬೮) 'ಪಂಚ ಬಸದಿ'ಯನ್ನು ಉಲ್ಲೇಖಿಸುತ್ತದೆ. ಇದು ಐದು ಗರ್ಭ ಗೃಹಗಳಿರುವ ಪಂಚಕೂಟಾಚಲವನ್ನೂ, ಮೇಲಿನ ಎರಡು ಶಾಸನಗಳು, ಮೂರು ಗರ್ಭಗೃಹಗಳಿರುವ 'ತ್ರಿಕೂಟಾ ಚಲ'ವನ್ನೂ ಹೇಳುತ್ತಿರಬೇಕು.

ಹಟ್ಟಣದ ಶಾಸನವು (೧೧೮), ಎಱೆಗಾಂಕನು ಕಟ್ಟಿಸಿದ ಬಸದಿಯನ್ನು 'ಸುರಾಸುರ ಯುದ್ಧಕಥೆಯಿವಂ ಮುದುವೊಳಲೊಳ್ ಪೊಸತಾಗೆ ನಿರ್ಮಿಸಿದಂ' ಎಂದಿದೆ. ಇದು ಜೈನ ಪುರಾಣಗಳಲ್ಲಿ ಬರುವ ಸುರಾಸುರ ಯುದ್ಧ ಕಥೆಯನ್ನು ನಿರೂಪಿಸುವ ಒಂದು ಅಲಂಕಾರಪಟ್ಟಿಕೆ ಯಾಗಿರಬೇಕು.

ಈ ತಾಲ್ಲೂಕಿನ ಎರಡು ಶಾಸನಗಳಲ್ಲಿ ಶಿಲ್ಪಿಗಳ ಹೆಸರುಗಳು ಉಕ್ತವಾಗಿವೆ.

ಅದರಂತೆ, ಕಂಬದಹಳ್ಳಿಯ ಶಾಂತೀಶ್ವರ ಬಸದಿ ಯನ್ನು ನಿರ್ಮಿಸಿದಾತ ರೂವಾರಿ 'ದ್ರೋಹಘರಟ್ಟಾ ಚಾರಿ'. ಇಲ್ಲಿ 'ದ್ರೋಹಘರಟ್ಟಾಚಾರಿ' ಎಂಬುದು ಅವನ ಹೆಸರಾಗಿರದೆ ಬಿರುದು ಅಥವಾ ಸ್ಥಾನಮಾನವನ್ನು ಹೇಳುತ್ತಿರಬೇಕು. ಇದು ಬೊಪ್ಪದೇವನ ತಂದೆಯಾದ ಗಂಗರಾಜನ ಬಿರುದನ್ನೂ ಒಳಗೊಂಡಿದೆ.

ಅಂತೆಯೇ ಕಸಲಗೆರೆಯ ಶಾಸನದಲ್ಲಿ (೧೭೦) ರೂವಾರಿ 'ಮಾಚೋಜ'ನ ಹೆಸರು ಉಕ್ತವಾಗಿದೆ. ಈ ಶಾಸನದಲ್ಲಿ 'ಮಾಚೋಜ'ನನ್ನು ಕುರಿತು 'ಕಲುಕುಣಿನಾಡ ಆಚಾರ್ಯ', 'ಕಲಿಯುಗದ ವಿಶ್ವಕರ್ಮ' ಎಂದು ವಿಶೇಷವಾಗಿ ಪ್ರಸ್ತಾಪಿಸಲಾಗಿದೆ. ಇದೂ ಕೂಡ ಅವನ ಸ್ಥಾನಮಾನ ಅಥವಾ ಬಿರುದನ್ನು ಸೂಚಿಸುತ್ತಿದೆ.

**ದಾನ ಉದ್ದೇಶ ಮತ್ತು ಆಶಯ :** ಬಸದಿ ನಿರ್ಮಾಣಕ್ಕೆ ಸಂಬಂಧಿಸಿದಂತೆಯೇ ವಿವಿಧ ಉದ್ದೇಶಗಳಿಗೆ ನೀಡಿದ ದಾನಶಾಸನಗಳೂ ಧಾರ್ಮಿಕ-ಸಾಂಸ್ಕೃತಿಕ ಅಂಶ ಗಳನ್ನೊಳಗೊಂಡಿದ್ದು ಗಮನಾರ್ಹವಾಗಿವೆ.

'ದಾನ'ಕ್ಕೆ ಮಹತ್ವಪೂರ್ಣ ಸ್ಥಾನ ನೀಡಿರುವ ಜೈನರಲ್ಲಿ ಆಹಾರ, ಅಭಯ, ಔಷಧ ಮತ್ತು ಶಾಸ್ತ್ರದಾನ ಎಂಬ ಚತುರ್ವಿಧ ದಾನಗಳು ಮುಖ್ಯವಾಗಿವೆ. ಈ ದಾನಗಳನ್ನು ಪ್ರಸ್ತಾಪಿಸುವ ಉಲ್ಲೇಖಗಳನ್ನು ಈ ತಾಲ್ಲೂಕಿನ ಶಾಸನಗಳಲ್ಲೂ ಕಾಣುತ್ತೇವೆ.

ಕಸಲಗೆರೆಯ ಶಾಸನವು (೧೬೯) ಸಾವಂತ ಸೋವೆಯ ನಾಯಕನನ್ನು 'ಚತುರ್ದಾನ ವಿನೋದನುಂ' ಎಂದೇ ಹೊಗಳಿದೆ. ಕಂಬದಹಳ್ಳಿಯ ಶಾಸನವೊಂದು (೨೬), ಪಾರ್ಶ್ವದೇವರಿಗೆ ಬಿಟ್ಟ ದಾನವನ್ನು 'ಚತುರ್ವಿಧ ದಾನಕ್ಕೆ ಬಿಟ್ಟ ದತ್ತಿ' ಎಂದಿದೆ. ಇದರಿಂದ, ಹಿಂದೂ ದೇವಾಲಯಗಳಂತೆಯೇ ಬಸದಿಗಳೂ ಕೂಡಾ, ಧಾರ್ಮಿಕ ಕೇಂದ್ರವಾಗುವುದರೊಂದಿಗೆ, ಈ ಎಲ್ಲ ಆಶಯಗಳನ್ನು ಪೂರೈಸುವ ಸಾಮಾಜಿಕ ಸಂಸ್ಥೆಯೂ ಆಗಿ ಮೆರೆಯುತ್ತಿ ತ್ತೆಂಬುದು ಸ್ಪಷ್ಟವಾಗುತ್ತದೆ.

ಸಾಮಾನ್ಯವಾಗಿ ಗ್ರಾಮ ಅಥವಾ ಭೂಮಿಸುಂಕ ವನ್ನು ದಾನವಾಗಿ ನೀಡಿದ್ದನ್ನು ಶಾಸನಗಳಲ್ಲಿ ಕಾಣು ತ್ತೇವೆ. ಆದರೆ ದಡಗದ ಶಾಸನವೊಂದು (೬೮) ದಡಿಗನ ಕೆರೆಯ ಪಂಚಬಸದಿಗೆ 'ಬಾಹುಬಲಿ ಕೂಟ'ವನ್ನು ದಾನ ಮಾಡಿದ್ದನ್ನು ಹೇಳುತ್ತಿದೆ.

ಈ ತಾಲ್ಲೂಕಿನಲ್ಲಿ ಮುನಿ-ಶ್ರಾವಕರ ಆಹಾರಕ್ಕೆಂದು ಬಸದಿಯ ಜೀರ್ಣೋದ್ಧಾರಕ್ಕೆಂದು ನೀಡಿದ ದಾನ ಶಾಸನಗಳು ಹೆಚ್ಚಾಗಿವೆ. ಕಂಬದಹಳ್ಳಿಯ ಶಾಸನ ವೊಂದು (೨೬) ದಾನಕೊಟ್ಟ ಉದ್ದೇಶವನ್ನು ಹೇಳುತ್ತಾ 'ವಿದ್ಯಾರ್ಥಿಗುತ್ಸಾಹದಿಂದಿತ್ತಂ' ಎಂದು ಉಲ್ಲೇಖಿಸಿರು ವುದರಿಂದ ಇದೊಂದು ವಿದ್ಯಾಕೇಂದ್ರವೂ ಆಗಿದ್ದಿತೆಂದು ತೋರುತ್ತದೆ.

ಪಟ್ಟಣದ ಶಾಸನವು (೧೧೮) ನಂದಾದೀವಿಗೆಗೆ ನೀಡಿದ ದಾನಶಾಸನವಾಗಿದ್ದರೆ, ಕೆಲವು ಶಾಸನಗಳು

'ಅಷ್ಟವಿಧಾರ್ಚನೆ'ಗೆ ನೀಡಿದ ದಾನಶಾಸನಗಳಾಗಿವೆ (೬೪, ೧೮೪, ೧೧೮). ನೀರು, ಗಂಧ, ಅಕ್ಷತೆ, ಪುಷ್ಪ, ಚರು, ಧೂಪ, ದೀಪ, ಫಲ—ಈ ಎಂಟು ವಿಧವಾದ ವಸ್ತುಗಳಿಂದ ಮಾಡುವ ಪೂಜೆಗೆ 'ಅಷ್ಟವಿಧಾರ್ಚನೆ' ಎಂದು ಹೆಸರು.[6] ಕೆಳಗೆರೆಯ ಶಾಸನದಲ್ಲಿ (೬೦), 'ಅಂಗಭೋಗ ರಂಗಭೋಗ ಆಹಾರದಾನ ಮುಂತಾದ ಸಮಸ್ತ ಧರ್ಮ ಕಾರ್ಯಕ್ಕಂ' ಎಂದು ದಾನದ ಉದ್ದೇಶವನ್ನು ಹೇಳಲಾಗಿದೆ.

ಈ ಎಲ್ಲ ಶಾಸನಗಳೂ ಬಸದಿಗಳಲ್ಲಿ ನಡೆಯುತ್ತಿದ್ದ ಪೂಜಾವೈಖರಿಯ ಮೇಲೆ ಬೆಳಕು ಚೆಲ್ಲುತ್ತವೆ.

ದಾನ ಮತ್ತು ಬಸದಿ ನಿರ್ಮಾಣಗಳ ಹಿಂದಿರುವ ಆಶಯವು ಕೆಲವು ಶಾಸನಗಳಲ್ಲಿ ಪ್ರಕಟವಾಗಿದೆ. ಹಟ್ಟಣದ ಪಟ್ಟಣಸ್ವಾಮಿ ಸೋವಿಸೆಟ್ಟಿಯು ದಾನ ನೀಡಿದ್ದು ದೊರೆ ವೀರಬಲ್ಲಾಳನ 'ಅಭ್ಯುದಯಾರ್ಥವಾಗಿ' (೧೧೮); ಅಂತೆಯೇ ಸಕ್ಕರೆಸೆಟ್ಟಿಯು ಬಸದಿ ನಿರ್ಮಿಸಿದ್ದು 'ಅಭ್ಯುದಯ ಮತ್ತು ಶ್ರೇಯಸ್ಸಿಗಾಗಿ' (೯೪) ; ದೇವರಾಜನು ಜಿನಭವನ ಮಾಡಿಸಿದ್ದು 'ರಾಜರಾಷ್ಟ್ರ ಯಶೋಧನ ವೃಧ್ಯರ್ತ್ಥವಾಗಿ' (೬೪). ಈ ಆಶಯಗಳು ಧಾರ್ಮಿಕ ಪ್ರವೃತ್ತಿಯೊಂದಿಗೇ, ನಿರ್ಮಾತೃಗಳ ರಾಜ–ರಾಷ್ಟ್ರ ನಿಷ್ಠೆಯನ್ನೂ ಎತ್ತಿಹಿಡಿಯುತ್ತವೆ.

**ಜೈನಧರ್ಮ ಪ್ರವರ್ತಕರು :** ಈ ಎಲ್ಲ ಶಾಸನಗಳಲ್ಲೂ ಬಸದಿ ನಿರ್ಮಿಸಿ ದಾನ ನೀಡಿದ ವ್ಯಕ್ತಿಗಳಲ್ಲಿ ರಾಜ-ದಂಡನಾಯಕರು, ವರ್ತಕರು, ಎಲ್ಲರ ಕೊಡುಗೆಗಳೂ ಇವೆ. ಇದರಲ್ಲಿ ದೊರೆ ಹೊಯ್ಸಳ, ನರಸಿಂಹ, ವಿಷ್ಣುವರ್ಧನ, ಗಂಗರಾಜ ಮತ್ತು ಸೋದರರಾದ ಮರಿಯಾನೆ ಮತ್ತು ಭರತಿಮಯ್ಯ ದಂಡನಾಯಕರು. ದೇವರಾಜ, ಸೋವಿಸೆಟ್ಟಿ, ಜಕ್ಕಿಸೆಟ್ಟಿ, ಸಕ್ಕರೆಸೆಟ್ಟಿ-ಮುಂತಾದವರನ್ನು ಪ್ರಮುಖವಾಗಿ ಹೆಸರಿಸಬಹುದು.

ಗಂಗರಾಜನು, ತಾನು ತಲಕಾಡನು ಗೆದ್ದುದಕ್ಕಾಗಿ ಮೊದಲೇ ಬೇಡಿಕೊಂಡಂತೆ ವಿಷ್ಣುವರ್ಧನನಿಂದ ಬಿಂಡಿಗನವಿಲೆಯ ಬಸದಿಗೆ ತಳವೃತ್ತಿಯನ್ನು ಪಡೆಯಲು ಅದನ್ನು ಆ ಬಸದಿಗೆ ದಾನವಾಗಿ ನೀಡುತ್ತಾನೆ[7] (೩೩). ಹೊಯ್ಸಳ ನರಸಿಂಹನು ತನ್ನ ಮಹಾಪ್ರಧಾನಿ ದೇವರಾಜನ ಧರ್ಮಬುದ್ಧಿ ಮತ್ತು ಸ್ವಾಮಿಭಕ್ತಿಗೆ ಮೆಚ್ಚಿ ಸೂರನಹಳ್ಳಿಯನ್ನು ದಾನವಾಗಿ ಕೊಡಲು, ದೇವರಾಜನು ಆ ಊರಿನಲ್ಲಿ ಬಸದಿಯನ್ನು ಕಟ್ಟಿಸುತ್ತಾನೆ (೬೪). ಭರತಿಮಯ್ಯ ಮತ್ತು ಬಾಹುಬಲಿ ದಂಡನಾಯಕರು ತಮಗೆ ಬಳುವಳಿಯಾಗಿ ಬಂದ ಪ್ರದೇಶಗಳಲ್ಲೊಂದಾದ ಅಣುವಸಮುದ್ರದಲ್ಲಿ ಬಸದಿ ಕಟ್ಟಿಸುತ್ತಾರೆ(೭೨).[8] ಸಕ್ಕರೆಸೆಟ್ಟಿಯು, ಮೈಸೂರು ದೇವರಾಜ ಒಡೆಯರಿಂದ ತನಗೆ ಕೊಡುಗೆಯಾಗಿ ಬಂದ ಪ್ರದೇಶವಾದ ಬೆಳ್ಳೂರಿನಲ್ಲಿ ಬಸದಿ ನಿರ್ಮಿಸುತ್ತಾನೆ (೯೪).

ಹೀಗೆ, ಬಸದಿಯ ಧಾರ್ಮಿಕ ಕಾರ್ಯಗಳಿಗೆಂದು ರಾಜನೇ ನೇರವಾಗಿ ದಾನ ನೀಡಿರುವುದಲ್ಲದೆ (೩೦, ೬೦), ತಮಗೆ ರಾಜನಿಂದ ಬಂದ ಕೊಡುಗೆಯನ್ನು ದಂಡನಾಯಕರು ಮತ್ತು ವರ್ತಕರು ಧಾರ್ಮಿಕ ಕಾರ್ಯಗಳಿಗೆ ವಿನಿಯೋಗಿಸಿದ್ದು, ಇವರೆಲ್ಲರ ಧರ್ಮನಿರತ ಮನೋಧರ್ಮವು ಸ್ತುತ್ಯಾರ್ಹವಾಗಿದೆ. ಇವು ರಾಜ-ದಂಡನಾಯಕರ ಸಂಬಂಧದ ಮೇಲೆ ಬೆಳಕು ಚೆಲ್ಲುವುದಲ್ಲದೆ, ಅದು ಪರೋಕ್ಷವಾಗಿ ಧರ್ಮಕಾರ್ಯಗಳಿಗೆ ಇಂಬುಕೊಟ್ಟಿತೆಂಬುದನ್ನು ಸ್ಪಷ್ಟಪಡಿಸುತ್ತದೆ. ಅಳೀಸಂದ್ರದ ಶಾಸನವು (೭೨), 'ಬಲ್ಲಾಳಭೂಪಂ ಬೆಸಸೆ ಭರತದಂಡಾದಿಪಂ ರಾಗದಿಂ ವಾಯುಸುತಂ ರಾಮಾಜ್ಞೆಯಿಂದಂ ನಡವ

---

6 ಇದನ್ನು 'ದ್ರವ್ಯಪೂಜಾ' ಎಂದು ಕರೆಯಲಾಗಿದೆ—Ram Bhushan Prasad Singh : Jainism in Early Medieval Karnataka, p. 36

7 ಇದೇ ರೀತಿ, ತನಗೆ ಬಂದ 'ಪರಮ' ಗ್ರಾಮವನ್ನು ಶ್ರವಣಬೆಳಗೊಳದ ಆದಿನಾಥ ಬಸದಿಗೆ ದಾನವಾಗಿ ನೀಡುತ್ತಾನೆ—ಎ.ಕ., II, ಹೊಸಹಳ್ಳಿ, ೫೫೮.

8 ಶ್ರವಣಬೆಳಗೊಳದ ಅಖಂಡ ಬಾಗಿಲಿನ ಆಕ್ಕಪಕ್ಕಗಳಲ್ಲಿರುವ ಭರತ ಮತ್ತು ಬಾಹುಬಲಿ ಮೂರ್ತಿಗಳನ್ನು ಮಾಡಿಸಿದವರು ಮರಿಯಾನೆ ಮತ್ತು ಭರತಿಮಯ್ಯ ದಂಡನಾಯಕರು-ಎ.ಕ., II, ದೊಡ್ಡಬೆಟ್ಟ, ೩೭೧-೭೩.

ತೆಱದೆ' ಎಂದು ಅವರ ಹಾರ್ದಿಕ ಸಂಬಂಧವನ್ನು ಕೊಂಡಾಡುತ್ತದೆ.

ಇವರ ಕೊಡುಗೆ ಮತ್ತು ಧಾರ್ಮಿಕ ಶ್ರದ್ಧೆಯನ್ನು ಶಾಸನಗಳೂ ಮುಕ್ತಕಂಠದಿಂದ ಹೊಗಳಿವೆ :

ಗಂಗರಾಜನನ್ನು ಹೊಗಳುತ್ತಾ ಶಾಸನವೊಂದು (೭೨), 'ಮತ್ತಿನ ಮಾತವತ್ತಿರಲಿ ಜೀರ್ಣ್ಣಜಿನಾಲಯ ಕೋಟಿಯಂ ಕ್ರಮಂ ಬೆತ್ತಿರೆ ಮುಂನಿನನ್ತೆ ಪಲವೂರ್ಗ್ಗಳುಮಂ ನೆಱೆ ಮಾಡಿಸುತ್ತವತ್ಯುತ್ತಮ ಪಾತ್ರದಾನದೊದವಂ ಮೆಱೆವುತ್ತಿರೆ ಗಂಗವಾಡಿ ತೊಂಭತ್ತಱುಸಾಸಿರಂ ಕೊಪಣಮಾದುದು ಗಂಗಣ ದಂಡನಾಥನಿಂ' ಎಂದಿದೆ. ಸುಕದರೆಯ ಶಾಸನವು(೧೪), ಅಲ್ಲಿ ಬಸದಿ ಕಟ್ಟಿಸಿದ ಜಕ್ಕಿಸೆಟ್ಟಿಯನ್ನು 'ಚಾಗದೊಳೆ ಜೀಮೂತಂ ವಿದ್ವಜ್ಜನ ವಿನುತಂ ಧರ್ಮ್ಮಜಳವರ್ದ್ಧಿತಚಂದ್ರಂ ಮನುನೀತಿ ಮಾರ್ಗ್ಗಂ ಗೋತ್ರಪವಿತ್ರಂ' ಎಂದು ಪ್ರಶಂಸಿಸಿದೆ. ಇದೇ ರೀತಿ ಸಹೋದರರಾದ ಮಱಿಯಾನೆ ಮತ್ತು ಭರತಿಮಯ್ಯ ದಂಡನಾಯಕರ ಅನ್ಯೋನ್ಯತೆಯನ್ನು ಶಾಸನವು (೭೨), 'ತಂಮೊಳಭೇದಭಾವದಿಂ ಗುಣಗುಣೀಶ್ವರರೂಪರಾಗಿ' ಎಂದೂ, 'ಭೀಮಾರ್ಜುನಲವಕುಶರೀ ಮಾಳ್ಕೆಯೆನಲಂತೆ ಪುಟ್ಟಿಯೆ ಮೆರೆದರು' (೬೮) ಎಂದೂ ಹೋಲಿಸಿ ಅವರನ್ನು 'ರತ್ನತ್ರಯಾಳಂಕ್ರಿತರು'[9] ಎಂದು ಮೆಚ್ಚಿಕೊಳ್ಳುತ್ತದೆ. ಇವು ಉತ್ತಮ ಸಾಹಿತ್ಯದ ತುಣುಕುಗಳಾಗುವುದರೊಂದಿಗೆ, ಉತ್ತಮ ವ್ಯಕ್ತಿಚಿತ್ರಗಳೂ ಆಗಿವೆ.

**ನಿಸಿಧಿ ಶಾಸನಗಳು :** ಜೀವನವು ಸಾಕೆನಿಸಿದಾಗ ವೈರಾಗ್ಯವನ್ನು ಸಾಧಿಸಿ ನಿರ್ವಾಣವನ್ನು ಪಡೆಯುವಲ್ಲಿ ಅನುಸರಿಸಬೇಕಾದ ವಿವಿಧ ವ್ರತಗಳನ್ನು ಜೈನಧರ್ಮದಲ್ಲಿ ಹೇಳಲಾಗಿದೆ. ಈ ವ್ರತಗಳನ್ನನುಸರಿಸಿ ಅಸುನೀಗಿದವರ ಸ್ಮಾರಕವಾಗಿ ಹಾಕಿಸಿದ ಶಾಸನಗಳನ್ನು ನಿಸಿಧಿಶಾಸನಗಳೆನ್ನುವರು.

ಈ ತಾಲ್ಲೂಕಿನಲ್ಲಿ ಐದು ನಿಸಿಧಿಶಾಸನಗಳು ದೊರೆತಿದ್ದು, ಇವುಗಳಲ್ಲಿ ಎರಡು ಹತ್ತನೇ ಶತಮಾನದವು ಮತ್ತು ಮೂರು ಹನ್ನೆರಡನೇ ಶತಮಾನದವು. ಇವು ಮೂರು ಜನ ಕಂತಿಯರನ್ನು ಉಲ್ಲೇಖಿಸುತ್ತವೆ.

ಇವುಗಳಲ್ಲಿ ಕ್ರಿ.ಶ. ೯೭೫ರ ಬಿಂಡಿಗನವಿಲೆಯ ಶಾಸನವೇ (೫೫) ಪ್ರಾಚೀನವಾದುದು. ಈ ಶಾಸನವು ಅಮ್ಮತಬ್ಬೆ ಕಂತಿಯು 'ಸಮಾಧಿ ಮರಣ'ವನ್ನಪ್ಪಿದಳೆಂದು ಹೇಳುತ್ತದೆ. ಸುಮಾರು ಹತ್ತನೇ ಶತಮಾನದ ಕೋಡಿಹಳ್ಳಿಯ ಶಾಸನವು (೨೪) 'ಸನ್ಯಸನ ವಿಧಿ'ಯಿಂದ 'ಎರಡನೋನ್ತು' ಸತ್ತಪನ ನಿಸಿಧಿಯಾದರೆ, ಸುಮಾರು ಹನ್ನೆರಡನೇ ಶತಮಾನದ ಕಂಬದಹಳ್ಳಿಯ ಶಾಸನವು (೨೮) ರುಕಮವ್ವೆ ಮತ್ತು ಜಕವ್ವೆ ಕನ್ತಿಯರ ನಿಸಿಧಿಯಾಗಿದೆ. ಇವರು ಮೂಲಸಂಘ ದೇಶೀಯಗಣದ ಪುಸ್ತಕಗಚ್ಛದ ಕುಂದಕುಂದಾನ್ವಯದ ಪ್ರಭಾಚಂದ್ರ ಸೈದ್ಧಾನ್ತಿಕರ ಶಿಷ್ಯತಿಯರೆಂದು ಶಾಸನದಲ್ಲಿ ಹೇಳಲಾಗಿದೆ. ಹನ್ನೆರಡು ಹದಿಮೂರನೇ ಶತಮಾನದ ಕಂಬದಹಳ್ಳಿಯ ಶಾಸನವು (೩೮) ಏಕವೀರಭಟಾರರ[10] ಶಿಷ್ಯನೂ, ಪುರುಷೋತ್ತಮಯ್ಯನ ಮಗನೂ ಆದ ಒಬ್ಬ ವ್ಯಕ್ತಿಯು ಮರಣವನ್ನಪ್ಪಿದನೆಂದು ಹೇಳುತ್ತಿದೆ.[11] ಇದೇ ರೀತಿ ಹೆಚ್ಚಿನ ವಿವರವಿಲ್ಲದ ನಿಸಿಧಿಯೊಂದು ಕಂಬದಹಳ್ಳಿಯಲ್ಲಿದೆ (೨೭).

ಈ ನಿಸಿಧಿಶಾಸನಗಳಲ್ಲಿ ಬರುವ 'ಸನ್ಯಸನ', 'ಸಮಾಧಿ', 'ಎರಡನೋನ್ತು' ಎಂಬ ಪದಗಳನ್ನು ಗಮನಿಸಬಹುದು. ಇವುಗಳು ಸಾವನ್ನು ಸ್ವಾಗತಿಸುವಲ್ಲಿ

---

9 ಜೈನಧರ್ಮದಲ್ಲಿ, ಮೋಕ್ಷ ಪಡೆಯಲು ಸಾಧಿಸಬೇಕಾದ ಮೂರು ಅಂಶಗಳಾದ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರಗಳನ್ನು 'ತ್ರಿರತ್ನ' ಅಥವಾ 'ರತ್ನತ್ರಯ' ಎನ್ನುವರು.

10 ಈ ಶಾಸನದಲ್ಲಿ ಇವನ ಬಗ್ಗೆ ವಿವರಗಳಿಲ್ಲ. ಕ್ರಿ. ಶ. ೧೧೭೮–೯೯ರ ಕಂಬದಹಳ್ಳಿಯ ಶಾಸನ(೩೩)ದ ಆರಂಭದಲ್ಲಿ ಸೂರಸ್ತಗಣದ ಉಲ್ಲೇಖವಿದ್ದು, ಅದರಲ್ಲಿ ವಿನಯನಂದಿ ಯತಿಯ ಶಿಷ್ಯ 'ಏಕವೀರ' ಎಂದಿದೆ. ಇದು ಈ ಇಬ್ಬರೂ ಒಬ್ಬನೇ ಇರಬಹುದೇ ಎಂಬ ಸಂಶಯಕ್ಕೆಡೆಮಾಡಿದೆ.

11 ಅವನು ಯಾವ ರೀತಿಯಲ್ಲಿ ಮರಣವನ್ನಪ್ಪಿದನೆಂದು ಹೇಳಲು ಶಾಸನದಲ್ಲಿ ಆಧಾರವಿಲ್ಲ. 'ನೆನೆಯುತ್ತು ಜಿನಚರಣನು ಪಡೆದನುತ್ತಮಗತಿಯಂ' ಎಂದಿರುವುದರಿಂದ ಇದನ್ನು 'ನಿಸಿಧಿ' ಎಂದೇ ಪರಿಗಣಿಸಲಾಗಿದೆ.

ಜೈನರು ಅನುಸರಿಸುವ ವಿವಿಧ ರೀತಿಯ ನೋಂಪಿಗಳಾಗಿವೆ. ಪ್ರತಿಯೊಂದು ವ್ರತವೂ ಬೇರೆ ಬೇರೆ ಅಂಶಗಳ ಮೇಲೆ ಒತ್ತುಕೊಡುತ್ತದೆ. ಇವುಗಳಲ್ಲಿ ಸನ್ಯಸನವು ಉಪವಾಸ ಮತ್ತು ಐಹಿಕಸುಖ ತ್ಯಾಗದ (abstinence and renunciation) ಮೇಲೆ ಒತ್ತು ಕೊಟ್ಟರೆ, ಸಮಾಧಿ ಮರಣವು ಧ್ಯಾನಕ್ಕೆ (meditation) ಒತ್ತು ಕೊಡುತ್ತದೆ.[12] 'ಎರಡನೋನ್ತು' ಎಂಬುದು ಯಾವ ವ್ರತಗಳನ್ನು ಹೇಳುತ್ತದೆಂದು ಶಾಸನದಲ್ಲಿ ಸ್ಪಷ್ಟವಾಗಿಲ್ಲ. ಜಿನೇಂದ್ರಗುಣಸಂಪತ್ತಿ ಮತ್ತು ಗುಣಸಂಪತ್ತಿ ಎಂಬ ಎರಡು ಉಪವಾಸ ವ್ರತಗಳು ಜೈನರಲ್ಲಿವೆ.[13] 'ಎರಡನೋನ್ತು' ಎಂಬುದು ಈ ಎರಡು ವ್ರತಗಳನ್ನೇ ಹೇಳುತ್ತಿರಬೇಕು.

ಹೀಗೆ ಅವರು ಇಚ್ಛಾಮರಣಗಳಂತೆ ತಮ್ಮ ದೇಹವನ್ನು ಧರ್ಮಶಾಸ್ತ್ರಗಳಿಗನುಗುಣವಾಗಿ ಪಂಚಭೂತಗಳಿಗೊಪ್ಪಿಸಿ ಆತ್ಮಸತ್ಯವನ್ನು ಬೆಳಗಿದಾಗ, ಅವರನ್ನು ಅಮರಗೊಳಿಸಲು ಅವರ ಶಿಷ್ಯರು ಅಥವಾ ಮಕ್ಕಳು ಶಾಸನವನ್ನು ಹಾಕಿಸುತ್ತಾರೆ. ಮಗಳಾದ ಬಿಡಕ್ಕನು ತಂದೆಗೆ ಹಾಕಿಸಿದ ಶಾಸನ ಕೋಡಿಹಳ್ಳಿಯದಾದರೆ (೨೪), ಅಮ್ಮತಬ್ಬೆ ಕನ್ತಿಗೆಂದು ಅವಳ ಮಕ್ಕಳ ಪರವಾಗಿ ಗುರುಗಳೇ ಹಾಕಿಸಿದ ಶಾಸನ ಬಿಂಡಿಗನವಿಲೆಯದು (೫೫).

ಜೈನಮುನಿಗಳು : ಜೈನರಿಗೆ ಸಂಬಂಧಿಸಿದ ಯಾವ ದಾನವೇ ಆಗಿರಲಿ, ಅದು ಆ ಬಸದಿಗೆ ಸಂಬಂಧಿಸಿದ ಮುನಿಗಳ ಸಮ್ಮುಖದಲ್ಲೇ ನಡೆಯುತ್ತಿದ್ದು, ಸಾಂಕೇತಿಕವಾಗಿ ಅವರ ಪಾದತೊಳೆದು ದಾನವನ್ನು ಅವರಿಗೆ ನೀಡಲಾಗುತ್ತಿತ್ತು. ಹೀಗೆ ದಾನವನ್ನು ನೀಡುವಾಗ ಆ ದಾನವನ್ನು ಸ್ವೀಕರಿಸಿದವರ ಹೆಸರು ಹೇಳುವಲ್ಲಿ ಅನೇಕ ಜೈನಮುನಿಗಳ, ಅವರ ಗಣಗಳ ಉಲ್ಲೇಖಗಳು ನಮಗೆ ದೊರೆಯುತ್ತವೆ. ಕೆಲವು ಶಾಸನಗಳಂತೂ ಆ ಗಣಕ್ಕೆ ಸೇರಿದ ಮುನಿಗಳ ಪರಂಪರೆಯನ್ನೇ ಕೊಡುತ್ತವೆ (೧೮೩, ೬೦).

ಕ್ರಿ. ಶ. ೧೧೧೮–೧೯ರ ಬಿಂಡಿಗನವಿಲೆಯ ಶಾಸನದಲ್ಲಿ (೩೩) ಅಲ್ಲಿನ ಬಸದಿಗೆ ಗಂಗರಾಜನಿಂದ ತಳವೃತ್ತಿಯನ್ನು ಸ್ವೀಕರಿಸುವಲ್ಲಿ ಮೂಲಸಂಘ ದೇಶೀಯಗಣದ ಪುಸ್ತಕಗಚ್ಛದ ಕುಂದಕುಂದಾನ್ವಯದ ಶುಭಚಂದ್ರ ಸಿದ್ಧಾಂತದೇವರ ಉಲ್ಲೇಖವಿದೆ. ಈ ಮುನಿಯು ಗಂಗರಾಜನಿಂದ 'ಪರಮ'ಗ್ರಾಮವನ್ನೂ ಪಡೆಯುತ್ತಾನೆ.[14] ಇವನು ಕುಕ್ಕುಟಾಸನ[15] ಮಲಧಾರಿದೇವನ ಶಿಷ್ಯ ; ಗಂಗರಾಜನ ಗುರು ; ಗಂಗರಾಜನ ಮನೆತನದ ಮೇಲೆ ಪ್ರಭಾವ ಬೀರಿದ ವ್ಯಕ್ತಿ.

ಕ್ರಿ. ಶ. ೧೧೪೫ರ ಶಾಸನದಲ್ಲಿ (೬೪), ಮೇಲೆ ಹೇಳಿದ ಶಾಖೆಗೆ ಸೇರಿದ ಮುನಿಚಂದ್ರಭಟ್ಟಾರಕನ ಉಲ್ಲೇಖವಿದ್ದು, ಇವನು ತನ್ನ ಶಿಷ್ಯನಾದ ದೇವರಾಜನಿಂದ 'ಸೂರನಹಳ್ಳಿ'ಯನ್ನು ಅಲ್ಲಿನ ಬಸದಿಗೆ ದಾನವಾಗಿ ಪಡೆಯುತ್ತಾನೆ. ಇವನು ನರೇಂದ್ರಕೀರ್ತಿತ್ರೈವಿಧ್ಯದೇವನ ಸದ್ಧರ್ಮಿ ಮತ್ತು ಅರ್ಹನಂದಿಮುನಿಪುಂಗವನ ಶಿಷ್ಯ. ಇವನನ್ನು ಶಾಸನದಲ್ಲಿ 'ಪುಟ್ತ್ರಿಂಶದ್ಗುಣಮಣಿ ಮಣ್ಡನ ಪಂಡಿತರು ಪಂಚವಿಧಾಚಾರನಿರತರು ಎಂದು ಪ್ರಶಂಸಿಸಲಾಗಿದೆ.[16]

ಇದೇ ಶಾಖೆಯ, ದಾಮನಂದಿ ಮುನಿಯ ಅನುಜನಾದ ಆಧ್ಯಾತ್ಮಿಬಾಳಚಂದ್ರಮುನೀಂದ್ರನ ಉಲ್ಲೇಖವು ಕ್ರಿ. ಶ. ೧೧೭೮ರ ಶಾಸನದಲ್ಲಿ ದೊರೆಯುತ್ತದೆ (೧೧೮). ಇವನು ಸೋವಿಸೆಟ್ಟಿಯಿಂದ ಹಟ್ಟಣದ ಪಾರ್ಶ್ವದೇವರ ಪೂಜೆಗೆ ಭೂಮಿದಾನ ಪಡೆಯುತ್ತಾನೆ. ಇವನು ನಯಕೀರ್ತಿಸಿದ್ಧಾಂತದೇವರ ಶಿಷ್ಯ. ಸಕಲಕಲಾ ಪಂಡಿತನೆಂದೂ, ಆತ್ಮಾಧೀನನೆಂದೂ, ತ್ರಿರತ್ನಗಳನ್ನು ಹೊಂದಿರು

---

12 S. Settar : Inviting Death, p. 105

13 ಪದ್ಮಾಶೇಖರ್ : ಜೈನಶಾಸ್ತ್ರ–ಕೆಲವು ಅಧ್ಯಯನ, ಪು. ೨೨೨

14 ಎ. ಕ., II, ಚಿಕ್ಕಬೆಟ್ಟ ೮೨, ೧೫೪

15 ಕುಕ್ಕುಟಾಸನ-ಒಂದು ರೀತಿಯ ಧ್ಯಾನಭಂಗಿ-ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೮೦

16 ಪಂಚವಿಧಾಚಾರ—ತನ್ನ ಧರ್ಮಾನುಸಾರ ನಡೆದುಕೊಳ್ಳುವ ಐದು ಬಗೆಯ ಆಚಾರಗಳು : ಜ್ಞಾನಾಚಾರ, ದರ್ಶನಾಚಾರ, ತಪಾಚಾರ, ವೀರ್ಯಾಚಾರ, ಚಾರಿತ್ರಾಚಾರ-ಜೈನ ಪರಿಭಾಷಾ ರತ್ನಕೋಶ, ಪು. ೩೫

ವನೆಂದೂ, ಆಯಾಸ-ಅಪರಾಧಗಳಿಂದ ಮುಕ್ತನಾದವ ನೆಂದೂ ಇವನನ್ನು ಶಾಸನದಲ್ಲಿ ಪ್ರಶಂಸೆ ಮಾಡಲಾಗಿದೆ. ಇವನು ಚಂದ್ರಪ್ರಭಾನಾಥನ ಭಕ್ತನು.

ಮೂಲಸಂಘದೊಂದಿಗೆ 'ಇಂಗಳೇಶ್ವರ ಬಳಿ' ಯನ್ನೂ ಹೇಳುವ ಒಂದೇ ಒಂದು ಶಾಸನವು ಅಳೀಸಂದ್ರ ದಲ್ಲಿದೆ (೭೨). ಇದು ದೇವಕೀರ್ತಿ ಪಂಡಿತದೇವನ ಶಿಷ್ಯನಾದ ದೇವಚಂದ್ರ ಪಂಡಿತದೇವನನ್ನು ಉಲ್ಲೇಖಿಸು ತ್ತದೆ.

ಮೂಲಸಂಘ ಸೂರಸ್ತಗಣದ ಬ್ರಹ್ಮದೇವನ ಉಲ್ಲೇಖವು ಕ್ರಿ. ಶ. ೧೧೪೨ರ ಶಾಸನ(೧೬೯)ದಲ್ಲಿ ದೊರೆಯುತ್ತದೆ. ಹೆಚ್ಚಿನ ವಿವರಗಳಿಲ್ಲದ ಈ ಶಾಸನ ದಂತೆ, ಇವನು ಸಾವಂತ ಸೋವೆಯನಾಯಕನಿಂದ ಹೆಬ್ಬಿ ದುರೂರ್ವಾಡಿಯ ಬಸದಿಗೆ ಅರುಹನಹಳ್ಳಿಯನ್ನು ದಾನ ವಾಗಿ ಸ್ವೀಕರಿಸುತ್ತಾನೆ. ಈ ದಾನಿಯು ಭಾನುಕೀರ್ತಿ ಸಿದ್ಧಾಂತದೇವರ ಶಿಷ್ಯ.

ಕಾಣೂರ್ಗ್ಗಣ ತಿಂತ್ರಿಣಿಗಚ್ಛದ ಮೇಘಚಂದ್ರ ಸಿದ್ಧಾಂತನ ಉಲ್ಲೇಖವನ್ನು ದಡಗದ ಶಾಸನದಲ್ಲಿ (೬೮) ಕಾಣಬಹುದು. ಇವನು, ಗಂಡವಿಮುಕ್ತ ಸಿದ್ಧಾಂತ ದೇವನ ಶಿಷ್ಯರಾದ ಮರಿಯಾನೆ ಮತ್ತು ಭರತಿಮಯ್ಯ ದಂಡನಾಯಕರಿಂದ ಭೂಮಿ ಮತ್ತು ಬಾಹುಬಲಿಕೂಟ ವನ್ನು ದಾನವಾಗಿ ಪಡೆಯುತ್ತಾನೆ. ಇವನು ಮುನಿಭದ್ರ ಸಿದ್ಧಾಂತದೇವನ ಶಿಷ್ಯ.

ಇದೇ ರೀತಿ ಬಲಾತ್ಕಾರಗಣದ ಉಲ್ಲೇಖವು ಕೆಳ ಗೆರೆ ಶಾಸನದಲ್ಲಿದೆ (೬೦). ಇದು ಮುನಿಮಾಘನಂದಿ ಸಿದ್ಧಾಂತನನ್ನು ಹೆಸರಿಸುತ್ತಿದ್ದು, ಇವನು ದೊರೆ ಮೂರನೇ ನರಸಿಂಹನಿಂದ ದೋರಸಮುದ್ರದ ಶಾಂತಿ ನಾಥ ಬಸದಿಗೆ ದಾನ ಪಡೆಯುತ್ತಾನೆ. ಕುಮುದಚಂದ್ರ ಭಟ್ಟಾರಕನ ಶಿಷ್ಯನಾದ ಇವನು ಸಿದ್ಧಾಂತಸಾರ, ಶ್ರಾವಕಾಚಾರಸಾರ, ಪದಾರ್ಥಸಾರ, ಶಾಸ್ತ್ರಸಾರ ಸಮು ಚ್ಚಯಗಳ ಕರ್ತೃ.

ಬೋಗಾದಿ(೧೮೩) ಮತ್ತು ಸುಕುದರೆಯ (೧೪) ಶಾಸನಗಳಲ್ಲಿ ದ್ರಮಿಳಸಂಘದ ಉಲ್ಲೇಖವಿದೆ. ಬೋಗಾ ದಿಯ ಶಾಸನದಲ್ಲಿ ವಿಷ್ಣುವರ್ಧನನ ಮಂತ್ರಿ ಮಾದಿರಾಜನ ಗುರುಕುಳದ ಪರಂಪರೆಯನ್ನು ಕೊಡುವಲ್ಲಿ ದ್ರಮಿಳ ಸಂಘದ ಪರಂಪರೆಯನ್ನು ಸಮನ್ತಭದ್ರರಿಂದ ಹಿಡಿದು ಶ್ರೀ ಪಾಲತ್ರೈವಿದ್ಯದೇವನವರೆಗೆ ಕೊಡಲಾಗಿದೆ. ಕ್ರಿ.ಶ. ೧೧೭೩ರ ಬೋಗಾದಿಯ ಶಾಸನದಲ್ಲಿ(೧೮೪) ಅಕಳಂಕನ ಶಿಷ್ಯನಾದ 'ಪದ್ಮಪ್ರಭ'ನ ಉಲ್ಲೇಖವಿದ್ದು, ಇವನು ಶ್ರೀಕರಣ ಜಿನಾಲಯದ ಪಾರ್ಶ್ವದೇವರ ಪೂಜೆಗೆ ದಾನ ಪಡೆಯುತ್ತಾನೆ.

ಕ್ರಿ.ಶ. ೧೬೮೦ರ ಬೆಳ್ಳೂರು ಶಾಸನದ (೯೨-೩-೪) ಲಕ್ಷ್ಮೀಸೇನ ಭಟ್ಟಾರಕರು ಸಕ್ಕರೆಸೆಟ್ಟಿಯ ಗುರು. ಇವರು ಪ್ರಸಿದ್ಧ ಜೈನಕೇಂದ್ರಗಳಾದ ಜಿನಕಂಚಿ, ಡಿಳ್ಳಿ, ಕೊಲ್ಲಾ ಪುರ ಮತ್ತು ಪೆನುಗೊಂಡೆಗಳ ಸಿಂಹಾಸನಾಧೀಶ್ವರರು. ರತ್ನಗಿರಿಯ ಬಸದಿಯನ್ನು ಜೀರ್ಣೋದ್ಧಾರ ಮಾಡಿ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ ಸಮಯದಲ್ಲಿ ಹರಟಿಯ ಮುಖ್ಯಸ್ಥನಾದ, ಗಂಗಪ್ಪರಾಜನ ಮನೆತನದ ರಾಯಪ್ಪ ರಾಜನಿಂದ ಆಸಿನಹಳ್ಳಿಯನ್ನು ದಾನಪಡೆಯುತ್ತಾನೆ.

ಇವು ಅಂದಿನ ಸಮಾಜದಲ್ಲಿ ಜೈನಮುನಿಗಳು ನಿರ್ವಹಿಸುತ್ತಿದ್ದ ವಿವಿಧ ಪಾತ್ರಗಳ ಪರಿಚಯ ಮಾಡಿ ಕೊಡುತ್ತವೆ.

ಗುರುವಿನ ಪ್ರಶಸ್ತಿಗಾಗಿಯೇ ರಚಿಸಿದ ಶಾಸನ ವೊಂದು(೧೨೨) ಎಲೇಕೊಪ್ಪದಲ್ಲಿದೆ. ಈ ಶಾಸನದಲ್ಲಿ ಆಚಾರ್ಯ ಗೊಹೆಯ ಭಟ್ಟಾರಕ ಎಂಬುವನನ್ನು 'ಗುಹಾ ವಾಸಿ' ಎಂದೂ 'ಪಕ್ಷೋಪವಾಸಿ'[17] ಎಂದೂ ಹೇಳಿರು ವುದಲ್ಲದೆ, ನೊಳಂಬವಾಡಿ ಮತ್ತು ದಡಿಗವಾಡಿಗಳಲ್ಲಿ ಇವನು ಧರ್ಮವನ್ನು ಪ್ರಚುರಪಡಿಸಿದನೆಂದೂ ಹೊಗಳ ಲಾಗಿದೆ. ಈ ಶಾಸನವನ್ನು ರಚಿಸಿದವನು ಏಳಾಚಾರ್ಯನ ಶಿಷ್ಯ ಬಿಂಡಯ್ಯ. 'ಈ ಗೊಹೆಯ ಭಟ್ಟಾರಕನ ಹೆಸರೇ 'ಏಳಾಚಾರ್ಯ' ಇರಬಹುದೆಂದೂ, ಈತ ಗುಹೆಯಲ್ಲಿ ವಾಸಿ

17 ಉಪವಾಸ ಪ್ರಕ್ರಿಯೆಗೆ ಮಹತ್ವ ನೀಡಿರುವ ಜೈನಧರ್ಮದಲ್ಲಿ ವ್ಯಕ್ತಿಗಳಿಗೆ ಸಂಬಂಧಿಸಿದಂತೆ 'ಅಷ್ಟೋಪವಾಸಿ', 'ಪಕ್ಷೋಪವಾಸಿ', ಎಂಬ ವಿಶೇಷಣಗಳನ್ನು ಕಾಣುತ್ತೇವೆ. ಎಂಟುದಿನಗಳ ಕಾಲ ಉಪವಾಸ ಆಚರಿಸಿದವರನ್ನು 'ಅಷ್ಟೋಪವಾಸಿ' ಎಂದೂ, ಒಂದು ಪಕ್ಷ ಉಪವಾಸ ಮಾಡಿದವನನ್ನು 'ಪಕ್ಷೋಪವಾಸಿ' ಎಂದೂ ಕರೆಯುವರು.

ಸಿದ್ದರಿಂದ 'ಗುಹಾವಾಸಿ' ಎಂದು ಕರೆಯಲ್ಪಟ್ಟಿದ್ದಾನೆಯೆಂದೂ ಊಹಿಸಲಾಗಿದೆ.[18]

ಈ ಮೇಲಿನ ಶಾಸನಗಳನ್ನು ಅವಲೋಕಿಸಿದಾಗ, ಹನ್ನೆರಡು-ಹದಿಮೂರನೇ ಶತಮಾನದಲ್ಲಿ, ಇಲ್ಲಿ ಮೂಲ ಸಂಘ ದೇಶೀಯಗಣ ಮತ್ತಿತರ ಗಣಗಳು ಪ್ರಭಾವಶಾಲಿಯಾಗಿದ್ದೆವೆನ್ನಬಹುದು. ಹದಿಮೂರನೇ ಶತಮಾನದ ನಂತರ ಇವುಗಳ ಉಲ್ಲೇಖ ಅಪರೂಪವಾಗುತ್ತದೆ.

ಒಟ್ಟಾರೆ, ಈ ಎಲ್ಲ ಶಾಸನಗಳನ್ನು ಗಮನಿಸಿದಾಗ,ಈ ತಾಲ್ಲೂಕಿನಲ್ಲಿ ಹನ್ನೆರಡನೇ ಶತಮಾನದಲ್ಲಿ ಜೈನಶಾಸನಗಳು ಸಮೃದ್ಧಿಯಾಗಿ ದೊರಕುತ್ತವೆಂಬ ಅಂಶವು ಸ್ಪಷ್ಟವಾಗುತ್ತದೆ. ಆನಂತರವೂ ನಾಲ್ಕು-ಐದು ಶಾಸನಗಳು ಮಾತ್ರ ದೊರಕಿದ್ದು, ಇದು ಜೈನಧರ್ಮದ ಇಳಿಮುಖವನ್ನು ಸೂಚಿಸುತ್ತಿದೆ ಎನ್ನಬಹುದು. ಈ ದಿಸೆಯಲ್ಲಿ ನಮಗೆ ಹನ್ನೆರಡು-ಹದಿಮೂರನೇ ಶತಮಾನದ ಕಂಬದಹಳ್ಳಿ (೩೧) ಮತ್ತು ಕಸಲಗೆರೆ (೧೬೦) ಶಾಸನಗಳು ದಾರಿದೀಪಗಳಾಗಿವೆ. ಕಲ್ಕುಣಿನಾಡ ಬಸದಿಯನ್ನು 'ಎಕ್ಕೋಟ ಜಿನಾಲಯ'ವೆಂದು ಹೆಸರಿಸಲ್ಪಟ್ಟಿದ್ದನ್ನು ಕಸಲಗೆರೆಯ ಶಾಸನವು ಹೇಳಿದರೆ, ಕಂಬದಹಳ್ಳಿಯ ಶಾಸನವು 'ಎಕ್ಕೋಟಿ ಮಹಾರುದ್ರರು' ಸೇರಿ ಅಲ್ಲಿನ ಬಸದಿಗೆ 'ಎಕ್ಕೋಟಿ ಜಿನಾಲಯ'ವೆಂದು ಹೆಸರಿಟ್ಟು ಪಂಚಮಹಾಶಬ್ದಗಳನ್ನು ನೀಡಿದ್ದನ್ನು ಹೇಳುತ್ತದೆ. ಅಲ್ಲದೆ, ಈ ನಿಯಮವನ್ನು ಮೀರಿದವನು 'ಶಿವದ್ರೋಹಿ' ಎಂದಿದೆ. ಕಾರಣದಿಂದ, ಆ ಕಾಲದಲ್ಲಿ ವೀರಶೈವಧರ್ಮವು ಪ್ರಬಲವಾಗುತ್ತಿದ್ದು, ಜೈನಧರ್ಮಕ್ಕೆ ಪ್ರತಿಸ್ಪರ್ಧಿಯಾಯಿತೆಂದೂ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದ್ದ ಜೈನಧರ್ಮವನ್ನು ಅದು ಪ್ರೋತ್ಸಾಹಿಸಿ ಆದರದಿಂದ ಕಂಡಿತೆಂದೂ ಹೇಳಬಹುದು. ಇಡೀ ಕರ್ನಾಟಕದಲ್ಲಿ ಜೈನಧರ್ಮದ ಪರಿಸ್ಥಿತಿಯು ಹೀಗೇ ಇತ್ತೆಂದು ಬೇರೆ ಹೇಳಬೇಕಾಗಿಲ್ಲ.

ಹೆಚ್ಚು ಗಣನೆಗೆ ಬಾರದ ನಾಗಮಂಗಲ ತಾಲ್ಲೂಕಿನಲ್ಲೇ ಇಷ್ಟೊಂದು ವೈವಿಧ್ಯಮಯ ಶಾಸನಗಳನ್ನು ಕಾಣುತ್ತೇವೆಂಬ ಅಂಶ ಆಶ್ಚರ್ಯಕರವೇ ಆಗಿದೆ. ಒಂದು ಸಣ್ಣ ತಾಲ್ಲೂಕಿನಲ್ಲೇ ಇಷ್ಟೊಂದು ಶಾಸನಗಳು ದೊರೆತಿರುವಾಗ ಕರ್ನಾಟಕದ ಪ್ರತಿ ತಾಲ್ಲೂಕಿನ ಧಾರ್ಮಿಕ ಪರಿಸ್ಥಿತಿಯ ಅಧ್ಯಯನ ಜೈನಧರ್ಮದ ದೃಷ್ಟಿಯಿಂದ ಅವಶ್ಯವಾಗಿ ಆಗಬೇಕಾಗಿದೆ ಎಂಬುದು ಸುಸ್ಪಷ್ಟವಾಗಿದೆ.

---

18 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೮೪

ಪವಾರ್ ವಿ. ಮಾಧವರಾವ್

# ಕರ್ನಾಟಕದಲ್ಲಿ ಮರಾಠ ಜನಾಂಗದ ಇತಿಹಾಸ

ಕರ್ನಾಟಕ–ಮಹಾರಾಷ್ಟ್ರ ನೆರೆಹೊರೆಯ ಪ್ರಾಂತ್ಯಗಳು. ಕರ್ನಾಟಕವು ದ್ರಾವಿಡ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ ; ಮಹಾರಾಷ್ಟ್ರವು ಆರ್ಯ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಈ ಎರಡೂ ಪ್ರಾಂತ್ಯಗಳನ್ನು ರಾಜಕೀಯವಾಗಿ ಸಾತವಾಹನ, ಕದಂಬ, ರಾಷ್ಟ್ರಕೂಟ, ಚಾಲುಕ್ಯ, ಶಿಲಾಹಾರ, ಸೇಉಣ ರಾಜಮನೆತನಗಳು ಒಟ್ಟಿಗೆ ಆಳಿವೆ. ಆ ಕಾಲದಲ್ಲಿ ಒಂದು ಪ್ರಾಂತ್ಯದ ಜನ ಇನ್ನೊಂದು ಪ್ರಾಂತ್ಯಕ್ಕೆ ಹೋಗಿ ನೆಲಸಿರುವರು. ಹಾಗೆ ನೆಲಸಿದ ಜನರು ಅಲ್ಲಿನ ಜನರಲ್ಲಿ ಬೆರತು ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಅಲ್ಲಿಯ ಜನರಲ್ಲಿಯೇ ಬೆರೆತು ಹೋಗಿದ್ದರೂ ಕರ್ನಾಟಕದಲ್ಲಿ ಮರಾಠ ಜನಾಂಗದವರು ಇನ್ನೂ ತನ್ನ ಅಸ್ತಿತವನ್ನುಳಿಸಿಕೊಂಡು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿದ್ದಾರೆ. ಮರಾಠ ಜನರು ಕರ್ನಾಟಕದಲ್ಲಿ ನೆಲಸಿರುವುದನ್ನು ಶಾಸನಗಳಾಧಾರದಿಂದ ದೃಢೀಕರಿಸಲು ಇಲ್ಲಿ ಪ್ರಯತ್ನಿಸಿದೆ.

ಚಾಲುಕ್ಯ ಜಗದೇಕಮಲ್ಲದೇವರ ಕಾಲದ ಸೊರಬ ತಾಲ್ಲೂಕಿನ ಶಾಸನವು (ಎ. ಕ., ೭, ಸಂಖ್ಯೆ ೩೮, ಕ್ರಿ.ಶ. ೧೧೪೫) ಹೇಳುವಂತೆ, ಚಾಲುಕ್ಯರ ಪ್ರಾಂತ್ಯಗಳಲ್ಲಿ ಮಹಾರಾಷ್ಟ್ರಾರ್ಯವೂ ಒಂದೆಂದು ಉಲ್ಲೇಖಿಸಲಾಗಿದೆ. ಈ ಪ್ರಾಂತ್ಯದ ಜನರನ್ನು ಮರಾಠರೆಂದೂ, ಆರೇರೆಂದೂ ಕರೆಯುತ್ತಾರೆ. ಈಗಲೂ ಧಾರವಾಡ ಜಿಲ್ಲೆಯಲ್ಲಿ ಆರೇಮಲ್ಲಾಪುರ, ಆರೇಬಸವನಕೊಪ್ಪ, ಆರೇಕುರಹಟ್ಟಿ, ಅರಿಕಟ್ಟಿ ಎಂಬ ಗ್ರಾಮಗಳಿದ್ದು, ತುಂಗಭದ್ರಾ ನದಿಯ ಎಡಬಲಗಳಲ್ಲಿಯ ಮರಾಠರನ್ನು ಅಲ್ಲಿಯ ಜನರು ಆರೇರು ಎಂದು ಕರೆಯುತ್ತಾರೆ. ಹಾಗೆಯೇ ಅವರು ವಾಸಿಸುವ ಬೀದಿಗಳನ್ನು ಆರೇರಕೇರಿ, ಆರೇರಹಟ್ಟಿ ಎಂಬುದಾಗಿ ಈಗಲೂ ಕರೆಯುವುದುಂಟು.

ಕೆಳದಿನೃಪವಿಜಯ ಮುಂತಾದ ಗ್ರಂಥಗಳಲ್ಲಿ ಮರಾಠರನ್ನು ಆರೆಯರೆಂದೇ ಕರೆಯಲಾಗಿದೆ. ೧೩ನೇ ಶತಮಾನದ ಶಾಸನಗಳಲ್ಲೂ ಮರಾಠ ಜನಸಾಮಾನ್ಯರನ್ನು ಆರೇರು ಎಂದೇ ಕರೆದಿದೆ. ಶಾಸನದಲ್ಲಿ ಅರಿಯ ಸಂಕಣ್ಣನ ಪ್ರಸ್ತಾಪ ಬಂದಿದೆ. ಹಾಗೆಯೇ ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನ ಕಾಲದಲ್ಲಿ ಆರೆಯ ಕ್ಷತ್ರಿಯರಾದ ವಿಶ್ವನಾಥ ರಾಉತ್ತರ ಮಕ್ಕಳು ರಂಗನಾಥ ರಾಉತ್ತರು ಜಗಲೂರು ಹೋಬಳಿ ನಿಬಗೂರಿನಲ್ಲಿ ಚಕ್ರವರ್ತಿಗಳಿಗೆ ಧರ್ಮವಾಗಲಿ ಎಂದು ಸತ್ರ ನಡೆಸುವುದಕ್ಕೆ ಗ್ರಾಮವನ್ನು ದಾನ ಮಾಡಿದರೆಂದಿದೆ. ಹೀಗೆ ಆರೇಯರೆಂದು ಉಲ್ಲೇಖ ಬಂದ ಕಡೆ ಅವರನ್ನು ಮರಾಠ ಜನಾಂಗವೆಂದು ಗುರ್ತಿಸಬೇಕು. ಚಾಲುಕ್ಯ ಚಕ್ರವರ್ತಿ ೬ನೇ ವಿಕ್ರಮಾದಿತ್ಯನು ಆಳುತ್ತಿದ್ದ ಕಾಲದಲ್ಲಿ ತನ್ನ ಮಹಾಮಂಡಲೇಶ್ವರ ಸಿಂಹಣದೇವನು ಮಾಡಿದ ಸೇವೆಗೆ ಮೆಚ್ಚಿ ಬನವಾಸೆನಾಡಿನಲ್ಲಿ ಹೊನ್ನವರ್ತಿಯೆಂಬ ಅಗ್ರಹಾರವನ್ನು ಮತ್ತು ಇತರೆ ಪ್ರಾಂತ್ಯಗಳನ್ನು ಕೊಟ್ಟಿರುತ್ತಾನೆ. ಸಿಂಹಣನು ನಾಸಿಕ್ ಪ್ರಾಂತ್ಯವನ್ನೊಳಗೊಂಡು ಸೇಗುಣ ಅಥವಾ ಸೇಉಣ ದೇಶವನ್ನು ಆಳಿದನು. ಅವನ ವಂಶದ ಬಿಲ್ಲಮನು ದೇವಗಿರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ತರುವಾಯ ಈ ಅರಸರು ದೇವಗಿರಿ ಯಾದವ ದೊರೆಗಳೆಂಬ ಹೆಸರಿನಿಂದ ಪ್ರಖ್ಯಾತರಾದರು. ಅವರ ವಂಶಜರೇ ಮುಂದೆ ಲಕ್ಕೋಜಿರಾವ್ ಜಾದವರೆಂಬ ಹೆಸರಿನಿಂದ ದೇವಗಿರಿಯ ಪ್ರಾಂತ್ಯದಲ್ಲಿ

ನೆಲಸಿ ಪ್ರಖ್ಯಾತರಾದರು. ಈ ಲಕ್ಕೋಜಿರಾವ್ ಜಾಧವರ ಮಗಳು ಜೀಜಾಬಾಯಿಯು ಛತ್ರಪತಿ ಶಿವಾಜಿ ಮಹಾರಾಜರ ತಾಯಿ.

ದೇವಗಿರಿ ಯಾದವರು ಕರ್ನಾಟಕದ ಬಹುಭಾಗವನ್ನು ಅಂದರೆ ಕರ್ನಾಟಕದ ಉತ್ತರದಿಂದ ಹಿಡಿದು ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳವರೆಗೆ ಕ್ರಿ. ಶ. ೧೨೦೦ ರಿಂದ ೧೩೦೦ರವರೆಗೆ ಒಂದು ಶತಮಾನ ಕಾಲ ಆಳಿದರು. ಆ ಕಾಲದಲ್ಲಿ ಮರಾಠರು ಅಥವಾ ಆರೇರು ಕರ್ನಾಟಕದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನೆಲಸಿದರು. ರಾಣಿಬೆನ್ನೂರಿನ ಗುತ್ತವೊಳಲು ರಾಜಧಾನಿಯಾಗಿ ಮಾಡಿಕೊಂಡು ಆಳುತ್ತಿದ್ದ ಗುತ್ತರಸರ ಬಿರುದುಗಳೆಂದರೆ, ಪಾಟಲೀಪುರ ವರಾಧೀಶ್ವರ, ಪಟಕಲ್ಪತರು, ಚಂದ್ರಗುಪ್ತಾನ್ವಯ ಲಲಾಟಲೋಚನ ಮ್ರಿಗಲಾಂಚನ ವಿಕ್ರಮಾದಿತ್ಯ ವಂಶೋದ್ಭವ, ಇತ್ಯಾದಿ. ಇವರು ಮೌರ್ಯರ ವಂಶದವರೆಂದೂ ಕರೆದುಕೊಳ್ಳುತ್ತಾರೆ ಹಾಗೂ ಮರಾಠರಲ್ಲಿ ಮೋರೆಯವರೆಂದು ಗುರುತಿಸಲ್ಪಟ್ಟಿದ್ದಾರೆ. ಶಿವಾಜಿ ಮಹಾರಾಜರ ಕಾಲದಲ್ಲಿ ಅವರಿಗೆ ಶತ್ರುವಾಗಿದ್ದ ಜಾವಳಿಯ ಚಂದ್ರ ರಾವ್ ಮೋರೆ ಕರ್ನಾಟಕದಿಂದ ಬಂದವನೆಂದು ವ್ಯಕ್ತಪಡಿಸಲಾಗಿದೆ.

ದೇವಗಿರಿ ಯಾದವ ಕೃಷ್ಣ ಕಂದಾರನ ಕಾಲದಲ್ಲಿ ಸೊರಬ ತಾಲ್ಲೂಕಿನ ಉದ್ರಿ ಗ್ರಾಮದ ಶಾಸನ ಕಾಲ ಕ್ರಿ. ಶ. ೧೨೫೫. ಶಾಸನಪಾಠವು ಸಂಸ್ಕೃತದಲ್ಲಿದ್ದು, ಶಾಪಾಶಯ ಮರಾಠೀ ಭಾಷೆಯಲ್ಲಿದೆ. ಶಾಪಾಶಯವನ್ನು ಆ ಭಾಷೆಯಲ್ಲಿ ಬರೆದ ಉದ್ದೇಶವಾದರೂ ಇಲ್ಲಿ ಅಧಿಕಾರ ಮಾಡುತ್ತಿದ್ದ ಮರಾಠ ಅಧಿಕಾರಿಗಳು ಓದಿ ತಿಳಿದುಕೊಂಡು ಅದರಂತೆ ನಡೆಯಬೇಕೆಂಬುದೇ ಆಗಿದೆ. "ಏಥಚಾ ವಿನೋಥಂಪಲಾಲಿಂ ಏಥಿಚೆ ಸೇಣವೈತಂಹಿ ಆದೀ ಹೇ ಧರ್ಮಚಿಂತಾಕೀಚೆ ಮಗೇ ವಿನೋಗುಫಲಾ ಇಚೆ ಅಸಾನ್ಯ ತಾಕೀತೆ ಆಸಿ ಗಾಥಂ ಬಾಪು."

ಹೊಯ್ಸಳ ರಾಜ್ಯದಲ್ಲಿ ರಾಹುತ, ರಾಣೆ ಎಂಬ ಮರಾಠ ಅಧಿಕಾರಿಗಳು ಕೆಲಸ ಮಾಡುತ್ತಿದ್ದರು. ರಾಹುತರು ಕುದುರೆ ಪಡೆಯಲ್ಲಿ ಅಧಿಕಾರಿಗಳು ಮತ್ತು ರಾಣೆಯವರು ಆಡಳಿತಾಧಿಕಾರಿಗಳಾಗಿದ್ದರು. ಮರಾಠ ಜನರ ೯೬ ಕುಳಿಗಳಲ್ಲಿ ರಾಹುತ, ರಾಣೆ ಈಗಲೂ ಪ್ರಚಲಿತದಲ್ಲಿವೆ. ಸಾಲತ್ತೊರೆಯವರು ಹೊಯ್ಸಳ ಕಾಲದ ಶಾಸನಗಳಲ್ಲಿ ಬರುವ ರಾಹುತ, ರಾಣೆ ಎಂಬ ಅಧಿಕಾರಿಗಳ ಪಟ್ಟಿಯನ್ನು ಕೊಟ್ಟಿರುವರು. ಈ ರಾಹುತ, ರಾಣೆಯವರು ವಿಜಯನಗರದ ಅರಸುಗಳ ಕಾಲದಲ್ಲೂ ಕರ್ನಾಟಕದಲ್ಲಿ ನೆಲಸಿ ಅಧಿಕಾರ ಮಾಡಿದ್ದಾರೆ. ಈ ಹಿಂದೆ ತಿಳಿಸಿದ ಆರೆಯ ಕ್ಷತ್ರಿಯರಾದ ರಂಗನಾಥ ರಾಹುತ್ತ ಮೊದಲಾದವರನ್ನು ಶಾಸನಗಳಲ್ಲಿ ಕಾಣಬಹುದು. ಹಾಗೆಯೇ ಕ್ರಿ. ಶ. ೧೫೪೪ರ ಕಾಲದಲ್ಲಿ ಅಂದರೆ ವೀರ ಸದಾಶಿವರಾಯರ ಕಾಲದಲ್ಲಿ ಮಹಾ ಮಂಡಲೇಶ್ವರ ಶ್ರೀ ಮರಾಟೆಯ ವಿಟಲದೇವ ಮಹಾ ಅರಸುಗಳು ಬೆಂಗಳೂರು ಸಮೀಪದ ಜಕ್ಕೂರು ಅಲ್ಲಾಳ ನಾಥ ದೇವರಿಗೆ ಅಲ್ಲಾಳಸಂದ್ರದ ಗ್ರಾಮವನ್ನು ದತ್ತಿ ಬಿಟ್ಟ ವಿಚಾರ ಬರುತ್ತದೆ. ಮಹಾಮಂಡಲೇಶ್ವರರಾಗುವವರು ವಿಜಯನಗರದ ಸಹೋದರರು, ಕುಮಾರರು, ಹತ್ತಿರದ ಬಂಧುಗಳಾಗಿರುತ್ತಿದ್ದರೆಂಬುದನ್ನು ಗಮನಕ್ಕೆ ತಂದುಕೊಂಡರೆ, ಮರಾಟೆ ವಿಟಲದೇವ ಮಹಾಅರಸುಗಳ ಸ್ಥಾನಮಾನದ ಅರಿವಾಗುತ್ತದೆ. ಶಾಸನಗಳನ್ನು ಕೂಲಂಕಷವಾಗಿ ಪರಿಶೀಲಿಸಿದರೆ, ಅನೇಕ ಮರಾಠ ಜನರು ಮುಖ್ಯ ಹುದ್ದೆಗಳಲ್ಲಿದ್ದರೆಂಬ ವಿಚಾರ ವೇದ್ಯವಾಗುತ್ತದೆ.

ಕ್ರಿ. ಶ. ೧೬೧೬ರಲ್ಲಿ ಚನ್ನಗಿರಿ ತಾಲ್ಲೂಕು ಹಿರೇಮಾಡಾಳಿನಲ್ಲಿ ಸಂತೆಬೆನ್ನೂರು ಹನುಮಪ್ಪ ನಾಯಕರಲ್ಲಿ ಸಾವಿರಕುದುರೆ ಸವಾರರ ಮುಖ್ಯಾಧಿಪತಿಯಾಗಿದ್ದ ದಾದಾಜಿರಾಯ ರಾವಯೆಂಬುವನು ತಾನು ಶಿವಲಿಂಗ ಸ್ಥಾಪನೆ ಮಾಡಿಸಿದನೆಂಬುದಕ್ಕೆ ನಾಗರಾಕ್ಷರಗಳಲ್ಲಿರುವ ಮರಾಠೀ ಭಾಷೆಯ ಎರಡು ಶಾಸನಗಳನ್ನು ಹಾಗೂ ಅದೇ ಅರ್ಥ ಬರುವ ಒಂದು ಕನ್ನಡ ಶಾಸನವನ್ನು ಹಾಕಿಸಿರುತ್ತಾನೆ. ಷಹಜಿಯು ಕರ್ನಾಟಕಕ್ಕೆ ಬರುವ ಮುಂಚೆಯೇ ಇಲ್ಲಿ ಮರಾಠ ಜನರು ಇದ್ದರೆಂಬುದು ಗಮನಿಸಬೇಕಾದ ವಿಚಾರ. ಈ ಜನರು ಮಹಾರಾಷ್ಟ್ರದ ಸಂಪರ್ಕವನ್ನು ಕಡಿದುಕೊಂಡು ಬಹುಕಾಲವಾದುದರಿಂದ ಮರಾಠೀ ಭಾಷೆಯನ್ನು ಮರೆತರೂ ಆಚಾರ ವಿಚಾರಗಳಲ್ಲಿ ತಮ್ಮತನವನ್ನುಳಿಸಿಕೊಂಡು ಬಂದಿರುತ್ತಾರೆ. ಹಾಗೆಯೇ ತಮ್ಮ ಮನೆತನದ ಹೆಸರುಗಳಾದ ಚವಾನ್, ಸೂರ್ಯವಂಶಿ, ಘಾಟಕೆ, ಜಾಧವ್, ಪವಾರ್ ಮುಂತಾದವುಗಳನ್ನುಳಿಸಿಕೊಂಡಿದ್ದಾರೆ.

ಉತ್ತರ ಕರ್ನಾಟಕದ ಬಿಜಾಪುರದಲ್ಲಿ ಅದಿಲ್ ಶಾಹಿಗಳು, ಅಹಮದ್‌ನಗರದಲ್ಲಿ ನಿಜಾಂಶಾಹಿಗಳು, ಗೋಲ್ಕಂಡದಲ್ಲಿ ಕುತಬ್ ಶಾಹಿಗಳು ಅಧಿಕಾರದಲ್ಲಿದ್ದರೂ ಅವರುಗಳಲ್ಲಿ ಸ್ಥಳೀಯ ಹಿಂದೂಗಳು, ಮುಖ್ಯವಾಗಿ ಮರಾಠರು ಸೈನಿಕರಾಗಿದ್ದರು. ಶಹಜಿಯು ಅಹಮದ್ ನಗರದಲ್ಲಿ ಸರದಾರನಾಗಿದ್ದನು. ಮೊಗಲರು ಅಹಮದ್ ನಗರವನ್ನು ಕಬಳಿಸಲು ಮಾಡಿದ ಯುದ್ಧಗಳಲ್ಲಿ ಅವರನ್ನು ಧೈರ್ಯವಾಗಿ ಎದುರಿಸಿದನು. ಆದರೆ ಮೊಗಲರು ಬಿಜಾಪುರದವರು ಒಂದಾಗಿ ಶಹಜಿಯ ಮೇಲೆ ಯುದ್ಧ ಮಾಡಲಾಗಿ ನಿಸ್ಸಾಯಕನಾಗಿ ಸಂಧಿಗೆ ಒಡಂಬಟ್ಟನು. ಅದರಂತೆ ಶಹಜಿಯು ಬಿಜಾಪುರದಲ್ಲಿ ಸೇವೆ ಸಲ್ಲಿಸಬೇಕೆಂದೂ ಮಹಾರಾಷ್ಟ್ರದಲ್ಲಿರಕೂಡದೆಂದೂ ಷರತ್ತು ವಿಧಿಸಲ್ಪಟ್ಟಿತು. ಕ್ರಿ. ಶ. ೧೬೩೭ರಲ್ಲಿ ದಕ್ಷಿಣ ಕರ್ನಾಟಕದಲ್ಲಿ ಪ್ರಾರಂಭಗೊಂಡ ದಂಡಯಾತ್ರೆಗಳಲ್ಲಿ ಶಹಜಿಯು ಭಾಗ ವಹಿಸಿದನು. ಕ್ರಿ. ಶ. ೧೬೩೮ರ ಹೊತ್ತಿಗೆ ಬೆಂಗಳೂರು, ಕೋಲಾರ, ಹೊಸಕೋಟೆ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಶಿರಾ, ಚಿಕ್ಕನಾಯಕನಹಳ್ಳಿಗಳು ಜಯಿಸಲ್ಪಟ್ಟು 'ಬೆಂಗಳೂರು ಸುಭಾ' ಎಂಬ ಹೆಸರು ಹೊಂದಿ ಅದು ಶಹಜಿಗೆ ಜಹಗೀರಾಗಿ ಕೊಡಲ್ಪಟ್ಟಿತು.

ಇಲ್ಲಿಂದ ಮುಂದೆ ಕರ್ನಾಟಕದಲ್ಲಿ ಮರಾಠ ಜನಾಂಗದ ಇತಿಹಾಸಕ್ಕೆ ಹೊಸ ತಿರುವು ಬಂದಿತು. ಶಹಜಿಯು ಹೆಸರಿಗೆ ಮಾತ್ರ ಬಿಜಾಪುರದ ಅಧೀನ ಜಹಗೀರುದಾರನಾಗಿದ್ದು, ಬೆಂಗಳೂರು ಸುಭಾದಲ್ಲಿ ಸ್ವತಂತ್ರ ರಾಜನಂತೆ ವರ್ತಿಸುತ್ತಿದ್ದನು. ಆತನ ಸಲಹೆಯಂತೆ ಸಂತೆಬೆನ್ನೂರು ಪಾಳೆಯಗಾರರಿಗೆ ತರೀಕೆರೆಯನ್ನೂ, ಕೆಂಪೇಗೌಡರಿಗೆ ಬೆಂಗಳೂರಿಗೆ ಬದಲಾಗಿ ಮಾಗಡಿಯನ್ನೂ, ಹಾಗೆಯೇ ಇತರೇ ಪಾಳೆಯಗಾರರಿಗೂ ಕೊಡಿಸಿದನು. ಶಹಜಿಯು ಬಿಜಾಪುರದಿಂದ ದೂರದಲ್ಲಿದ್ದುದರಿಂದ ಸರ್ವ ಸ್ವತಂತ್ರನಾಗಿ ಬೆಂಗಳೂರು ಸುತ್ತಮುತ್ತ ಮಹಾರಾಷ್ಟ್ರ ರಾಜ್ಯವನ್ನು ನಿರ್ಮಿಸಿದನೆಂದರೆ ತಪ್ಪಾಗಲಾರದು. ಇವನ ಆಸ್ಥಾನದಲ್ಲಿ ಕವಿಗಳು, ಸಾಧು ಸಂತರು ಇರುತ್ತಿದ್ದರು. ಮರಾಠೀ ಮತ್ತು ಸಂಸ್ಕೃತ ಭಾಷೆಗೆ ಪ್ರೋತ್ಸಾಹ ದೊರೆಯಿತು. ಉತ್ತಮ ಆಡಳಿತವನ್ನು ಕೊಟ್ಟು ರಾಜ್ಯದಲ್ಲಿ ಸುಭಿಕ್ಷತೆಗೆ ಕಾರಣನಾದನು. ಆ ಕಾಲದಲ್ಲಿ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ನಿಲ್ಲಿಸಿದ ಶಾಸನಗಳು ಈ ಮಾತಿಗೆ ಸಾಕ್ಷೀಭೂತವಾಗಿವೆ.

ಶಹಜಿಯ ಕಾಲದಲ್ಲಿ ಆತನ ಮಗ ಸಂಬಾಜಿ, ಆತನ ಹೆಂಡತಿ ಜೈತಬಾಯಿ, ಇನ್ನೊಬ್ಬ ಮಗ ಏಕೋಜಿಯು ಸಹ ದಾನ ಧರ್ಮ, ಕೆರೆ ಕಟ್ಟುವಿಕೆ ಮುಂತಾದುವನ್ನು ಪ್ರೋತ್ಸಾಹಿಸಿದರು. ಶಿವಾಜಿಯು ಬಾಲಕನಾಗಿದ್ದಾಗ ಬೆಂಗಳೂರಿಗೆ ಬಂದು ಇಲ್ಲಿ ಕ್ರಿ. ಶ. ೧೬೪೦ ರಿಂದ ೧೬೪೨ ವರೆಗೆ ಇದ್ದು ಮದುವೆಯನ್ನು ಮಾಡಿಕೊಂಡು ತನ್ನ ತಾಯಿ, ಹೆಂಡತಿ, ಪರಿವಾರದೊಂದಿಗೆ ಪುಣೆಗೆ ಹಿಂದಿರುಗಿದನು. ಹಾಗೆಯೇ ಕ್ರಿ. ಶ. ೧೬೭೪ರಲ್ಲಿ ಶಿವಾಜಿಯು ಛತ್ರಪತಿಯಾದ ಮೇಲೆ ಕ್ರಿ. ಶ. ೧೬೭೭–೭೮ರಲ್ಲಿ ದಕ್ಷಿಣ ಭಾರತಕ್ಕೆ ದಂಡಯಾತ್ರೆ ಬಂದು ಜಿಂಜಿ ಮುಂತಾದ ಕೋಟೆಗಳನ್ನು ವಶಪಡಿಸಿಕೊಂಡು ಅದನ್ನು ಬದಲೀ ರಾಜಧಾನಿಯನ್ನಾಗಿಸಿದನು. ಇಷ್ಟರಲ್ಲಾಗಲೇ ಏಕೋಜಿಯು ತಂಜಾವೂರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಹೀಗೆ ಮರಾಠ ಜನಾಂಗವು ಕರ್ನಾಟಕವನ್ನು ದಾಟಿ ತಮಿಳುನಾಡಿನಲ್ಲಿ ನೆಲಸುವಂತಾಯಿತು. ಮುಂದೆ ಔರಂಗಜೇಬನು ಮರಾಠ ರಾಜ್ಯದ ಮೇಲೆ ದಾಳಿ ಮಾಡಿದಾಗ ಜಿಂಜಿಕೋಟೆಯು ಮರಾಠ ರಾಜ್ಯವನ್ನುಳಿಸಿದ ವಿಚಾರ ಇತಿಹಾಸದಲ್ಲಿ ಸೇರ್ಪಡೆಯಾಗಿದೆ. ಇಲ್ಲಿಂದ ಮುಂದೆ ಶಿವಾಜಿ, ಸಂಬಾಜಿ, ಶಾಹು ಹಾಗೂ ಪೇಶ್ವೆಗಳು ಕರ್ನಾಟಕದಲ್ಲಿ ನಡೆಸಿದ ಕಾರ್ಯಾಚರಣೆಗಳ ವಿಚಾರಗಳು ಇತಿಹಾಸದಲ್ಲಿ ದಾಖಲಾಗಿವೆ. ಆ ಅವಧಿಯಲ್ಲಿ ಮರಾಠರು ಕರ್ನಾಟಕದಲ್ಲಿ ಮತ್ತಷ್ಟು ಸಂಖ್ಯೆಯಲ್ಲಿ ನೆಲಸುವುದರೊಡನೆ ಕರ್ನಾಟಕದ ಅವಿಭಾಜ್ಯ ಅಂಗವೆನಿಸತೊಡಗಿದರು.

ಕ್ರಿ. ಶ. ೧೭೯೯ರಲ್ಲಿ ಇಂಗ್ಲೀಷರು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡ ತರುಣದಲ್ಲಿ ಸೆರೆಯಲ್ಲಿದ್ದ ಅನೇಕರನ್ನು ಬಿಡುಗಡೆ ಮಾಡಿದರು. ಅವರಲ್ಲಿ ಧೊಂಡೋಜಿ ವಾಘನೂ ಒಬ್ಬ. ಈತನು ಚನ್ನಗಿರಿಯ ಪವಾರ್ ವಂಶದವನು. ತಾರುಣ್ಯದಲ್ಲಿ ಲಕ್ಷ್ಮೇಶ್ವರ, ಮುಧೋಳ್, ಕೊಲ್ಲಾಪುರಗಳಲ್ಲಿ ಸರದಾರನಾಗಿದ್ದು ಅನಂತರ ಹೈದರ್‌ಅಲಿಯ ಸೈನ್ಯವನ್ನು ಸೇರಬೇಕಾಯಿತು. ಹೈದರನ ಮರಣಾನಂತರ ಟಿಪ್ಪುವು ಈತನನ್ನು ಸೆರೆಯಲ್ಲಿಟ್ಟನು. ಸೆರೆಯಿಂದ ಬಿಡುಗಡೆಯಾದ ಕೇವಲ ಒಂದು

ತಿಂಗಳಿನಲ್ಲಿಯೇ ವಾಘನು ಶಿವಮೊಗ್ಗ ಮತ್ತು ಚಿತ್ರದುರ್ಗ ಪ್ರಾಂತ್ಯಗಳಲ್ಲಿ ಒಂದು ಸೈನ್ಯ ಪಡೆಯನ್ನು ಕಟ್ಟಿ ಇಂಗ್ಲೀಷರನ್ನು ಓಡಿಸಲು ಕೋಟೆ ಕೊತ್ತಳಗಳನ್ನು ವಶಪಡಿಸಿಕೊಳ್ಳತೊಡಗಿದನು. ಇಂಗ್ಲೀಷರು, ಹೈದರಾಬಾದಿನವರು ಮತ್ತು ಪೇಶ್ವೆಗಳು ಮೂರು ಕಡೆಯಿಂದ ಅವನ ಮೇಲೆ ದಾಳಿ ಮಾಡಿದರು. ಆದರೂ ವಾಘನು ಒಂದೂವರೆ ವರ್ಷಗಳ ಕಾಲ ಸತತವಾಗಿ ಯುದ್ಧಮಾಡಿ ಯುದ್ಧರಂಗದಲ್ಲಿಯೇ ಮಡಿದುಹೋದನು. ಆತನು ಉಪಯೋಗಿಸುತ್ತಿದ್ದ ಖಡ್ಗವು ಈಗ ಶಿಕಾರಿಪುರದ ತಾಲ್ಲೂಕು ಕಚೇರಿಯಲ್ಲಿದೆ. ಕರ್ನಾಟಕಕ್ಕೆ ಸ್ವಾತಂತ್ರ್ಯ ದೊರಕಿಸಲು ಹೋರಾಡಿದ ಈ ವೀರನನ್ನು ಸ್ಮರಿಸುವುದು ನಮ್ಮೆಲ್ಲರ ಕರ್ತವ್ಯವಾಗಿದೆ.

ಸಂಡೂರಿನ ಘೋರ್ಪಡೆಯವರು ಕರ್ನಾಟಕದ ರಾಜಕೀಯದಲ್ಲಿ ತಮ್ಮದೇ ಆದ ಸೇವೆಯನ್ನು ಸಲ್ಲಿಸಿದ್ದಾರೆ ಹಾಗೂ ಈಗಲೂ ಸಲ್ಲಿಸುತ್ತಿದ್ದಾರೆ. ನವ ಕರ್ನಾಟಕದ ಮುಖ್ಯಮಂತ್ರಿಯಾಗಿ ಸೇವೆ ಸಲ್ಲಿಸಿದ ದೇವರಾಜ ಅರಸ್ ಅವರ ಮಂತ್ರಿಮಂಡಲದಲ್ಲಿ ಆರ್ಥಿಕ ಮಂತ್ರಿಗಳಾಗಿದ್ದು ಕರ್ನಾಟಕದ ಆರ್ಥಿಕ ಭದ್ರತೆಯನ್ನುಂಟು ಮಾಡಿದ ಶ್ರೀ ಎಂ. ವೈ. ಘೋರ್ಪಡೆಯವರನ್ನು ನೆನೆಯಬೇಕಾಗಿದೆ. ಈಗಲೂ ಕರ್ನಾಟಕದ ಪರವಾಗಿ ಲೋಕಸಭಾ ಸದಸ್ಯರಾಗಿ ತಮ್ಮ ಪಾಲಿನ ಕರ್ತವ್ಯವನ್ನು ನೆರವೇರಿಸುತ್ತಿದ್ದಾರೆ. ಹಾಗೆಯೇ ಅವರ ತಮ್ಮಂದಿರಾದ ಶ್ರೀ ಆರ್. ವೈ. ಘೋರ್ಪಡೆಯವರು ಸಹ ಲೋಕಸಭೆಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಕರ್ನಾಟಕದ ಹಿಂದಿನ ಮಂತ್ರಿಮಂಡಲದಲ್ಲಿ ಶ್ರೀ ಪಾಂಡುರಂಗರಾವ್ ಗಣೇಶರಾವ್ ಶಿಂಧೆಯವರು ಮಂತ್ರಿಗಳಾಗಿ ತಮ್ಮ ಪಾಲಿನ ಕರ್ತವ್ಯವನ್ನು ಯಶಸ್ವಿಯಾಗಿ ಪೂರೈಸಿದ್ದಾರೆ.

ಬೆಂಗಳೂರಿನ ವರ್ತಕವರ್ಗದಲ್ಲಿ ಮಹಾದಾನಿಗಳಾಗಿದ್ದ ಧರ್ಮಪ್ರಕಾಶ್ ಶ್ರೀ ಸಜ್ಜನರಾವ್ ಸೂರ್ಯವಂಶಿಯವರನ್ನೂ, ಎಂ.ಆರ್.ಎ. ಆಗಿದ್ದ ಶ್ರೀ ರಾಮಚಂದ್ರ ಶಿಂಧೆಯವರನ್ನೂ, ಶ್ರೀ ಮನ್ನಾಜಿರಾಯರನ್ನೂ ಸ್ಮರಿಸಬೇಕಾಗಿದೆ. ರಾಜಕಾರಣಪಟು ಸರ್ದಾರ್ ಟಿ. ಎಲ್. ಗಂಗಾಜಿರಾಯರು ಜನಸೇವೆಯಲ್ಲಿ ತಮ್ಮ ಪಾಲಿನ ಸೇವೆ ಸಲ್ಲಿಸಿದ್ದಾರೆ. ಈಗ ಹಾಲಿ ರಾಜಕೀಯದಲ್ಲೂ ವ್ಯಾಪಾರೋದ್ಯಮಗಳಲ್ಲೂ ಅನೇಕ ಮರಾಠ ಜನಾಂಗದ ಪ್ರಮುಖರು ಭಾಗವಹಿಸಿದ್ದಾರೆ. ಕರ್ನಾಟಕದ ಜನಜೀವನದಲ್ಲಿ ಒಂದಾಗಿ ಬೆರೆತು ಕರ್ನಾಟಕದ ಸರ್ವತೋಮುಖವಾದ ಏಳಿಗೆಗಾಗಿ ತನುಮನದಿಂದ ದುಡಿಯುತ್ತಿರುವ ಮಹನೀಯರುಗಳ ಹೆಸರುಗಳನ್ನೆಲ್ಲಾ ವಿವರಿಸಲು ಇಲ್ಲಿ ಅವಕಾಶವಿಲ್ಲ.

ಕರ್ನಾಟಕದ ಸರ್ವಜನತೆಯೂ ಮರಾಠ ಜನಾಂಗವನ್ನು ತಮ್ಮವರೆಂಬ ಅಭಿಮಾನದಿಂದ ಕಂಡು ಸಹಕರಿಸುತ್ತಿರುವುದು ಐತಿಹಾಸಿಕ ಸತ್ಯ.

ಡಾ॥ ಕೆ. ಎನ್. ಚಿಟ್ನೀಸ್

# ಪೇಶವೆಕಾಲದಲ್ಲಿಯ ಮುನವಳ್ಳಿ ತಾಲೂಕಿನ ಆರ್ಥಿಕ ಜೀವನ

ಈಗ ಮುನವಳ್ಳಿಯು ಬೆಳಗಾವಿ ಜಿಲ್ಲೆಯ ಸೌದತ್ತಿ ತಾಲೂಕಿನಲ್ಲಿಯ ಒಂದು ಹಳ್ಳಿಯಾಗಿದೆ. ಪೇಶವೆ ಕಾಲದಲ್ಲಿ ಇದು ಒಂದು ತಾಲೂಕಾಗಿತ್ತು.

೧೭೭೭ರಲ್ಲಿ ಮುನವಳ್ಳಿ ತಾಲೂಕಿನಲ್ಲಿ ೧೦೨ ಹಳ್ಳಿಗಳಿದ್ದು ಅವು ಪರಗಣೆ ಮುರಗೋಡ, ತರ್ಫ ಸಿಂದೋಗಿ, ಕರ್ಯಾತ ಸತ್ತೀಗೇರಿ ಹಾಗೂ ಫುಟಗಾವ ಇವುಗಳಲ್ಲಿ ವಿಭಾಗಿಸಲ್ಪಟ್ಟಿದ್ದವು. ಪರಗಣೆ ಮುರಗೋಡಿನಲ್ಲಿ ೫೧, ತರ್ಫ ಸಿಂದೋಗಿಯಲ್ಲಿ ೨೦, ಕರ್ಯಾತ ಸತ್ತೀಗೇರಿಯಲ್ಲಿ ೨೪ ಹಾಗೂ ಫುಟಗಾವದಲ್ಲಿ ೭ ಹಳ್ಳಿಗಳಿದ್ದವು. ಪರಗಣೆ ಮುರಗೋಡಿನಲ್ಲಿ ೩ ದುಮಾಲೆ ಹಳ್ಳಿಗಳು ರಾಯಪ್ಪಾದೇಸಾಯಿ ಚಚಡೀಕರನ ಹತ್ತಿರ, ೩ ಹಳ್ಳಿಗಳು ಚೆನ್ನವೀರಪ್ಪದೇಸಾಯಿ ತಲ್ಲೂರಕರನ ಹತ್ತಿರ ಮತ್ತು ೧ ಹಳ್ಳಿಯು ವೀರಪ್ಪದೇಸಾಯಿ ಇಂಗಳಗೀಕರನ ಹತ್ತಿರ ಇದ್ದವು. ಸಿಂದೋಗಿ ತರ್ಫಿನಲ್ಲಿ ಕರವೀರಕರ ಛತ್ರಪತೀ ಕಡೆಗೆ ೩ ಹಳ್ಳಿಗಳು, ಮಾಮಲೆ ತೊರಗಲ್ಲಿನ ಲಿಂಗಪ್ಪ ಜಾಯಗೌಡ ಸರದೇಸಾಯಿ ಕಡೆ ಬಸರಗಿ ಹಳ್ಳಿಯು, ಸಿಲೇದಾರ ತಾನಾಜಿ ಇದಲಕರ ಕಡೆ ಕಿಟಧಾಳ ಹಳ್ಳಿಯು ಹಾಗೂ ಸಿಲೇದಾರ ಶಿವಾಜಿ ಸೂರ್ಯವಂಶೀ ಕಡೆ ಇನ್ನೊಂದು ಹಳ್ಳಿಯೂ ಇದ್ದವು. ಸತ್ತೀಗೇರಿ ಕರ್ಯಾತಿನಲ್ಲಿ ನೀಲಕಂಠರಾವ ಶಿಂದೆನ ಹತ್ತಿರ ೭ ಹಳ್ಳಿಗಳು, ಸತ್ತೀಗೇರಿ ಕರ್ಯಾತಿನ ದೇಸಾಯಿಯ ಹತ್ತಿರ ೩ ಹಳ್ಳಿಗಳು ಹಾಗೂ ಸಿಲೇದಾರ ಸಿದರಾಮ ಪಡವಲನ ಹತ್ತಿರ ಕೊರಿಕೊಪ್ಪಹಳ್ಳಿಯೂ ಇದ್ದವು. (ಪೇಶವೆ ಪತ್ರಾಗಾರ, ಕರ್ನಾಟಕ ಜಮಾವ, ರುಮಾಲ ನಂ. ೩೪೯, ತಾಲೂಕ ಮಸೋಲಿಯ ದೇಹರ್ಝಾಡಾ).

ದುಮಾಲೆ ಹಳ್ಳಿಗಳನ್ನು ಬಿಟ್ಟರೆ, ಪರಗಣೆ ಮುರಗೋಡದಲ್ಲಿ ೨೮ ಸರಕಾರಿ ಇಲ್ಲವೆ ಖಾಲಸಾ ಹಳ್ಳಿಗಳು, ತರ್ಫ ಸಿಂದೋಗಿಯಲ್ಲಿ ೧೩, ಕರ್ಯಾತ ಸತ್ತೀಗೇರಿಯಲ್ಲಿ ೮ ಹಾಗೂ ಫುಟಗಾವದಲ್ಲಿ ೭ ಹಳ್ಳಿಗಳು ಇದ್ದವು (ತತ್ರೈವ). ಮುರಗೋಡ ಪರಗಣೆಯಲ್ಲಿಯ ಹಳ್ಳಿಗಳಾವವೆಂದರೆ, ಕಸಬೆ ಮುರಗೋಡ, ಇಂಚಲ, ಹೊಸೂರ, ಮರಕುಂಬಿ, ಹಾರೋಗೊಪ್ಪ,ಕಡಬಿ, ಬೂಡಕೊಪ್ಪ, ಬೂದನೂರ ಖುರ್ದ, ಮಳಗಲಿ, ಕೊಟೂರ, ಯೆರಝರ್ವಿ, ಬೂದನೂರು ಬುದ್ರುಕ, ಗುಡಳೂರ, ನುಗನಟ್ಟಿ, ರೈನಾಪೂರ, ಮದಸೂರ, ಆಲದಕಟ್ಟಿ, ಜಾಲೀಕಟ್ಟಿ ಜೀವಾಪೂರ, ಶ್ರೀರಂಗಪೂರ, ಹಿರೇಕೊಪ, ದುಂಡನಕೊಪ್ಪ, ತಡಸಲೂರ, ಚಿಕ್ಕೊಪ್ಪ, ಕಾರೀಮನಿ, ಬಸರಗಿ, ಜಂಗಮ ಬೂದೀಕಟ್ಟಿ, ಹಲಕಿ ಮತ್ತು ಪೇಠ ಕಸಬೆ ಮುರಗೋಡ. ಸಿಂದೋಗಿ ತರ್ಫಿನಲ್ಲಿಯ ಖಾಲಸಾ ಹಳ್ಳಿಗಳು ಈ ಮುಂದಿನಂತಿದ್ದವು: ಕಸಬೆ ಸಿಂದೋಗಿ, ಮುನವಳ್ಳಿ, ಪೇಠ ಸದಾಶಿವ ಉರ್ಫ ಮುನವಳ್ಳಿ, ಮಬಳೂರ, ಚುಚಸೂರ, ಉಜನಕೊಪ, ಅರಟಗಲ, ತೆಗೀಹಾಳ, ಕಲೋಲಿ, ಹಿರೂರ, ಹಳೂರ, ತೆರದಕೊಪ ಮತ್ತು ಕಟಮಳ್ಳಿ.ಸತ್ತೀಗೇರಿ ಕರ್ಯಾತಿನಲ್ಲಿಯ ಖಾಲಸಾ ಹಳ್ಳಿಗಳಾವವೆಂದರೆ, ಕಸಬೆ ಸತ್ತೀಗೇರಿ, ಸೊಪಡಲ, ಕುರಾಬಗಟ, ಯರಗಣವಿ, ಗೋವನಕೊಪ, ಅಕೀಸಾಗರ, ಮಡಲಾಗಿರೆ ಮತ್ತು ಪೇಠ ಕಸಬೆ ಸತ್ತೀಗೇರಿ

ಫುಟಗಾವದಲ್ಲಿ ಪರಗಣೆ ಗೋವನಕೊಪ್ಪದಲ್ಲಿಯ ಗೊರಾಬಾಳ, ಚುಳಕಿ, ಕಾಗಧಾಳ, ಬನೇಡೋಣಿ ಮತ್ತು ಹಂಚಿನಾಳ, ಕರ್ಯಾತ ಅಸುಂಡಿಯಲ್ಲಿಯ ಒಡಲಿ ಹಾಗೂ ತರ್ಫ ಸಿಂದೋಗಿಯಲ್ಲಿಯ ಜಕಬಾಳ ಇವು ಇದ್ದವು (ತತ್ರೈವ).

೧೭೭೨ರಲ್ಲಿ ಮುನವಳ್ಳಿ ತಾಲೂಕಿನ ಮೇಲೆ ರಾಮಚಂದ್ರ ಮಹಾದೇವ ಮತ್ತು ಕೇಸೋ ಬಲ್ಲಾಳ ಇವರು ಕಮಾವೀಸದಾರರಿದ್ದರು. ಈ ವರ್ಷದ ಅಜಮಾಸ ತಾಲುಕೆ ಮುನವಳ್ಳಿ(ಕಜ*/೩೩೯ : ೩೨೪)ಯ ಪ್ರಕಾರ ಪರಗಣೆ ಮುರಗೋಡದಲ್ಲಿ ೩೩ಹಳ್ಳಿಗಳಿದ್ದು ಅದರಲ್ಲಿಂದ ೬ ಇನಾಮದಾರ ಹಳ್ಳಿಗಳನ್ನು ಕಳೆಯಲಾಗಿ ೨೭ ಖಾಲಸಾ ಹಳ್ಳಿಗಳು ಉಳಿಯುತ್ತವೆ. ಈ ೨೭ ಹಳ್ಳಿಗಳ ಉತ್ಪನ್ನವು ಈ ಪ್ರಕಾರವಿತ್ತು :

೪೨೫೦೦ ಐನ ಜಮಾ
೧೨೩೩೪೯॥ ಸಿವಾಯೆ ಜಮಾ
೫೪೮೩೪೯॥ ಒಟ್ಟು

ಸಿವಾಯೆ ಜಮಾದಲ್ಲಿ ಜಕಾತಿ (ವ್ಯಾಪಾರಿ ಸುಂಕ)ಯ ಗುತ್ತಿಗೆಯಿಂದ ಬಂದಹಣ, 'ಇಜಾರಾ ಪಟೆ', ಪ್ರತ್ಯೇಕ ಊರಿನಿಂದ ಬಂದ ಕಾಣಿಕೆ ಹಾಗೂ ಮೇಲಿನ ಹಣ (ಬಟಾ), ಸರಕಾರಿ ಅಧಿಕಾರಿಗಳಿಗೆ ಊರಿನ ಜನರು ಕೊಟ್ಟ ಸರಕಾರಿ ಶುಲ್ಕ(ಮಸಾಲಾ) ಮತ್ತು ತಲ್ಲೂರಕರ ದೇಶಮುಖನ ಊರಿನ ಜಪ್ತಿಯ ಹಣ, ಇವೆಲ್ಲ ಅಡಕವಾಗಿದ್ದವು.

ಕರ್ಯಾತ ಸತ್ತೀಗೇರಿಯಲ್ಲಿ ೧೮ ಹಳ್ಳಿಗಳಿದ್ದು ೭ ಇನಾಮ ಊರುಗಳು ಹಾಗೂ ೭ ನೀಲಕಂಠರಾವ ಸಿದ ಇವನ ಕಡೆ ಸರಂಜಾಮಕ್ಕೆಂದು ಬಿಟ್ಟ ಹಳ್ಳಿಗಳು ಇವನ್ನು ಕಳೆದರೆ ೮ ಖಾಲಸಾ ಹಳ್ಳಿಗಳು ಉಳಿಯುತ್ತವೆ. ಈ ೮ ಹಳ್ಳಿಗಳ ಉತ್ಪನ್ನವು ಕೆಳಗಿನಂತಿತ್ತು :

[೯೦೩೦?] ೯೦೦ ಐನ ಜಮಾ
೨೭೧೯। ಸಿವಾಯೆ ಜಮಾ
೧೧೭೪೯। ಒಟ್ಟು

ತರ್ಫ ಸಿಂದೋಗಿಯು ಪರಗಣೆ ನವಲಗುಂದದಲ್ಲಿದ್ದು ಅದರಲ್ಲಿ ೧೫ ಹಳ್ಳಿಗಳಿದ್ದವು. ಇದರಲ್ಲಿ ಇನಾಮ ಹಳ್ಳಿಗಳು ಇದ್ದಿದ್ದಿಲ್ಲ. ಇವುಗಳ ಉತ್ಪನ್ನವು ಈ ಪ್ರಕಾರ—

೯೧೧೬ । ಐನ ಜಮಾ
೯೪೨೧ ಸಿವಾಯೆ ಜಮಾ
೧೮೫೩೭ । — ಒಟ್ಟು

ತರ್ಫ ವಟನಾಳದಲ್ಲಿ ೬ ಹಳ್ಳಿಗಳಿದ್ದು ಮೊಕಾಸಬಾಬಿನ ಸಲುವಾಗಿ ೫ ಹಳ್ಳಿಗಳನ್ನು ಬಿಟ್ಟರೆ, ೧ ಉಳಿಯುವದು. ಇದರ ಉತ್ಪನ್ನ—

೩೮೬ ।।। ಐನ ಜಮಾ
೯೮ । ಸಿವಾಯ ಜಮಾ
೪೮೫ ಒಟ್ಟು

ಫುಟಗಾವಗಳಲ್ಲಿ ೭ ಹಳ್ಳಿಗಳಿದ್ದು ಅವುಗಳ ಉತ್ಪನ್ನವು ಈ ಪ್ರಕಾರ—

೩೦೪೧೨ ॥ ಐನ ಜಮಾ
೪೩೪೯ - ಸಿವಾಯೆ ಜಮಾ
೩೦೮೪೬।।। ÷ ಒಟ್ಟು

ಇದಲ್ಲದೆ ಕಸಬೆ ಮೊರಬ (ಪ॥ ನವಲಗುಂದ) ಮೌಜೆ ಗುಮಗೋಳ (ಪ॥ ನವಲಗುಂದ), ಮೌಜೆ ಉಗರಗೋಳ (ಪ॥ ನವಲಗುಂದ) ಈ ಹಳ್ಳಿಗಳಿಂದ ೧/೩ (ತಿಜಾಯಿ) ಮೊಕಾಸಬಾಬ, ಅದರಂತೆಯೇ ಶ್ರೀ ರೇಣುಕಾ ಯಾತ್ರೆಯಿಂದ, ನಾಗನೂರ, ರೋಟಿಕವಾಡ, ತುರತುಕೋರಿ, ರಾಮಾಪೂರ, ಪಡೇಸೂರು ಇವುಗಳಿಂದ ಮೊಕಾಸಬಾಬು ಬಂತು. ತ॥ ಮಾರಡಗಿ, ಕರ್ಯಾತ ಯೆಕವಾಡಿ, ಕರ್ಯಾತ ಹೂಲಿ, ಧಾರವಾಡ ಪರಗಣೆ, ಪರಗಣೆ ಗದಗ ಇವುಗಳಿಂದ ಮೊಕಾಸಬಾಬ ಬಂದಿತು. ಮಸಾಲಾ, ನಜರ, ಹರಕಿ, ಗುನ್ಹೇಗಾರಿ ಮುಂತಾದ ಬಾಬಿಗಳಿಂದಲೂ ಹಣ ಬಂದಿತು.

*ಕಜ = ಕರ್ನಾಟಕ ಜಮಾವ, ಪುಣೆ ಪತ್ರಾಗಾರ (ಪೇಶವೆ ಪತ್ರಾಗಾರ)

| | |
|---|---|
| ೧೯೯೦೩ ।– | ತಿಜಾಯಿ |
| ೨೯೭೩೧ ।।। | ಮೊಕಾಸಬಾಬ |
| ೧೮೦೦ | ಕಮತ |
| ೫೦೮೩೫ । | ಒಟ್ಟು ಮೊಕಾಸಬಾಬ |

ಒಟ್ಟು ಎಲ್ಲ ಉತ್ಪನ್ನವು ೧೬೭೦೨೪ ॥=॥ ರೂ. ಆಯಿತು. ಈ ಉತ್ಪನ್ನದೊಳಗಿಂದ ಖರ್ಚು ಕೆಳಗೆ ಕಾಣಿಸಿದ ಸಂಗತಿಗಳ ಮೇಲೆ ಮಾಡಲಾಯಿತು:

ಕಾರಕೂನ ಹಾಗೂ ಕಮಾವೀಸದಾರರ ಪಗಾರ, ಕಂದಾಚಾರದ ಜನರ ಪಗಾರ, ದರಬಾರ ಖರ್ಚ, ವರ್ಷಾಸನ, ಜಮೀದಾರರ ಹಕ್ಕವರ್ತನೆ ಮುಂತಾದವುಗಳ ಮೇಲೆ ಖರ್ಚು ಮಾಡಲಾಯಿತು. ಜಮೀದಾರರಲ್ಲಿ ದೇಸಾಯಿ ನವಲಗುಂದಕರ, ದೇಸಾಯಿ ಸತ್ತಿಗೇರಿಕರ, ದೇಸಾಯಿ ಚಚಡಿಕರ, ದೇಶಪಾಂಡೆ ಸರಕಾರ ತೊರಗಲ, ದೇಶಪಾಂಡೆ ಪ॥ ಮುರಗೋಡ ಮುಂತಾದವರು ಇದ್ದರು. (ಕಜ : ೩೩೯ : ೩೨೪). ಕಾರಕೂನ ಹಾಗೂ ಕಮಾವೀಸದಾರರಲ್ಲಿ ಕೆಲವರು ಹೆಸರುಗಳು ಹೀಗೆ ಇದ್ದವು: ಧೊಂಡೋಕೃಷ್ಣ ಜೋಸೀ ಫಡಣೀಸ, ಆನಂದರಾವ ಭಿಕಾಜಿ ಫಡಕೆ ಜಮದಾರ, ಜನಾರ್ದನ ಮಹಾದೇವ ಹಶಮನೀಸ(ಕೋಟೆಯಲ್ಲಿ), ಬಾಲಾಜಿ ವಿಠ್ಠಲ ಪೋತನೀಸ, ಶಿವರಾಮ ಧೋಂಡದೇವ ಗೋಡಬೋಲೆ (ಹಶಮದಲ್ಲಿ ಬರೆಯುವ ಕೆಲಸಕ್ಕೆ), ಬಾಬುರಾವ ಶಂಕರ ಜೋಸೀ (ಠಾಣೆಯಲ್ಲಿ ಬೇರೆ ಚೌಕಿಯನ್ನು ಕಾಯಲಿಕ್ಕೆ), ಅಪ್ಪಾಜೀ ಶಂಕರ ದಪ್ತರದಾರ, ಚಿಂತೋ ಅಪ್ಪಾಜಿ ಭಾಉ ದಪ್ತರದಾರ, ಮಹಾದಾಜೀ ವಿಠಲ ಗೋಡಸೆ ಫಡಣೀಸ ಕರ್ಯಾತ ಸತ್ತೀಗೇರಿ, ರಾಮಚಂದ್ರ ಹರಿ ಮಜುಮದಾರ, ಬಚ್ಛಾಜೀ ವಿಶ್ವಾಸನಾಥ ಫಡಣೀಸ ಕರ್ಯಾತ ಸತ್ತೀಗೇರಿ ಹಾಗೂ ಕೇಸೋ ಅನಂತ ಅಭ್ಯಂಕರ ಫಡಣೀಸ ತರ್ಫ ಸಿಂದೋಗಿ (ತತ್ರೈವ) ಇದು ಆಯಿತು ಅಜಮಾಸಿನ ಪ್ರಕಾರ. ಆದರೆ ಪ್ರತ್ಯಕ್ಷ ಬಂದ ಉತ್ಪನ್ನವು 'ತೇರೀಜ ಜಮಾ ತಾ॥ ಮಸೋಲಿ' ಎಂಬ ಇನ್ನೊಂದು ಕಾಗದದಿಂದ ೧೮೮೮ರಲ್ಲಿಯ ಪರಿಸ್ಥಿತಿಯು ತಿಳಿಯುತ್ತದೆ:

| | |
|---|---|
| ಪರಗಣೆ ಮುರಗೋಡ | ೫೧೨೯೧೬ –॥ |
| ತರ್ಫ ಸಿಂದೋಗಿ | ೧೮೧೧೪೬ –॥। |
| ಕರ್ಯಾತ ಸತ್ತೀಗೇರಿ | ೧೨೧೨೦।।।≡ |
| ಪುಟಗಾವ | ೧೩೯೭೦।=। |
| ಮೊಕಾಸಬಾಬ ಮತ್ತು ಕಮತ | ೯೬೭೯ ।।।.।।। |

ಎರಡನ್ನೂ ಹೋಲಿಸಿ ನೋಡಿದರೆ ಪರಗಣ ಮುರಗೋಡಿನ ತರ್ಫ ಸಿಂದೋಗಿ ಉತ್ಪನ್ನವು ಕಡಿಮೆಯಾದದ್ದೂ, ಕರ್ಯಾತ ಸತ್ತೀಗೇರಿಯ ಉತ್ಪನ್ನವು ಹೆಚ್ಚಾಗಿದ್ದೂ ಕಂಡುಬರುತ್ತದೆ. ಪುಟಗಾವಿನ ಉತ್ಪನ್ನವಂತೂ ೩೦ ಸಾವಿರದಿಂದ ೧೩ ಸಾವಿರಕ್ಕೆ ಇಳಿಯಿತು. ಮುನವಳ್ಳಿ ತಾಲ್ಲೂಕಿನ ಒಟ್ಟು ಉತ್ಪನ್ನವು ೧೮೮೨ರಲ್ಲಿ ೧೬೭೦೨೪ ।।=।। ಇದ್ದು, ೧೮೮೮ರಲ್ಲಿ ೧೦೪೧೯೬ ।।.। ಆಯಿತು. ಅಂದರೆ ಸಾಧಾರಣ ೬೦,೦೦೦ ರೂ.ಯಕ್ಕಿಂತಲೂ ಉತ್ಪನ್ನವು ೧೮೮೮ರಲ್ಲಿ ಕಡಿಮೆಯಾಯಿತು.

ಇನ್ನು ಮುನವಳ್ಳಿ ತಾಲೂಕಿನೊಳಗಿನ ಭೂಮಿಯ ಪ್ರಕಾರ, ಕಂದಾಯ ವ್ಯವಸ್ಥೆ ಹೇಗೆ ಇತ್ತು ಎಂಬುದನ್ನು ನೋಡೋಣ. ೧೮೮೮ರಲ್ಲಿ ಮುನವಳ್ಳಿ ತಾಲೂಕಿನೊಳಗಿನ ಮುರಗೋಡ ಪರಗಣೆಯಲ್ಲಿಯ ಇಂಚಲಹಳ್ಳಿಯಲ್ಲಿ ೧೨೬ ಚಿಗರ ಭೂಮಿಯಿತ್ತು. (ಕಜ : ೩೬೪ : ೪೧೬). ಚಿಗರ ಎಂದರೆ ಮಾರ ಇಲ್ಲಿವೆ ಪಟ್ಟಿಯಂತೆ ಬೀಜವರಿಯ ಮೇಲೆ ಗೊತ್ತು ಮಾಡಿದ ಹೊಲದ ಒಂದು ಅಳತೆ.

ಪ್ರಸ್ತುತ ಇಂಚಲಹಳ್ಳಿಯಲ್ಲಿಯ ಒಟ್ಟು ೧೨೬ ಚಿಗರ ಹೊಲಗಳಲ್ಲಿ ಊರಿನ ವಸ್ತಿ, ದನಗಳಿಗೆ ಮೇಯಲಿಕ್ಕೆಂದು ಬಿಟ್ಟ ಹುಲ್ಲುಗಾವಲು, ದಿನ್ನೆಯ ಮೇಲಿದ್ದ ಭೂಮಿಯು ಮತ್ತು ಹಳ್ಳ ಹಾದ ಭೂಮಿಯು ಸಲುವಾಗಿ ೮ ।। = ಚಿಗರನ್ನು ಬಿಡಲಾಯಿತು. ಹದ್ದಿನೊಳಗೆ ೧೬।। ಚಿಗರು ಹೋಯಿತು. ಎರಡೂ ಕೂಡಿ ೨೪೬=ಚಿಗರು ಹೋಗಲಾಗಿ ೧೦೧।।।≡ ಚಿಗರು ಉಳಿಯಿತು. ಇದರೊಳಗಿಂದ ಸರ್ವಮಾನ್ಯ ಭೂಮಿಯೆಂದು ೨೬।= ಚಿಗರನ್ನು ಕಳೆಯಲಾಯಿತು. ಸರ್ವಮಾನ್ಯದಲ್ಲಿ ದೇಸಾಯಿ(ಚಚಡೀಕರ)ಯ ಕಮತದ ಹೊಲ, ನಾಡಗೌಡನ ಹೊಲ, ನಾಗೋ ಶಿವಾಜಿ ದೇಶಪಾಂಡೆಯ ಹೊಲ, ಸಿಲೀನಾಯಿಕ, ಲಿಂಗೀನಾಯಿಕ ಇವರ ಹೊಲ, ಕುಲಕರ್ಣಿ, ಗುರುವ ಪಟೇಲಣಿ, ತಳವಾರ, ಪೋತದಾರ, ಮಹಾರ ಹಾಗೂ ಗ್ರಾಮಜೋಶಿ ಇವರ ಹೊಲಗಳು ಇದ್ದವು.

ಜುಡೀಮಾನ್ಯದಲ್ಲಿ ಬಾಣಲಿಂಗ ನಾಯಿಕ, ಬಾಣ ಸಿವಿ ನಾಯಿಕ, ಕಡೋ ಗಿರಮಾಜಿ ಕುಲಕರ್ಣಿ, ಸಿದ ರಾಮಪ್ಪಾ ಹಿರೇಮಠ, ರಾಮಯಾ ಮಠದದೇವರು, ಕಂಬಾರ, ಬಡಿಗಿ ಇವರ ಹೊಲಗಳು ೨೫॥। ಚಿಗರು ಇದ್ದವು.

ಮಹಾಲಕ್ಷ್ಮೀ, ಗ್ರಾಮದೇವಿ, ಶ್ರೀ ಬಾಲಾನಾಥ ಶ್ರೀ ಕಾಲಭೈರವ, ಶ್ರೀ ಮುಖ್ಯಪ್ರಾಣ, ಬಸವೇಶ್ವರ, ಶ್ರೀ ದುರ್ಗಾದೇವಿ, ಶ್ರೀ ಮೈಲಾರಲಿಂಗ ಈ ದೇವ ಸ್ಥಾನಗಳಿಗೆಂದು ಒಟ್ಟು ೧ ಚಿಗರ ಹೊಲವನ್ನು ಬಿಡ ಲಾಗಿತ್ತು.

ಧರ್ಮಾದಾಯದಲ್ಲಿ ಗೋವಿಂದಭಟ ಮುರ ಗೋಡ, ಕಟ್ಟಿ ಆಚಾರಿ, ಕೇರನಾಥ ಬಾವಾ, ಮಹಾ ದೇವ ಭಟ್ಟ, ಪಾಂಡುರಂಗಭಟ್ಟ ಮುನವಳ್ಳಿ, ತಮಣಾ ಚಾರ್ಯ ಮುಂತಾಪವರಿಗೆ ೩॥ ಚಿಗರನ್ನು ಬಿಡಲಾಗಿತ್ತು. ಬಾಲಪರ ಪರವೇಶೀ ಬಲಸಿಂಗ ಮುನವಳ್ಳಿ ಇವನ ಸಲು ವಾಗಿ ೧ ಚಿಗರು ಇತ್ತು.

ಒಟ್ಟಿನ ಮೇಲೆ ಬಿಟ್ಟುಕೊಟ್ಟ ಭೂಮಿಯು—

೧ ದೇವಸ್ಥಾನ
೩॥ ಧರ್ಮಾದಾಯ
೧ ಬಾಲಪರವೇಸೀ
೨೬।= ಸರ್ವಮಾನ್ಯ
೨೫।।। ಜುಡೀಮಾನ್ಯ
———
೫೭॥= ಚಿಗರು ಇತ್ತು.

ಉಳಿದ ೪೪। ಚಿಗರುಗಳಲ್ಲಿ ೬೧ ಸೈನಿಕರಿಗೆ ೨೬೯ ÷ ಚಿಗರು ಕೊಡಲಾಯಿತು. ಉಳಿದ ೧೮೯☰ ಚಿಗರುಗಳಲ್ಲಿ—

೯॥-॥ ಚಾಲೀ ರೈತರ ಹತ್ತಿರ
೧। ಕೌಲಿ ಗುತ್ತಿಗೆ
೧ ಕಸ್ತ ಹೊಲ
೨।।। ಮಕ್ತಾ ಗುತ್ತಿಗೆ
೨।☰॥ ಪ್ರತಿ ಗುತ್ತಿಗೆ
———
೧೭೮– ಚಿಗರುಗಳನ್ನು ಕಳೆಯಲಾಗಿ ೧೯= ಚಿಗರು ಪಡಬಿದ್ದ ಹೊಲ ಉಳಿಯಿತು. (ಕಜ : ೩೬೪ : ೪೧೬).

ಮೌಜೆ ಜಾಲೀಕಟ್ಟಿ, ಮಜರೆ ಪಾಪಾಪುರ ಹಾಗೂ ರಾಮಾಪುರ ಈ ಮೂರೂ ಊರುಗಳ ಜಮೀನ ಝೂಡಾ(ಕಜ : ೩೬೪ : ೪೬೨)ದ ಪ್ರಕಾರ ೧೭೭೭ರಲ್ಲಿ ಈ ಊರಲ್ಲಿ ಒಟ್ಟು ೪೪। = ಚಿಗರು ಹೊಲಗಳಿದ್ದು, ಇದರಲ್ಲಿ—

೨॥= ಹದ್ದಿನಲ್ಲಿ ಹಾಗೂ ಗುಡ್ಡಗಾಡಿನಲ್ಲಿ

೨॥ ದೇವಸ್ಥಾನಗಳ ಸಲುವಾಗಿ, ಗ್ರಾಮ ಜೋಸಿಯ ಸಲುವಾಗಿ ಹಾಗೂ ಹೆಚ್ಚಿನ ಇನಾಮ ಮಕ್ತಾದ ಸಲುವಾಗಿ ದರೋಬಸ್ತ ಅಂದರೆ ಏನೂ ತೆರಿಗೆ ಇಲ್ಲದ ಹೊಲಗಳಿದ್ದವು.

೧೬ ಇನಾಮದಾರರ ಹಾಗೂ ಜುಡೀಮಾನ್ಯ ಹೊಲಗಳು ಉಳಿದ ೨೩। ಚಿಗರುಗಳಲ್ಲಿ

೪।।।= ಊರ ಸೈನಿಕರಿಗೆ/ಕಂದಾಚಾರಕ್ಕೆ

೩। ಪಡಬಿದ್ದ ಹೊಲ

ಉಳಿದ ೧೫೯=ಚಿಗರುಗಳಲ್ಲಿ

೩೯—ಚಾಲೀ
೭।—ಗುತ್ತಿಗೆ
೩।।। ಕೌಲ
೧ ಕೋರ
ಈ ಪ್ರಕಾರ ಹಂಚಿ ಹೋಗಿದ್ದವು.

ಈ ಊರಗಳಲ್ಲಿ ಈ ವರ್ಷ ಪಡಬಿದ್ದ ಕೆಲವು ಹೊಲಗಳನ್ನು ಸಾಗುವಳಿಯ ಕೆಳಗೆ ತಂದಂತೆ ಕಾಣಿಸುತ್ತದೆ (ತತ್ರೈವ).

೧೭೭೭ರಲ್ಲಿಯ ಹಿಸೇಬ ಕ॥ ಮುರಗೋಡ, ತಾ॥ ಮುನವಳ್ಳಿ(ಕಜ : ೩೬೪ : ೪೬೭)ಯ ಪ್ರಕಾರ ಕಸಬೆ ಮುರಗೋಡಿನಲ್ಲಿ ಹೊಲದ ಮೇಲಿನ ಪಟ್ಟಿಯು ೩॥ ಪಟ್ಟು ಇತ್ತು. ಇತರ ಕೆಲವು ಸ್ಥಳಗಳಲ್ಲಿದ್ದಂತೆ ೫ ಪಟ್ಟು ಅಲ್ಲ. ಇಲ್ಲಿ ಒಟ್ಟು ೮೨ ಚಿಗರ ಹೊಲಗಳಿದ್ದು, ಇದರ ಬಹುಭಾಗವು ಸರ್ವಮಾನ್ಯ ಮತ್ತು ಜುಡೀಮಾನ್ಯದೊಳಗೆ ಹೋಗಿದ್ದವು. ಇವುಗಳಲ್ಲಿ ದೇವಸ್ಥಾನದ ಹೊಲ, ಧರ್ಮಾದಾವ ಹೊಲ, ಇನಾಮ ಹೊಲ, ಬಾಜಿ (ಹೆಚ್ಚಿನ) ಇನಾಮದಾರರ ಹೊಲ, ಠಿಕಾಣ (ವಿಶಿಷ್ಟ ಭೂಒಡೆಯ)ದಾರರ ಹೊಲ(೧॥=)ಗಳಿದ್ದವು.

ಉಳಿದ ಹೊಲಗಳು ಖಾಲಸಾ ಹೊಲಗಳು. ಖಾಲಸಾ ಹೊಲಗಳಲ್ಲಿ ಚಾಲಿ ಹೊಲ, ಕೋರ ಹೊಲ, ಗುತ್ತಿಗೆ ಹೊಲ, ಮಕ್ತಾ ಹೊಲ ಮುಂತಾದವುಗಳು ಭೂಹಿಡುವಳಿಗಳ ಪ್ರಕಾರಗಳಿದ್ದವು (ತತ್ರೈವ). ೧೭೭೮ರ ಒಂದು ದಾಖಲೆ(ಜಮಾ ವಸೂಲ ಮೌಜೆ ಇಂಚಲ, ಪ॥ ಮುರಗೋಡ)ಯ ಪ್ರಕಾರ ಇಂಚಲ ಊರಿನ ಉತ್ಪನ್ನವು ಕೆಳಗೆ ತೋರಿಸಿದಂತೆ ಬೇರೆ ಬೇರೆ ಬಾಬುಗಳಿಂದ ಬರುತ್ತಿತ್ತು:

| | |
|---|---|
| ೧೮೧೧॥ | ಚಾಲೀದಾರರು |
| ೩೧೪ | ಗುತ್ತಿಗೆದಾರರು |
| ೨೬೭೫ | ಜುಡೀಪತನದಾರ |
| ೬೩೧।।। | ಸರ್ವಮಾನ್ಯ |
| ೪೮ | ಮೋಹತರ್ಫಾ |
| ೪೦ | ಅಡವಣಿ |
| ೫೫೨೦। | ಒಟ್ಟು |

ಖರ್ಚು ಕೆಳಗಿನ ಬಾಬುಗಳ ಮೇಲೆ ಮಾಡಲಾಯಿತು:

ಸುಭಾ ನಿಸಬತ

ಪೋಯಿನ ಖರ್ಚು (ಇದರಲ್ಲಿ ದೇಸಾಯಿ ಚಚಡೀಕರ, ಗ್ರಾಮಜೋಸಿ, ವರ್ತನಾ ಕುಲಕರ್ಣಿ, ನಾಗಪಂಚಮಿ ಬೆಲ್ಲ ಖೊಬ್ರಿ, ದೇವಸ್ಥಾನ–ನಜರ ಸಮಾರಾಧನಾ, ಶಿವರಾತ್ರಿ, ದುರ್ಗಾದೇವಿ ಮತ್ತು ಲಕ್ಷ್ಮೀದೇವಿಯ ಸಲುವಾಗಿ ೨ ಪಾತಳ (ಪತ್ತಲ), ೨ ಚೋಳೀ (ಖಣ, ಕುಬುಸ), ಪಟ್ಟಿಗೆ ಭೋಜನ ಖರ್ಚು, ಎಲ್ಲ ದೇವರಿಗೆ ನವರಾತ್ರಿ, ದೀಪಾವಳಿ ಖರ್ಚು, ಕಾರ್ತಿಕ ಖರ್ಚು ಅಡಕವಾಗಿದೆ—ವರ್ಷಾಸನ, ತಳವಾರ ಕಂಬಳಿ, ಪೀರ, ಸೈನಿಕನಿಗೆ ದಸರೆಗೆ ಆಡು)

ಸಿವಾಯ ಪೋಯಿನ ಖರ್ಚು (ಕಾಣಿಕೆ : ಕಲಾವಂತಿಣಿ ಚೆಚುರಕರ, ದಶಾವತಾರಿ, ಮಸಾಲಾ ಕಾಗದ ಖರೇದಿ, ಸಾದಿಲವಾರ ರೊಟ್ಟಿ ಪೋಳಿ, ವರಾತದಾರ ಪೋಟಗಿ, ಜೋಳ, ಗೋಧಿ, ಖಿಜಮತಗಾರ, ಧರ್ಮಾದಾವ ಬ್ರಾಹ್ಮಣ ಮುಂ. ರೋಸನಾಯಿ ಎಣ್ಣೆ, ಹೆಚ್ಚಿನ ಖರ್ಚು, ಸಿಮಗಾ (ಹುಗ್ಗಿ) ಖರ್ಚು, ವೇತನ ಖರ್ಚು)

ಉಳಿದದ್ದು ರಸದ ಜಮಾ (ತತ್ರೈವ).

ಕ್ರಿ. ಶ. ೧೭೬೦ರ ಮೌಜೆ ಮನೋಲಿ (ಅಂದರೆ ಮುನವಳ್ಳಿಹಳ್ಳಿ)ಯ ತಾಳೇಬಂದಿನ ಪ್ರಕಾರ, ಮುನವಳ್ಳಿಯು ಆಗ್ಗೆ ಸಿಂದೋಗಿ ತಾಲೂಕಿನಲ್ಲಿಯ ಒಂದು ಹಳ್ಳಿಯಾಗಿದ್ದಿತು. ಆ ವರುಷ ಈ ಹಳ್ಳಿಯ ಉತ್ಪನ್ನವು ರೂ. ೧೭೬೬ ಇತ್ತು. ಇದರ ವಿವರಗಳು ಕೆಳಗಿನಂತಿವೆ:

ಮುನವಳ್ಳಿಯ ಒಟ್ಟು ಉತ್ಪನ್ನವು ೧೧೫೪ ರೂ. ಇದ್ದು ಅದರಲ್ಲಿ ೨೨೪ ನಗದಿ ಹಣವಿತ್ತು ಮತ್ತು ಉಳಿದ ೯೩೦ ರೂ. ಹೊಲಗಳ ಕಂದಾಯದಿಂದ ಬಂದ ಉತ್ಪನ್ನವಿತ್ತು. ೨೨೪ ರೂ.ಗಳು ಮೋಹತರ್ಫ ಅಂದರೆ ಅಂಗಡಿ ಸುಂಕ, ಭೂಮಿಹೀನ ಕೆಲಸಗಾರರಿಂದ ಬಂದ ಹಣ ಹಾಗೂ ಆಯಗಾರರಿಂದ ಬಂದ ಹಣ ಇವೆಲ್ಲವನ್ನೂ ಒಳಗೊಂಡಿದ್ದವು. ಭೂಮಿಹೀನ ಕೆಲಸಗಾರರ ಹಾಗೂ ಆಯಗಾರರ ಸಂಖ್ಯೆಯು ೨೯ ಇತ್ತು. ಇವರಿಂದ ಬರುವ ೨೨೪ ರೂ. ಉತ್ಪನ್ನದಲ್ಲಿ ೧೨।।।* ಮೂಲ ಕಂದಾಯ (ಬೀಜ) ಇಲ್ಲವೆ ಸುಂಕವಿದ್ದು ೧ಕ್ಕೆ ೧೫ರ ದರದ ಮೇರೆಗೆ ೧೯೧। ಇಷ್ಟು ಪಟ್ಟಿಯು ಇತ್ತು. ಇದಲ್ಲದೆ ೨೦ ರೂ. ಗುತ್ತಿಗೆ ಕರಾರಿನಿಂದ ಬಂದಿತ್ತು.

ಮೋಹತರ್ಫದಲ್ಲಿ ೧೧॥ ಮೂಲ ಸುಂಕವಿದ್ದು ೧೭೨॥ ರೂ. ಅದರ ಮೇಲೆ ಪಾತ್ರ ೧೫ ಪಟ್ಟಿನಂತೆ ತೆಗೆದುಕೊಂಡ ಪಟ್ಟಿಯು ಆಯಗಾರರ ೨೦ ರೂ. ಆಯದ ಮೇಲೆ ಪಟ್ಟಿಯಿದ್ದಿದ್ದಿಲ್ಲ. ಈ ವರ್ಷ ಒಬ್ಬ ಕಮ್ಮಾರ ಮತ್ತು ಒಬ್ಬ ಬಡಗಿ ಹೆಚ್ಚಿಗೆ ಬಂದದ್ದರಿಂದ ಪ್ರತಿಯೊಬ್ಬರಿಂದ ಹಿಂದಿನ ವರ್ಷದಂತೆ ಹತ್ತತ್ತು ರೂ. ಕರಾರ ಮಾಡಿ ೨೦ ರೂ. ತೆಗೆದುಕೊಳ್ಳಲಾಯಿತು. ಒಟ್ಟಿನ ಮೇಲೆ ೨೨೪ ರೂ. ಬಂದವು.

* ಎಂದರೆ ೧೨ ರೂ. ೧೨ ಆಣೆ. ಪ್ರತಿಯೊಂದು ಉದ್ದಗೆರೆ(।) ಯಲ್ಲಿ ನಾಲ್ಕು ಆಣೆಗಳಿದ್ದು, ಪ್ರತಿಯೊಂದು ಅಡ್ಡಗೆರೆ(—)ಯಲ್ಲಿ ಒಂದು ಆಣೆ ಇರುತ್ತಿತ್ತು—ಕೃನಾಚಿ.

ಈ ಊರಲ್ಲಿ ಒಟ್ಟು ೪೨।* ಪಟ್ಟಿ, ಅಂದರೆ ೩೩೮ ಕೂರಿಗೆ ಇಲ್ಲವೆ ೧೫೨೧ ಬೀಘಾ ಹೊಲಗಳಿದ್ದವು. ಇವುಗಳಲ್ಲಿ ೩೩।।। ≡ ಹೊಲಗಳು ಇನಾಮ ಹೊಲಗಳಿದ್ದು ಉಳಿದ ೮।– ಹೊಲಗಳು ಮಾತ್ರ ರೈತರ ಸ್ವಂತ ಹೊಲಗಳಿದ್ದವು.

ಇನಾಮ ಹೊಲಗಳಲ್ಲಿ—

೬೦—ದೇವಸ್ಥಾನ, ನಾಡಗೌಡ, ವತನದಾರ, ದೇಸಾಯಿ ಮುಂತಾದವರ ಹತ್ತಿರ ಇದ್ದವು
೮೦ ≡ ಕಾಲಾಳು, ಕಂದಾಚಾರದವರ ಹತ್ತಿರ
೨।।। ≡* ಕಮತದಾರರ ಹತ್ತಿರ
. ॥ ≡ ಪಡ ಬಿದ್ದ ಹೊಲಗಳು
೦ ÷ ಧರ್ಮಾದಾಯ
.॥. ಮತ್ತೆ ದೇವಸ್ಥಾನಕ್ಕೆ
೧೫॥ ಇನಾಮುದಾರರ ಹತ್ತಿರ
———
೩೩।।। ≡ ಒಟ್ಟು ಇನಾಮ ಹೊಲಗಳು

ರೈತರ ಕಡೆಗಿದ್ದ ೮।– ಹೊಲಗಳಲ್ಲಿ
೭೦ ≡ ಚಾಲೀ ಹೊಲಗಳು
೧೦ = ಗುತ್ತಿಗೆ ಹೊಲಗಳು ಇದ್ದವು

೭೦ ≡ ಚಾಲೀ ಹೊಲಗಳ ವಾರ್ಷಿಕ ಉತ್ಪನ್ನವು ೮೬೯॥ ರೂ. ಇತ್ತು. ಇದರಲ್ಲಿ—

೧೪೭ ಬೀಜ (ಮೂಲ)
೭೨೨॥ ಪಟ್ಟಿ
———
೮೬೯॥

ಪಟ್ಟಿಯು ಬೀಜದ ೫ ಪಟ್ಟು ಇದ್ದು ಅದರೊಳಗಿಂದ ೧೨॥ ಕಡಿಮೆ ಮಾಡಲಾಗುತ್ತಿತ್ತು (೭೩೫)
೧೨॥
———
೭೨೨॥

೭೦ ≡ ಚಾಲೀ ಹೊಲಗಳಲ್ಲಿ
೫।।।– ಬೆದ್ದಲು
೧। = ಗದ್ದೆ ಇದ್ದವು
———
೭೦ ≡

೫॥।–ಬೆದ್ದಲು ಹೊಲಗಳ ಉತ್ಪನ್ನವು ೬೪೧॥ ರೂ. ಇತ್ತು.
೧। = ಗದ್ದೆ ಹೊಲಗಳ ಉತ್ಪನ್ನವು ೨೨೮ ರೂ. ಇತ್ತು.
———
೮೬೯॥ ಒಟ್ಟು

೫।।।– ಬೆದ್ದಲಿನಿಂದ ೬೪೧॥ ರೂ. ಉತ್ಪನ್ನ.

೫॥ ಬೆದ್ದಲು ಹೊಲ ಹೋದ ವರ್ಷದ ಪ್ರಕಾರ ಇದ್ದು ಈ ವರ್ಷ ।– ಹೊಲ ಹೆಚ್ಚಿಗೆ ಸಾಗುವಳಿ ಮಾಡಲಾಗಿ ಅದರ ಉತ್ಪನ್ನವು ೩೩ ರೂ. ಹೆಚ್ಚಿಗೆ ಬಂತು.

।– ಈ ಹೊಲದಲ್ಲಿ

। ಪಟ್ಟಿ (ಅಂದರೆ ೯ ಬೀಘಾ) ಹೊಲವು ಕಲ್ಲಣ್ಣ ಹಂಜಿಯ ಹೆಸರಿನಲ್ಲಿದ್ದು ಈಗ ಬಸಣ್ಣ ಜುಜನೂರ ಎಂಬ ಸೈನಿಕನ ಕೈಯಲ್ಲಿತ್ತು. ಈ

---

* ಒಂದು ಪಟ್ಟಿ ಹೊಲ ಎಂದರೆ ಒಂದು ಮಾರು ಹೊಲ. ವಿಜಯನಗರದ ಕಾಲದಲ್ಲಿ ಇದಕ್ಕೆ ವೆಂಕಟರಾಯಿ ಮಾರು ಎನ್ನುತ್ತಿದ್ದರು. ಪೇಶವೆಯವರ ಕಾಲದಲ್ಲಿ ಇದಕ್ಕೆಯೇ ಕೆಲವು ಕಡೆ ಪಟ್ಟಿ ಇಲ್ಲವೇ ಚಿಗರು ಎನ್ನುತ್ತಿದ್ದರು. ಒಂದು ಮಾರಿನಲ್ಲಿ ನಾಲ್ಕು ಹಾಗಗಳೂ, ಒಂದು ಹಾಗದಲ್ಲಿ ಎರಡು ಬೇಳೆಗಳೂ ಹಾಗೂ ಒಂದು ಬೇಳೆಯಲ್ಲಿ ಎರಡು ವೀಸಗಳೂ ಇದ್ದವು. ಒಂದು ಪೂರ್ಣ ಅಂಕಿಯಿದ್ದರೆ (೧) ಅದು ಪಟ್ಟಿಯನ್ನು ತೋರಿಸುತ್ತದೆ. ಅಂಕಿಯ ನಂತರ (೧।) ಉದ್ದಗೆರೆಯು ಹಾಗವನ್ನೂ ಅದರ ನಂತರ ಬರುವ ಅಡ್ಡಗೆರೆಯು (೧।–) ವೀಸವನ್ನೂ ತೋರಿಸುತ್ತವೆ. ಎರಡು ಅಡ್ಡಗೆರೆಯೆಂದರೆ ಒಂದು ಬೇಳೆಯಾಗುತ್ತದೆ. ಒಂದು ಮಾರಿನಲ್ಲಿ ೩೬ ಬೀಘಾ ಇಲ್ಲವೆ ೮ ಕೂರಿಗೆ ಹೊಲಗಳಿದ್ದವು. ಅಂದರೆ ಪಟ್ಟಿಯ ನಂತರ ಬರುವ ಪ್ರತಿಯೊಂದು ಉದ್ದಗೆರೆಯು ೯ ಬೀಘಾ, ೨ ಕೂರಿಗೆ ಮತ್ತು ಇದರ ನಂತರ ಬರುವ ಪ್ರತಿಯೊಂದು ಅಡ್ಡಗೆರೆಯು ಅರ್ಧ ಕೂರಿಗೆ ಇಲ್ಲವೆ ಎರಡೂ ಕಾಲು ಬೀಘಾ ಹೊಲಗಳನ್ನು ತೋರಿಸುತ್ತವೆ. ಉದಾಹರಣಾರ್ಥ—

೪೨.: ೪೨ ಮಾರು/ಪಟ್ಟಿ ಹೊಲ
೪೨। : ೪೨ ಮಾರು, ಎರಡು ಕೂರಿಗೆ (೯ ಬೀಘಾ) ಹೊಲ
೩೩।।।≡ : ೩೩ ಪಟ್ಟಿ, ೯ ಕೂರಿಗೆ (೨೭ ಬೀಘಾ), ೬ ೩/೪ ಬೀಘಾ
೮।– : ೮ ಪಟ್ಟಿ, ಎರಡು ಕೂರಿಗೆ, ಎರಡೂಕಾಲು ಬೀಘಾ.

ಸೈನಿಕನ ಕಡೆಯಿಂದ । ಪಟ್ಟಿ ಹೊಲದ ಮೇಲೆ
೪ ಬೀಜ ಹಾಗೂ
೨೧ ಪಟ್ಟಿ
—
೨೪ ಒಟ್ಟು

ಕಂದಾಯವು ಬಂದಿತು.

ಉಳಿದ–ಪಟ್ಟಿ (ಅಂದರೆ ೨ ೧/೪ ಬೀಘಾ) ಹೊಲವು ಪಡಬಿದ್ದಿದ್ದು ಮಹಾಲಿಂಗ ಜಂಗಮರ ಹೆಸರಿನಲ್ಲಿತ್ತು. ಇದಕ್ಕೆ

೧ ಬೀಜ
೫ ಪಟ್ಟಿ
—

ಅಂತೂ ೬ ರೂ ಕಂದಾಯವು ಬಂದಿತು.

ಒಟ್ಟು ।– ಪಟ್ಟಿ (ಅಂದರೆ ೧೧ ೧/೪ ಬೀಘಾ) ಹೊಲಕ್ಕೆ ೩೦ ರೂ. ಬಂತು, ಇದಲ್ಲದೆ ೩ ರೂ. ನಗದು ಹೆಚ್ಚಿಗೆ ಬಂತು. ಇದನ್ನು ಸಾಗುವಳಿಯ ಸಮಯದಲ್ಲಿ ದೊರಕಿಸಲಾಯಿತು (ಸಾಧಿಸಲಾಯಿತು). ಈ ೩ ರೂ.ಗಳಲ್ಲಿ .।।. ಬೀಜ ಹಾಗೂ ೨॥ ಪಟ್ಟಿ (೫ ಪಟ್ಟು) ಇತ್ತು.

೧। = ಗದ್ದೆಯಿಂದ ೩೮ ಬೀಜ
೧೯೦ ಪಟ್ಟಿ
——
ಅಂತೂ ೨೨೮ ರೂ. ಬಂದಿತು.

ನಿಜವಾಗಿಯೂ ಹಿಂದಿನ ಪದ್ಧತಿಯಂತೆ,

೧।=ಪಟ್ಟಿ ಹೊಲಕ್ಕೆ ೩೬ ಬೀಜ
೧೮೦ ಪಟ್ಟಿ
——
ಅಂತೂ ೨೧೬ ರೂ. ಇತ್ತು.

ಆದರೆ ಈ ವರ್ಷ ಸಾಗುವಳಿಯ ಸಮಯದಲ್ಲಿ ೧೨ ರೂ. ಹೆಚ್ಚಿನ ನಗದನ್ನು ಸಾಧಿಸಲಾಯಿತು. ಇದರ ವಿವರಗಳೇನೆಂದರೆ–

ಮರಿಯಣ್ಣನಿಂದ ೧ ಮೂಲ
೫ ಪಟ್ಟಿ
—
೬

ಹನಸಿಯಿಂದ ೧ ಮೂಲ
೫ ಪಟ್ಟಿ
—
೬
—
ಅಂತೂ ೧೨ ರೂ.

ಈ ಪ್ರಕಾರ ಬೆದ್ದಲಿನಿಂದ ೬೪೧॥ ಹಾಗೂ
ಗದ್ದೆಯಿಂದ ೨೨೮
——
ಅಂತೂ ೮೬೯॥ ರೂ, ಬಂದಿತು.

ಈ ಉತ್ಪನ್ನವು ಚಾಲೀ ಹೊಲಗಳಿಂದ ಬಂದದ್ದು. ಒಟ್ಟು ರೈತರ ೮।-ಪಟ್ಟಿ ಹೊಲಗಳಲ್ಲಿ

೭೯ ≡ ಪಟ್ಟಿ ಚಾಲೀ ಹೊಲಗಳಿದ್ದವು.

ಉಳಿದ ೧೯= ಪಟ್ಟಿ ಗುತ್ತಿಗೆ ಹೊಲಗಳಿಂದ ೬೦॥ ರೂ. ಉತ್ಪನ್ನ ಬಂದಿತು.

೧೯=ಪಟ್ಟಿ ಗುತ್ತಿಗೆ ಹೊಲದಲ್ಲಿ
।।। = ಗದ್ದಲು ಹಾಗು
। ಗದ್ದೆ ಇತ್ತು
—
೧೯= ಒಟ್ಟು.

।।। – ಇದಕ್ಕೆ ಮಕ್ತಾ ಉತ್ಪನ್ನವು ೪೫॥ ರೂ.
.।. ಇದಕ್ಕೆ ಮಕ್ತಾ ಉತ್ಪನ್ನವು ೧೫ ರೂ.
——
ಅಂತೂ ೬೦ ॥ ರೂ.

ಚಾಲಿಯಿಂದ ೮೬೯॥ ರೂ.
ಗುತ್ತಿಗೆಯಿಂದ ೬೦॥ ರೂ.
———
ಅಂತೂ ೯೩೦ ರೂ.

ಒಟ್ಟು ೨೨೪ ನಗದಿ ಉತ್ಪನ್ನ
೯೩೦ ಹೊಲದಿಂದ ಉತ್ಪನ್ನ
———
ಅಂತೂ ೧೧೫೪ ಉತ್ಪನ್ನ.

ನಗದಿ ಉತ್ಪನ್ನ ಹಾಗೂ ಹೊಲದಿಂದ ಬಂದ ಉತ್ಪನ್ನಕ್ಕೆ ಖೇರೀಜ ಜಮಾವನ್ನು ಕೂಡಿಸಿ ಒಟ್ಟು ಉತ್ಪನ್ನವನ್ನು ತೆಗೆಯಲಾಯಿತು.

ಖೇರೀಜ ಜಮಾ(ಹೊರತು ಉತ್ಪನ್ನ)ವು ೮೬೦ |||-||| ರೂ. ಇತ್ತು.

ಇದರಲ್ಲಿ ಒಟ್ಟು ೧೫॥ ಪಟ್ಟಿ ಹೊಲಗಳಿದ್ದು
೭।≡ ಪಟ್ಟಿ ಹೊಲಗಳ
ಮೇಲೆ ಏನೂ ತೆರಿಗೆ ಇರಲಿಲ್ಲ. ಉಳಿದ ೮೯– ಪಟ್ಟಿ ಹೊಲಗಳಿಂದ ಕೆಳಗೆ ಕಾಣಿಸಿದಂತೆ ತೆರಿಗೆಯನ್ನು ತೆಗೆದುಕೊಳ್ಳಲಾಯಿತು:

ಪಾಟೀಲ ೪॥=ಪಟ್ಟಿ ಹೊಲ ೫೯೦।≡ ರೂ. ತೆರಿಗೆ

| | |
|---|---|
| ಮಠಪತಿ ॥ | ೨೮ |
| ರಕ್ತಮಾನ್ಯ ೯÷ | ೭ |
| ದೇವಸ್ಥಾನ ೧೯= | ೪೫ |
| ತಳವಾರ .|||. | ೪೬ |
| ಮಹಾರ .||. | ೨೪ |
| ಪಟ್ಟಣಶೆಟ್ಟಿ .||. | ೨೧ |
| ೮೯÷ | ೭೯೧।≡। |

ಈ ತೆರಿಗೆಯು ಉತ್ಪನ್ನದಲ್ಲಿ ಮೂಲಬೀಜವೂ ಹಾಗೂ ಅದರ ಮೇಲೆ ೨॥ ಪಟ್ಟು ಪಟ್ಟಿಯೂ ಅಡಕವಾಗಿದೆ.

೧।÷ ಪಟ್ಟಿ ಜಪ್ತಿಹೊಲದಿಂದ ೮೭॥ ರೂ.
ಮನೆಗಳ ಬಾಡಿಗೆಯುಂದ ೧೧ ರೂ.

ಊರಲ್ಲಿ ಜಡ್ಡು ಜಾಪತ್ರೆಯಾಗಲು ದ್ಯಾಮವ್ವ, ದುರ್ಗವ್ವಾಲಾ ಉಡಿ ತುಂಬುವುದರ ಸಲುವಾಗಿ ಕುಳಾರಗವಾರ ದುಡ್ಡು ಕೂಡಿಸಿ ಖರ್ಚವಾದ ಮೇಲೆ ಉಳಿದ ಹಣ |||-||

ನಗದಿ ಉತ್ಪನ್ನ ೨೨೪
ಹೊಲದ ಉತ್ಪನ್ನ ೯೩೦ ಇವೆರಡೂ ಕೂಡಿ
———
ಐನ ಜಮಾ ೧೧೫೪ ಆಯಿತು.

ಇದರಲ್ಲಿ ಖರೀಜ ಜಮಾ ೮೬೦|||-||| ಕೂಡಿಸಲು
——————
ಒಟ್ಟು ೨೦೧೪|||-||| ಉತ್ಪನ್ನವು ಬಂದಿತು.

ಈ ಒಟ್ಟು ಉತ್ಪನ್ನದಿಂದ
೮೩।। ದರಬಾರ ಖರ್ಚು
ಹಾಗೂ ೧೬೫।-||| ಊರಿನ ಖರ್ಚು
————
ಅಂತೂ ೨೪೮|||-||| ಖರ್ಚು ಆಯಿತು.

ಒಟ್ಟು ಉತ್ಪನ್ನ ೨೦೧೪|||-||| ರೂ.ಗಳಿಂದ
ಒಟ್ಟು ಖರ್ಚು ೨೪೮॥।-||| ರೂ.ಗಳನ್ನು
—————
ಕಳೆಯಲಾಗಿ ೧೭೬೬ ರೂ. ಬಾಕಿ ಉಳಿಯಿತು,

ನಗದಿ ಹಣವನ್ನು ಕೊಡುವ ಅಂಗಡಿಕಾರರು. ಭೂಮಿಹೀನ ಕೆಲಸಗಾರರು ಹಾಗೂ ಆಯುಗಾರರು ಇವರ ಕಡಿಂದ ಪಟ್ಟಿಯನ್ನು ಬೀಜದ ೧೫ ಪಟ್ಟಿನಷ್ಟು, ರೈತರಿಂದ ೫ ಪಟ್ಟಿನಷ್ಟು ಮತ್ತು ಇನಾಮದಾರರಿಂದ ಬೀಜದ ೨॥ ಪಟ್ಟಿನಷ್ಟು ತೆಗೆದುಕೊಳ್ಳುತ್ತಿದ್ದರು.

ಕಂದಾಚಾರಕ್ಕೆಂದು ೮।≡ ಪಟ್ಟಿ ಹೊಲಗಳಿದ್ದು ಕಂದಾಚಾರದಲ್ಲಿ ೪೧ ಜನರಿದ್ದರು. ರುಸಕತ ಶೇಖ ಫಕೀರ, ಶೇಖ ಖುದಾವಂದ, ಕಾಮಣ್ಣಾ, ಹುಸೇನ, ಪರಸಣ್ಣಾ, ಬಸಣ್ಣಾ, ಹಣಮಣ್ಣಾ, ಲಿಂಗಣ್ಣಾ, ಕಮಾಲನಾಯಿಕ, ಶೇಖನೋತ, ಅಪ್ಪಣ್ಣಾ, ಶೇಖ ಅಮೀನ, ಹಣಮಣ್ಣಾ, ಚೆನ್ನಣ್ಣ,ಮುದಿನಾಯಿಕ, ಪರಪ್ಪ, ಮುದಿಯೆಣ್ಣ, ಭೀಮಣ್ಣ, ಲಿಂಗಾಜಿ ಮೋರೆ, ಶೇಖ ಅಮೀನ, ಲಗಮಣ್ಣ, ಆಜಣ್ಣ, ಯಂಕಣ್ಣ,ಭರಮಣ್ಣ,ಹೊನ್ನಣ್ಣ. ಸಣತಮ್ಮಾ, ಅಣ್ಣಪ್ಪ, ಗೌರಖಾನ, ಯಂಕಣ್ಣ, ಮತೆನಾಯಿಕ, ಅಪ್ಪಣ್ಣ, ನಾಗಣ್ಣ, ಯಲಿನಾಯಕ, ಸಕ್ಕರಿಅಣ್ಣ, ಕೆಂಚಣ್ಣ, ರಾಮಣ್ಣ, ತುಕೋಜಿ, ಆಜಣ್ಣ, ಲಿಂಗಣ್ಣ, ಶೇಖಮತೆ–ಹೀಗೆ ಅವರ ಹೆಸರುಗಳಿದ್ದವು. ಇವರಲ್ಲಿ ಮುಖ್ಯತಃ ಮುಸಲಮಾನರು, ಮರಾಠರು. ಲಿಂಗಾಯತರು ಮತ್ತು ಬೇಡರು ಇದ್ದಂತೆ ತೋರುತ್ತದೆ. ಭಟ್ಟ ಇಲ್ಲವೆ ಆಚಾರಿ ಎಂಬ ಹೆಸರುಳ್ಳ ಬ್ರಾಹ್ಮಣರು ಇದ್ದಂತೆ ತೋರುವುದಿಲ್ಲ.

ಇನಾಮ ಭೂಮಿಗಳನ್ನು ತೆಗೆದುಕೊಂಡವರಲ್ಲಿ ಶ್ರೀ ಪಂಚಲಿಂಗ ದೇವಸ್ಥಾನದ ಪೂಜಾರಿ, ಮುನೇಶ್ವರ ಮಹಾಪುರುಷ ಪ್ರಭು ಆಯ್ಯಾ, ಮಹಾಲಿನ ಇನಾಮದಾರರಾದ ನವಲಗುಂದಕರ ದೇಸಾಯಿ, ನಾಡಗೌಡ,

ದೇಶಪಾಂಡೆ, ವತನದಾರರು, ತಿರಕಂಭಟ್ಟ ಜೋಶಿ, ಕುಲಕರ್ಣಿ, ತೊರಗಲ ಕಾಜಿ, ಮುಲ್ಲಾ ಕಾನೇದ, ಬಾಜೀ ಇನಾಮದಾರರಾದ ಅಣ್ಣಾಜಿ ಪರಜಲಿ,ಸಣ್ಣಪ್ಪನಾಯಕ, ಶಾಮರಾವ ಮಗರ, ರಾಮಣ್ಣ ನಾಯಿಕ ಬದಾಮಿಕರ, ವ್ಯಂಕಪ್ಪನಾಯಿಕ ಬೆಟಗೇರೀಕರ, ನೀಲಕಂಠಯ್ಯ, ಪಶು ಪತಪ್ಪ, ಘಂಟೆ ಬಾರಿಸುವವನು ಮತ್ತು ರಾಚೋಟಿ ಅಪ್ಪಾ ಇವರು ಅಡಕವಾಗಿದ್ದರು.

ಹಳ್ಳಿಯ ತಾಳೇಬಂದಿನಕಿಂತ ಪೇಟೆಯ ತಾಳೇ ಬಂದು ಬೇರೆ ಇರುತ್ತದೆ. ತಾಳೇಬಂದ ಪೇಠ ಮುರಗೋಡ, ಪರಗಣೆ ಮುರಗೋಡ, ತಾಲುಕೆ ಮನೋಲಿ (ಕಜ : ೩೬೪ : ೪೬೩)ಯ ಪ್ರಕಾರ ೧೭೯೧ರಲ್ಲಿ ಮುರಗೋಡ ಪೇಟೆಯ ಉತ್ಪನ್ನವು ೩೪೧೦॥=ರೂ. ಇತ್ತು.

ಇದರಲ್ಲಿ,

೩೭೫॥ = ಐನಬೀಜ
೩೦ ಮಕ್ತಾ
————
೪೦೫॥=
೩೦೦೫ ಬೀಜದ ಮೇಲೆ ಪಟ್ಟಿ, ದರ ೮
——— ಪಟ್ಟಿನಂತೆ
೩೪೧೦॥ ಒಟ್ಟು

ಈ ಪಟ್ಟಣದಲ್ಲಿ ಪೇಠ ನವಾಪೂರ, ಪೇಠ ಗುಣ ಸಾಗರ ಮತ್ತು ಜುನೀ ಪೇಠ ಎಂದು ಮೂರು ಪೇಟೆ ಗಳಿದ್ದವು.

ಪೇಠ ನವಾಪೂರಿನಲ್ಲಿ ಕೆಳಗೆ ಕಾಣಿಸಿದ ಕಸಬುಗಾರ ರಿಂದ ೨೯೮೪॥=ರೂ. ಉತ್ಪನ್ನ ಬರುತ್ತಿತ್ತು. ಬಕಾಲ, ಸರಾಫ, ಚೊಲಸಿಂಪೀ, ತೇಲಿ, ಪಾನಾರಿ, ರಂಗಾರಿ, ಸೋನಾರ, ಕೋಸ್ಟಿ, ಬಾಜೇಖುದ, ಚೌಂಭಾರ, ಹಾಗೂ ಖಾಟೀಕ.

ಪೇಠ ಗುಣಸಾಗರದಿಂದ ೨೯೬ ರೂ. ಬಂದವು. ಬಕಾಲ, ಚೊಲಸಿಂಪೀ, ಕೋಸ್ಟಿ, ಸಾಳಿ ಮತ್ತು ಬಾಜೇ ಖುದ.

ಜುನೀಪೇಠದಿಂದ ಗುತ್ತಿಗೆ ಮಕ್ತಾದಿಂದ ೩೦ ರೂ. ಬಂದವು. ಒಟ್ಟು ೩೪೧೦॥=ರೂ. ಉತ್ಪನ್ನ ಬಂದಿತು.

ಇದರಲ್ಲಿಯೂ ಮೂಲಹಣವು ಮತ್ತು ಅದರ ಮೇಲೆ ೮ ಪಟ್ಟು ಪಟ್ಟಿ ತೆಗೆದುಕೊಳ್ಳಲಾಗುತ್ತಿತ್ತು (ತತ್ರೈವ).

೧೭೭೭ರಲ್ಲಿ ಈ ಪೇಟೆಯು ಇನ್ನೂ ವಿಕಾಸ ಹೊಂದಿದ್ದಿಲ್ಲ. ಇದೇ ವರ್ಷದ ಹಿಸೇಬ ಪೇಠ ಕ॥ ಮುರಗೋಡ ತಾ॥ ಮನೋಲಿ ಈ ದಾಖಲೆ(ಕಜ : ೩೬೪ : ೪೫೯)ಯ ಪ್ರಕಾರ ಈ ವರ್ಷ ಈ ಕಸಬೆಯ ಮೇಲೆ ರಾಜಶ್ರೀ ಪರಶರಾಮ ರಾಮಚಂದ್ರ (ತಾಸಗಾವ ಕರ ?) ಇವರ ಅಧಿಕಾರವಿದ್ದು ಇವರ ವತಿಯಿಂದ ಅಂತಾಜಿ ಸಖದೇವ ಇವನು ಕಸಬೆಯ ಆಡಳಿತವನ್ನು ನೋಡುತ್ತಿದ್ದನು. ಇದರ ಹಿಂದಿನ ವರ್ಷ ಅಂದರೆ ೧೭೭೬ರಲ್ಲಿ ರಾಮಚಂದ್ರ ಮಹಾದೇವನ ಅಧಿಕಾರವಿದ್ದು ಅವನ ವತಿಯಿಂದ ಸದಾಶಿವ ಕೃಷ್ಣನು ಆಡಳಿತವನ್ನು ನೋಡುತ್ತಿದ್ದನು.

೧೭೭೭ರಲ್ಲಿ ಜುನೀಪೇಠದಿಂದ ಏನೂ ಉತ್ಪನ್ನ ವಿದ್ದಂತೆ ಕಾಣುವದಿಲ್ಲ. ಪೇಠ ನವಾಪುರದಲ್ಲಿ ಬಕಾಲ, ಸಿಂಪಿ, ತೇಲಿ, ಪಾನಾರಿ. ಸೋನಾರ, ಸರಾಫ, ಕೋಸ್ಟಿ, ರಂಗಾರಿ ಮತ್ತು ಬನಕೋಬಾ ಇವರಿಂದ ೩೧೮೨॥ ರೂ. ಉತ್ಪನ್ನ ಬರುತ್ತಿತ್ತು, ಪೇಠ ಗುಣಸಾಗರದಲ್ಲಿ ಬಕಾಲ, ಚೋಲಿ ಸಿಂಪಿ, ಸಾಲಿ, ಕೋಸ್ಟಿ ಹಾಗೂ ಬನಕೋಬಾ ಇವರಿಂದ ೩೧೫।।। ರೂ. ಬಂದವು. ಅಂತು ೩೪೯೮। ರೂ.ಯ ಉತ್ಪನ್ನವು ಬಂದಿತು (ತತ್ರೈವ).

ಕರ್ನಾಟಕ ಪತ್ರಾಗಾರದಲ್ಲಿ ಸಿಕ್ಕ ಶೇಷಾದ್ರಿ ಕಾಗದ ಗಳಲ್ಲಿ ಕ್ರಮಾಂಕ ೩೦ನೆಯ ದಾಖಲೆಯು (ಯಾದೀ ಹಾಸೀಲ ಜಕಾತ ಸುಭಾ ಮನೋಲಿ, ಕರ್ನಾಟಕ ಆರ್ಕಾ ಯಿವ್ಸ, ಶೇಷಾದ್ರಿ ಪೇಪರ್ಸ, ನಂ. ೩೦) ಪ್ರಕಾರ ೧೮೩೭ರಲ್ಲಿ ಬೇರೆ ಬೇರೆ ಮಾರ್ಗಗಳ ಮೇಲೆ ತೆಗೆದು ಕೊಂಡ ದಾರೀಸುಂಕ(ಜಕಾತ)ದ ಲೆಖ್ಖವನ್ನು ಕೊಡ ಲಾಗಿದೆ.

ಮುನವಳ್ಳಿಯಿಂದ ಸರಕುಗಳನ್ನು ಹೊರಗೆ ಕಳಿಸು ವದಕ್ಕೆ ಹಾಗೂ ಹೊರಗಿನಿಂದ ಒಳಗೆ ತರಲಿಕ್ಕೆ ೩ ಮಾರ್ಗ ಗಳಿದ್ದವು. ಅವ್ಯಾವವೆಂದರೆ, ತೊರಗಲ ಮಾರ್ಗ, ಸೂಲದಕಟ್ಟೆ ಮಾರ್ಗ ಮತ್ತು ನದೀಮಾರ್ಗ. ನೀಲಕಂಠೀ ಮತ್ತು ಪೀರಖಾನೀ ಈ ಎರಡು ಪ್ರಕಾರದ ರೂಪಾಯಿ ಗಳಲ್ಲಿ ಸುಂಕವನ್ನು ಕೊಡುತ್ತಿದ್ದರು. ಇದರಲ್ಲಿಯೂ ಹೊಸ ರೊಕ್ಕ ಮತ್ತು ಹಳೆ ರೊಕ್ಕ ಎಂದು ವ್ಯತ್ಯಾಸವಿತ್ತು.

೧೮೨೭ರ ರಮಜಾನ ಅಥವಾ ಚೈತ್ರಮಾಸದಲ್ಲಿ ಮಂಗಳವಾರ ೧೨ನೆಯ ದಿನಾಂಕಕ್ಕೆ ತೊರಗಲ ಮಾರ್ಗದಿಂದ .।।।೩, ಸೂಲದಕಟ್ಟೆ ಮಾರ್ಗದಿಂದ ೨।।೬ ರೂ. ಸುಂಕ ಬಂದಿತು. ಹೊಸರೊಕ್ಕದಲ್ಲಿ ಈ ಸುಂಕವನ್ನು ಕೊಡಲಾಯಿತು. ಭತ್ತ(?), ಎಣ್ಣೆ, ಕುಸಬಿ, ಸೊಪ್ಪೆ ಮುಂತಾದ ಸರಕುಗಳನ್ನು ಎತ್ತಿನ ಮೇಲೆ ಹೇರಿ ಹೂಲೀಕಟ್ಟಿ, ಕಣಕೀಕೊಪ್ಪ, ಸತ್ತೀಗೇರಿ, ಕೌಜಲಗಿ, ಯಾದವಾಡ, ಚೆಂದರಗಿ, ಚುಳಕಿ, ಹೊರಹಟ್ಟಿ, ಹುಬ್ಬಳ್ಳಿ ಮುಂತಾದ ಊರುಗಳಿಂದ ಮುನವಳ್ಳಿಗೆ ಮಾರಾಟಕ್ಕೆ ತರುತ್ತಿದ್ದರು (ತತ್ರೈವ).

ಪೇಶವೆ ಕಾಲದಲ್ಲಿಯೂ ವ್ಯಾಪಾರೀ ಮಾರ್ಗಗಳೂ, ಸರಕುಗಳ ಪ್ರಕಾರಗಳೂ ಸಾಮಾನ್ಯವಾಗಿ ಇದೇ ಪ್ರಕಾರ ಇದ್ದವು ಎಂದು ಊಹಿಸಲು ಅಡ್ಡಿಯಿಲ್ಲ. ಉತ್ಪನ್ನ, ತೆರಿಗೆ, ಸುಂಕ ಇವುಗಳಲ್ಲಿ ಹೆಚ್ಚು ಕಡಿಮೆಗಳಿದ್ದರೂ ಒಟ್ಟು ವ್ಯಾಪಾರೀ ಪದ್ಧತಿಯು ಈ ತೆರನಾಗಿತ್ತೆಂದು ಹೇಳಬಹುದು.*

---

* ಈ ಲೇಖನವನ್ನು ಪೇಶವೆ ದಫ್ತರ, ಪುಣೆ ಹಾಗೂ ಕರ್ನಾಟಕ ಪತ್ರಾಗಾರ, ಬೆಂಗಳೂರು ಇಲ್ಲಿಯ ಅಪ್ರಕಾಶಿತ ಮೂಲ ಮೋಡಿ ಕಾಗದ ಪತ್ರಗಳ ಮೇಲೆ ಆಧಾರಿಸಿ ಬರೆಯಲಾಗಿದೆ–ಕೃನಾಜಿ.

ಕೆಳದಿ ಗುಂಡಾಜೋಯಿಸ್

# ಕೆಳದಿ ಸಂಸ್ಥಾನದ ಇಕ್ಕೇರಿಸೀಮೆ ಕೈಫಿಯತ್ತು

ಕ್ರಿಸ್ತಶಕ ೧೫೬೫ರಲ್ಲಿ ವಿಜಯನಗರದ ಪತನಾನಂತರ ದಕ್ಷಿಣ ಭಾರತದಲ್ಲಿ ಒಂದು ರೀತಿಯ ಅಸ್ಥಿರತೆಯ ವಾತಾವರಣ ಉಂಟಾಗಿದ್ದರಿಂದ, ರಾಜಕೀಯ ಸಮತೋಲನದಲ್ಲಿ ಇತಿಹಾಸದ ಮೂಲಸಾಮಗ್ರಿಗಳಿಗೂ ಹಲವು ವಿಧವಾದ ಅಸ್ಪಷ್ಟತೆಯು ತಲೆದೋರಿತು, ತಲೆದೋರಿತ್ತು. ಕರ್ನಾಟಕ ರಾಜ್ಯ ಪತ್ರಾಗಾರದ ಆರಂಭ ನಿರ್ದೇಶಕರಾದ ಡಾ॥ ದೇಶಿಕಾಚಾರ್‌ರವರೇ ತಮ್ಮ ಲೇಖನವೊಂದರಲ್ಲಿ[1] ನಿರೂಪಿಸಿದಂತೆ ಈ ದಿಸೆಯಲ್ಲಿ ಸಂಶೋಧನೆ ಹಾಗೂ ಸಶಾಸ್ತ್ರೀಯ ಅಧ್ಯಯನದ ಕೊರತೆಯೇ ಕಾರಣವಾಗಿದೆ. ವಿಜಯನಗರದ ನಂತರ ಆಳಿದ ಅನೇಕ ಪಾಳೆಯಗಾರರುಗಳ ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಇತಿಹಾಸಗಳು ಮೂಲ ಸಾಮಗ್ರಿಗಳಲ್ಲಿ ತನ್ನದೇ ಆದ ಕ್ಲಿಷ್ಟ ಸಮಸ್ಯೆಗಳನ್ನು ಎದುರಿಸುತ್ತಿವೆ. ಪಾಳೆಯಗಾರರ ನಂತರ ಆಳಿದ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಒಂದೆಡೆ, ಮಗದೊಂದೆಡೆಯಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ಮತ್ತು ಪೋರ್ಚುಗೀಸರು ಮಹತ್ವಾಕಾಂಕ್ಷಿಗಳಾಗಿ ಭಾರತದ ನೂತನ ಚರಿತ್ರೆಯನ್ನು ರೂಪಿಸುತ್ತಿದ್ದರು. ಬ್ರಿಟಿಷರು ದೇಶೀಯ ಸಾಹಿತ್ಯ ಹಾಗೂ ಸಂಸ್ಕೃತಿಗಳ ಅರಿವನ್ನು ಪಡೆದುಕೊಳ್ಳಲು, ವಾಸ್ತುಶಿಲ್ಪ, ಶಾಸನಗಳ ಅಧ್ಯಯನ, ಪ್ರಾಚೀನ ಗ್ರಂಥಗಳ ಶೋಧನೆ, ಶಬ್ದಕೋಶಗಳ ರಚನೆ ಮುಂತಾದ ಜ್ಞಾನೋತ್ತೇಜಕ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಹಲವು ರೀತಿಗಳಲ್ಲಿ ಯಶಸ್ಸನ್ನು ಸಾಧಿಸಿದರು. ಕ್ರಿ. ಶ. ೧೭೫೪–೧೮೨೧ರಲ್ಲಿದ್ದ ಕರ್ನಲ್ ಮೆಕಂಜಿಯು ಸ್ಥಳೀಯ ಐತಿಹಾಸಿಕ ಸಾಮಗ್ರಿಗಳನ್ನು ತನ್ನದೇ ಆದ ಪರಂಪರೆಯಲ್ಲಿ ದೇಶೀಯ ಪಂಡಿತರ ಸಹಾಯದಿಂದ ರೂಪಿಸಿದನು. ಈತನ ಸಂಗ್ರಹಗಳು 'ಕೈಫಿಯತ್ತುಗಳು' (ಮೆಕಂಜಿ ಸಂಗ್ರಹಗಳು) ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ.

**ಮೆಕಂಜಿ ಸಂಗ್ರಹಗಳು :** ಕೈಫಿಯತ್ತು ಎಂದರೆ ವಿವರಣೆ ಅಥವಾ ಹೇಳಿಕೆ ಎಂದು ಅರ್ಥವಾಗುತ್ತದೆ. ಡಾ॥ ಜಿ. ವರದರಾಜರಾಯರು ಇದನ್ನು ವಿಶದೀಕರಿಸುತ್ತಾ, ಕೈಫಿಯತ್ತುಗಳು ಅಥವಾ ಸ್ಥಳಗಳಿಗೆ ಸಂಬಂಧಪಟ್ಟ ಲಿಖಿತ ಮಾಹಿತಿಗಳು ; ಅವುಗಳಲ್ಲಿ ಉಲ್ಲೇಖನಗೊಂಡಿರುವ ಕೆಲವು ಸಂಗತಿಗಳಾದರೂ ಸಮಕಾಲೀನ ಕೃತಿಗಳಲ್ಲಿ ನಮ್ಮ ಚರಿತ್ರಕಾರರಿಗೆ ವಿಶ್ವಸನೀಯ ಸಾಕ್ಷ್ಯವಾಗಬಲ್ಲವು ಎಂದಿರುವರು. ಇವುಗಳ ಚಾರಿತ್ರಿಕ ಮೌಲ್ಯಗಳನ್ನು ಡಾ॥ ಪಿ. ಬಿ. ದೇಸಾಯರು ಈ ರೀತಿ ವಿಶದೀಕರಿಸಿದ್ದಾರೆ: Stepping further, we come to another class of sources which outweigh the other catagories by their number and volume.... They are the local Kaifiyats or the village chronicals compiled at a later date. Their information is generally based on second

1 Archival Wealth and Post Vijayanagara Karnataka History—Q.J.M.S., Vol. LXVIII, No. 2, April-June 1977 ; ಡಾ॥ ಸೂರ್ಯನಾಥ ಕಾಮತ್‌ರವರ 'ಐತಿಹಾಸಿಕ ದಾಖಲೆಗಳ ಅಧ್ಯಯನ', ಪ್ರಜಾವಾಣಿ, ೧–೨–೧೯೭೭ ರಲ್ಲಿನ ಲೇಖನವನ್ನು ನೋಡಿ.

traditions unverified reports and other miscellaneous stuff. But they have their own place in the scheme of historical studies.[2]

ದಕ್ಷಿಣಕನ್ನಡದಲ್ಲಿ 'ಕೈಪೇತ್', 'ಕೈಪೊತ್ತು' ಎಂದು ರೂಪಾಂತರಗೊಂಡು ಇದರ ಅರ್ಥ 'ವ್ಯಾಜ್ಯ', 'ದಾವೆ' ಎಂದೇ ಹೆಚ್ಚು ಪ್ರಚಲಿತವಾಗಿದೆ.[3] ಕೈಫಿಯತ್ತುಗಳು ಚಾರಿತ್ರಿಕಾಂಶ ಸ್ಥಳಪುರಾಣ, ಜನಜನಿತ ಕಲ್ಪಿತ ವಿಷಯಗಳನ್ನೊಳಗೊಂಡ ಬರಹಗಳಾಗಿಯೂ ಇವೆ. ಕ್ರಿ. ಶ. ೧೭೫೪ ರಿಂದ ೧೮೨೧ರವರೆಗೆ ಕಂಪೆನಿ ಸರಕಾರದ ಸೈನ್ಯಾಧಿಕಾರಿ ಹಾಗೂ ಇಂಜಿನೀಯರ್ ಆಗಿದ್ದ ಕರ್ನಲ್ ಮೆಕಂಜಿಯು ಮಧ್ಯ ಹಿಂದೂಸ್ಥಾನದಿಂದ ಆರಂಭಿಸಿ ದಕ್ಷಿಣದ ವಿವಿಧ ಭಾಗಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು, ಸಾವಿರಾರು ಹಸ್ತಪ್ರತಿಗಳು, ಶಿಲಾಶಾಸನ ಪ್ರತಿಗಳು, ಭಾಷಾಂತರಗಳು ಸೇರಿ ಈ ಕೆಳಗಿನಂತೆ ಸುಮಾರು—

| | | |
|---|---|---|
| ೧. | ಸಾಹಿತ್ಯ ಸಂಬಂಧ ಹಸ್ತಪ್ರತಿಗಳು | ೧೫೬೮ |
| ೨. | ಸ್ಥಳೀಯ ಪತ್ರಾವಳಿ ಕೈಫಿಯತ್ತುಗಳು | ೨೦೭೦ |
| ೩. | ಶಿಲಾಶಾಸನ ಪ್ರತಿಗಳು | ೮೦೭೬ |
| ೪. | ಭಾಷಾಂತರಗಳು | ೨೧೫೦ |
| ೫. | ನಕ್ಷೆಗಳು ಮತ್ತು ರೇಖಾಚಿತ್ರಗಳು | ೨೭೦೦ |
| ೬. | ನಾಣ್ಯಗಳು | ೬೧೨೮ |
| ೭. | ಪುರಾತನ ವಿಗ್ರಹಗಳು | ೧೪೬ |
| | ಒಟ್ಟು | ೨೨,೮೩೮ |

ಹೀಗೆ ಒಂದು ಸಂಸ್ಥೆಯು ಮಾಡಲಾರದ ಕೆಲಸವನ್ನು ಪವಾಡಸದೃಶದಂತೆ ಮೆಕಂಜಿಯು ಒಬ್ಬನೇ ಮಾಡಿ ತೋರಿಸಿದನು. ಈ ಸಂಗ್ರಹಗಳನ್ನೆಲ್ಲ ಕ್ರಮಬದ್ಧವಾಗಿ ಜೋಡಿಸಿ ಅಧ್ಯಯನಕ್ಕೆ ಒಳಪಡಿಸಲು ಅವನ ಜೀವನವೃತ್ತಿಯು ಅಡ್ಡಿಯುಂಟು ಮಾಡಿತು. ಈ ಕಾರಣಗಳಿಂದಲೇ ಅವನ ಕಾಲಾನಂತರ ಆ ಸಂಗ್ರಹಗಳಲ್ಲಿ ಬಹುಪಾಲು ಸಾಮಗ್ರಿಗಳು ಗೆದ್ದಲು ಹುಳುಗಳಿಗೆ ಆಹಾರವಾಗಿ ವಿನಾಶವನ್ನು ಹೊಂದಿದವು. ಹಲವು ಸಂಗ್ರಹಗಳು ಇಂಗ್ಲೆಂಡಿಗೆ ರವಾನಿಸಲ್ಪಟ್ಟವು. ಉಳಿದವುಗಳನ್ನು ಸಿ. ಪಿ. ಬ್ರೌನ್ ಪ್ರತಿಮಾಡಿಸಿ ಮದರಾಸಿನ ಪ್ರಾಚ್ಯ ಹಸ್ತಪ್ರತಿ ಭಂಡಾರದಲ್ಲಿ ಶೇಖರಿಸಿಟ್ಟನು. ಸ್ಥಳೀಯ ಐತಿಹ್ಯಗಳು, ಸ್ಥಳಪುರಾಣಗಳು ಮುಂತಾದವುಗಳನ್ನೊಳಗೊಂಡ ಈ ಬರಹಗಳು 'ಕೈಫಿಯತ್ತುಗಳು' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಮದರಾಸ್ ಸರಕಾರದ ಸಹಾಯದಿಂದ ಇವುಗಳ ಮುಂದಿಯನ್ನು ಸಿದ್ಧಪಡಿಸಿ ೧೯೫೨ರಲ್ಲಿ ಪ್ರಕಟಿಸಲಾಗಿದೆ.[4]

ಸಂಖ್ಯೆ ೨ನೇ ೨೦೭೦ ಸ್ಥಳೀಯ ಪತ್ರಾವಳಿ ಕೈಫಿಯತ್ತುಗಳಲ್ಲಿ ಈ ಕೆಳಕಂಡ ಸಂಖ್ಯೆಗಳ ಕೈಫಿಯತ್ತುಗಳು ತಾಳೆಯೋಲೆ ಮತ್ತು ಕಡತಗಳಲ್ಲಿ ಉಲ್ಲೇಖನಗೊಂಡಿವೆ :

ತಾಳೆಯೋಲೆ :

೧. ೧೨೯೯ ಮರದಾಳ ಕೈಫಿಯತ್ತು
೨. ೧೪೧೬ ವಿಜಯನಗರದ ಕೈಫಿಯತ್ತು

ಕಡತಗಳು :

೧. ೧೪೪೧ ವೆಂಕಟಪುರದ ವೈಷ್ಣವರ ಕೈಫಿಯತ್ತು
೨. ೧೯೯ ಹಳೆಯಬೀಡು ಕೈಫಿಯತ್ತು
೩. ೧೭೧೭ ಹಾರನಹಳ್ಳಿ ಕೈಫಿಯತ್ತು

ಹೀಗೆ ಈಗಿನ ಮೆಕಂಜಿ ಸಂಗ್ರಹದಲ್ಲಿ ಎರಡು ಕೈಫಿಯತ್ತುಗಳು ತಾಳೆಯೋಲೆಗಳಲ್ಲಿಯೂ ಮೂರು

2 Dr. G. Varadaraja Rao : 'Kaifiyats in Kannada', Shrikantika, Dr. S. Shrikanta Sastry Felicitation Volume, 1973, pp. 187–194

3 ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿ ಚಾರಿತ್ರಿಕ ದಾಖಲೆಗಳ ಸಮೀಕ್ಷೆ ಕೈಗೊಂಡಿರುವ ನನ್ನ ಅನ್ವೇಷಣೆಯಲ್ಲಿ ಇವು ಕಂಡುಬಂದಿವೆ. ಉದಾ : ಕೆನರಾ ಜಿಲ್ಲಾ ಮ್ಯಾಜಿಸ್ಟ್ರೇಟ್ ಅಧಿಕಾರ ಸ್ಥಾನಕ್ಕೆ ಶ್ರೀ ಧರ್ಮಸ್ಥಳದ ಶ್ರೀ ಕುಮಾರ ಹೆಗ್ಗಡೆಯವರ ಪುತ್ರ ಶ್ರೀ ಚಂದ್ರಯ್ಯ ಹೆಗ್ಗಡೆಯವರ ಕೈಫಿಯತ್ತು (ಸಂ. ೩೦೨೯, ತಾ॥ ೨೨-೯-೧೮೩೫). ಇವಕ್ಕೆ ಪ್ರೋತ್ಸಾಹ ನೀಡುತ್ತಿರುವ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರಿಗೆ ಸಂಶೋಧಕರ ಪರವಾಗಿ ನನ್ನ ಕೃತಜ್ಞತೆಗಳು. ಈ ದಿಸೆಯಲ್ಲಿ ಸಹಕರಿಸುತ್ತಿರುವ ಶ್ರೀ ಉಮಾನಾಥ ಶಣೈರವರನ್ನೂ ಮರೆಯಲಾರೆನು.

4 An Alphabetical Index of Kannada Manuscripts in Govt. OML, Madras, 1952

ಕೈಫಿಯತ್ತು ಕಡತಗಳಲ್ಲಿಯೂ ಉಪಲಬ್ಧವಿವೆ.[5] ಅನೇಕ ಮೂಲಸಾಮಗ್ರಿಗಳೂ ಲಂಡನ್‌ನಲ್ಲಿರುವ ಬ್ರಿಟಿಷ್ ಮ್ಯೂಸಿಯಂನಲ್ಲಿವೆ.[6]

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆಯಲ್ಲಿ ಡಾ॥ ಕೆ. ಕುಶಾಲಪ್ಪಗೌಡರು ಹಾಗೂ ಶ್ರೀ ಕೆ. ಚಿನ್ನಪ್ಪಗೌಡರಿಂದ ಸಂಪಾದಿಸಲ್ಪಟ್ಟ ಕೃತಿಯಲ್ಲಿ ಕೇವಲ ದಕ್ಷಿಣಕನ್ನಡ ಜಿಲ್ಲೆಯ ಕೈಫಿಯತ್ತುಗಳು ಮಾತ್ರ ಪ್ರಕಟವಾಗಿವೆ. ಬ್ರಿಟಿಷ್ ಮ್ಯೂಜಿಯಂನಲ್ಲಿರುವ ಕನ್ನಡ ಕೈಫಿಯತ್ತುಗಳನ್ನು ವಿಶ್ವವಿದ್ಯಾಲಯದ ಧನಸಹಾಯ ಆಯೋಗದ ಆರ್ಥಿಕ ಸಹಕಾರದಿಂದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕ ಡಾ॥ ಎಂ. ಎಂ. ಕಲ್ಬುರ್ಗಿಯವರು ಸಂಪಾದಿಸಿದ್ದು, ಅದು ಇಷ್ಟರಲ್ಲಿಯೇ ಪ್ರಕಟವಾಗಲಿರುವುದಾಗಿ ತಿಳಿದು ಬಂದಿದೆ.

**ಮೆಕಂಜಿ ಸಂಗ್ರಹದಲ್ಲಿ ಕೆಳದಿ ಮೂಲ ಸಾಮಗ್ರಿಗಳು :** ಕರ್ನಲ್ ಮೆಕಂಜಿ ಸಂಗ್ರಹದ ಕೈಫಿಯತ್ತುಗಳಲ್ಲಿ ಕೆಳದಿ ಇತಿಹಾಸಕ್ಕೆ ಸಾಧಕವಾದ ಮೂಲ ಸಾಮಗ್ರಿಗಳೂ ಉಪಲಬ್ಧವಿವೆ. ಇವುಗಳೆಲ್ಲವೂ ಕಾಗದದ ಪ್ರತಿಗಳಲ್ಲಿ ಮಾತ್ರ ಕಂಡುಬಂದಿವೆ. ಹಿಂದೆಯೇ ಪ್ರಸ್ತಾಪಿಸಿದಂತೆ ೯೯ ಹಸ್ತಪ್ರತಿಗಳು ಇಂಗ್ಲೆಂಡಿಗೆ ಹೋಗಿದ್ದು ಉಳಿದ ಸಂಗ್ರಹಗಳು ಮಾತ್ರ ಮದರಾಸಿನಲ್ಲಿದ್ದಂತಾಗಿದೆ.[7] ಈ ಸಂಗ್ರಹಗಳಲ್ಲಿಯೂ ಕೆಳದಿ ಇತಿಹಾಸಕ್ಕೆ ಸೇರಿದ ಸಾಮಗ್ರಿಗಳಿವೆ. ಇವುಗಳ ಸಶಾಸ್ತ್ರೀಯ ಅಧ್ಯಯನ ಹಾಗೂ ಸಂಶೋಧನೆ (ಸಂಪಾದನೆ) ಅತಿ ಜರೂರಾಗಿ ಕೈಗೊಳ್ಳುವುದು ಸೂಕ್ತ ಹಾಗೂ ಅಗತ್ಯ.[8]

ಕೆಳದಿನೃಪವಿಜಯ, ಶಿವತತ್ವರತ್ನಾಕರ, ಶಾಸನಗಳು ಹಾಗೂ ಇತರ ಸಮಕಾಲೀನ ಸಾಮಗ್ರಿಗಳಲ್ಲಿ ಈ ಕೈಫಿಯತ್ತುಗಳು ಅಧ್ಯಯನಕ್ಕೆ ಸಹಕಾರಿಯಾಗಿದ್ದು ಐತಿಹಾಸಿಕ ಅಂಶಗಳಿಗೆ ಪುಷ್ಟಿ ನೀಡಬಲ್ಲವು.

**ಕೆಳದಿ ಇತಿಹಾಸ ಸಾಮಗ್ರಿಗಳನ್ನೊಳಗೊಂಡ ಕೈಫಿಯತ್ತುಗಳು**

| ಸಂಖ್ಯೆ | ವಿವರಣೆ | ಮೆಕಂಜಿ ಸಂಗ್ರಹದ ಸಂಖ್ಯೆ (ಮದರಾಸ್ ಓ.ಎಂ.ಎಲ್. ನಲ್ಲಿರುವುದು) |
|---|---|---|
| ೧. | ಕಾರ್ಕಳ ಅರಸರ ಕೈಫಿಯತ್ತು | ಎಂ.ಸಿ. ೩೫೧ |
| ೨. | ಅಜಿಲರ ಕೈಫಿಯತ್ತು | " |
| ೩. | ತುಳುವ ದೇಶದ ಕಡಬಾ ಸಂಸ್ಥಾನದ ಕೈಫಿಯತ್ತು | ಎಂ.ಸಿ. ೩೫೩ |
| ೪. | ಕುಂದಾಪುರದ ಕೈಫಿಯತ್ತು | " |
| ೫. | ಜಮಲಾಬಾದು ಕೈಫಿಯತ್ತು | ಎಂ.ಸಿ. ೩೫೧ |

5 ಉಳಿದ ಕೈಫಿಯತ್ತುಗಳು ಕಾಗದದಲ್ಲಿ ಪ್ರತಿಮಾಡಿಸಿದವುಗಳಾಗಿರಬಹುದೇ ? ನೋಡಿ : ದ.ಕ. ಜಿಲ್ಲೆಯ ಕೈಫಿಯತ್ತುಗಳು, ಪುಟ ೬.

6 ಅದೇ

7 ಲಂಡನ್‌ನಲ್ಲಿ ಕೆಳದಿನೃಪವಿಜಯ ಹಸ್ತಪ್ರತಿಯೂ ಇರುವುದು ಕಂಡುಬರುತ್ತದೆ. A Palm leaf copy of Keladi Nripa Vijayam is in the India Office Library at London—See : Nayakas of Ikkeri by Dr. K. D. Swaminathan, p. 7.

8 ಕಳೆದ ವರ್ಷ ನಾನು ಮದರಾಸಿನಲ್ಲಿ ಸಂಶೋಧನೆ ಕೈಗೊಂಡಾಗ ಈಗಿರುವ ಮೆಕಂಜೀ ಸಂಗ್ರಹಗಳೂ ಕ್ಷಿಪ್ರದಲ್ಲಿಯೇ ಲಂಡನ್‌ಗೆ ಸ್ಥಳಾಂತರವಾಗಲಿರುವುದಾಗಿ ಅಧಿಕಾರಿಗಳಿಂದ ತಿಳಿದುಬಂತು. ಕೆಲವು ವರ್ಷಗಳ ಹಿಂದೆ ತಮಿಳುನಾಡಿನಲ್ಲಿ ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದ ಅನೇಕ ಮಹತ್ವದ ದಾಖಲೆಗಳು ಅಗ್ನಿಗೆ ಆಹುತಿಯಾಗಿರುವುದು ಕಂಡುಬಂದಿದೆ. ಇದನ್ನು ನಾನು 'ಹಿಂದೂ' ಇಂಗ್ಲಿಷ್ ದಿನಪತ್ರಿಕೆಯಲ್ಲಿ ಓದಿದ ನೆನಪಿದ್ದು, ತಾರೀಖು ನನ್ನ ಕಾಗದ ಪತ್ರಗಳ ಮಧ್ಯೆ ಸೇರಿಹೋಗಿದ್ದರಿಂದ ಸಕಾಲದಲ್ಲಿ ಲಭಿಸದಂತಾಗಿದೆ.

| ಸಂಖ್ಯೆ | ವಿವರಣೆ | ಮೆಕಂಜಿ ಸಂಗ್ರಹದ ಸಂಖ್ಯೆ (ಮದರಾಸ್ ಓ.ಎಂ.ಎಲ್. ನಲ್ಲಿರುವುದು) |
|---|---|---|
| ೬. | ಕುಂಪಣಿ ಸರಕಾರದ ಸಂಖ್ಯೆ ೩೫೩, ಪು. ೪೧೮–೪೨೧ರ ಕಾಪಿನ ದೇವಸ್ಥಾನದ ಕೈಫಿಯತ್ತು | ಎಂ.ಸಿ. ೩೫೩ |
| ೭. | ಕುಂಪಣಿ ಸರಕಾರದ ಕುಂಜಾರು ಕೈಫಿಯತ್ತು : ಎಸ್.ಐ.ಐ.ನಲ್ಲಿ ಪ್ರಕಟವಾದ ದಾನಶಾಸನದ ಪ್ರತಿಯ ಉಲ್ಲೇಖವೂ ಇದರಲ್ಲಿ ದಾಖಲಾಗಿದೆ. ಸಂಖ್ಯೆ ೭ ; ಪು. ೨೯೭ | ಎಂ.ಸಿ. ೩೫೩ |
| ೮. | ಬೈರೂರು ಮಾಗಣೆ ಕೈಫಿಯತ್ತು | ಎಂ.ಸಿ. ೩೫೩ |
| ೯. | ಯಲ್ಲೂರು ದೇವಸ್ಥಾನದ ಕೈಫಿಯತ್ತು | ” |
| ೧೦. | ಹಲಸನಾಡ ಮಾಗಣೆ ಕೈಫಿಯತ್ತು : ಕೆಳದಿನೃಪವಿಜಯದಲ್ಲಿ ಕಂಡು ಬರುವ ಹೊನ್ನೆಯ ಕಂಬಳಿ ಕೆಳದಿಯ ನಾಯಕರಿಗೆ ಅಧೀನವಾದ ಸಂಗತಿಯೂ ಇಲ್ಲಿ ದಾಖಲಾಗಿದೆ. | ” |
| ೧೧. | ಕಾಳತೋಡು ಮಾಗಣೆ ಕೈಫಿಯತು : ಇಲ್ಲಿ ಉಲ್ಲೇಖಿಸಿದ ಕೆಳದಿ ಅರಸರಿಗೆ ಭೈರಾದೇವಿಯಿಂದ ಭಟ್ಕಳವು ಸ್ವಾಧೀನವಾದ ಸಂಗತಿಯು ಪುಷ್ಟಿಯನ್ನು ನೀಡಿದೆ. | ” |
| ೧೨. | ಮೂಡನಾಡ ಮಾಗಣೆ ಕೈಫಿಯತು | ” |
| ೧೩. | ಕಬ್ಬಿನಾಡ ಮಾಗಣೆ ಕೈಫಿಯತು | ” |
| ೧೪. | ಕೊಲ್ಲೂರ ಮಾಗಣೆ ಕೈಫಿಯತು | ” |
| ೧೫. | ಮರದಾಳದ ಕೈಫಿಯತು | ” |
| ೧೬. | ಕದರಿ ಮಾಗಣೆ ಕೈಫಿಯತು | ” |
| ೧೭. | ಯಳರೆ ಮಾಗಣೆ ಕೈಫಿಯತು | ” |
| ೧೮. | ಹುಸಂಗಡಿ ಮಾಗಣೆ ಕೈಫಿಯತು | ” |
| ೧೯. | ಚೌಟರ ಕೈಫಿಯತು | ೨–೧–೦ |
| ೨೦. | ಕಡಬಾ ಸಂಸ್ಥಾನದ ಕೈಫಿಯತು (ಕೆಳದಿ ನಾಯಕರ ವಂಶಾವಳಿಯಿದೆ) | ೨–೧–೪ |
| ೨೧. | ನಗರದ ಸೀಮೆ ಕೈಫಿಯತ್ತು | ೮೦೪ |
| ೨೨. | ” | ೮೦೪ |
| ೨೩.<br>೨೪.<br>೨೫. | ಭಟಕಳದ ಕೈಫಿಯುತ್ತು | ೧೧೭೩, ೧೧೭೪ ಮತ್ತು ೧೧೭೫ |
| ೨೬.<br>೨೭. | ಮರಾಠೆಯವರ ಕೈಫಿಯತ್ತು | ೧೨೨೧ ಮತ್ತು ೧೨೨೨ |
| ೨೮. | ವಸುಧಾರೆ ಗ್ರಾಮದ ಕೈಫಿಯತ್ತು | ೧೪೧೧, ೧೪೧೨ ಮತ್ತು ೧೪೧೩ |
| ೨೯. | ಶೃಂಗೇರಿ ಸೀಮೆ ಕೈಫಿಯತ್ತು | ೧೫೦೩ ಮತ್ತು ೧೫೦೪ |
| ೩೦. | ಸಾಗರದ ಕೈಫಿಯತ್ತು | ೧೫೪೩ ಮತ್ತು ೧೫೪೪ |
| ೩೧. | ಸೂಳೆಕೆರೆ ಸೀಮೆ ಕೈಫಿಯತ್ತು | ೧೫೯೫ ರಿಂದ ೧೫೯೭ |

| ಸಂಖ್ಯೆ | ವಿವರಣೆ | ಮೆಕಂಜಿ ಸಾಹಿತ್ಯದ ಸಂಖ್ಯೆ ಮದರಾಸ್ ಓ.ಎಂ.ಎಲ್. ನಲ್ಲಿರುವುದು |
|---|---|---|
| ೩೨. | ಸೋದೆ ಮಠದ ಕೈಫಿಯತ್ತು | ೧೬೨೦ ರಿಂದ ೧೬೨೨ |
| ೩೩. | ಹೈದರನ ಕೈಫಿಯತ್ತು | ೧೭೯೦ ರಿಂದ ೧೭೯೪ |
| ೩೪. | ಹೊದಿಗೆರೆ ಸೀಮೆ ಕೈಫಿಯತ್ತು | ೧೭೯೮ ಮತ್ತು ೧೭೯೯ |
| ೩೫. | ಹೊನ್ನಾಳಿ ಕೈಫಿಯತ್ತು | ೧೮೦೫ |
| ೩೬. | ಹೊಳೆಹೊನ್ನೂರು ಕೈಫಿಯತ್ತು | ೧೮೨೭ ರಿಂದ ೧೮೨೯ |
| ೩೭. | ಶೃಂಗೇರಿ ಸೀಮೆ ಕೈಫಿಯತ್ತು | (ಎಂ. ३೦२/ಎಂ. ३५೧/ಡಿ. ೧೮೭३) |

ಇವುಗಳಲ್ಲಿ ಡಾ॥ ಎ. ಕೆ. ಶಾಸ್ತ್ರಿಗಳು ಸಂಶೋಧಿಸಿದ ಶೃಂಗೇರಿ ಮಠದ ಕಡತಗಳಲ್ಲಿಯೂ, ಪ್ರಕಟಿತ ಹಾಗೂ ಅಪ್ರಕಟಿತ ಸಾಮಗ್ರಿಗಳಲ್ಲಿಯೂ ಕೈಫಿಯತ್ತುಗಳ ಸಮೀಕ್ಷೆ ಕೈಗೊಳ್ಳಲು ವಿಪುಲ ಅವಕಾಶಗಳಿವೆ. ಡಾ॥ ರಘುಪತಿ ಕೆಮ್ತೂರು ಅವರು ನಿರೂಪಿಸಿದಂತೆ ಸ್ಥಳನಾಮಾಧ್ಯಯನಕ್ಕೂ ಕೈಫಿಯತ್ತುಗಳನ್ನು ಹಲವು ರೀತಿಗಳಲ್ಲಿ ಮೊರೆ ಹೋಗ ಬೇಕಾಗಿದೆ.[9]

**ಕೆಳದಿ ಸಂಶೋಧನಾಲಯದಲ್ಲಿನ ತಾಳೆಯೋಲೆ ಪ್ರತಿ :** ಕೆಳದಿ ಸಂಶೋಧನಾಲಯದ ಹಸ್ತಪ್ರತಿ ಸಂಖ್ಯೆ ೨೪೪ರಲ್ಲಿ ಸೇರ್ಪಡೆಗೊಂಡಿದ್ದ ಓಲೆಗರಿ ಕಟ್ಟಿನಲ್ಲಿ ಗೋಚರಿಸಿದ 'ಇಕ್ಕೇರಿ ಸೀಮೆ ವಿವರಾ' ಎಂಬ ಕೃತಿಯೊಂದು ಕೆಳದಿ ಇತಿಹಾಸದ ಅಧ್ಯಯನದಲ್ಲಿ ಗಮನಾರ್ಹ ಅಂಶವಾಗಿದೆ. ಈ ಕೃತಿಯಲ್ಲಿ ಕಂಡುಬರುವ ಭೌಗೋಳಿಕ ಪರಿಚಯ, ಕೋಟೆಗಳ ವಿವರಗಳು, ಊರುಗಳ ಹೆಸರುಗಳು, ದೂರ ಪ್ರಮಾಣಗಳು, ಅಗ್ರಹಾರಗಳು, ಅರಮನೆ, ಧರ್ಮಕ್ಷೇತ್ರಗಳು ಚಾರಿತ್ರಿಕ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ, ಇವು ಮೆಕಂಜಿ ಸಂಗ್ರಹದಲ್ಲಿ ಕಂಡುಬರುವುದಿಲ್ಲ. ಈ ಕಾರಣ ಇವು ಕೈಫಿಯತ್ತುಗಳ ಸಾಲಿಗೆ ಸೇರಿದುದೆಂದು ಸ್ಥಿರವಾಗಿ ಹೇಳಬಹುದಾಗಿದೆ.[10] ಲಿಪಿ ಮತ್ತು ಭಾಷೆಯ ಆಧಾರಗಳಿಂದ ಇದು ೧೭–೧೮ನೇ ಶತಮಾನಕ್ಕೆ ಸೇರಿದ ತಾಳೆಯೋಲೆಯ ಕೃತಿ.

ಓಲೆಗರಿ ಪ್ರಮಾಣ ೨೨ × ४.೮ ಸೆಂ.ಮೀ. ಕಟ್ಟಿನಲ್ಲಿದ್ದ ಈ ತಾಳೆಯೋಲೆಗಳು ಶ್ರೀರಂಗಪಟ್ಟಣದಲ್ಲಿ ಲಭಿಸಿತು, ಅಸಮಗ್ರವಾಗಿರುವ ಈ ಹಸ್ತಪ್ರತಿಯ ಪುಟ ೯ ರಲ್ಲಿ "ಶ್ರೀರಂಗಪಟ್ಟಣದಿಂದಾದಿಯಾಗಿ । ಯೆತ್ಸಮಸ್ತ ಕರ್ನಾಟಕ ದೆಶದೊಳಗಣ । ಪ್ರಸಿದ್ಧ ಪಟ್ಟಣ । ಭೂದುರ್ಗ । ಗಿರಿದುರ್ಗ । ವನದುರ್ಗ । ಘನಪಿಠಗಳ ಗ್ರಾಮ ಪ್ರಸಿದ್ಧ ವಾಪಿ ಕೂಪ ತಟಾಕ ಉಪವನ ಪುಂಣ್ಯ ಕ್ಷೇತ್ರ ಪುಂಣ್ಯಾನಧಿತಿತ್ಸಲಾತಿಶಯ । ಯಿತ್ಯಾದಿ ಕ್ರಮ ವಿಸ್ತಾರಾ । ಶ್ರೀರಂಗಪಟ್ಟಣ । ಗೌತಮಕ್ಷೇತ್ರ । ಉಭಯ ಕಾವೆರಿ ಮಧ್ಯದ್ವಿಪದಲೂ । ಮೂಡ ಪಡುವಲು ವಿಸ್ತರವಾದಂಥಾ । ಯರಡು ಸುತ್ತಿನಲು ಕೊಟೆ । ಯಿಾ ಪಟ್ಟಣದೊಳು । ಪಾಜ ಬಿದಿಳ । ಮದ್ಯ ಶ್ರೀರಂಗನಾಥಸ್ವಾಮಿ ದೆವಸ್ಥಾನಾ ಗೊಪುರ ಪ್ರಕಾರಾ । ಪೂರ್ವ ಸಂನಿಧಿ । ಗೌತಮ ಋಷೀಶ್ವರರಿಗೆ ಪ್ರಸನ್ನಾದಂಥಾ...." ಎಂದಿದೆ.

ಈ ಅಂಶವನ್ನು ಅವಲೋಕಿಸಿದಲ್ಲಿ ಶ್ರೀರಂಗ ಪಟ್ಟಣದಲ್ಲಿರುವ ಅನೇಕ ಮನೆತನಗಳಲ್ಲಿ ವಿಪುಲವಾಗಿ ಉಪಲಬ್ಧವಿದ್ದ ಕೈಫಿಯತ್ತುಗಳಲ್ಲಿ ಇದೂ ಒಂದೆಂದು ಊಹಿಸಲು ಅವಕಾಶವಿದೆ. (ಕನ್ನಡ ವಿಶ್ವಕೋಶ, ಸಂಪುಟ ೫, ೧೯೭೨, ಪುಟ ३२५ ನೋಡಿ).

ಪ್ರಕೃತ ಕಟ್ಟಿನಲ್ಲಿ ಈ ಕೈಫಿಯತ್ತಿನ ಓಲೆ ಪ್ರಮಾಣ ಉದ್ದ ೫.೫ ಸೆಂ.ಮೀ ; ಅಗಲ ४.५ ಸೆಂ.ಮೀ ; ಸಾಲು

9 ನೋಡಿ : 'ಸ್ಥಳನಾಮಾಧ್ಯಯನದ ಇತ್ತೀಚಿನ ಒಲವುಗಳು', ಪರಿತಿಸಿರಿ, ಸಂ : ಲಕ್ಷ್ಮಣ್ ತೆಲಗಾವಿ, ಪು. ४೯೯-४೯೯

10 ಡಾ॥ ಸೂರ್ಯನಾಥ ಕಾಮತ್ ಅವರು ಅಭಿಪ್ರಾಯ ಪಡುವಂತೆ, ಇವುಗಳನ್ನು ರಾಜ್ಯಪತ್ರ ಹಾಗೂ ಗ್ಯಾಸೆಟಿಯರ್ ಗಳೆಂತಲೂ ಕರೆಯಬಹುದಾಗಿದೆ.

೮ ; ಅಕ್ಷರ ಸಂಖ್ಯೆ ೩೦ ; ಪುಟ ೪೦ ರಿಂದ ೪೬ ರವರೆಗೆ ಮಾತ್ರ ಲಭ್ಯವಿದೆ. ಇದೂ ಅಸಮಗ್ರವಾಗಿದ್ದು ಉಳಿದ ಓಲೆಗಳು ಉಪಲಬ್ಧವಿಲ್ಲ.

ತಾಳೆಯೋಲೆಯಲ್ಲಿರುವ ಪಾಠಗಳು

ಇಕೆರಿ ಸಿಮೆ ವಿವರಾ

ಓಲೆ ಪುಟ ೪೦ : (ಮುಂಭಾಗ)—

೧ ಯಿಕ್ಕೆರಿ ಸಿಮೆ ವಿವರಾ ॥ ಬಿದರೂರ ಸ್ಥಳ। ಪಶ್ಚಿಮ ಕೊಲ್ಲೂರು ಆರಭ್ಯ ಮೂಡಲು। ಆರಗ ಪರಿಯಂತರ। ಮೂ

೨ ಡಾ ಪಡುವಲು ಆರು ಗಾವದ। ಬಡಗಲು ಯಿಕ್ಕೆರ್ರಿ ಆರಭ್ಯ ತೆಂಕಲು। ಆಗುಂಬಿ ಶ್ರಿಂಗೆರಿ ಪರಿಯಂತರ। ಹತ್ತು

೩ ಗಾವದ। ಯಿಾ ಪ್ರಕಾರ ಬಳಸಿರುವ ಅಡವಿ। ಯಿಾ ಮಧ್ಯದಲ್ಲು ಬಿದರೂರು। ಮೂಡ ಪಡುವಲು ॥ ಘಳಿಗೆ ದಾರಿ।

೪ ತೆಂಕಾ ಬಡಗಲು। ಹರಿದಾರಿ। ಯಿಾ ಪ್ರಕಾರದ ಪೆಠೆ ಪಟ್ಟಣ ಸಹಾ। ಯಿಾ ಪಟ್ಟಣದ ಮದ್ಯೆ। ಚಿಕ್ಕ ಗುಡ್ಡ

೫ ಯಿಾ ಗುಡ್ಡದ ಮೇಲೆ ಬಾಣದಳತೆಯಲು ವಿಸ್ತಾರದ ಕಲ್ಲು ಕೊಟೆ। ಬಡಗ ಬಾ

೬ ಗಿಲು ೧ ಯಿಾ ಕೊಟೆಯಲ್ಲು। ನಾಯಕನ ಅರಮನೆ। ಯಿಾ ಕೊಟೆಯಲು। ಪಶ್ಚಿಮ ಪಾರಿ

೭ ರ್ಶದಲ್ಲು। ಕೊಳ ೧ ಚಿಕ್ಕ ಕುಂಟೆ ೧ ಅರಮನೆ ಹಿಂದೆ ಭಾವಿ ೧ ಕೊಟೆ ಹೊರಗೆ। ಬಡಗ ಪಾರಿಶ್ವದಲ್ಲು।

೮ ದೊಡ್ಡ ಪೆಠೆ। ಕೂಗಳತೆ ಬಿದಿ। ಯಿಾ ಪೆಟೆ ಕೊನೆಯಲ್ಲು। ತಿಮಿರಾವತಿ ಹೊಳೆ। ಯಿದಕೆ ಪಡುವಲು।

ಹಿಂಭಾಗ—

೧ ಕೃಷ್ಣಪಯ್ಯನ ಪೆಟೆ। ಯಿಾ ಯರಡರ ಮದ್ಯದಲ್ಲು। ತಿಮಿರಾವತಿ ಹೊಳೆ ಕೊಡುಗೆ ಪಶ್ಚಿಮ ಪಾರಿರ್ಶದಲ್ಲು

೨ ಚಿಕ್ಕ ಅರಮನೆಯ ಪೆಟೆ। ಕೊಟೆಗೆ ಮೂಡಲು ತೆಂಕಲು। ಪಾರಿರ್ಶದಲ್ಲು। ಬಾಳೆಕೊಪ್ಪದ ಪೆಟೆ। ಯಿಾ ಪ್ರಕಾರ

೩ ಬಿದರೂರ ಪಟ್ಟಣ। ಪಟ್ಟಣಕೆ ಮೂಡಲು। ಗಳಿಗೆ ದಾರಿಯಲ್ಲು। ಆರಗದ ಕೆತ್ತು ಬಾಗಿಲು ೧ ಕೊಟೆಗೆ। 11 × 11ನೈ

೪ ರುತ್ಯ ಹರಿವರೆ ದಾರಿಯಲ್ಲು।[12] [ಮೂರು ಹರಿದಾರಿ ಅಂಚಿನಲ್ಲು ಮೂರು ಹರಿದಾರಿ][12] ಹೊಸ ಅಂಗಡಿ ಕೆತ್ತು ಬಾಗಿಲು ೧। ಪಶ್ಚಿಮ ಹರಿವರೆ (ಮೇಲ್ಭಾಗದಲ್ಲಿ ಲಿಖಿತವಿದೆ) ದಾ

೫ ರಿಯಲ್ಲು। ಕೊಲ್ಲೂರು ಕೆತ್ತು ಬಾಗಿಲು ೧ ಉತ್ತರ ಹರಿದಾರಿಯಲ್ಲು।

೬ ರಾಮಚಂದ್ರಪುರ ಕೆತ್ತು ಬಾಗಿಲು ೧ ಯಿಾ ಬಗೆ ಕೆತ್ತು ಬಾಗಿಲು ೪ ಯಿಾ ಬಗ್ಗೆ ನಾಲ್ಕು ಕೆತ್ತು ಬಾಗಿಲು ಬಳಿಯ

೭ ಲ್ಲು ಕೊಟೆ ಕೊತ್ತಳ ಬಾಗಿಲು ಬಿಗಮುದ್ರೆ ಆಳು ಕಾವಲು ಸಹ। ನಾಲ್ಕು ನಾಲ್ಕು ಪಿರಂಗಿ। ಯಿದ್ದಿತು। ಯಿಾ ಪ್ರಕಾರ ಬಿದರೂರು ಯಿಾ

೮ ಬಿದರೂರಿಗೆ। ಆಗ್ನೇಯ ಭಾಗ ಗಾವದದಲ್ಲು। ಕವಿಲೆದುರ್ಗಾ। ಮಹಾ ಉಂನತವಾದ ನಿ ಆನೆ ನಿಂತ

ಓಲೆ ಪುಟ ೪೧ (೪೨?) : ಮುಂಭಾಗ—

೧ ಭಾವದಲ್ಲಿ ದುರ್ಗ್ಗ ಯಿದ್ದೀತು। ನೆಲಗೋಟೆಯಲ್ಲಿ। ಯಿಾ ದುರ್ಗದ ಮೇಲಕ್ಕೆ ಹತ್ತುವ ಮಾರ್ಗ। ಮೂಡಲು

೨ ಆಗ್ನೆ। ಪಾರಿರ್ಶದಲ್ಲು। ಹತ್ತುವ ಮಾರ್ಗ್ಗ। ಭೂಮಿಯಿಂದಾ ಬೆಟ್ಟದ ಮೆಲೆ ಯರಡು ಬಾಣದಳತೆ ಮೇಲೆ। ಕೆತ್ತಣ

೩ ಕಲ್ಲುಕೊಟೆ। ಹತ್ತು ಸಾವಿರ ಬಲ। ಯಿರತಕ್ಕ

11 ಅಕ್ಷರ ಹೊಡೆದಿದೆ.

12 ಮೇಲ್ಭಾಗದಲ್ಲಿ ಲಿಖಿಯಿದೆ.

ವಿಸ್ತಾರ । ಯಿದರಲ್ಲು ಪಾಂಣ್ಯದ ಮನೆ ಆಯಿ
ನೂರು । ಯಿ ಕೊಟಿವಳ

೪ ಗೆ ಉತ್ತರ ಪಾರಿರ್ಶದಲ್ಲಿ । ಅಯಿವತ್ತು ಮೂರಿನ ದೃವಜಲದ ಕಟೆ ೧ ದೃವಜಲದ ಬಾವಿಗಳು ೨೦ ॥

೫ ಯಿದರ ಮೆಲೆ ಅಂಬುಯಸಿಗೆ ದೂರದಲ್ಲು ಅಂಟು ಕೊಟಿ ೧ ಯಿಾ ಕೊಟಿಯಲ್ಲು ।

೬ ವಿರುಪಾಕ್ಷ ಯಿಾಶ್ವರನ ದೆವಸ್ತಾನ । ವಿಶ್ವೆಶ್ವರನ ದೆವಸ್ತಾನ ೧ ವಿರಭದ್ರನ ದೆವಸ್ತಾನ ೧

೭ ಯಿಾ ಬಳಿಯ ಬಾವಿ ೧ ಮೂರನೆ ಅಂಟುಕೊಟಿ ಯಲ್ಲು । ಅರಮನೆ ಸಿತ್ಯೆ ಸಹಾ ಯಿದ್ದಿತು । ಯಿದರಲ್ಲು ಕೊಳ ೧ । ಯಿ

೮ ದಕೆ ದಕ್ಷಿಣ ಪಾರಿರ್ಶದಲ್ಲು । ಯಿರುವ ಪಿರಂಗಿ ೫೦॥ ಯಿಾ ಕೊಟೆಯಲ್ಲು ವಕ್ಕಲು ಮನೆ ಗ× ೧೦೦ । ಯಿಾ ಕೊ

೯ ...........[ಇಲ್ಲಿ 'ತೊಪ್ಪು' ಎಂಬ ಲಿಪಿಯಿದೆ.]

ಹಿಂಭಾಗ—

೧ ಟೆಯಲ್ಲು । ಹೊರಗೆ ಉತ್ತರ ಪಾರಿರ್ಶದಲ್ಲು । ಕಟೆ ೧ ಯಿಾ ಮುಂದೆ ಬಾಣದಳತೆಯಲ್ಲು । ನಾಲ್ಕನೆ ಅಂಟು

೨ ಕೊಟೆ ೧ ॥ ಯಿಾ ಕೊಟೆಯಲ್ಲು । ಮದ್ದಿನ ಕಣಜ ದವಸದ ಕಣಜ ಯಿದ್ದಿತು । ಪಿರಂಗಿ ೧೦ ಯಿ

೩ ದರ ಮುಂದೆ । ಅಯಿದನೆ ಅಂಟು ಕೊಟೆ ೧ ಯಿದರ ಮುಂದೆ ಬಾಣದಳತೆಯ

೪ ಲ್ಲು । ಆರನೆ ಅಂಟುಕೊಟೆ ೧ ಯಿದರ ಮೆಲೆ । ಬಾಣದ ಅಳತೆಯ

೫ ಲ್ಲು । ಯೆಳನೆ ಕೊಟೆ ಕುಂಬಿಯು ಬಳಸಿಯು ಕಲ್ಲ ಕೊಟೆ । ನಾಲ್ಕು ಸಾವಿರ ಆ

೬ ಳು ಯಿರತಕ್ಕ ವಿಸ್ತಾರ । ಯಿಾ ಕೊಟೆ ಹೊರಗೆ ಪಶ್ಚಿಮ ಪಾರಿರ್ಶದಲ್ಲು । ಶಿವಗಂಗೆಯೆಂಬ

೭ ಕೊಳ ೧ ಸದಾ ದೃವಜಲ ನಿರು ಉಕ್ಕಿ ಕೆಳಕೆ ಹರಿಉತ್ತ್ಯಯಿದ್ದಿತು । ಯಿದರಲ್ಲು ಪಾಂಣ್ಯದ

ಓಲೆ ಪುಟ ೪೨ : ಮುಂಭಾಗ—

೧ ಮನೆ ನೂರು । ಯಿಾ ಕೊಟೆಯಲ್ಲು ಉತ್ತರ ಪಾರ್ಶದಲ್ಲು । ಚಿಕ್ಕ ಕಟೆ ೧ ಯಿಾ ಕೊಟೆ ಮುಂದೆ । ಅ

೨ ಯಿನೂರು ಮಾರು ಉಂನತದ ಮೆಲೆ । ನಡು ಕುಂಬಿ ಅರ್‍ರೆ । ಯರಡು ಬಾಣದಳತೆಯ ವಿಸ್ತಾರ । ಮೆಲೆ

೩ ನಾಲ್ಕು ದಿಕ್ಕಿನಲ್ಲು ಜರಿ । ಮೆಲೆ ಬಳಸಿಯು । ಕಲ್ಲಕೊಟೆ । ಯಿಾ ಪ್ರಕಾರದಲ್ಲು । ಕವಿಲೆ ದುರ್ಗ್ಗದ ವಿವರಾ ॥

೪ ಯಿಾ ದುರ್ಗ್ಗದ ಕೆಳಗೆ । ಮೂಡಲ ಪಾರ್ಶದ ವತ್ತಿನಲ್ಲು । ವರ್‍ರಕೆ ಹಳ್ಳ ೧ ದುರ್ಗಕ್ಕೆ

೫ ಯಿಾಶಾಂನ್ಯ ಪಿರಂಗಿಯಿಾಡಿನ ದೂರದಲ್ಲು ಅಮ್ರುತಾ ಮಹಲು ಯಂಬ ಚಿಕ್ಕ

೬ ಗುಡ್ಡಾ । ಯಿದರ ಮೆಲೆ ಬಳಸಿಯು ಕೊಟೆ । ಯಿದರಲ್ಲು ಅರಮನೆ ಸಿಚ್ಚೆ ಸಹಾ

೭ ಯಿದ್ಧಿತು । ಯಿಾ ಅಮ್ರುತಾ ಮಹಲಿಗೆ । ಮೂಡಲು । ವತ್ತಿನಲ್ಲು ಕೂಗಳತೆ ಪೆಟೆ । ಬಳಸಿಯು । ಅಡವಿ ।

೮ ಯಿಾ ಪೆಟೆ ತೆಂಕ ಪಾರಿರ್ಶದಲ್ಲು । ಜಂಗಮರ ಮಟ ೧೦ । ಪೆಟೆಗೆ ಮೂಡಲ ಪಾರಿರ್ಶದಲ್ಲು

ಹಿಂಭಾಗ—

೧ ಕೆರೆ ೧ ತೆಂಕಾ ಬಡಗಲು ಕಟೆ । ಯಿಾ ಬಳಿಯ ಆಳು । ಉ

೨ ಕ್ಕಡದ ಕಾವಲು । ಯಿಾ ಪ್ರಕಾರ । ಕವಿಲೆದುರ್ಗ ಯಿಾ ಪೆಟೆ ಸಹಾ ವಿವರಾ ॥ ಬಿದರೂರಿ

೩ ಗೆ ಬಡಗಲು ।[13] [ಅಯಿದು][13] ಮೂರು ಗಾವದ ದಲ್ಲು । ಯಿಕ್ಕೆರಿ ಸ್ತಳ । ನೆಲಗೊಟೆ । ಯಿಾ ಕೊಟೆ

೪ ಬಳಸಿಯು ಅಡವಿ । ಯಿಾ ಯಿಕ್ಕೆರಿಗೆ [14][ನೈರುತ್ಯ][14] ವಾಯುವ್ಯಭಾಗ ವೊಂದುವರೆ ಹರಿದಾರಿ

13 ಈ ಭಾಗ ಕಾಟು ಪೊಡೆದಿದೆ.

14 ಅದೇ

೫ ಕೆಳದಿಯಂಬ ಸ್ತಳ ಬಳಸಿಯು ಅಡವಿ । ಯಿಾ ಕೆಳದಿ ಸ್ತಳದಲ್ಲಿ ಪೂರ್ವ್ವ । ಯಿಾ ಯಿಕ್ಕೆ

೬ ರಿಯವರು । ಗಲುಡಿಕೆಯಾಗಿ ಯಿದ್ದು । ಪ್ರಬಲ ವಾಗಿ । ಯಿಕ್ಕೆರಿ ಬಿದರೂರು ಸಹ । ಸಾದಿಸಿ ಪ್ರಮು

೭ ಖರಾದ ಕಾರಣ । ಯಿಾಗಲು ಯಿಕ್ಕೆರಿಯವರಿಗೆ । ಕೆಳದಿಯವರು ಯಂಬ ಮನೆತನದ

ಓಲೆ ಪುಟ ೪೩ : ಮುಂಭಾಗ—

೧ ಹೆಸರೂ । ಬಿದರೂರಿಗೆ ತೆಂಕಲು । ಯರಡು ವರ್ರೆ ಗಾವದದಲ್ಲು । ಬೆಳ್ಳಾರಿಯಂಬ ದುರ್ಗ್ಗ । ಯಿಾ

೨ ಬೆಳ್ಳಾರಿಗೆ ಮೂಡಲು । ಯರಡು ಹರಿದಾರಿ ಯಲ್ಲು । ಕೊಪ್ಪಾಯಂಬ ದುರ್ಗ್ಗಾ ನೆಲೆಗೊಟೆ ಯಿಲ್ಲ । ದುರ್ಗ್ಗ

೩ ದ ಮೆಲೆ । ಮೂಡಲ ಪಾವಿರ್ಶ್ವದಲ್ಲು । ಹತ್ತುವ ಮಾರ್ಗ್ಗ । ದುರ್ಗ್ಗದ ಮೆಲೆ ಯರಡು ಸಾವಿರ ಆಳು ಯಿರತಕ್ಕದು

೪ ಯಿದರಲ್ಲಿ ದ್ರುವಜಲದ ಕಟೆ ೧ ಬಿದರೂರಿಗೆ [15]ಇಶಾನ್ಯ[15] ಉತ್ತರ ಯರಡುವರ್ರೆ ಗಾವದ ದಲ್ಲು । ಕುಂಬಿಸಿಯಂಬ

೫ ಸ್ತಳ । ನೆಲೆಗೊಟೆ । ಮೂರು ಸಾವಿರ ಆಳು ಯಿರತಕ್ಕ ವಿಸ್ತಾರಾ । ಯಿಾ ಕೊಟೆಗೆ ಮೂಡಲ [16]ಪಾರಿರ್ಶ[16]

೬ ಬಾಗಿಲು ೧ ಬಡಗ ಬಾಗಿಲು ೧ ಕೊಟೆ[17]ಗೆ[17] ಹೊರಗೆ ಮೂಡಲ ಪಾರಿಶ್ವದಲ್ಲಿ ಕೆರೆ ೧ ಯಿದಕ್ಕೆ

೭ ಮೂಡಲು[18] (ಹರಿದಾರಿ)[18] ಆಯನೂರು ನೆಲ ಗೊಟೆ ಬಿದುರೂರಿಗೆ ಯಿಶಾಂನ್ಯ । ಆರು ಗಾವದ ದಲ್ಲು । ಹೊಳೆಹೊನ್ನೂ

೮ ರು । ನೆಲೆಗೊಟೆ । ತುಂಗಭದ್ರಾತಿರ । ನಾಲ್ಕು ಸಾವಿರ ಆಳು ಯಿರತಕ್ಕ ವಿಸ್ತಾರ । ಕೊಟೆಗೆ ತೆಂಕ ಬಾಗಿಲು ೧ ಕೊಟೆ

೯ ವಳಗೆ ಜಲಸೂತ್ರದ ಬಾವಿ ೧ ಕೊಟೆ[19](ವಳಗೆ)[19] ಹೊರಗೆ ಬಡಗ ಪಾರಿಶ್ವದ ವತ್ತಿನಲಿ ತುಂಗಭದ್ರೆ ಹೊಳೆ ।

ಹಿಂಭಾಗ—

೧ ಯಿಾ ಹೊಳೆಹೊಂನ್ನೂರಿಗೆ ಪಡುವಲು । ಯರಡು ಹರಿದಾರಿಯಲ್ಲು । ಸಿವೊಗ್ಗೆ ಸ್ತಳ । ನೆಲೆಗೊಟೆ । ಮೂರು

೨ ಸಾವಿರ ಆಳು ಯಿರತಕ್ಕ ವಿಸ್ತಾರಾ । ಕೊಟೆ ಹೊರಗೆ ಪಶ್ಚಿಮ ಪಾರಿಶ್ವದಲ್ಲು । ದೊಡ್ಡ ಪೆಟೆ । ಕೊಟೆಗೆ ಪಶ್ಚಿಮ ।

೩ ವತ್ತಿನಲ್ಲು । ತುಂಗಭದ್ರೆ ಹೊಳೆ । ಯಿಾ ಪ್ರಕಾರ । ಸಿವೊಗ್ಗೆ । ಯಿಕ್ಕೆರಿಗೆ । [20]ಯಿಾಶಾನ್ಯ[20] ವಾಯವ್ಯ ಯರಡು (ಮೂರು) ಗಾವದಲ್ಲು

೪ ಬಿಳಿಗಿಯರ ಬಲ್ಪೆಟೆ ಸ್ತಳ । ೧ ॥ ಯಿಕ್ಕೆರಿಗೆ [21]ವಾಯುವ್ಯ[21] ಮೂರು ನಾ ಗಾವದದಲ್ಲು । ಸೊದೆ

೫ ಯಂಬ ಸ್ತಳ । ನೆಲೆಗೊಟೆ ರಾಮಚಂದ್ರನಾಯಕ ನೆಂಬ ಪಾ–ಅರಸು [22](ಳೈಗಾರ)[22] ಯಿದಕ್ಕೆ ಪ ।

೬ ಶ್ಚಿಮದಲ್ಲು । ಬನವಾಸಿ ಯಂಬ ಸ್ತಳ । ಬಿದು ರೂರಿಗೆ (xxxxx) ಯಿಶಾನ್ಯ ಅಯಿದು

---

15 ಮೇಲ್ಭಾಗದಲ್ಲಿ ಲಿಪಿಯಿದೆ.
16 ಕಾಟು ಹೊಡೆದಿದೆ.
17 ಅದೇ
18 ಮೇಲ್ಭಾಗದಲ್ಲಿ ಲಿಪಿಯಿದೆ.
19 ಕಾಟು ಹೊಡೆದಿದೆ.
20 ಅದೇ
21 ಮೇಲ್ಭಾಗದಲ್ಲಿ ಬರೆದಿದೆ.
22 ಕಾಟು ಹೊಡೆದು ಮೇಲೆ ಲಿಪಿಯಿದೆ.

೭ ಗಾವದದಲ್ಲು ಗುತ್ತಿ ಎಂಬ ದುರ್ಗ ।[23] ಚಂದ್ರ ಗುತ್ತಿ (ಮಹಂಮಾ೯ ಯಲ್ಲಮು ದೇವರ ದೇವಸ್ತಾನ ಬೃಹವ ಕುಟಿ)[23] ಯುಂಬ ದುರ್ಗ ನೆಲೆಗೋಟೆ ಯಿಲ್ಲ । ದುರ್ಗದ ಮೆಲೆ ಯುರಡು ಸಾವಿ

೮ ರ ಆಳು ಯಿರತಕ್ಕ ವಿಸ್ತಾರ ಯಿಾ ಬಳಿಯ ಜಡೆಯಾ ಎಂಬ ಸ್ತಳ ನೆಲಗೋಟೆ । ಬಿದರೂರಿಗೆ । ಬವಾಹ ಮತ್ತು ಇಗ್ಗಾವಿವನ್ನೂ

ಓಲೆ ಪುಟ ೪೪ : ಮುಂಭಾಗ—

೧ [24](ಮೂಡಲು)[24] ಹಂನೆರೆಡು ಗಾವದದಲ್ಲು ಗಜುಗಗಲಟೆ ಪಾರ್ಶ್ವಗರಂಗಕೆ (ಮುರಿದಿದೆ)

೨ ಬಿದರೂರಿಗೆ ಈಶಾನ್ಯ ಆರು ಗಾವದದಲ್ಲು ಗಟ್ಟದ ಕೆಳಗೆ ಗೋವರ್ದ (ಮುರಿದಿದೆ)

೩ ಯುರಡು ಹರಿದಾರಿ ಊಂನತ—ಈ ದುರ್ಗದ ಬಳಸಿಯು ನಾಲ್ಕು ಮುಖದ (ಮುರಿದಿದೆ)

೪ ಗ ಒಂಬತ್ತಕೆ ನೆಲಗೋಟೆ ಇಲ್ಲ. ಈ ದುರ್ಗದ ಮೆಲಕ್ಕೆ ಆಗ್ನೇಯ ಪಾರಶ್ವ (ಮುರಿದಿದೆ)

೫ ರ್ಗವ ಬಳಸಿಯು ನಾಲ್ಕು ಮುಖದಲ್ಲು ಸುತ್ತಲು ಕಲ್ಲುಕೊಟೆ (ಮುರಿದಿದೆ)

೬ ರಾ—ಈ ಕೊಟೆ ಪಶ್ಚಿಮ ಭಾಗದಲ್ಲಿ ಸ್ವಾದೊ ದಕದ ಕಟ್ಟೆವೊಂದು ಈ (ಮುರಿದಿದೆ)

೭ ತೋಪೆ—ಎಲೆತೋಪು, ಮಾವು ಹಲಸು ಮುಂತಾದ ತೊಪು ವೊಂದು ಯಿ (ಮುರಿದಿದೆ)

೮ ಶ್ವರನ ದೆವಸ್ಥಾನ ಮಂದಿರ ವಿನಾಯಕನ ದೆವ ಸ್ಥಾನ ವೊಂದು ವೆಂಕಟೆ (ಮುರಿದಿದೆ)

೯ ಯಲ್ಲು

ಓಂಭಾಗ—

೧ ನವರ ಸಂನಿಧಿ ಮಹಾ ಪ್ರಸಿದ್ಧ ಸ್ತಳ ಊರಿಗೆ (ಮುರಿದಿದೆ)

೨ ಪರ್ವ್ವತದ ಮೇಲೆ ಮದ್ಯದಲ್ಲೂ । ನಾಲ್ಕೂ ಮುಖದಲ್ಲೂ ನಾಲ್ಕು ಬಾಗಿಲು । ಯಿಾ ಪ (ಮುರಿದಿದೆ)

೩ ತೆಜೊಮಯವಾಗಿ । ಇರುವಂತ್ತಾ । ಪಟ್ಟಣ ಇಧಿತು । ಯಂಬ ಸ್ತಳ ಆಗ (ಮುರಿದಿದೆ)

೪ ಅರವತ್ತುನಾಲ್ಕು ಯಿಧಿತು । ಯಿಾ ತಿರ್ಥಗಳು ನದಿಯಾಗಿ ಕೆಳ (ಮುರಿದಿದೆ)

೫ ಯಿ ಪರ್ವತದಲ್ಲು । ಉಪಾಸ್ತಕರು । ಅಮ್ಮ ನವರ (ಮುರಿದಿದೆ)

೬ ಅಭಿಷ್ಟ ವರಗಳ ಪಡವುತ್ತ ಯಿಧಾರೆ । ಯಿಾ ಬಳಿಯು । ಶ್ಯಾ (ಮುರಿದಿದೆ)

೭ ಬೆಟ್ಟ ಇಧಿತು । ಯಿಾ ಬೆಟವು ಪೂರ್ವದಲ್ಲಿ । ಬೆಳ್ಳಿಬೆಟ್ಟವೆಂಬ ಸ್ತಳ (ಮುರಿದಿದೆ)

೮ ಅಡಿಯು । ಮಂಣ ಶಿಗತ ತಂದು । ಕರಗಿದಲ್ಲಿ ಪಾಉ ಬೆಳ್ಳಿಯಾಗು (ಮುರಿದಿದೆ)

ಓಲೆ ಪುಟ ೪೫ : ಮುಂಭಾಗ—

೧ ವದಕೆ ಅಂಮನವರ ಉಪಾಸನೆಯಿಂದಾ ಯೆತ್ತಿ ಕೊಳ್ಳ ಹೇಳಿ ಅಂಮನವರು ಪೂರ್ವದಲ್ಲಿ ಮಾಡಿದ ಕಟ್ಟಳೆ [25](ಅಪ್ಪ)[25]

೨ ಣೆಯಾದವರಲ್ಲದೆ ಮಿಕ್ಕಾದವರು ಯೆತ್ತಿ ಕೊಂಡರ್ರೆ । ಆ ಬೆಟ್ಟದಿಂದಾ ವಜ್ರ ತುಂಬಿ । ಬಂದು ಕಚ್ಚುತ ಯಿದಿ । ತು ಯಿಾ ಪ್ರ

೩ ಕಾರ । ಕೊಲ್ಲೂರ ಸ್ತಳ । ಯಿಾ ಕೊಲ್ಲೂರಿಗೆ ಪಶ್ಚಿಮ [26](ರ್ವಯಾಮು)[26] ಯರಡುವರ್ರೆ ಗಾವದದಲ್ಲು । ಬಯಿದೂರು । XX (ಮೇಲೆ ಬರೆದಿದೆ) ಸಮುದ್ರ ಕರಾವಳಿ ಪೆಟೆ ।

೪ ಯಿದಕ್ಕೆ ಪಶ್ಚಿಮದಲ್ಲು ಹರಿದಾರಿ ಭೈರಾದೇವಿ ಅರಮನೆ ಅವಳಾಳಿದ್ದು ಬಹಿಗಳಲು ಯಂಬ

---

23 ಮೇಲ್ಭಾಗದಲ್ಲಿ ಬರೆದಿದೆ.

24 ಕಾಟು ಹೊಡೆದಿದೆ.

25 ಊಹಿಸಿದೆ (ಮೂ.ಪಾ.—ತ್ರುಟಿತ).

26 ಮೇಲ್ಭಾಗದಲ್ಲಿ ಲಿಪಿಯಿದೆ.

ಸ್ತಳ । ಕೊಂಕ್ಕನಿಗರು । ಘನ ವರ್ತಕರು । ಯಿರುವಂತ್ತಾ ಪೆಟೆ ।

೫ ಯಿದಕ್ಕೆ ಪಶ್ಚಿಮ । ಮೂರು [27](ಗಾಉದಾ)[27] ರಿಯಲ್ಲಿ । ಮುರುಡೆಶ್ವರನೆಂಬ ಶಿವಸ್ತಳ । ಯಿದಕ್ಕೆ ನೈರುತ್ಯ ಯರಡು ಗಾವ

೬ ದದಲ್ಲು । ಧಾರೆಶ್ವರ ಯಂಬ ಶಿವಸ್ಥಳ । ಯಿದಕ್ಕೆ ಪಶ್ಚಿಮ । ಹೊಂನಾವರದ ಸ್ಥಳ ॥ ನೆಲಗೊಟೆ । ಕೊಟೆಗೆ ।

೭ ಮೂಡಲು । ಕೂಗಳತೆ ಪೆಟೆ । ಕೊಟೆಗೆ ಪಶ್ಚಿಮ ಭಾಗದಲ್ಲು । ವೆದಾವತಿ ನದಿ । ಸಮುದ್ರ ಸಂಗಮ । ಯಿದಕ್ಕೆ ಮೂಡಲು ।

೮ ಯರಡು ಗಾವದನಲ್ಲು । ಮಿಡಿಜೆಯಂಬ ಸ್ತಳ । ಕೊಟೆ । ಯಿಾ ಬಳಿಯ । ಅಘನಾಶನಿಯಂಬ ನದಿ । ಹರಿದಾರಿ ವಿ

೯ ಸ್ತಾರ । ಸಮುದ್ರ ಸಂಗಮ । ಯಿಾ ನದಿಗೆ ಹರಿದಾರಿಯಲ್ಲು । ಗೊಕರ್ನವೆಂಬ ಶಿವಸ್ತಳ । ಪಶ್ಚಿಮ ಸಮುದ್ರದ ತಿರ ಕೂಗಳ

**ಹಿಂಭಾಗ—**

೧ ತೆ ಪೆಟೆ ಪಟ್ಟಣ । ಯಿಾ ಪಟ್ಟಣಕೆ ಮಂದ್ಯ ಮಹಂ ಬಲೆಶ್ವರ ದೆವಸ್ಥಾನ ಗೊಪುರ ಪ್ರಾಕಾರಕೆ ಪಶ್ಚಿಮ ಸಂನಿಧಿ

೨ ಅಂಮನವರಿಗೆ । ತಾಬ್ರಗೌರಿಶ್ವರಿಯಂಬ ಹೆಸರು । ಯಿಾ ಅಂಮನವರ ಗುಡಿ ಮುಂದೆ । ತಾಂಬ್ರಗೌರಿ ತಿರ್ಥವೆಂಬ ಹಳ್ಳ

೩ ತೊರೆ ಹರಿಯುತ್ತ ಯಿಧಿತು । ಯಿದರಲ್ಲು । ಮ್ರುತವಾದವರ । ಹಸ್ತಿಗಳ ತಂದು । ಹಾಕುತ್ತಾ ಯಿಧಾರ್‍ರೆ ! ಸುಕ್ರುತಿ

೪ ಗಳಾದವರ ಅಸ್ತಿಗಳು । ಶಂಖ ಚಕ್ರದ ಬಾವ ವಾಗುತ್ತ ಯಿಧಿತು ಪಾಪಿಗಳ ಅಸ್ತಿಗಳು ।

೫ ಅಸ್ತಿಗಳಾಗಿಯೆ ಯಿರುವದು । ಯಿಾ ಪ್ರಕಾರ ತಿರ್ಥದ ಅತಿಶಯ । ಯಿಾ ಗೊಕರ್ನಕ್ಕೆ [28](ಶಿವ ರಾತ್ರಿ ಕಾಲದಲ್ಲಿ ಯಿಾ ನದಿಯಲ್ಲಿ)[28]

೬ ಆಗ್ನೇಯ ಯರಡು ಗಾಉದಲು [29](ಸಾವಿರ ಸಂಕೆ ಬಿಲ್ವಪತ್ರೆ ತೆಲತೆಲಿಯೆ ಮತ್ತು ದೆ ತಿಲಾಕ್ಷತೆ ಸಹ ಹಾಕಲು)[29] ಆ ಕೊಟೆಯಂಬ ಸ್ತಳ ಗನವಾದ ಕಲ್ಲುಕೊಟೆ । ಸಾ

೭ ಮುದ್ರದ ತಿರ । ಯಿದಕೆ ನೈರುತ್ಯ ಗಾವದದಲ್ಲು । ಸಮುದ್ರದ ತಿರ । ಕೈಲಾಸ । ಗಡೆಯೆಂಬ ದುರ್ಗ್ಗಾಂ ವಂಟಿ ಬೆಟ್ಟ

೮ ಘನದುರ್ಗ್ಗ । ಕುಂಬಿ ಮೆಲೆ । ಹತು ಸಾವಿರ ಆಳು ಯಿರತಕ್ಕ ವಿಸ್ತಾರ । ಯಿಾ ದುರ್ಗದ ಮೆಲೆ । ಸ್ವಾದೊದಕದ ಕಟೆ ೧ ।

೯ ಯಿಾ ದುರ್ಗಉ ಸಿವಾಜಿ ನೂತನವಾಗಿ ಮಾಡಿಸಿದ ದುರ್ಗ್ಗ ಯಿದಕೆ ಮೂಡಲು । ಗಾವದದಲ್ಲು ಸಮುದ್ರ

ಓಲೆ ಪುಟ ೪೬—

೧ ಕರಾವಳಿ । ಕೊಂಕಣರಾಜ್ಯ । ಯಿಾ XX ಕೊಂಕಣ ಸಿಮೆಯು ಸಿವಾಜಿಯವರದು

೨ ಬಿದರೂರಿಗೆ ತೆಂಕಲು ಮಿಡಿಜೆ ಅಂಕೊಲೆ (ವಡಿವಾಡ ?) ಶನೈಶ್ವರ ಶೃಂಗೆರಿ ಸ್ತಳ । ತುಂಗಭದ್ರಾ ತಿರ । ಘನವಾದ ಸ್ತಳ । ಸ್ಮಾರ್ತ ಮತ । ಶಂಕರಾ

೩ ಚಾರ್ಯರವರ ಮಟ । ಶಾರದಾ ಪೀಠ । ಅಂಮ ನವರ ದೆವಸ್ಥಾನ । ಅಂಮನವರು ರಜತ ವಿಗ್ರಹ ॥

ಇವುಗಳನ್ನು ಅವಲೋಕಿಸಿದಾಗ ನವಾಬ್ ಹೈದರಾಲಿಯ ಗೂಢಚಾರರು ಕೆಳದಿ ರಾಜ್ಯವನ್ನು ಸಂಚರಿಸಿ ಸಂಗ್ರಹಿಸಿದ ವರದಿಯು ಇದಾಗಿರಬಹುದೇ ಎಂಬ ಸಂದೇಹವೂ ವ್ಯಕ್ತಪಡುತ್ತದೆ. ಇಲ್ಲಿಯ ಒಕ್ಕಣೆ ಬಲುಮಟ್ಟಿಗೆ ವಸ್ತುನಿಷ್ಠವಾದ ದಾಖಲೆಯಾಗಿ ಪರಿಣಮಿಸಿ ಐತಿಹಾಸಿಕ ಮೌಲ್ಯತೆಯನ್ನು ಹೊಂದಿದೆ.

27 ಹೊಡೆದು ಬರೆದಿದೆ (ಮೂ.ಪಾ.).

28 ಮೇಲ್ಭಾಗದಲ್ಲಿ ಬರೆದಿದೆ.

29 ಅದೇ

ಎಂ. ವಾಯ್. ಸಾವಂತ

# ಧಾರವಾಡದ ಬಗ್ಗೆ ಒಂದು ತಾಳೇಬಂದ (ಇ. ಸ. ೧೭೬೭)

ಕ್ರಿಸ್ತಶಕ ೧೭೫೩ ರಿಂದ ೧೮೧೮ರವರೆಗೆ ಸುಮಾರು ೬೫ ವರ್ಷಗಳ ಕಾಲ ಧಾರವಾಡವು ಪೇಶ್ವೆಯವರ ಆಡಳಿತಕ್ಕೆ ಒಳಪಟ್ಟಿತ್ತು. ಪೇಶ್ವೆಯರ ಕಾಲದ ಧಾರವಾಡದ ರೆವಿನ್ಯೂ ಆಡಳಿತವನ್ನು ವಿವರಿಸುವಂತಹ ಅನೇಕ ತಾಳೇಬಂದಗಳು ಪುಣೆಯ ದಫ್ತರಖಾನೆ ಅಥವಾ ಪತ್ರಾಗಾರದಲ್ಲಿ ಸಂಗ್ರಹಿಸಿಡಲಾಗಿದೆ.* ಅವು ಮೊಡೀಭಾಷೆಯಲ್ಲಿ ಇವೆ.

ತಾಳೇಬಂದ ಇದರ ಅರ್ಥ ಜಮಾಖರ್ಚಿನ ವಿವರ ಅಥವಾ ಆಯವ್ಯಯದ ಪಟ್ಟಿ. ಆಗಿನ ಕಾಲದಲ್ಲಿ ವಾರ್ಷಿಕ ಜಮಾಖರ್ಚನ್ನು ಹ್ಯಾಗೆ ಇಡುತ್ತಿದ್ದರು ಎಂಬುದು ನಮಗೆ ಗೊತ್ತಾಗುತ್ತದೆ. ಅಲ್ಲದೆ ಹೊಸ ಹೊಸ ರೆವಿನ್ಯೂ ಶಬ್ದಗಳ ಬಳಕೆಯನ್ನು ನಾವು ಗಮನಿಸಬಹುದು. ಅಂತಹ ಒಂದು ತಾಳೇಬಂದವನ್ನು ಇಲ್ಲಿ ವಿವರಿಸಲಾಗಿದೆ. ಅದರ ಪ್ರಾರಂಭ ಹೀಗಿದೆ : "ತಾಳೇಬಂದ ಪರಗಣಾ ಧಾರವಾಡ ನಿಸಬತ್ ರಾಜಶ್ರೀ ವೆಂಕಟರಾವ್ ನಾರಾಯಣ ಮಾರಫತ್ ಉಡಪೀ ನರಸೀ ಸು. ಸನ್ ಸಬಾ ಸಿತ್ತೈನ ಮಯಾ ವ ಅಲಫ್." ಈ ತಾಳೇಬಂದದ ಪ್ರಕಾರ ಕ್ರಿ.ಶ. ೧೭೬೭ರಲ್ಲಿ ಪೇಶ್ವೆಯರ ಪರವಾಗಿ ಇಚ್ಚಲಕರಂಜಿಯ ರಾಜಶ್ರೀ ವೆಂಕಟರಾವ ನಾರಾಯಣ ಇವರು ಆಡಳಿತ ನಡೆಸುತ್ತಿದ್ದರು. ಮತ್ತು ಅವರು ಉಡಪೀ ನರಸಿಂಹರಾವ ಇವರನ್ನು ಧಾರವಾಡದ ಕಮಾವಿಸದಾರ ಎಂದು ನೇಮಿಸಿದ್ದರು.

ಈ ವರ್ಷದ, ಅಂದರೆ ೧೭೬೭ರ ಜಮಾಖರ್ಚಿನ ವಿವರ ಹೀಗಿದೆ :

| | |
|---|---|
| | ರೂ.ಆ.ಪೈಸೆ |
| ಹಿಂದಿನ ವರ್ಷದ ಬಾಕಿ (ಬಾಕಿ ಸಾಲ ಗುದಸ್ತ) | ೨,೮೧೬–೯–೨ |
| ಚಾಲತೀ ವರ್ಷದ ಉತ್ಪನ್ನ (ಜಮಾ ಸಾಲ ಮಜಕೂರ) | ೫೧,೪೪೭–೨–೦ |
| ಒಟ್ಟು ಜಮಾ ರಕಂ | ೫೪,೨೬೩–೧೧–೨ |

| | |
|---|---|
| ಹಿಂದಿನ ವರ್ಷದ ಬಾಕಿಯ ತಪಶೀಲು ಮಜಮು ಬಾಕಿ (ಭೂಕಂದಾಯ ಉಳಿದದ್ದು) | ೨,೦೩೦–೧೪–೦ |
| ಗಾವಗಾನಾ ಬಾಕಿ (ಗ್ರಾಮಗಳಿಂದ ಬರತಕ್ಕದ್ದು) | ೭೮೫–೧೧–೬ |
| ಒಟ್ಟು | ೨,೮೧೬– ೯–೬ |

ಚಾಲತೀ ವರ್ಷದ ಜಮಾ ಈ ಕೆಳಗಿನಂತೆ ಇದೆ :

| | |
|---|---|
| ೪೮,೮೬೫–೧೪–೦ | ಮುಲಕಿ ಜಮಾ |
| ೨,೫೮೧– ೪–೦ | ಇಜಾಫತ್ ಮತ್ತು ಅಂತಸ್ತ |
| ಒಟ್ಟು ೫೧,೪೪೭– ೨–೦ | |

* ಪುಣೆಯ ಪತ್ರಾಗಾರ, ಕರ್ನಾಟಕ ಜಮಾವ ರುಮಾಲ ಸಂ. ೪೯

ಇದರ ಹೊರತಾಗಿ

೭,೭೭೪–೬–೦ ಸಿವಾಯೆ ಜಮಾ
೧,೦೩೨–೧–೦ ಕಮಾವಿಸಿ ಜಮೆ
೩೩,೦೯೮–೯–೦ ಐನ ಜಮೆ ಅಥವಾ ಮೂಲ ಜಮೆ

ಖರ್ಚಿನ ಬಾಬತ್ತು

೧) ೨೭,೦೫೭–೧೧–೧ ಸುಭಾಗಳಿಗೆ ರಸದ ಮತ್ತು ವರಾತಾ
೨) ೬,೨೯೧–೧೫–೧ ಮಹಾಲ ಮಹಕೂರ ಖರ್ಚು
೩) ೧,೧೨೦– ೦–೦ ಜಮೀನದಾರರ ಹಕೆ ವರ್ತನಾ
೪) ೫,೭೩೩– ೪–೦ ಮೊಕಸಿ
೫) ೬೯೦– ೦–೦ ಮುಂಗಡ ಮೇಲಿನ ಬಡ್ಡಿ
೬) ೫,೯೭೧–೧೨–೦ ಬಟಾ ಸಾಲ ಬಡ್ಡಿ

೪೬,೮೬೪–೧೦–೨ ಒಟ್ಟು

ಬಾಕಿ

೫೪,೨೬೩–೧೧–೨ ಇಡೀ ವರ್ಷದ ಉತ್ಪನ್ನ
೪೬,೮೬೪–೧೦–೨ ವಾರ್ಷಿಕ ಖರ್ಚು

೭,೩೯೯– ೧–೦ ಒಟ್ಟು

ಈ ಬಾಕಿಯ ತಪಶೀಲು

೬,೧೬೩–೧೨–೦ ಮುಹಮು ಬಾಕಿ
೧,೨೩೫– ೫–೦ ಮುಲಕೀ ಬಾಕಿ .

೭,೩೯೯– ೧–೦ ಒಟ್ಟು

**ವಿವರ :** ಹಿಂದಿನ ವರ್ಷದ ಬಾಕಿಯಲ್ಲಿ ೨,೦೩೦–೧೪–೦ ಮಜಮು ಬಾಕಿಯು ಕಿಲ್ಲೆ ಬಂಕಾಪುರದ ರಾಮಚಂದ್ರ ನಾರಾಯಣ ಇವರಿಗೆ ಮದ್ದು–ಗುಂಡು ತಯಾರಿಸಲಿಕ್ಕೆ ಗೋವಿಂದ ಭಾಸ್ಕರ ಫಡನೀಸ್ ಇವರಿಗೆ ವೇತನ ಹಾಗೂ ತಲೀಕಾರ ಭಾಪಾ ಇವನನ್ನು ಕಳುವು ಮಾಡುವಾಗ ಹಿಡಿದ ಬಗ್ಗೆ ಬಕ್ಷೀಸ್ ಕೊಡಬೇಕಾದದ್ದು ಇರುತ್ತದೆ. ಮತ್ತು ೭೮೫–೧೧–೬ ಇದು ಜಕಾತ, ಎತ್ತಿನಗುಡ್ಡ, ದೊಡ್ಡನಾಯಕನಕೊಪ್ಪ ಗ್ರಾಮುಗಳಿಂದ ಹಾಗೂ ಕೆಲಗೆರೆಯ ಶ್ರೀರಂಗ ಬಾಪು ಕಡೆಯಿಂದ ಬರತಕ್ಕ ಬಾಕಿ ಆಗಿರುತ್ತದೆ,

ಗ್ರಾಮುಗಳಿಂದ ಆದ ರದಕರ್ಜ ವಸೂಲು ರಕಂ—

೩೮,೪೯೦–೧೧–೦ ಇಕ್ಕೇರಿ ಹೊನ್ನು
೫,೭೬೨– ೬–೦ ಜುನೇ ಧಾರವಾಡೀ
೦– ೦–೦ ಪುದಿಚೇರಿ

ಇಲ್ಲಿ ಇಕ್ಕೇರಿ ಹೊನ್ನುಗಳನ್ನು ರೂಪಾಯಿಯಲ್ಲಿ ಪರಿವರ್ತಿಸಲಾಗಿದೆ. ದರ ೩–೧೨–೦ ಪ್ರಕಾರ.

೧) ಐನ ಜಮಾ ಅಥವಾ ಮೂಲ ಜಮೆಯ ವಿವರ :

೧೩,೨೮೦–೧೩–೨ ದರೋಬಿಸ್ತ ಗ್ರಾಮ
೨,೦೬೨– ೮–೦ ಭೀಮರಾವ ನರಸಿಂಗರಾವ ದೇಸಾಯಿ
೩,೫೬೨– ೮–೦ ಕೊನೇರ ಕಾಸಿ ದೇಶಪಾಂಡೆ
೩,೩೭೫– ೦–೦ ಗೋವನಕೊಪ್ಪದ ಸರನಾಡ ಗೌಡಾ
೧೮೭– ೮–೦ ಜೋಗಿ ಯಲ್ಲಾಪೂರದ ದೇವಣಗೌಡಾ ಪಾಟೀಲ
೪,೦೯೩– ೫–೯

ಒಟ್ಟು ೩೩,೦೯೮– ೯–೦

೨) **ಸಿವಾಯು ಜಮಾ :** ಅಂದರೆ ಅಧಿಕ ಆದಾಯದ ವಿವರ :

ಪರಗಣೆಯ ಇಜಾರದಾರರಾದ ರಾಮಾಜಿ ತಮಾಜಿ ಜಮೀನದಾರರಾದ ದೇಸಾಯಿ, ದೇಶಪಾಂಡೆ, ಸರನಾಡ ಗೌಡಾ ಮತ್ತು ದೇವಣ ಗೌಡಾ ಇವರ ಕಡೆಯಿಂದ ವಸೂಲಿ ಆದದ್ದು ಒಟ್ಟು ೩,೭೦೦-೦೦ ಮಾವಿನ ತೋಪು ಹಾಗೂ ಬಾಗಾಯತಗಳಿಂದ ೬೦-೦-೦. ಮಂಗಳವಾರಪೇಟೆ ಮತ್ತು ಶುಕ್ರವಾರಪೇಟೆಗಳಿಂದ ಬಂದ ಮೊಹರ್ತಫಾ (ಅಂಗಡಿ ಪಟ್ಟಿ) ಒಟ್ಟು ರಕಂ ೭,೭೭೪–೬–೦.

೩) **ಕಮಾವಿಸೀ ಜಮಾ :** ರಕಂ ೧,೦೩೨-೩-೦ ಇದನ್ನು ಈ ಕೆಳಗಿನಂತೆ ವಸೂಲ ಮಾಡಿದ್ದು : ಗಿರಿಯಣ್ಣ ಮತ್ತು ನರಸಣ್ಣ ಉಪ್ಪಾರಿ ಇವರಿಬ್ಬರ ಜಗಳವನ್ನು ಬಗೆಹರಿಸಿ ಗಿರಿಯಣ್ಣನ ಕಡೆಯಿಂದ ವಸೂಲ ಮಾಡಿದ್ದು, ಕಮಲಾಪೂರದ ಹಜಾಮನಿಗೆ (ಮಹಾಲೆ) ಪುರುಷತ್ವ ಇಲ್ಲ ಎಂಬುದರ ಬಗ್ಗೆ ಅವನ ಪತ್ನಿಯ

ದೂರು ಬಂದದ್ದರಿಂದ ವಸೂಲವಾದದ್ದು, ಅದೇ ಊರಿನ ನಾಯಿಂದ ಅಪ್ಪಣ್ಣಾರಾಯಣ ಅಳಿಯನಿಗೆ ಪುರುಷತ್ವ ಇಲ್ಲ ಎಂದು ಅವನ ಮಗಳ ದೂರು ಬಂದದ್ದರಿಂದ ವಸೂಲಿ ಮಾಡಿದ್ದು ಇರುತ್ತದೆ. ಅಲ್ಲದೇ ತೆಗೂರಿನ ದ್ವಾರದ ಹೊರಗೆ ಮಾಂಸದ ಅಂಗಡಿ ಇಟ್ಟ ಬಗ್ಗೆ ಬಸಣ್ಣಾ ತೇಲಿ, ದೇವಣ್ಣಾ ಕುರುಬಗಟ್ಟಿ, ಅಪ್ಪಣ್ಣಾ ಮೆಣಸಿನಕಾಯಿ ಮತ್ತು ಲಖಮೋಜಿ ಗೌಳಿ ಇವರ ಕಡೆಯಿಂದ ವಸೂಲಾದದ್ದು, ಶುಕ್ರವಾರಪೇಟೆಯ ಮಲ್ಯಾ ಜಂಗಮ ಕಳುವು ಮಾಡಿದ ಬಗ್ಗೆ, ರಾಯಣ್ಣ ಕೋಷ್ಟಿ ವ್ಯಭಿಚಾರ ಮಾಡಿದ ಬಗ್ಗೆ ವಸೂಲಾದದ್ದು ಇರುತ್ತದೆ.

ಈಗ ಖರ್ಚಿನ ವಿವರಗಳನ್ನು ನೋಡೋಣ.

ಸುಭಾ ಕಡೆಯಿಂದ ಮುಂಗಡ ಹಣ ಪಡೆದದ್ದು ವಾಪಸ್ ಕೊಡಬೇಕಾದದ್ದು, ನರಸಪ್ಪಾ ನಾಯಿಕ ಬೆಟಗೇರಿಕರ ಇವರಿಗೆ ೨೫,೫೦೦-೦೦ (ರಸದ) ಮತ್ತು ಖಜಾನೆಯಿಂದ ನೀಡಬೇಕಾದದ್ದು ರೂ. ೧,೫೫೭-೧೧-೧ ಈ ಕೆಳಗಿನವರಿಗೆ—ಬಾಲಾಜಿ ಮೋಹಿತೆ ಹವಾಲದಾರ, ಸಿದೋಜಿ ಜಗಥಾಪ, ಕೆಲಗೇರಿಯ ಶ್ರೀರಂಗ ಬಾಪೂ, ಕಾರಕೂನರಿಗೆ ವೇತನ ಧಾರವಾಡದ ಕೋಟೆಗೆ ಸಂಬಂಧ ಪಟ್ಟಂತೆ ಖರ್ಚು ಇತ್ಯಾದಿ (ವರಾತ); ಎರಡನೆಯ ದಾಗಿ, ಮಹಾಲ ಮಜಕೂರ ಖರ್ಚು ಇದರಲ್ಲಿ ಅಧಿಕಾರಿ ವರ್ಗದವರಿಗೆ ವೇತನ ರೂ. ೫೩೦-೦-೦೦. ಉದಾ : ಉಡಪೀ ನರಸಿಂಗ ಕಮಾವಿಸದಾರ, ಎಸಾಜಿ ವಿಠ್ಠಲ ಮಜುಮದಾರ ಮತ್ತು ವೆಂಕಾಜಿ ಮಾಧವರಾವ ಇವರಿಗೆ ೫೬ ಸಿಬ್ಬಂದಿಗಳಿಗೆ ರೂ. ೨,೦೮೦-೦-೦. ಹೆಚ್ಚಿನ ಸಿಬ್ಬಂದಿವರ್ಗ ಹಿಡಿದು ರೂ. ೪,೬೧೮-೮-೦. ಇದರಲ್ಲಿ ಗ್ರಾಮ ಸೇವಕರಿಗೆ ಅಥವಾ ಪಾಲಕರಿಗೆ (ಸೀತ ಸನದಿ) ರೂ. ೧,೧೯೯-೧೨-೦ ವೇತನ ನೀಡಲಾಯಿತು.

ವೇತನದ ಹೊರತಾಗಿ ಉಳಿದ ಖರ್ಚಿಗೆ ಖೇರಿಜ ಮುಶಾಹಿರಾ ಎಂದು ಕರೆಯಲಾಗುತ್ತಿತ್ತು. ಅದು ರೂ. ೧,೧೪೩-೭-೧ ಇತ್ತು. ಇದರಲ್ಲಿ ಈ ಕೆಳಗಿನ ದೇವಸ್ಥಾನಗಳಿಗೆ ಖರ್ಚು ಮಾಡಲಾಯಿತು. ಮಂಗಳವಾರ ಪೇಟೆಯ ಶ್ರೀ ವೆಂಕಟೇಶ, ಉಳವಿಬಸಪ್ಪಾ ದುರ್ಗಾದೇವಿ, ಹಣಮಂತ ರವಿವಾರಪೇಟೆ, ಹೊಸಕಟ್ಟಿಯ ಸೋಮೇಶ್ವರ ದೇವಾಲಯ ಇತ್ಯಾದಿ ಬ್ರಾಹ್ಮಣರಿಗೆ ವರ್ಷಾಸನ ನೀಡಿದ್ದು ರಾಮದಾಸ ಬೈರಾಗಿ ಮತ್ತು ಬಾಲಂಭಟ್ಟ ಡೊಂಗರೆ ಇವರಿಗೆ, ಕಛೇರಿಯ ಖರ್ಚು ಅತಿಥಿಗಳ ಖರ್ಚು ಇತ್ಯಾದಿ ಇದರಲ್ಲಿ ಕೂಡಿರುತ್ತದೆ. ಇದರ ಹೊರತಾಗಿ ಮೋಕಾಶಿ ಮತ್ತು ರಾಜಮಂಡಳದ ಸದಸ್ಯರಿಗೆ ನೀಡುವ ವೇತನದ ವಿವರ ಇಲ್ಲಿ ಕೊಡಲಾಗಿದೆ. ಪರಶುರಾಮ ಬಲ್ಲಾಳ ಸುರಣೀಸ ೯೭-೮-೦, ರಾಣೋಜಿ ಸಲಗರ ೧೭೮೩-೧೦-೦. ರಾಣೋಜಿ ಸರ್ಜಾರಾವ ವಾಗಮೋಡೆ ೧,೯೫೨-೧೨-೦, ಗಿರಜೋಜಿ ನಲವಡೆ ೧೭೨-೮-೦, ಭಾಸ್ಕರರಾವ್ ದಾದಾಜಿ ನರಗುಂದಕರ ೪೫-೦-೦, ಮನೋಲಿ ಶಿಂಧೇ ೩೨೮-೨-೦, ಸಂತಾಜಿ ಜಗತಾಪ ೧,೩೫೩-೧೨-೦ ಒಟ್ಟು ೫,೭೩೩-೪-೦, ಕೊನೆಯದಾಗಿ ಚಾಲತೀ ವರ್ಷದ ಬಡ್ಡೀಹಣ ಕಂತಿನಲ್ಲಿ ನೀಡಿದ್ದು ಅಂದರೆ ೩೮,೬೯-೨-೦ ಸಾಲಾಬಾದಿ ಜಮಾ, ೨,೩೩೧-೦-೦ ಅಂತಸ್ತ, ೪,೧೯೫-೦-೦ ಹೆಚ್ಚಿನ ಬಡ್ಡಿ ೨,೦೦೦-೦-೦ ಅಂತಸ್ತ ಗೋಪನಕೊಪ್ಪದ ಜಪ್ತಿ ಮತ್ತು ೪೫೧-೪-೦ ಮೊಕಾಸಿ ಹಣ. ಹೀಗೆ ಒಟ್ಟು ೪೭,೬೭೬-೬-೦. ಅದಲ್ಲದೇ ಬಟಾ ಖರ್ಚು ಅಂದರೆ ನಾಣ್ಯಗಳನ್ನು ಬದಲಾಯಿಸುವದಕ್ಕೆ ಕಮೀಷನ್ ಕೊಟ್ಟದ್ದು ರೂ. ೩೧,೮೪೯-೬-೩. ಹೀಗೆ ವರ್ಷದ ಒಟ್ಟು ಖರ್ಚಿನ ರಕಮು ೪೬,೮೬೪-೧೧-೨ ಮತ್ತು ಬಾಕಿ ೭,೩೯-೧-೦. ಇದರಲ್ಲಿ ಮಜಮು ಬಾಕಿ ರೂ. ೬,೧೬೩-೧೨-೦ ಮತ್ತು ಮುಲಕಿ ಬಾಕಿ ೧,೨೩೫-೫-೦. ಹೀಗೆ ಈ ತಾಳೇಬಂದ ಪೇಶ್ವೆಯರ ಕಾಲದ ಧಾರವಾಡದ ಆಡಳಿತ ಪದ್ಧತಿ, ಸಾಮಾಜಿಕ ಹಾಗೂ ಆರ್ಥಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತದೆ.

ಡಾ॥ ಎ. ಕೆ. ಶಾಸ್ತ್ರಿ

# ಶಿರಸಿ ತಾಲೂಕಿನ ಐತಿಹಾಸಿಕ ಆಕರಗಳು

ಉತ್ತರಕನ್ನಡ ಜಿಲ್ಲೆಯ ಹನ್ನೊಂದು[1] ತಾಲೂಕುಗಳಲ್ಲೊಂದಾದ ಶಿರಸಿ ತಾಲೂಕು, ಇಂದು ಹದಿನಾರು[2] ಮಂಡಲ ಪಂಚಾಯತಗಳನ್ನೊಳಗೊಂಡಿದೆ. ಘಟ್ಟದ ಮೇಲಿನ ಮಲೆನಾಡಿನಲ್ಲಿ ಪಸರಿಸಿಕೊಂಡಿರುವ ಶಿರಸಿ ತಾಲೂಕು ಜಿಲ್ಲೆಯ ಪೂರ್ವಭಾಗದಲ್ಲಿದ್ದು, ಸುಮಾರು ೧೩೨೧.೧೬ ಚ.ಕಿ.ಮೀ. ವಿಸ್ತಾರವಾಗಿದೆ. ಶಿರಸಿ ತಾಲೂಕು ಸಮುದ್ರ ಪಾತಳಿಗಿಂತ ಸುಮಾರು ೨೫೦೦ ಅಡಿಗಳಷ್ಟು ಎತ್ತರದಲ್ಲಿದೆ,

ಶಿರಸಿಯು ಇಂದು ಉತ್ತರಕನ್ನಡ ಜಿಲ್ಲೆಯಲ್ಲಿಯೇ ಒಂದು ಪ್ರಮುಖ ವ್ಯಾಪಾರ, ವಾಣಿಜ್ಯ, ಉದ್ಯಮ, ಕೃಷಿ ಮತ್ತು ಶಿಕ್ಷಣ ಇವುಗಳ ಕೇಂದ್ರವಾಗಿದೆ. ಆದರೆ ಶಿರಸಿಗೆ ಹೇಳಿಕೊಳ್ಳುವಂಥ ಪ್ರಾಚೀನ ಇತಿಹಾಸವಿಲ್ಲ. ಸಿದ್ದಾಪುರ ತಾಲೂಕಿನ ತಮಡಿ ಕಲ್ಲಾಳದಲ್ಲಿ ದೊರೆತ ವೀರಗಲ್ಲಿನ ಮೇಲೆ ಕೆತ್ತಿದ ಶಾಸನವಲ್ಲಿ[3] 'ಸಿರಿಸೆ' ಎಂದು ಕಾಣಿಸಲಾಗಿದ್ದು, ಅಲ್ಲಿ ಯುದ್ಧ ಜರುಗಿತು ಎಂದು ಉಲ್ಲೇಖಿಸಲಾಗಿದೆ. ಕ್ರಿ.ಶ. ೧೮೦೦–೧೮೦೧ರಲ್ಲಿ ಈಗಿನ ಉತ್ತರಕನ್ನಡ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡಿದ್ದ ಬುಕಾನನ್‌ನು,[4] 'ಸೆರ್ಸಿ' ಒಂದು ಸಣ್ಣ ಹಳ್ಳಿ ; ಆದರೆ ಅದು ಸೋಂದಾದ ತಹಶೀಲ್ದಾರನಿರುವ ಸ್ಥಳ ಎಂದು ಉಲ್ಲೇಖಿಸಿದ್ದಾನೆ. ೧೮೫೯ರಲ್ಲಿ ಸೋಂದಾದಿಂದ ಶಿರಸಿಗೆ ತಾಲೂಕು ಸ್ಥಳವನ್ನು ಸ್ಥಳಾಂತರಿಸಲಾಯಿತು.

---

1 ಭಟಕಳ, ಹೊನ್ನಾವರ, ಕುಮಟಾ, ಅಂಕೋಲಾ ಮತ್ತು ಕಾರವಾರ, ಇವು ಐದು ಘಟ್ಟದ ಕೆಳಗಿನ ತಾಲೂಕುಗಳು. ಸಿರಸಿ, ಸಿದ್ದಾಪುರ, ಮುಂಡಗೋಡು, ಯಲ್ಲಾಪುರ, ಹಳಿಯಾಳ ಮತ್ತು ಜೋಯಿಡಾ (ಸುಪಾ), ಇವು ಆರು ಘಟ್ಟದ ಮೇಲಿನ ತಾಲೂಕುಗಳು.

2 ಬನವಾಸಿ. ಗುಡ್ನಾಪುರ, ಸುಗಾವಿ, ಬದನಗೋಡು, ಬಿಸಲಕೊಪ್ಪ, ಇಸಳೂರು, ಭೈರುಂಬೆ, ಹುಲೇಕಲ್, ಇಟಗುಳಿ, ಸಾಲ್ಕಣಿ, ವಾನಳ್ಳಿ, ಶಿವಳ್ಳಿ, ಸಂಪಖಂಡ, ನೆಗ್ಗು, ಕಾನಗೋಡು, ದೇವನಳ್ಳಿ. ಮಂಡಳ ಪಂಚಾಯತ ಬರುವ ಪೂರ್ವದಲ್ಲಿ ಶಿರಸಿ, ತಾಲೂಕಿನಲ್ಲಿಯ ಹೋಬಳಿಗಳ ಸಂಖ್ಯೆ ೪. ಗ್ರಾಮಗಳ ಸಂಖ್ಯೆ ೨೨೬ ಹಾಗೂ ೩೨ ಗ್ರಾಮ ಪಂಚಾಯತುಗಳು.

3 ವೀರಗಲ್ಲಿನ ಶಾಸನದ ತಿಥಿ : ಡಿಸೆಂಬರ್ ೨೬ (ಗುರುವಾರ), ೧೦೭೨. ಚಟ್ಟಯ್ಯದೇವನು ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದ ಮತ್ತು ಅದೇ ಕಾಲದಲ್ಲಿ, ಅದೇ ನಾಡನ್ನು ಆತನ ತಮ್ಮ ತೈಲಪದೇವನು ಆಳುತ್ತಿದ್ದ ಎಂದು ನಮೂದಿಸಲಾಗಿದೆ. ಅಣ್ಣ-ತಮ್ಮಂದಿರಲ್ಲಿಯ ವೈಷಮ್ಯವೇ ಕಾಳಗಕ್ಕೆ ಕಾರಣ ಎಂಬುದು ಸುಸ್ಪಷ್ಟ.

4 ಕ್ರಿ.ಶ. ೧೭೬೨ರಲ್ಲಿ ಫ್ರಾನ್ಸಿಸ್ ಬುಕಾನನ್‌ನು ಸ್ಟಿರ್ಲಿಂಗ್‌ಶೈರ್‌ನಲ್ಲಿ ಜನಿಸಿ, ೧೭೮೩ರಲ್ಲಿ ಎಡಿನ್‌ಬರೊದಲ್ಲಿ ಪದವೀಧರನಾದನು. ೧೭೯೪ರಲ್ಲಿ ಸರ್ಜನ್ ಆಗಿ ಈಸ್ಟ್ ಇಂಡಿಯಾ ಕಂಪನಿಯಲ್ಲಿ ನೇಮಕಗೊಂಡನು. ಟೀಪೂಸುಲ್ತಾನನ ಮರಣದ ನಂತರ, ಕಂಪನಿಯು ಹೊಸದಾಗಿ ಪಡೆದ ಮೈಸೂರು ಹಾಗೂ ಮಲಬಾರ ಪ್ರದೇಶಗಳಲ್ಲಿ ಪ್ರವಾಸ ಕೈಗೊಂಡು ಅಲ್ಲಿಯ ವೃತ್ತಾಂತವನ್ನು ಅರುಹಲು ೧೮೦೦ರಲ್ಲಿ ಗವರ್ನರ್ ಜನರಲ್ ವೆಲ್ಲೆಸ್ಲಿಯು ಡಾ॥ ಫ್ರಾನ್ಸಿಸ್ ಬುಕಾನನ್‌ನನ್ನು ನೇಮಿಸಿದನು. 'Journey Through the Northern Parts of Kanara' ಎಂಬುದರಲ್ಲಿ ಡಾ॥ ಬುಕಾನನ್ ವೃತ್ತಾಂತವನ್ನೆಲ್ಲ ನೀಡಿದ್ದಾನೆ. ಬುಕಾನನ್‌ನು ೧೮೨೯ರಲ್ಲಿ, ತನ್ನ ೬೭ನೇ ವಯಸ್ಸಿನಲ್ಲಿ ಮೃತನಾದನು.

ಅಂದರೆ, ಶಿರಸಿ ಒಂದು ತಾಲೂಕಾಗಿ ಮತ್ತು ನಗರವಾಗಿ ಬೆಳೆಯಲು ಪ್ರಾರಂಭವಾಗಿದ್ದು ಹತ್ತೊಂಬತ್ತನೆಯ ಶತಮಾನದಿಂದೀಚೆಗೆಂದೇ ಹೇಳಬೇಕು. ಶಿರಸಿಗೆ ಐತಿಹಾಸಿಕ ಮಹತ್ವವು ಅಷ್ಟೊಂದಿಲ್ಲದಿದ್ದರೂ, ಈಗಿನ ಶಿರಸಿ ತಾಲೂಕಿನಲ್ಲಿರುವ ಬನವಾಸಿ ಹಾಗೂ ಸ್ವಾದಿ ಪ್ರದೇಶಗಳು ಕರ್ನಾಟಕದ ಪ್ರಸಿದ್ಧ ಐತಿಹಾಸಿಕ ಸ್ಥಳಗಳು. ಹೀಗಾಗಿ, ಮೊದಲೊಮ್ಮೆ ಬನವಾಸಿ ಹಾಗೂ ಸ್ವಾದಿ ರಾಜ್ಯಗಳಲ್ಲಿಯ ಒಂದು ಭಾಗವೆನಿಸಿದ ಶಿರಸಿಗೆ ಸ್ವತಂತ್ರ ಸ್ಥಾನ ದೊರಕಿದ್ದು ಬ್ರಿಟಿಷರ ಆಧಿಪತ್ಯದಲ್ಲಿ; ಕರ್ನಾಟಕದ ಸರಿಯಾದ ಇತಿಹಾಸ ಪ್ರಾರಂಭವಾಗಿದ್ದು ಕದಂಬ ಸಾಮ್ರಾಜ್ಯದ ಕೇಂದ್ರವಾದ ಬನವಾಸಿಯಿಂದ ಎಂಬುದು ತಿಳಿದ ವಿಷಯ.

ಶಿರಸಿ ತಾಲೂಕಿನ ಐತಿಹಾಸಿಕ ಘಟನೆಗಳ ಸಿಂಹಾವಲೋಕನದಿಂದ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಈ ತಾಲೂಕಿನಲ್ಲಿಯ ಪ್ರದೇಶಗಳು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಅರಸು ಮನೆತನಗಳ ಆಧಿಪತ್ಯಕ್ಕೆ ಒಳಪಟ್ಟಿದ್ದವು. ಕ್ರಿ.ಶ. ಪೂರ್ವದಲ್ಲಿ ಮೌರ್ಯರು ಮತ್ತು ಕ್ರಿ. ಶ. ಒಂದು ಮತ್ತು ಎರಡನೇ ಶತಮಾನದಲ್ಲಿ ಶಾತವಾಹನರು (ಸಾತವಾಹನರು) ತಮ್ಮ ಪ್ರಭುತ್ವವನ್ನು ಸ್ಥಾಪಿಸಿದಂತೆ ತೋರುತ್ತದೆ. ಕ್ರಿ. ಶ. ಎರಡನೇ ಶತಮಾನದಿಂದ ಮೂರನೇ ಶತಮಾನದವರೆಗೆ ಶಾತವಾಹನರ ಶಾಖೆಯವರಾದ ಚುಟು ವಂಶಜರು ಆಳಿದ ನಂತರ ಬನವಾಸಿ ಪ್ರದೇಶವು ಕಂಚಿಯ ಪಲ್ಲವರಿಂದ ಆಳಲ್ಪಟ್ಟಿತು. ನಂತರದಲ್ಲಿ, ಚಕ್ರಾಧಿಪತ್ಯವನ್ನು ಸ್ಥಾಪಿಸಿದವರೆಂದರೆ ಕದಂಬರು. ಬನವಾಸಿ ಕದಂಬರ ಆಳ್ವಿಕೆ ಕ್ರಿ. ಶ. ಮೂರನೇ ಶತಮಾನದಿಂದ ಆರನೇ ಶತಮಾನದವರೆಗೆ. ಬನವಾಸಿ ಕದಂಬರನ್ನು ಬಾದಾಮಿ ಚಾಲುಕ್ಯರು ಸೋಲಿಸಿ, ಈ ನಾಡನ್ನು ತಮ್ಮ ಆಧೀನದಲ್ಲಿರಿಸಿಕೊಂಡರು. ಮಂಗಳೂರಿನ ಆಳುಪರನ್ನು ಪರಾಭವಗೊಳಿಸಿದ ಎರಡನೇ ಪುಲಿಕೇಶಿಯು ಬನವಾಸಿ ಮಂಡಲವನ್ನು ಆಳಲು ಆಳುಪರನ್ನು ನಿಯಮಿಸಿದನು. ಮುಂದೆ, ಉತ್ತರಕನ್ನಡ ಜಿಲ್ಲೆಯ ಬಹು ಭಾಗವನ್ನು ವ್ಯಾಪಿಸಿದ್ದ ಬನವಾಸಿ ೧೨,೦೦೦ ಪ್ರಾಂತವನ್ನು ರಾಷ್ಟ್ರಕೂಟರು ವಶಪಡಿಸಿಕೊಂಡು ತಮ್ಮ ಆಡಳಿತವನ್ನು ವಿಸ್ತರಿಸಿದರು. ಹತ್ತು, ಹನ್ನೊಂದು ಮತ್ತು ಹನ್ನೆರಡನೇ ಶತಮಾನದ ಶಿರಸಿ ತಾಲೂಕಿನಲ್ಲಿ ದೊರೆತ ಶಾಸನಗಳಲ್ಲಿನ ಕದಂಬರ ಮತ್ತು ಕಲ್ಯಾಣ ಚಾಲುಕ್ಯರ ಶಾಸನಗಳು ಅವರ ಪ್ರಭುತ್ವವನ್ನು ಸೂಚಿಸುತ್ತವೆ. ಹದಿನಾಲ್ಕನೇ ಶತಮಾನದ ಮಧ್ಯದಿಂದ ಹದಿನಾರನೇ ಶತಮಾನದ ಮಧ್ಯದವರೆಗೆ, ವಿಜಯನಗರ (ವಿದ್ಯಾನಗರ) ಸಮ್ರಾಟರ ಮಾಂಡಲಿಕರಾದ ಸೋಂದಾದ ನಾಯಕರು ಶಿರಸಿ ತಾಲೂಕಿನಲ್ಲಿ, ವಿಶೇಷ ಅಧಿಕಾರ ಹೊಂದಿ ಗೌರವಯುತವಾಗಿ ಆಳಿದರು. ಈ ಪ್ರದೇಶವನ್ನು ನಾಯಕರು ಸು. ಕ್ರಿ. ಶ. ೧೪೦೦ರಿಂದ ೧೭೬೪ ರವರೆಗೆ ಆಳಿದರು. ಹದಿನೇಳು ಮತ್ತು ಹದಿನೆಂಟನೇ ಶತಮಾನಗಳಲ್ಲಿ ವಿಜಾಪುರದ ಸುಲ್ತಾನರು, ಮರಾಠರು ಹಾಗೂ ಮೊಘಲರು ಉತ್ತರಕನ್ನಡ ಜಿಲ್ಲೆಯ ಬಹು ಭಾಗಗಳನ್ನು ತಮ್ಮ ಅಂಕಿತದಲ್ಲಿರಿಸಿಕೊಂಡರು. ೧೭೬೩ ರಲ್ಲಿ ಮೈಸೂರಿನ ಹೈದರ್‌ಅಲಿ ಸೋದೆಯನ್ನು ವಶಪಡಿಸಿಕೊಂಡನು. ೧೭೯೯ ರಲ್ಲಿ ಜರುಗಿದ ನಾಲ್ಕನೇ ಆಂಗ್ಲ - ಮೈಸೂರು ಯುದ್ಧದಲ್ಲಿ ಟೀಪೂಸುಲ್ತಾನನು ಮರಣ ಹೊಂದಿದ ನಂತರ, ಉತ್ತರಕನ್ನಡ ಜಿಲ್ಲೆಯನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಲಾಯಿತು. ೧೮೬೨ರಲ್ಲಿ ಆಂಗ್ಲರು ಉತ್ತರಕನ್ನಡ ಜಿಲ್ಲೆಯನ್ನು ಮುಂಬಯಿ ಪ್ರಾಂತಕ್ಕೆ ಸೇರಿಸಿದರು. ಭಾಷಾವಾರು ಪ್ರಾಂತ ರಚನೆಯನ್ವಯ ೧೯೫೬ ರಲ್ಲಿ ಮೈಸೂರು ರಾಜ್ಯವು ಅಸ್ತಿತ್ವಕ್ಕೆ ಬಂದಾಗ ಮುಂಬಯಿ ಪ್ರಾಂತದಲ್ಲಿ ವಿಲೀನಗೊಂಡ ವಿಜಾಪುರ, ಬೆಳಗಾವಿ, ಧಾರವಾಡ ಮತ್ತು ಉತ್ತರಕನ್ನಡ ಜಿಲ್ಲೆಗಳನ್ನು ಮೈಸೂರು ರಾಜ್ಯಕ್ಕೆ ಸೇರಿಸಲಾಯಿತು. ೧೯೭೭ರಲ್ಲಿ 'ನಾರ್ತ್‌ಕೆನರಾ' ಎಂಬ ಹೆಸರಿನ ಬದಲಾಗಿ 'ಉತ್ತರಕನ್ನಡ' ಎಂದು ಹೆಸರಿಸಲಾಯಿತು.

ಶಿರಸಿ ತಾಲೂಕಿನ ಪ್ರದೇಶಗಳು ಕಾಲ ಕಾಲಕ್ಕೆ ಬೇರೆ ಬೇರೆ ಅರಸುಗಳ ಆಡಳಿತಕ್ಕೆ ಒಳಪಟ್ಟಿದ್ದರಿಂದ, ಗಡಿ ವಿಷಯದಲ್ಲಿಯೂ ಪ್ರಸರಣ - ಆಕುಂಚನ ಹೊಂದಿದ್ದನ್ನು ಗಮನಿಸಬಹುದು. ತಾಲೂಕಿನ ಒಳ ಹಾಗೂ ಹೊರವಲಯಗಳಲ್ಲಿ ವಿಪುಲವಾಗಿ ದೊರೆತ ಹಾಗೂ ಕಂಡುಬಂದ ಶಿಲಾಶಾಸನ, ತಾಮ್ರಶಾಸನ, ಕೋಟೆ, ದೇವಸ್ಥಾನ, ಮಠ, ಬೌದ್ಧ ಚೈತ್ಯಾಲಯ, ಜೈನ ಬಸದಿ ಮಸೀದೆ, ಇಗರ್ಜಿ, ತಟಾಕ, ವೀರಗಲ್ಲು, ಮಹಾಸತಿ ಕಲ್ಲು, ನಾಣ್ಯ, ತಾಳೆಗರಿ, ವಿದೇಶೀ ಪ್ರವಾಸಿಗಳ ಕಥನ, ಕಾಗದ ಪತ್ರ, ಸಂಪ್ರದಾಯ ಮತ್ತು ಐತಿಹ್ಯಗಳು ಮಹತ್ವದ ಇತಿಹಾಸ ಸಾಮಗ್ರಿಗಳಾಗಿವೆ. ಆದರೆ ದುರ್ದೈವದ ಸಂಗತಿಯೆಂದರೆ, ಐತಿಹಾಸಿಕ ಸಾಮಗ್ರಿಗಳ

ಗೆಲ್ಲ ಸರಿಯಾದ ರಕ್ಷಣೆ ದೊರೆತಿಲ್ಲ. ಜಿಲ್ಲೆಯ ಸಮಗ್ರ, ಸುಸಂಬದ್ಧ ಮತ್ತು ಸುದೀರ್ಘವಾದ ಇತಿಹಾಸವನ್ನು ಬರೆಯುವ ಕಾರ್ಯ ಇನ್ನೂ ಆಗಿಲ್ಲವೆಂದೇ ಹೇಳಬೇಕು.

ಕಾರವಾರ ಜಿಲ್ಲೆಯಲ್ಲಿ ಬೆಳಕಿಗೆ ಬಂದ ಒಟ್ಟು ಶಾಸನಗಳ ಸಂಖ್ಯೆ ೪೦೦. ಅವುಗಳಲ್ಲಿ ಶಿರಸಿ ತಾಲೂಕಿನಲ್ಲಿಯ ಶಾಸನಗಳ ಸಂಖ್ಯೆ ೧೪೦ ಎಂದು ಡಾ|| ಆರ್. ಎನ್. ಗುರವ ಹೇಳಿದ್ದಾರೆ.[5] ಆದರೆ ೧೯೮೫ ರಲ್ಲಿ ಪ್ರಕಟವಾದ 'ಉತ್ತರಕನ್ನಡ ಜಿಲ್ಲೆಯ ಗೆಜೆಟಿಯರ್'[6] ನಲ್ಲಿ, ಜಿಲ್ಲೆಯ ಒಟ್ಟು ಶಾಸನಗಳ ಸಂಖ್ಯೆ ೫೦೦ ಎಂದು ನಮೂದಿಸಲಾಗಿದೆ. ಇವುಗಳಲ್ಲಿ ಬಹಳಷ್ಟು ಶಾಸನಗಳನ್ನು ಪ್ರಧಾನ ಶಾಸನವಿದ್ಯಾ ಪಂಡಿತರ ಕಚೇರಿಯವರು ಹಾಗೂ ಕರ್ನಾಟಕದ ವಿಶ್ವವಿದ್ಯಾಲಯದ ವಿದ್ವಾಂಸರು ನಕಲು ಮಾಡಿಕೊಂಡಿದ್ದಾರೆ. 'ದಕ್ಷಿಣಭಾರತದ ಶಾಸನಗಳು' ಎಂಬ ಹೊತ್ತಿಗೆಯಲ್ಲಿ, ಶಿರಸಿ ತಾಲೂಕಿಗೆ ಸಂಬಂಧಿಸಿದ ಸುಮಾರು ೩೦ ಶಾಸನಗಳನ್ನು ನಮೂದಿಸಲಾಗಿದೆ.[7] ತಾಲೂಕಿನಲ್ಲಿ ದೊರೆಯುವ ಕೆಲವು ಶಾಸನಗಳು ಶಕವರ್ಷ, ಸಂವತ್ಸರ, ಮಾಸ, ಪಕ್ಷ, ತಿಥಿ, ವಾರ, ಯಾರಿಂದ ಯಾರಿಗೆ ಭೂದಾನ, ಭೂದಾನದ ಕಾರಣ, ಭೂಮಿಯ ವಿವರ ಮತ್ತು ಅಪರೋಕ್ಷವಾಗಿ ಇನ್ನೂ ಎಷ್ಟೋ ವಿಷಯಗಳನ್ನು ನಿರ್ದಿಷ್ಟವಾಗಿ ಅರಹುತ್ತವೆ. ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳನ್ನರಿಯಲು ಶಾಸನಗಳು ಬಹಳೇ ಉಪಕಾರಿ.

ಪ್ರಾಚೀನ ಹಾಗೂ ಮಧ್ಯಯುಗೀನ ಕಾಲದ ಕಲೆ, ಶಿಲ್ಪವಿನ್ಯಾಸ, ಧರ್ಮ ಮುಂತಾದ ವಿಷಯಗಳನ್ನರಿಯಲು, ತಾಲೂಕಿನ ವಿವಿಧ ಭಾಗಗಳಲ್ಲಿಯ ದೇವಾಲಯಗಳು, ಕೋಟೆಯ ಅವಶೇಷಗಳು, ಕೆರೆ ಮತ್ತು ಹೊಂಡಗಳು ಪ್ರಯೋಜನಕಾರಿಯಾಗಿವೆ. ಕೆಲವು ವರ್ಷಗಳ ಹಿಂದೆ, ಡಾ|| ಎಂ. ಶೇಷಾದ್ರಿಯವರು ಡಾ|| ಎ. ವಿ. ನರಸಿಂಹಮೂರ್ತಿಯವರೊಂದಿಗೆ ಬನವಾಸಿಯಲ್ಲಿ ಭೂಶೋಧನೆ (ಉತ್ಖನನ) ಮಾಡಿ, ಇಟ್ಟಿಗೆಯಲ್ಲಿ ನಿರ್ಮಿಸಿದ ಶಾತವಾಹನರ ಕಾಲಕ್ಕೆ ಸೇರಿದ ಬೌದ್ಧ ಅವಶೇಷಗಳನ್ನು ಬೆಳಕಿಗೆ ತಂದಿದ್ದಾರೆ. ಶ್ರೀ ಮಧುಕೇಶ್ವರ, ಶ್ರೀ ಪಾರ್ವತಿ, ಶ್ರೀ ಗಣಪತಿ, ಶ್ರೀ ನರಸಿಂಹ, ರುದ್ರಪಾದ, ಆದಿ ಮಧುಕೇಶ್ವರ, ಬಸವಲಿಂಗೇಶ್ವರ, ಜೈನ ಬಸದಿ ಮುಂತಾದವುಗಳು ಬನವಾಸಿಯಲ್ಲಿಯ ಐತಿಹಾಸಿಕ ಕುರುಹುಗಳು.

ಬನವಾಸಿಯ ಕದಂಬರ ಹೊರತಾಗಿ, ಈಗಿನ ಶಿರಸಿ ತಾಲೂಕಿನ ಪ್ರದೇಶವನ್ನು ಸು. ಕ್ರಿ.ಶ. ೧೪೦೦ ರಿಂದ ಕ್ರಿ.ಶ. ೧೭೬೪ರವರೆಗೆ ಆಳಿದವರೆಂದರೆ ಸುಧಾಪುರವೆಂದು ಕರೆಯಲ್ಪಟ್ಟ ಸೋದೆ(ಸ್ವಾದಿ)ಯ ನಾಯಕರು. ಸುಧಾಕ್ಷೇತ್ರದ ವಾದಿರಾಜಮಠ, ಸ್ವರ್ಣವಲ್ಲೀಮಠ (ಶ್ರೀ ಚಂದ್ರಮೌಳೀಶ್ವರ ಮತ್ತು ಶ್ರೀ ಲಕ್ಷ್ಮೀನರಸಿಂಹ ಗುಡಿಗಳು), ಕೃಷ್ಣ, ಹನುಮಂತ, ಈಶ್ವರ, ತ್ರಿವಿಕ್ರಮ, ಶಂಕರನಾರಾಯಣ ದೇವಾಲಯಗಳು, ವೀರಶೈವರ ಗದ್ದಿಗೆಯ ಮಠ, ಜೈನರ ಬಸದಿ, ಸಹಸ್ರಲಿಂಗ, ಮಂಜಗುಣಿಯ ವೆಂಕಟರಮಣ ದೇವಾಲಯ ಮುಂತಾದವುಗಳು ಕೇವಲ ಧಾರ್ಮಿಕ ಕೇಂದ್ರಗಳಾಗಿರದೆ ಶಿಲ್ಪಕಲೆಯ ಆಕರಗಳೂ ಆಗಿವೆ.

ಶಿರಸಿ ನಗರದಲ್ಲಿಯ ಶ್ರೀ ಶಂಕರ ಹಾಗೂ ಶ್ರೀ ಮಹಾಗಣಪತಿ ಗುಡಿಗಳು ಅತ್ಯಂತ ಪ್ರಾಚೀನವಾದವುಗಳು. ಶ್ರೀ ಮಾರಿಕಾಂಬೆ, ವೀರಭದ್ರ, ಈಶ್ವರ ಹಾಗೂ ಬಸ್ತಿಗಲ್ಲಿಯ ಪಾರ್ಶ್ವನಾಥ ಮಧ್ಯಕಾಲಕ್ಕೆ ಸೇರಿದವುಗಳು. ಅರ್ವಾಚೀನ ಕಾಲದ ಮಂದಿರಗಳೆಂದರೆ, ವೆಂಕಟರಮಣ ದೇವಾಲಯ, ವಿಷ್ಣು ದೇವಾಲಯ, ಗೋಪಾಲಕೃಷ್ಣ ಮಂದಿರ, ಈಶ್ವರ ದೇವಾಲಯ, ಚನ್ನಪಟ್ಟಣದಲ್ಲಿಯ ಮಾರುತಿ ಗುಡಿ, ದತ್ತಾತ್ರೇಯ ಮಂದಿರ, ನೀಲೇಕಣಿಯ ಸುಬ್ರಹ್ಮಣ್ಯ ದೇವಾಲಯ, ಸಿಂಪಿಗಲ್ಲಿಯ ವಿಠೋಬ ಮತ್ತು ತೀರ ಇತ್ತೀಚಿನವುಗಳಾದ ಶ್ರೀ ರಾಮ ಮಂದಿರ, ಶ್ರೀ ರಾಘವೇಂದ್ರ ಮಠ, ಶ್ರೀ ಮಾರಿಕಾಂಬಾ ದೇವಸ್ಥಾನದ ಸಮ್ಮುಖದಲ್ಲಿ ಹಳೆಯ ಸ್ಥಳದಲ್ಲಿ ಹೊಸದಾಗಿ ನಿರ್ಮಿಸಲ್ಪಟ್ಟ ಈಶ್ವರ ದೇವಾಲಯ, ರಾಯರ ಪೇಟೆ

---

5 ಕಾರವಾರ ಜಿಲ್ಲೆಯ ಶಾಸನಗಳು, ಧಾರವಾಡ, ೧೯೭೫, ಪು. ೫-೬

6 ಪ್ರಧಾನ ಸಂ. : ಡಾ|| ಸೂರ್ಯನಾಥ ಕಾಮತ್, ಪು ೧೦೦

7 South Indian Inscriptions, Vol. XX, 1956, Nos. 1, 41, 88, 108, 227, 229 – 231 233, 236, 241, 249, 251, 253 – 256, 291, 357, 367, 389, 392–400

ಯಲ್ಲಿಯ ಸತನಾಮ ಮಂದಿರ, ದೇವಿಕೆರೆಯ ಭೂತಪ್ಪ, ಕಾಲೇಜು ರಸ್ತೆಗೆ ಹೊಂದಿಕೊಂಡಿರುವ ಕೊಪ್ಪರಗಿಕೆಂಡ ಮಹಾಸತಿ ಗುಡಿ, ಇತ್ಯಾದಿ.

ಅರ್ವಾಚೀನ ಕಾಲಕ್ಕೆ ಸೇರಿದ ಮುಸಲ್ಮಾನರ ಮೂರು ಮಸೀದೆಗಳು, ಸಂತ ಅಂತೋನಿಯ ಎರಡು ಇಗರ್ಜಿಗಳು ಮತ್ತು ಇತ್ತೀಚೆಗೆ ನಿರ್ಮಿಸಲಾದ ಪ್ರೊಟೆಸ್ಟಂಟ್ ಚರ್ಚ್ ಕೂಡ ಶಿರಸಿ ನಗರದಲ್ಲಿವೆ.

ಬನವಾಸಿ, ಸ್ವಾದಿ ಹಾಗೂ ಶಿರಸಿಯನ್ನು ಸುತ್ತುವರಿದ ಕೋಟೆಯ ಅವಶೇಷಗಳು ಇಂದಿಗೂ ಇವೆ. ಅದರಂತೆ, ಬನವಾಸಿಯು ಸಮೀಪವಿರುವ ಗುಡ್ನಾಪುರದ ಕೆರೆ, ಸೋದೆಯ ವಾದಿರಾಜ ಮಠದ ಹತ್ತಿರವಿರುವ ಕೆರೆ, ಇಸಳೂರಿನ ಕೆರೆ, ಶಿರಸಿ ನಗರದಲ್ಲಿಯ ಶಂಕರ ಹೊಂಡ, ದೇವಿಕೆರೆ, ಕೋಟೆಕೆರೆ, ಮುಸುಕಿನ ಬಾವಿ ಹಾಗೂ ಬನವಾಸಿಯಲ್ಲಿ ಹರಿಯುವ ವರದಾ ಮತ್ತು ಸ್ವಾದಿಯಲ್ಲಿ ಹರಿಯುವ ಶಾಲ್ಮಲಾ ನದಿಗಳಿಗೆಲ್ಲ ಐತಿಹಾಸಿಕ ವೈಶಿಷ್ಟ್ಯವಿದೆ.

**ನಾಣ್ಯಗಳು :** ಬೆಳ್ಳಿ, ಪೊಟಿನ್ ಮತ್ತು ಸೀಸದ ನಾಣ್ಯಗಳು ಬನವಾಸಿ ಹಾಗೂ ಹುಲೇಕಲ್‌ನಲ್ಲಿ ದೊರೆತಿವೆ. ಶಾತವಾಹನ, ಚುಟು ಹಾಗೂ ರೋಮನ್‌ರ ನಾಣ್ಯಗಳು ಪ್ರಧಾನವಾದವುಗಳು. ಲಿಸಿತಿಸ್, ಡೆಮೆಟ್ರಿಯಸ್, ಟೊಲೆಮಿ ಮತ್ತು ಅಗಥೊಕ್ಲಿಯಸ್ ಚಕ್ರವರ್ತಿಗಳ ನಾಣ್ಯಗಳು ಹುಲೇಕಲ್‌ನಲ್ಲಿ ದೊರಕಿವೆ.[8]

**ಆಧಾರ ಗ್ರಂಥಗಳು :** ರೈಸ್ ಮಹಾಶಯರ 'A History of Mysore',[9] J. F. Fleet ಅವರ 'Dynasties of the Kanrese Disricts of the Bombay Presidency',[10] ಹಾಗೂ ೧೮೬೦ ರಿಂದ ೧೮೮೦ ರ ಅವಧಿಯಲ್ಲಿ ಸರ್ ವಾಲ್ಟರ್ ಎಲಿಯಟ್ ಅವರು ಸಂಗ್ರಹಿಸಿ ಭಾಷಾಂತರಿಸಿದ ಬನವಾಸಿಯಲ್ಲಿಯ ಶಾಸನಗಳು,[11] ಡಾ॥ ಫ್ರಾನ್ಸಿಸ್ ಬುಕಾನನ್ ಅವರ 'Journey Through the Northeren Parts of Kanara',[12] 1883 ರ 'Kanara Gazetteer,' ಡಾ॥ ಜಿ. ಎಂ. ಮೋರೇಸ್ ಅವರ ೧೯೩೧ರಲ್ಲಿ ಪ್ರಕಟವಾದ 'The Kadambakula', ೧೯೮೫ ರಲ್ಲಿ ಪ್ರಕಟವಾದ 'Uttara Kannada District Gazetteer', ಮುಂತಾದವುಗಳು ಉಪಯುಕ್ತ ಗ್ರಂಥಗಳೆನಿಸಿವೆ. ಎಸ್. ಸಿಲ್ವಾ ಅವರ 'ಕಾರವಾರ ಜಿಲ್ಲಾದರ್ಶನ'ವು ಶಿರಸಿ ತಾಲೂಕಿನ ಲಘು ಪರಿಚಯವನ್ನು ಮಾಡಿಕೊಡುತ್ತದೆ. ಪ್ರಾ॥ ಲಿಂಗೇಶ್ ಶರ್ಮಾ ಮತ್ತು ಪ್ರಾ॥ ಬಿ. ಎಚ್. ಶ್ರೀಧರವರು ಬರೆದ 'ಬನವಾಸಿಯ ಕದಂಬರು' ಮತ್ತು ಡಾ॥ ಬಿ. ಆರ್. ಗೋಪಾಲ್ ಅವರ 'ಬನವಾಸಿ–ಕದಂಬರು' ಮತ್ತು 'Corpus of Kadamba Inscriptions, Vol. I' ಓದುಗರಿಗೆ ಲಭ್ಯವಾಗಿವೆ. ಕದಂಬರಿಗೆ ಸಂಬಂಧಿಸಿದ ಪ್ರಕಟಿತ ಹಾಗೂ ಅಪ್ರಕಟಿತ ಅನೇಕ ಶಾಸನಗಳ ನಕಲುಗಳನ್ನು ಶ್ರೀ ರಾ. ಭಾ. ಹಾಸಣಗಿಯವರು ಸಂಗ್ರಹಿಸಿದ್ದಾರೆ. ೧೯೮೩ರ ಫೆಬ್ರುವರಿ ತಿಂಗಳಲ್ಲಿ ಬನವಾಸಿಯಲ್ಲಿ ಜರುಗಿದ, ಕದಂಬರನ್ನು ಕುರಿತು ನಡೆದ ವಿದ್ವತ್ ಸಭೆಯಲ್ಲಿ ಡಾ॥ ಜಿ. ಎಂ. ಮೋರೇಸ್. ಡಾ॥ ಕೆ.ವಿ. ಸೌಂದರರಾಜನ್. ಡಾ॥ ಜಿ.ಎಸ್. ದೀಕ್ಷಿತ್, ಡಾ॥ ಕೆ. ವಿ. ರಮೇಶ್, ಡಾ॥ ಬಿ. ಆರ್. ಗೋಪಾಲ್, ಡಾ॥ ಶ್ರೀನಿವಾಸ ರಿತ್ತಿ, ಡಾ॥ ಸೂರ್ಯನಾಥ ಕಾಮತ್, ಡಾ॥ ಬಿ.ಎಸ್. ಶಾಸ್ತ್ರಿ, ಡಾ॥ ಎ. ಸುಂದರ, ಡಾ॥ ಎ. ವಿ. ನರಸಿಂಹಮೂರ್ತಿ, ಡಾ॥ ರಘುನಾಥ ಭಟ್ಟ, ಡಾ॥ ವಸಂತ ಮಾಧವ, ಶ್ರೀ ಕೆ. ಅಭಿಶಂಕರ, ಶ್ರೀ ವೆಂಕಟೇಶ, ಶ್ರೀಮತಿ ಶಾಲಿನಿ ಭಟ್ಟ ಮೊದಲಾದವರು ಸಾದರಪಡಿಸಿದ ಸಂಶೋಧನಾತ್ಮಕ ಲೇಖನಗಳು ಕದಂಬ ಮನೆತನಗಳ ಬಗ್ಗೆ ಹೆಚ್ಚಿನ ಮಾಹಿತಿ ನೀಡುವಲ್ಲಿ ಯಶಸ್ವಿ

---

8 Annual Report of Indian Epigraphy, 1939 - 40 to 1942 – 43

9 ಮೂರು ಸಂಪುಟಗಳು, ಬೆಂಗಳೂರು, ೧೮೭೭

10 Bombay Gazetteer, ಸಲುವಾಗಿ ಬರೆದಿದ್ದು. 1882

11 Gazetteer to the Bombay Presidency, Vol XV, Part II, Karnara Governmental Central Press, Bombay, 1883, p. 75

12 ಕ್ರಿ.ಶ. ೧೮೦೦–೧೮೦೧ ರಲ್ಲಿ ಬುಕಾನನ್‌ನು ಈಗಿನ ಉತ್ತರಕನ್ನಡ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡು ವೃತ್ತಾಂತವನ್ನು ಈ ಗ್ರಂಥದಲ್ಲಿ ಪ್ರಚುರಪಡಿಸಿದ್ದಾನೆ.

ಯಾಗಿವೆ. ಪ್ರಾ॥ ಸ. ಸ. ಮಾಳವಾಡರವರ 'ಸ್ವಾದಿ ಅರಸು ಮನೆತನ', ತದ್ದಲಸೆ ವಿಘ್ನೇಶ್ವರ ಶರ್ಮಾ ಅವರ 'ಶ್ರೀ ಸ್ವರ್ನವಲ್ಲೀ ದರ್ಶನ', ಕೇರಿಮನೆ ಗೋಪಾಲಕೃಷ್ಣ ಹೆಗಡೆಯವರ 'ಶ್ರೀ ಸ್ವರ್ನವಲ್ಲೀ ಪ್ರಕಾಶ' ಮೊದಲಾದವುಗಳು ಪೂರಕ ಗ್ರಂಥಗಳು. ಶಿರಸಿಗೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಕುರಿತು ಲೇಖನಗಳನ್ನೊಳಗೊಂಡ 'ಶಿರಸಿ ನಗರಸಭೆ ಶತಮಾನೋತ್ಸವ ಸಂಚಿಕೆ' (ಸಂ. ಪ್ರಾ॥ ಬಿ. ಎಚ್. ಶ್ರೀಧರ) ಮತ್ತು 'ಶಿರಸಿ ತಾಲೂಕಾ ದರ್ಪಣ' (ಸಂ. ಡಾ॥ ಎ. ಕೆ. ಶಾಸ್ತ್ರಿ), ಇವು ಅನೇಕ ದೃಷ್ಟಿಯಿಂದ ಮಹತ್ವವೆನಿಸಿವೆ. ೧೯೮೬ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಶ್ರೀ ಟಿ.ಕೆ. ಮಹಮೂದ್ ಅವರು ಸಂಪಾದಿಸಿರುವ 'ಉತ್ತರಕನ್ನಡ ದರ್ಶನ'ವೂ ಈ ದಿಸೆಯಲ್ಲಿ ಉತ್ತಮ ಆಕರ ಗ್ರಂಥಗಳಲ್ಲೊಂದೆನಿಸಿದೆ.

ಶೃಂಗೇರಿ ಮಠದ ಕಡತಗಳಲ್ಲಿ ಮತ್ತು ಇನ್ನಿತರ ದಾಖಲೆಗಳಲ್ಲಿ, ಸ್ವರ್ಣವಲ್ಲಿ, ಸೋದೆ ಹೈಗರ ಮಠ, ಬನವಸೆ, ಮಂಜಗುಣಿ, ಗೋಕರ್ಣ ಮತ್ತು ನೆಲೆ ಮಾವು ಮಠಗಳನ್ನು ಉಲ್ಲೇಖಿಸಲಾಗಿದೆ.[13]

ಫ್ರಾಯರ್, ಹ್ಯಾಮಿಲ್ಟನ್, ಕ್ಯಾಂಬೆಲ್, ಡಾನ್ವರ್ಸ್ ಮತ್ತು ಬುಕಾನನ್[14] ಅವರ ವೃತ್ತಾಂತಗಳು ಸ್ವಾದಿ ರಾಜ್ಯದ ಇತಿಹಾಸವನ್ನು ಬೆಳಕಿಗೆ ತಂದಿವೆ. 'ಶಿವಚರಿತ್ರ ಸಾಹಿತ್ಯ'ದಲ್ಲಿ ಪ್ರಕಟವಾದ ೯ ಮರಾಠಿ ದಾಖಲೆಗಳಿಂದ, ಸ್ವಾದಿಯ ಅರಸರು ೧೭ನೇ ಶತಮಾನದಲ್ಲಿ ಮರಾಠರೊಂದಿಗೆ ಇರಿಸಿಕೊಂಡ ಸಂಬಂಧವನ್ನರಿಯಬಹುದಾಗಿದೆ. ಕನ್ನಡದ ಐತಿಹಾಸಿಕ ಕಾವ್ಯಗಳಾದ 'ಕೆಳದಿನೃಪ ವಿಜಯ' ಮತ್ತು 'ಬೀಳಗಿಯ ಅರಸರ ವಂಶಾವಳಿ', ಇವುಗಳಲ್ಲಿ ಸ್ವಾದಿಯ ಅರಸರ ಉಲ್ಲೇಖವಿದೆ. ಸ್ವಾದಿಯ ಜೈನ ಮಠದ ತಾಮ್ರಶಾಸನಗಳನ್ನು ಕುರಿತು 'ಜಯ ಕರ್ನಾಟಕ' ಪತ್ರಿಕೆಯಲ್ಲಿ ವಿವರಿಸಲಾಗಿದೆ. ಮೆಕೆನ್‌ಜೀ[15] ಸಂಗ್ರಹದಲ್ಲಿಯ 'ಬನವಶಿ ಸ್ಥಳದ ಕೈಫಿಯತು' ಮತ್ತು 'ಶಿರಶಿ ಕೈಫಿಯತು' ಗಳು ಬನವಾಸಿ ಮತ್ತು ಶಿರಸಿಯ ಬಗ್ಗೆ ಮಾಹಿತಿ ನೀಡುತ್ತವೆ.

ಮೇಲ್ಕಾಣಿಸಿದ ಐತಿಹಾಸಿಕ ಆಕರಗಳ ಸಹಾಯದಿಂದ, ಈಗಿನ ಶಿರಸಿ ತಾಲೂಕು ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ನಡೆದು ಬಂದ ದಾರಿಯನ್ನು ಗುರುತಿಸಬಹುದಾಗಿದೆ. ಶಿರಸಿ ತಾಲೂಕಿನ ಅಥವಾ ಜಿಲ್ಲೆಯ ದುರ್ದೈವವೋ ಎಂಬಂತೆ, ಇಲ್ಲಿಯ ಪುರಾತನ ವೈಶಿಷ್ಟ್ಯಪೂರ್ಣವಾದ ಅವಶೇಷಗಳನ್ನೆಲ್ಲ ಸರಿಯಾಗಿ ಕಾಪಾಡಿಕೊಂಡು ಬರುವ ಪ್ರಯತ್ನವು ಅಪೇಕ್ಷಿಸಿದಷ್ಟು ಆಗಿಲ್ಲ. ಮಲೆನಾಡ ಪ್ರದೇಶವಾಗಿದ್ದರಿಂದ ಬಿಸಿಲು ಮಳೆಗಳಿಂದಾಗಿ ಐತಿಹಾಸಿಕ ಸಾಮಗ್ರಿಗಳೆಲ್ಲ ತ್ವರಿತವಾಗಿ ನಶಿಸತೊಡಗಿವೆ. ಅವಶೇಷಗಳೆಲ್ಲ ನಶಿಸುವ ಮುನ್ನ ತಾಲೂಕಿನ ಹಾಗೂ ಜಿಲ್ಲೆಯ ಸಮಗ್ರ ಇತಿಹಾಸವನ್ನು ಪುನಃ ರಚಿಸಲು ವಿದ್ವಾಂಸರಿಗೆ ಅನುವು ಮಾಡಿಕೊಡಬೇಕಾಗಿದೆ.

---

13 Dr. A. K. Shastry : i) Contents of the Kaditas of the 'Sringeri - Matha', (Un-Published, Karnataka State Archives, 1974
ii) Catalogue of the Kannada records in the Archives of the Sringeri Matha' (Unpublished), Karnataka State Archives

14 ಬುಕಾನನ್‌ನ ಅಭಿಪ್ರಾಯದಲ್ಲಿ 'ಸೆರ್ಸಿ' ಒಂದು ಸಣ್ಣ ಹಳ್ಳಿ. ಆದರೆ ಅದು ಸೊಂದಾದ ತಹಶೀಲ್ದಾರನಿರುವ ಸ್ಥಳ. ೧೮೫೯ ರಲ್ಲಿ ತಾಲೂಕಿನ ಹೆಸರನ್ನು 'ಸಿರ್ಸಿ' ಯಾಗಿ ಬದಲಾಯಿಸಲಾಯಿತು.

15 ಕರ್ನಲ್ ಮೆಕೆನ್‌ಜೀ (೧೭೫೪–೧೮೨೧) ಭಾರತದ ಪ್ರಥಮ ಸರ್ವೆಯರ್ ಜನರಲ್ ಆಗಿದ್ದನು. ಭಾರತದ ಚರಿತ್ರೆಯ ಪುನರ್ರಚನೆಗೆ ಸಹಾಯಕವಾಗಬಲ್ಲ ಅನೇಕ ದಾಖಲೆಗಳನ್ನು ಆತ ಸಂಗ್ರಹಿಸಿದ್ದನು. ಮೆಕೆನ್‌ಜೀ ಸಂಗ್ರಹದ ಬಹುಭಾಗ ಲಂಡನ್ನಿನ ಆಫಿಸ್ ಗ್ರಂಥಾಲಯ ಸೇರಿತು. ಇನ್ನು ಕೆಲವು ಭಾಗ ಕಲಕತ್ತಾದ ಇಂಪೀರಿಯಲ್ ಗ್ರಂಥಭಂಡಾರಕ್ಕೆ ಹೋಯಿತು.

ಕೆ. ಅಭಿಶಂಕರ್

# ಮಧ್ಯಕಾಲೀನ 'ದಕ್ಖನ್' ಪ್ರದೇಶದಲ್ಲಿ ಭಾಷಾ ಧೋರಣೆ ಮತ್ತು ಪರಿಣಾಮ

೧೩೪೭ ರಲ್ಲಿ ಸುಲ್ತಾನ್ ಮಹಮ್ಮದ್-ಬಿನ್-ತಘಲಕ್‌ನ ವಿರುದ್ಧ ದಕ್ಷಿಣದ ಅನೇಕ ಅಮೀರರು ಬಂಡಾಯವೆದ್ದು ಅವನಿಂದ ಬೇರೆಯಾದರು. ಅವರ ನಾಯಕನಾದ ಅಲಾವುದ್ದೀನ್ ಹಸನ್ ಶಹ ಅಲ್-ಬಹಮನಿ ಕರ್ನಾಟಕದ ಕಲಬುರ್ಗಿಯಲ್ಲಿ, ಉತ್ತರ ಭಾರತದ ಹಿಡಿತದಿಂದ ಪೂರ್ಣವಾಗಿ ಸ್ವತಂತ್ರವಾದ ಸಲ್ತನತ್ ಸ್ಥಾಪಿಸಿದನು. (ವಿಜಯನಗರ ಸಾಮ್ರಾಜ್ಯ ಇದಕ್ಕೆ ಹನ್ನೊಂದು ವರ್ಷಗಳ ಮುಂಚೆಯೇ ಅಸ್ತಿತ್ವಕ್ಕೆ ಬಂದಿತ್ತು). ಅನೇಕ ಸಂದರ್ಭಗಳಲ್ಲಿ ರಾಜ್ಯಸ್ಥಾಪಕ ಸಾಹಸಿಗಳು ಭಾರತದ ಬೇರೆ ಪ್ರದೇಶಗಳಿಂದ ಬಂದಿದ್ದರೂ, ಮೂಲತಃ ಬೇರೆ ಭಾಷೆಗಳನ್ನು ಮಾತನಾಡುವವರಾಗಿದ್ದರೂ, ತಾವು ಹೊಸದಾಗಿ ಗೆದ್ದು, ನೆಲೆ ನಿಂತ ಪ್ರದೇಶದ ಭಾಷೆಯನ್ನು ತಮ್ಮದಾಗಿ ಮಾಡಿಕೊಂಡು ಅದನ್ನೇ ರಾಜಭಾಷೆಯನ್ನಾಗಿ ಉಪಯೋಗಿಸಿ, ಅಲ್ಲಿಯವರೇ ಆಗುತ್ತಿದ್ದರು. ಇದಕ್ಕೆ ಅನೇಕ ಉದಾಹರಣೆಗಳಿವೆ. ಆನರೆ ಇಲ್ಲಿ ಈಗ ಹಾಗಾಗಲಿಲ್ಲ.

ಉತ್ತರ ಭಾರತದಲ್ಲಿ ಮುಸ್ಲಿಂ ಪ್ರಭುತ್ವ ಏರ್ಪಟ್ಟು ಆಗಲೇ ನೂರು ವರ್ಷಗಳ ಮೇಲಾಗಿತ್ತು. ವಿಜಯಿ ವಿದೇಶಿ ಮುಸ್ಲಿಮರು, ತಮ್ಮಲ್ಲಿ ಬೇರೆ-ಬೇರೆ ಭಾಷೆ-ಉಪಭಾಷೆಗಳನ್ನಾಡುವವರಿದ್ದರೂ, ಮಧ್ಯಪೂರ್ವ ಏಶಿಯದಲ್ಲಿ ಅಂತರ್‌ರಾಷ್ಟ್ರೀಯ ಮಹತ್ವವನ್ನು ಗಳಿಸಿದ್ದ, ಸಾಕಷ್ಟು ಸಾಹಿತ್ಯವನ್ನು ಹೊಂದಿದ್ದ ಇರಾನಿನ ಭಾಷೆ ಫಾರಸಿಯನ್ನು ತಮ್ಮೊಡನೆ ತಂದು, ಅದನ್ನು ಉತ್ತರ ಭಾರತದಲ್ಲಿ ತಮ್ಮ ರಾಜಭಾಷೆಯನ್ನಾಗಿ ಮಾಡಿ, ದೇಶೀಯರೂ ಅದನ್ನು ಕಲಿಯಲು ಬಾಧ್ಯರನ್ನಾಗಿ ಮಾಡಿದರಷ್ಟೆ. ಹೀಗೆ ಉತ್ತರದಲ್ಲಿ ರಾಜಭಾಷೆಯಾಗಿ ವಿರಾಜಮಾನವಾಗಿ ಪ್ರತಿಷ್ಠೆಯನ್ನು ಪಡೆದಿದ್ದ, ತಮಗೆ ಚಿರ-ಪರಿಚಿತ ಫಾರಸಿಯನ್ನು ಬಹಮನಿಗಳು ದಕ್ಷಿಣದಲ್ಲೂ ತಮ್ಮ ಅಧಿಕೃತ ಭಾಷೆಯನ್ನಾಗಿ ಮಾಡಿದರು. ಮಧ್ಯಪೂರ್ವದ ವಿವಿಧ ವಿದೇಶಗಳಿಂದ ಪಶ್ಚಿಮ ಕರಾವಳಿಯ ಮೂಲಕ ನೇರವಾಗಿಯೂ ಬಹಮನಿ ರಾಜ್ಯಕ್ಕೆ ಬರುತ್ತಿದ್ದ ಸಾಹಸಿಗಳನ್ನು ಸ್ವಾಗತಿಸಿ ಅವರಿಗೆ ಅಧಿಕಾರ ಸ್ಥಾನ ಕೊಡಲಾಗುತ್ತಿತ್ತು. ಖಲಾಫ್ ಹಸನ್ ಅರಬ್ಬೀ, ದಿಲಾವರ್ ಖಾನ್ ಅಫಘಾನಿ, ಮಹಮೂದ್ ಗವಾನ್ ಗಿಲಾನಿ, ಕಾಸೀಮ್ ಬರೀದ್ ತುರ್ಕ್ ಮುಂತಾದವರು ಇಲ್ಲಿ ಪ್ರಧಾನಮಂತ್ರಿಗಳೇ ಆದರು. ದಕ್ಖನ್ನಿನ ಸುಲ್ತಾನರ ದರ್ಬಾರಿನಲ್ಲಿ ಕ್ರಮೇಣ ಅಫಾಖಿಗಳ ಅಂದರೆ ವಿದೇಶಿಯರ, ಡೆಕ್ಕನಿಗಳ ಮತ್ತು ಆಫ್ರಿಕದಿಂಥ ತರಲ್ಪಟ್ಟು ಮೇಲ್‌ಮಟ್ಟಕ್ಕೆ ಏರಿದ ಹಬಶಿಗಳ ಗುಂಪುಗಳಿದ್ದರೂ, ಸಾಧಾರಣವಾಗಿ ವಿದೇಶಿಗಳದ್ದೇ ಪ್ರಾಬಲ್ಯವಿತ್ತು. ಇವರೆಲ್ಲರಿಗೂ ಸಾಮಾನ್ಯವಾದ ಭಾಷೆ ಫಾರಸೀ ಇಸ್ಲಾಮಿನ ಧಾರ್ಮಿಕ ಸಾಹಿತ್ಯವನ್ನೂ ಒಳಗೊಂಡು ಕುರಾನ್ ಷರೀಫದ ಅರಬ್ಬಿಯಿಂದಲೂ ಪ್ರಭಾವಿತವಾಗಿತ್ತು. ಇಷ್ಟರಲ್ಲಿ, ಭಾರತದ ವಿವಿಧ ರಾಜ್ಯಗಳ ನಡುವೆ ರಾಯಭಾರ ವ್ಯವಹಾರಗಳಿಗೂ ಫಾರಸಿಯ ಬಳಕೆಯಾಗುತ್ತ, ಅದಕ್ಕೆ ಅಂತರ್ ಪ್ರಾಂತೀಯ ಮಹತ್ವವೂ ಬಂದಿತ್ತು. ಈ ಒಟ್ಟು ಕಾರಣಗಳಿಂದ, ಮೂರು ಪ್ರೌಢ

ಪ್ರಾದೇಶಿಕ ಭಾಷೆಗಳ ಭಾಗಗಳನ್ನು ಒಳಗೊಂಡ ಬಹಮನಿ ರಾಜ್ಯದಲ್ಲಿ ಮತ್ತು ಅದು ಒಡೆದು ಆದಿಲ್‌ಶಾಹಿ, ಬರೀದ್‌ಶಾಹಿ, ನಿಜಾಮ್‌ಶಾಹಿ, ಇಮದ್‌ಶಾಹಿ ಮತ್ತು ಕುತುಬ್‌ಶಾಹಿಗಳಿಗೆ ಸೇರಿದಂತೆ ಐದು ತುಂಡುಗಳಾದ ಮೇಲೂ, ಬಳಿಕ ೧೭ನೆಯ ಶತಮಾನದ ಕೊನೆಯ ಭಾಗದಲ್ಲಿ ಅವೆಲ್ಲ ಮೊಗಲ್ ಸಾಮ್ರಾಜ್ಯದ ಭಾಗಗಳಾದ ತರುವಾಯವೂ ಫಾರಸೀ ಭಾಷೆ ಅವಿಚ್ಛಿನ್ನವಾಗಿ ರಾಜಭಾಷೆಯ ಪಟ್ಟದಲ್ಲಿ ಮುಂದುವರಿಯಿತು. ಆದರೆ ಈ ವಿದೇಶಿ ಭಾಷೆಯನ್ನು ಸಾರ್ವತ್ರಿಕವಾಗಿ ಎಲ್ಲ ಮಟ್ಟಗಳಲ್ಲೂ ಉಪಯೋಗಿಸುವುದು, ಹರಡುವುದು ಸಾಧ್ಯವಿರಲಿಲ್ಲ.

ಮಿಶ್ರ 'ದಕ್ಖನೀ' ಭಾಷೆಯ ಬಳಕೆ : ಉತ್ತರ ಭಾರತದಿಂದ ವಿವಿಧ ಭಾಷೆ ಮತ್ತು ಕುಲಗಳ ಹಿನ್ನೆಲೆಯ ಸೈನಿಕರು, ಇತರ ಸಿಬ್ಬಂದಿಯವರು, ಅವರನ್ನು ಅವಲಂಬಿಸಿದವರು ತಂಡತಂಡವಾಗಿ ಬಂದು ದಕ್ಖನ್ ಪ್ರದೇಶದಲ್ಲಿ ನೆಲೆಸಿದರು. ಈ ಮುಂಚೆಯೇ ಮುಸ್ಲಿಂ ರಾಜಕೀಯ ಶಕ್ತಿ ದಕ್ಷಿಣದಲ್ಲಿ ಪ್ರವೇಶವಾದ ದಿನಗಳಿಂದಲೂ ಇಂತಹ ವಲಸೆ ಬರುವುದು ನಡೆದಿತ್ತು. ಇವರಲ್ಲಿ ಹೆಚ್ಚಾಗಿ ಬಂದವರು ದಿಲ್ಲಿ ಮತ್ತು ಅದರ ಅಕ್ಕಪಕ್ಕದ ನಾಡಿನಲ್ಲಿದ್ದವರು; ಆ ಪ್ರದೇಶದಲ್ಲಿ ಪ್ರಚಲಿತವಿದ್ದ ದೇಶೀಯ ಭಾಷೆಯನ್ನು ಅರಿತು ಉಪಯೋಗಿಸುತ್ತಿದ್ದವರು. ವಿದೇಶೀ ವಂಶಸ್ಥರೂ ಅವರಲ್ಲಿದ್ದರು. ಇವರು ತಂದ ಭಾಷೆಯನ್ನು ಫಾರಸಿಯಿಂದ ಪ್ರತ್ಯೇಕವಾಗಿ ಗುರುತಿಸಲು ಹಿಂದವೀ, ಹಿಂದೀ ಎಂದು ಕರೆಯಲಾಗುತ್ತಿತ್ತು. ಇದನ್ನು ತಮ್ಮ-ತಮ್ಮೊಳಗಲ್ಲದೆ, ಫಾರಸಿಯನ್ನು ಬಳಸುತ್ತಿದ್ದ ಉಚ್ಚ ಅಧಿಕಾರಿವರ್ಗದೊಡನೆಯೂ ಉಪಯೋಗಿಸುತ್ತಿದ್ದರು. ಅದನ್ನು ಸ್ಥಳೀಯರೊಡನೆ ಸಂಪರ್ಕಕ್ಕಾಗಿ ಉಪಯೋಗಿಸಲೂ ಪ್ರಾರಂಭಿಸಿದರು. ಪಂಜಾಬಿ, ಬ್ರಜ್ ಭಾಷೆಗಳಿಂದಲೂ ಪ್ರಭಾವಿತವಾಗಿದ್ದ ಈ ಭಾಷೆ ದಕ್ಖನ್ ಪ್ರದೇಶದಲ್ಲಿ ಒಡನಾಡಿದ ಬಳಿಕ ಸ್ವಲ್ಪ ಬೇರೆಯಾದ ರೂಪ ಮತ್ತು ಉಚ್ಚಾರಣೆಯನ್ನು ಪಡೆದದ್ದರಿಂದ ಇದನ್ನು 'ದಕ್ಖನೀ' ಎಂದು ಕರೆಯಲಾಯಿತು. ಮೇಲೆ ಹೇಳಿದಂತೆ, ಇದು ಮೂಲತಃ ದಿಲ್ಲಿ ಮತ್ತು ಸುತ್ತಮುತ್ತಲಿನ ಪ್ರದೇಶದ ಭಾಷೆ. (ಪೂರ್ವದಲ್ಲಿ ಸುಮಾರು ಡೆಹರಾಡೂನಿನಿಂದ ಹಿಡಿದು ಪಶ್ಚಿಮದಲ್ಲಿ ಸುಮಾರು ಅಂಬಾಲಾದವರೆಗೆ ಇದರ ವ್ಯಾಪ್ತಿ). ಹಿಂದಿಯ ಉಪಭಾಷೆಗಳಲ್ಲಿ ಒಂದಾದ ಇದನ್ನು 'ಖಡೀ ಬೋಲಿ' ಎಂದು ಹೆಸರಿಸಲಾಗಿದೆ. ಇದು ಶೌರಸೇನಿ ಪ್ರಾಕೃತದಿಂದ ಉತ್ಪನ್ನವಾದದ್ದೆಂದು ಭಾಷಾ-ಶಾಸ್ತ್ರಜ್ಞರು ಹೇಳಿದ್ದಾರೆ. ಬಹಮನಿ ರಾಜ್ಯದ, ತದನಂತರ ಅದರ ಉತ್ತರಾಧಿಕಾರಿ ಸುಲ್ತಾನೀ ರಾಜ್ಯಗಳ ಆಳುವ ವರ್ಗಕ್ಕೆಲ್ಲ ಇದು ಸಾಮಾನ್ಯ ನುಡಿ ಆಯಿತು. ಅವರೊಡನೆ ಹೆಚ್ಚು ಸಂಪರ್ಕಕ್ಕೆ ಬಂದ ಸ್ಥಳೀಯರೂ ಅವರೊಂದಿಗೆ ಇದನ್ನು ಬಳಸುವುದು ರೂಢಿಯಾಯಿತು. ಸರಕಾರೀ ವ್ಯವಹಾರಗಳ ಕೆಳಮಟ್ಟದಲ್ಲಿ ಈ 'ದಕ್ಖನೀ' ಭಾಷೆಗೆ ಸ್ಥಾನ ದೊರೆಯಿತು. ಆದಿಲ್‌ಶಾಹಿ ಸುಲ್ತಾನರು ಕೆಳಮಟ್ಟದ ಸರಕಾರೀ ಕಾಗದ-ಪತ್ರಗಳನ್ನು ಮರಾಠಿಯಲ್ಲಿಡಲು ಅನುವು ಮಾಡಿಕೊಟ್ಟಿದ್ದರು. 'ದಕ್ಖನೀ' ಭಾಷೆಯು ಹೆಚ್ಚು ಪ್ರಸಾರವಾದ ಬಳಿಕ ಕ್ರಮೇಣ, ಕನ್ನಡ, ತೆಲುಗು ಮತ್ತು ಮರಾಠಿ ಜನರು ಒಟ್ಟಿಗೆ ಸೇರಿದಾಗ, ಪರಸ್ಪರ ವ್ಯಾವಹಾರಿಕ ಅನುಕೂಲಕ್ಕಾಗಿ ಕೆಲವು ಸಂದರ್ಭಗಳಲ್ಲಿ ಈ 'ದಕ್ಖನೀ' ಭಾಷೆಯಲ್ಲಿ ಸಂಭಾಷಿಸಲೂ ಪ್ರಾರಂಭಿಸಿದ್ದರೆ ಆಶ್ಚರ್ಯವಲ್ಲ.

೧೫ನೆಯ ಶತಮಾನದ ಮೊದಲ ಭಾಗದಲ್ಲಿ 'ದಕ್ಖನಿ'ಯ ಮಾಧ್ಯಮದಲ್ಲಿ ಲೇಖನ ಕಾರ್ಯವನ್ನು ಪ್ರಾರಂಭಿಸಿದವರು, ಸುಲ್ತಾನರಿಂದ ಉದಾರ ಸಹಾಯ ಪಡೆಯುತ್ತಿದ್ದ ಪ್ರಭಾವಶಾಲಿ ಸೂಫಿಗಳು. ಅವರು 'ದಕ್ಖನಿ'ಯನ್ನು ಉಪಯೋಗಿಸಿ ಫಾರಸೀ ಲಿಪಿಯಲ್ಲಿ ಬರೆದು ತಮ್ಮ ಧರ್ಮಪ್ರಚಾರ ಮಾಡಿದರು. ಕಲಬುರ್ಗಿಯಲ್ಲಿ ನೆಲೆಸಿದ್ದ ಪ್ರಖ್ಯಾತ ಸೂಫಿ ಸಂತ ಖ್ವಾಜಾ ಬಂದೇ ನವಾಜ್ ಗೇಸು ದರಾಜ್ ಇವರಲ್ಲಿ ಮೊದಲಿಗರು. 'ಹಿದಾಯತ್‌ನಾಮಾ' ಮುಂತಾದ ಧಾರ್ಮಿಕ ಪುಸ್ತಕಗಳನ್ನು ಇವರು 'ದಕ್ಖನಿ'ಯಲ್ಲಿ ಬರೆದರು. ಅನೇಕ ಫಕೀರರು ಧಾರ್ಮಿಕ ಪ್ರಚಾರಕಾರ್ಯವನ್ನು ಮೌಖಿಕವಾಗಿಯೂ ಈ ಭಾಷೆಯ ಮೂಲಕವೇ ಮಾಡುತ್ತಿದ್ದರು. ಲೌಕಿಕ ಸಾಹಿತ್ಯದ ರಚನೆಯೂ ಈ ಭಾಷೆಯಲ್ಲಿ ಪ್ರಾರಂಭವಾಯಿತು. ೧೫ನೆಯ ಶತಮಾನದ ಮಧ್ಯಭಾಗದಲ್ಲಿ, ಬಿದರೆಯ ಬರೀದ್‌ಶಾಹಿ ಸುಲ್ತಾನರ ಆಶ್ರಯದಲ್ಲಿ ದರ್ಬಾರೀ ಶಾಯರ್ (ಆಸ್ಥಾನ ಕವಿ) ಆಗಿದ್ದ ಫಕ್ರುದ್ದೀನ್ ನಿಜಾಮಿ 'ಕದಮ್‌ರಾವ್-ಪದಮ್‌ರಾವ್' ಎಂಬ ನಾಲ್ಕು ಸಾವಿರ ಸಾಲುಗಳ ಕಾವ್ಯವನ್ನು ದ್ವಿಪದಿಯಲ್ಲಿ ರಚಿಸಿದನು, ಬಿದರೆಯಲ್ಲೇ

ಫಿರೋಜನ 'ಪೀರತ್‌ನಾಮಾ', ಕುರೇಶಿಯ 'ಭೋಗ ಪಾಲ್' ಮುಂತಾದ ಕಾವ್ಯಕೃತಿಗಳು ಬರೆಯಲ್ಪಟ್ಟವು. ಸರಳ, ಪರಿಣಾಮಕಾರಿಯಾದ 'ದಕ್ಖನೀ' ಶೈಲಿ ಅವರದು. ಸುಖ, ದುಃಖ, ಆಧಾರ, ಭೋಜನ, ಪಾತಾಳ, ವಿರಾಗೀ, ಪ್ರೀತ್, ಆಕಾಸ್, ಧರತೀ, ಧರಮ್ ಮುಂತಾದ ತತ್ಸಮ, ತದ್‌ಭವ ಶಬ್ದಗಳನ್ನು ಅವರು ಬಳಸುತ್ತಿದ್ದರು. ಭಾರತೀಯ ಪರಂಪರೆಯ ಅಭಿವ್ಯಕ್ತಿ ಅವರಿಗೆ ತ್ಯಾಜ್ಯವಾಗಿರಲಿಲ್ಲ. ಅವರು ಫಾರಸೀ, ಅರಬ್ಬೀ ಶಬ್ದಗಳ ವಿಪರೀತ ಉಪಯೋಗ ಮಾಡುತ್ತಿರಲಿಲ್ಲ. ಆದಿಲ್‌ಶಾಹಿ ಮತ್ತು ಕುತುಬ್‌ಶಾಹಿ ಸುಲ್ತಾನರೂ 'ದಕ್ಖನೀ' ಸಾಹಿತ್ಯ ರಚನೆಗೆ ಪ್ರೋತ್ಸಾಹ ನೀಡಿದರು.

**ಸಂಪರ್ಕ ಭಾಷಾ ಪರಿಪಾಟ :** ದಕ್ಖನೀ ಭಾಷೆಯನ್ನು ದಕ್ಖನೀ ಹಿಂದೀ, ದಕ್ಖನೀ ಉರ್ದುವೆಂದೂ ಯಥಾರ್ಥವಾಗಿ ಕರೆಯಲಾಗಿದೆ. ಉರ್ದು, ಹಿಂದುಸ್ತಾನೀ ಹಾಗೂ ಆಧುನಿಕ ಹಿಂದೀ–ಇವುಗಳ ಮೂಲಾಧಾರವಾದ 'ಖಡೀ ಬೋಲಿ'ಯ ದಕ್ಖನೀ ರೂಪಕ್ಕೆ ಜನಪ್ರಿಯತೆ, ಶಾಸಕೀಯ ಮತ್ತು ಸಾಹಿತ್ಯಕ ಪ್ರತಿಷ್ಠೆ ಮೊದಲು ದೊರಕಿದ್ದು ಕರ್ನಾಟಕದ ಕಲಬುರ್ಗಿ, ಬಿದರೆ ಮತ್ತು ಬಿಜಾಪುರಗಳಲ್ಲಿ. ಹೀಗೆ ಈ ಸಂಪರ್ಕ ಭಾಷೆಯ ಪೋಷಣೆ ಮತ್ತು ಪ್ರಸಾರಕ್ಕೆ ಕರ್ನಾಟಕವೇ ಸಾಕುತಾಯಿ ಎಂದು ಹೇಳಬಹುದು. ಎಲ್ಲ ದಕ್ಖನ್ ಪ್ರದೇಶದಲ್ಲಿ ಅಲ್ಲದೆ, ಕ್ರಮೇಣ ಅಂತರ್ ಪ್ರಾಂತೀಯ ಸಂಪರ್ಕದ ಆಡುಮಾತಾಗಿ ಸ್ವಲ್ಪಮಟ್ಟಿಗಾದರೂ ಅದರ ಉಪಯೋಗ ಉತ್ತರದಲ್ಲಿ ಗುಜರಾತ್-ಮಧ್ಯಪ್ರದೇಶದ ವರೆಗೂ, ಸುದೂರ ದಕ್ಷಿಣಕ್ಕೂ ಹರಡಿತು. ೧೭ನೆಯ ಶತಮಾನದ ಕೊನೆಯ ಭಾಗದಲ್ಲಿ ದಕ್ಷಿಣ ಭಾರತದ ಬಹುಭಾಗ ಮೊಗಲರ ಕೈವಶವಾಗ ಹೈದರಾಬಾದ್ ಅವರ ಮುಖ್ಯ ಕೇಂದ್ರವಾಯಿತು. ಬಳಿಕ ಸಂಸ್ಕೃತ ತತ್ಸಮ ಶಬ್ದಗಳನ್ನು ಪೂರ್ಣ ಬಿಟ್ಟು, ತದ್ಭವಗಳ ಬಳಕೆಯನ್ನೂ ಅತ್ಯಂತ ಕಡಿಮೆ ಮಾಡಿ, ವಿಪುಲವಾಗಿ ಫಾರಸಿ-ಅರಬ್ಬೀ ಶಬ್ದಗಳನ್ನು ಉಪಯೋಗಿಸುವ ಖಡೀ ಬೋಲಿಯ ಆಧಾರದ ಉರ್ದುವಿನಲ್ಲಿ ಸಾಹಿತ್ಯಕ ಕೃಷಿ ಉತ್ತರದಲ್ಲಿ ಪ್ರಾರಂಭವಾಗಿ ದಕ್ಖನ್ ಪ್ರದೇಶಕ್ಕೂ ಹರಡಿತು. ಆಗ ದಕ್ಖನೀ ಸಾಹಿತ್ಯ ರಚನೆಗೆ ಪ್ರೋತ್ಸಾಹ ಕಡಿಮೆಯಾಯಿತು. ಆದರೂ ಹೈದರಾಬಾದಿನ ಲಾಲಾ ಮೋಹನ್‌ಲಾಲ್ 'ಮೆಹತಾಬ್', ಲಕ್ಷ್ಮೀನಾರಾಯಣ 'ಶಫೀಕ್' ಮುಂತಾದವರು ದಕ್ಖನಿಯಲ್ಲಿ ಸಾಹಿತ್ಯರಚನೆ ಮಾಡಿದರು. ಉತ್ತರ ಭಾರತದಿಂದ ಬಂದ ವಂಶಪಾರಂಪರ್ಯವಾಗಿ ದಕ್ಖನ್ ಪ್ರದೇಶದಲ್ಲಿ ಸರಕಾರದ ಆಶ್ರಯದಲ್ಲಿದ್ದ ಕಾಯಸ್ಥರು, ರಜಪೂತರು ಮುಂತಾದವರಿಗೂ ಈ ಭಾಷೆ ಹಾಸು-ಹೊಕ್ಕಾಗಿತ್ತು. ದಕ್ಷಿಣದ 'ಮೊಗಲಾಯಿ' ಭಾಗದಲ್ಲಿ ವಿವಿಧ ಭಾಷಾ ಗುಂಪುಗಳ ಮಧ್ಯೆ ದೇಶೀ ಸಂಪರ್ಕ ಭಾಷಾ ಉಪಯೋಗದ ರೂಢಿ ಆಧುನಿಕ ಕಾಲದವರೆಗೂ ನಡೆದುಬಂದಿದೆ. ಹೈದರಾಬಾದಿನ ಈ ಅಸಫ್ ಜಾಹಿ ರಾಜ್ಯದಲ್ಲಿ ೧೮೮೪ರ ವರೆಗೂ ಫಾರಸೀ ಸರಕಾರೀ ಭಾಷೆಯಾಗಿದ್ದು, ಆ ವರ್ಷ ಉರ್ದು ಸರಕಾರಿ ಭಾಷೆಯೆಂದು ಘೋಷಿತವಾಯಿತು. ಈಸ್ಟ್ ಇಂಡಿಯಾ ಕಂಪನಿ ಸರ್ಕಾರವೂ ೧೮೩೦ರ ವರೆಗೂ ಫಾರಸೀ ಭಾಷೆಯನ್ನು ಇತರ ರಾಜ್ಯಗಳೊಡನೆ ನಡೆಸುತ್ತಿದ್ದ ವ್ಯವಹಾರದಲ್ಲಿ ಬಳಸುತ್ತಿತ್ತು. ಮೈಸೂರು ಸಂಸ್ಥಾನದಲ್ಲೂ ಇಂತಹ ವ್ಯವಸ್ಥೆ ಕೆಲ ಕಾಲ ಇದ್ದಿತು.

**ಭಾಷೆಗೆ ಪರಿವರ್ತನೆ :** ಈ ಕಾಲಾವಧಿಯಲ್ಲಿ ಆ ದಕ್ಖನ್ ಪ್ರದೇಶದಲ್ಲಿ ಸ್ಥಳೀಯರ ಮತಾಂತರವೂ ನಿರಂತರವಾಗಿ ಹೆಚ್ಚು ನಡೆದಿತ್ತಷ್ಟೆ. ವ್ಯಕ್ತಿಗಳ ಅಥವಾ ಪರಿವಾರಗಳ ಧಾರ್ಮಿಕ ಪರಿವರ್ತನೆಯಾದ ಬಳಿಕ ಬಹುತೇಕವಾಗಿ ಭಾಷಾ ಪರಿವರ್ತನೆಯೂ ಆಗುವ ವಾಡಿಕೆ ಈ ಭಾಗಗಳಲ್ಲಿ ನಡೆದು ಬಂದಿದೆ. ಒಂದು ಸಾಮಾನ್ಯ ಸಂಪರ್ಕ ಭಾಷೆ ('ದಕ್ಖನೀ') ಪ್ರಸಾರದಲ್ಲಿತ್ತಾದ್ದರಿಂದ ಇದು ಕಷ್ಟಸಾಧ್ಯವೂ ಆಗಿರಲಿಲ್ಲ. ಅಲ್ಲಿ ನಿರ್ಲಕ್ಷಿಸಲ್ಪಟ್ಟಿದ್ದ ಪ್ರಾದೇಶಿಕ ಭಾಷೆಗಳಿಗೆ ಮಹತ್ವವೇ ಉಳಿದಿರಲಿಲ್ಲ. ಶಾಸಕವರ್ಗದ ಭಾಷೆಯನ್ನು ಮನೆಮಾತಾಗಿಯೂ ಸ್ವೀಕರಿಸುವುದರಿಂದ ತಮ್ಮ ಹೊಸ ಮತದ ಸಮಾಜದಲ್ಲಿ ಕೂಡಲೇ ಬೆರೆಯುವುದು, ಸ್ಥಾನಮಾನ ಪಡೆಯುವುದು ಸುಗಮವಾಗುತ್ತಿತ್ತು. ಹೀಗೆ ಭಾಷೆಗೆ ಪರಿವರ್ತನೆ ಆಗುವ ಅಂದರೆ ಒಟ್ಟು ಸಮಾಜಾಂತರ ಆಗುವ ಪ್ರಕ್ರಿಯೆ ವಿಶೇಷತಃ ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರ– ಈ ಮೂರು ಪ್ರದೇಶಗಳಲ್ಲಿ ಮಾತ್ರವೇ ಕಂಡುಬಂದಿದೆ. ಭಾರತದ ಇತರ ಪ್ರದೇಶಗಳಲ್ಲಿ ಇಷ್ಟು ಪ್ರಮಾಣದಲ್ಲಿಯಂತೂ ಅದು ನಡೆದಿಲ್ಲ. ಬಂಗಾಳ, ಕಾಶ್ಮೀರ, ಪಂಜಾಬ್, ಗುಜರಾತ್, ತಮಿಳುನಾಡು, ಕೇರಳ ಮುಂತಾದ ಪ್ರಾಂತಗಳಲ್ಲಿ ಮುಸ್ಲಿಮರ ಮನೆಮಾತು ಮತ್ತು ಸಾಮಾಜಿಕ ಭಾಷೆ ಆ ಪ್ರದೇಶಗಳದ್ದೇ ಆಗಿವೆ,

ಆದರೆ ದಕ್ಷಿಣದ ಈ ಮೂರು ಪ್ರದೇಶಗಳಲ್ಲಿ ಮಾತ್ರವೇ ಬೇರೊಂದು ಭಾಷೆ ('ದಕ್ಖನೀ' ತರುವಾಯ ಉರ್ದು) ಬಹುತೇಕ ಮಂದಿ ಮುಸ್ಲಿಮರ ಭಾಷೆಯಾಗಿ ಸ್ವೀಕರಿಸಲ್ಪಟ್ಟಿದೆ.

ದಕ್ಖನ್ ಪ್ರದೇಶವನ್ನು ಗೆದ್ದು ಅಲ್ಲಿ ರಾಜ್ಯ ವಿಸ್ತರಣೆಯಲ್ಲಿ ತೊಡಗಿದ್ದವರ ಆಕ್ರಮಣಕ್ಕೆ ತೀವ್ರ ಪ್ರತಿಭಟನೆ ವಿಜಯನಗರದ ಮೂಲಕ, ತದನಂತರ ಮರಾಠರ ಮೂಲಕ ಏರ್ಪಟ್ಟಿತ್ತಷ್ಟೆ. ಘರ್ಷಣೆಗಳು, ಯುದ್ಧಗಳು ಪುನಃ ಪುನಃ ನಡೆಯುತ್ತ, ದಕ್ಖನ್ ಪ್ರದೇಶದ ಮುಸ್ಲಿಂ ಆಳುವ ವರ್ಗದಲ್ಲಿ ಅಸ್ಥಿರ ಭಾವನೆ ಇದ್ದಿತು. ಇಂತಹ ವಿಶೇಷ ಪರಿಸ್ಥಿತಿಯಲ್ಲಿ ತಮ್ಮ ಸಾಮಾಜಿಕ ಸಂಘಟನೆಯನ್ನು ಸಾಧ್ಯವಾದಷ್ಟು ಬಲಪಡಿಸಿಕೊಳ್ಳುವ ದೃಷ್ಟಿಯಿಂದ, ಸ್ಥಳೀಯರು ಶಾಸಕ ವರ್ಗದ ಧರ್ಮಕ್ಕೆ ಪರಿವರ್ತನೆಗೊಂಡಾಗ, ಬಹುತೇಕವಾಗಿ ಅವರ ಭಾಷೆಗೂ ಪರಿವರ್ತಿತರಾಗಿ ಅವರೊಡನೆ ಏಕೀಭವಿಸುವುದು ರೂಢಿಗೆ ಬಂದಂತೆ ತೋರುತ್ತದೆ. ಇದೊಂದು ಅಸಾಮಾನ್ಯವಾದ ಪರಿಪಾಟ.

**ಇತರ ಫಲಿತಾಂಶಗಳು :** ದಕ್ಖನ್ನಿನ ಆ ಭಾಗಗಳಲ್ಲಿ ಆದ ಇನ್ನೊಂದು ಮುಖ್ಯ ಪರಿಣಾಮವೆಂದರೆ, ಅಲ್ಲಿನ ಮೂರು ಪ್ರಾದೇಶಿಕ ಭಾಷೆಗಳು ಕಡೆಗಣಿಸಲ್ಪಟ್ಟು, ಅವಕ್ಕೆ ಉತ್ತೇಜನವಿಲ್ಲದೆ, ಅವುಗಳ ಕೃಷಿ, ಪ್ರಗತಿ ಅಲ್ಲಿ ಅತೀವ ಕುಂಠಿತವಾಗಿ, ಅವುಗಳ ಉಳಿವೇ ಅಲ್ಲಿ ದುಸ್ತರವಾಗಿತ್ತು.

ಶತಮಾನಗಳವರೆಗೆ ಸರಕಾರಗಳ ಪ್ರಬಲ ಬೆಂಬಲ, ಪೋಷಣೆ, ಎಲ್ಲ ಸೌಲಭ್ಯಗಳನ್ನು, ಮಹತ್ವವನ್ನು ಪಡೆದಿದ್ದ ವಿದೇಶಿ ಭಾಷೆ ಫಾರಸೀ ಸರಕಾರೀ ಭಾಷೆಯಾಗಿದ್ದರೂ, ಒಂದು ಪ್ರತಿಷ್ಠಿತ ಪಂಗಡದ, ಶಾಸಕರ ಮಾತೃಭಾಷೆಯಾಗಿದ್ದರೂ, ಕ್ರಮೇಣ ಅದು ಯಾರ ಮಾತೃಭಾಷೆಯಾಗಿಯೂ, ಸಾಮಾಜಿಕ ಭಾಷೆಯಾಗಿಯೂ ಅಥವಾ ಸರಕಾರದ ಭಾಷೆಯಾಗಿಯೂ ಉಳಿಯಲಿಲ್ಲ. ಅದಕ್ಕೆ ಬದಲಾಗಿ, ವಿವಿಧ ಗುಂಪುಗಳ ಆಡುಮಾತು, ಸಂಪರ್ಕ ಭಾಷೆ ಆಗಿದ್ದ 'ದಕ್ಖನೀ' ಅವರೆಲ್ಲರಿಗೆ ಅಂದರೆ ಫಾರಸೀ, ಅರಬ್ಬೀ, ತುರ್ಕಿ, ಪುಷ್ತೊ, ಹಬಶಿ ಮುಂತಾದ ಎಲ್ಲ ವಿದೇಶೀ ವಂಶಸ್ಥರಿಗೂ ಸಹ ಮಾತೃಭಾಷೆಯಾಯಿತು. ಆದರೆ, ಕ್ರಮೇಣ, ಬಹಳಷ್ಟು ಫಾರಸೀ–ಅರಬ್ಬೀ ಶಬ್ದಗಳನ್ನು ಉಪಯೋಗಿಸುವ, ಫಾರಸೀ ಲಿಪಿಯಲ್ಲಿ ಬರೆಯಲ್ಪಡುವ ಉರ್ದುವನ್ನು ಅವರು ಮತ್ತು ಇತರ ಅನೇಕರು ತಮ್ಮ ಮನೆಯ ಮತ್ತು ಸಾಮಾಜಿಕ ಭಾಷೆಯನ್ನಾಗಿ ಮಾಡಿಕೊಂಡರು. ದಕ್ಷಿಣದ ಮೂರು ಪ್ರದೇಶಗಳಲ್ಲಿ ವಿವಿಧ ಭಾಷೆಗಳ ಪರಸ್ಪರ ಸಂಪರ್ಕದಿಂದ ಭಾಷಿಕ ಮತ್ತು ಸಾಂಸ್ಕೃತಿಕ ಆದಾನ–ಪ್ರದಾನವಾಯಿತು. ಅಂತರ್–ಪ್ರಾಂತೀಯ ಸಂಬಂಧಕ್ಕೆ ಒಂದು ದೇಶೀ ಸಂಪರ್ಕ ಭಾಷೆಯು ಬಳಕೆ ರೂಢಿಗೆ ಬಂದಿತು.

**ಕೆಲವು ಸಹಾಯಕ ಗ್ರಂಥಗಳು**


ಡಾ॥ ಬಾಬೂರಾಮ್ ಸಕ್ಸೇನ : ದಕ್ಖನೀ ಹಿಂದೀ, ಅಲಹಾಬಾದ್, ೧೯೫೨

ಡಾ॥ ಶ್ರೀರಾಮ ಶರ್ಮ : ದಕ್ಖನೀ ಹಿಂದೀಕಾ ಸಾಹಿತ್ಯ, ಹೈದರಾಬಾದ್, ೧೯೭೨

ರಾಜನಾಥ ಶರ್ಮ : ಹಿಂದೀ ಭಾಷಾಕಾ ಇತಿಹಾಸ, ಆಗ್ರಾ, ೧೯೫೬

ಮಹಾವೀರ ಪ್ರಸಾದ ದ್ವಿವೇದಿ : ಹಿಂದೀ ಭಾಷಾಕೀ ಉತ್ಪತ್ತಿ

Sayed Mohammed : The Value of Dakhni Language and Literature, Mysore, 1968

H. K. Sherwani : The Bahmanis of the Deccan, Hyderabad, 1953

H. K. Sherwani : The Bahamani Kingdom, Bombay, 1947

K. Abhishankar (Ed.) : Bidar District Gazetteer, Bangalore, 1977

ಡಾ॥ ಜಿ. ಎಸ್. ದೀಕ್ಷಿತ್

# ಆಗ್ನೇಯ ಏಷ್ಯಾ ಮತ್ತು ಕರ್ನಾಟಕ-ಪುರಾತನ ಸಂಬಂಧಗಳು

ಕರ್ನಾಟಕದವರು ಪುರಾತನ ಆಗ್ನೇಯ ಏಷ್ಯಾದ ಇತಿಹಾಸದಲ್ಲಿ ಯಾವ ಪಾತ್ರವನ್ನು ವಹಿಸಿದ್ದರೆನ್ನುವುದನ್ನು ತಿಳಿಸುವುದು ಈ ಪ್ರಬಂಧದ ಉದ್ದೇಶ. ೧೯೧೨ ರಲ್ಲಿ ಸರ್ ಚಾರ್ಲಸ್ ಈಲಿಯಟ್ ಎನ್ನುವ ಬ್ರಿಟಿಷ್ ವಿದ್ವಾಂಸರು ಕಾಂಬೋಜಾದಲ್ಲಿಯ ದೇವಸ್ಥಾನಗಳಿಗೂ ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲಿನ ದೇವಸ್ಥಾನಗಳಿಗೂ ಕೆಳಕಂಡ ಹೋಲಿಕೆಗಳಿವೆಯೆಂದು ಹೇಳುತ್ತಾರೆ :

೧. ಎರಡೂ ದೇಶಗಳ ದೇವಸ್ಥಾನಗಳಲ್ಲಿಯ ಮುಖ್ಯ ದೇವತೆಗಳು ಹರಿಹರ, ವಾಮನ ಮತ್ತು ನರಸಿಂಹ. ಪಟ್ಟದಕಲ್ಲು ಮತ್ತು ಅಂಕರ್‌ವಾಟಿನಲ್ಲಿ ಸಮುದ್ರಮಥನ ಮತ್ತು ರಾಮಾಯಣದ ಚಿತ್ರಗಳಿವೆ.

೨. ದೇವಸ್ಥಾನಗಳು ಒಂದು ಜಗತಿಯ ಮೇಲೆ ಇವೆ.

೩. ಎರಡೂ ಕಡೆಗಳಲ್ಲಿಯೂ ಇಳಿಜಾರಾದ ಮಾಳಿಗೆ, ಒಳಗಿನ ಗೋಡೆಗಳ ಮೇಲೆ ಉಬ್ಬು ವಿಗ್ರಹಗಳು ಮತ್ತು ಹೊರಗಿನ ಗೋಡೆಗಳ ಮೇಲೆ ಜಾಲಾಂದ್ರಗಳಿವೆ.

೪. ಕಾಂಬೋಜಾದ ಅತಿ ಪುರಾತನ ಶಾಸನ ೭ನೇ ಶತಮಾನದ ಆರಂಭದ ಕಾಲಕ್ಕೆ ಸೇರಿದೆ. ಅದರ ಲಿಪಿ ಪಟ್ಟದಕಲ್ಲಿನಲ್ಲಿರುವ ಪಾಪನಾಥ ದೇವಸ್ಥಾನದಲ್ಲಿಯ ಶಾಸನದ ಲಿಪಿಯನ್ನು ಹೋಲುತ್ತದೆ.

೫. ಕಾಂಬೋಜಾದ ರಾಜರ ಹೆಸರುಗಳ ಕೊನೆಗೆ ವರ್ಮನ್ ಎಂದಿದೆ. (ಕದಂಬರ ಹೆಸರುಗಳು ಹೀಗೆ ಇವೆ).

೬. ಚಾಲುಕ್ಯರು ಖ್ಮೇರರನ್ನು ಗೆದ್ದರೆಂದು ಹೇಳುತ್ತಾರೆ. (ಅವರ ಶಾಸನದಲ್ಲಿ ಇವರನ್ನು ಕಮೇರರೆಂದು ಕರೆದಿದೆ).

೭. ಕಾಂಬೋಜಾದಲ್ಲಿ ರಾಜನನ್ನು ದೇವತೆಯೆಂದು ಪರಿಗಣಿಸಿ ಪೂಜೆ ಮಾಡುತ್ತಿದ್ದರು. ಚಂಪಾ ಮತ್ತು ಜಾವಾಗಳಲ್ಲಿ ಒಬ್ಬ ರಾಜನು ಒಂದು ದೇವಸ್ಥಾನವನ್ನು ಕಟ್ಟಿದರೆ ಅದರಲ್ಲಿಯ ದೇವರನ್ನು ರಾಜನ ಹೆಸರಿನಿಂದ ಕರೆಯುವ ರೂಢಿಯಿತ್ತು. ಭದ್ರವರ್ಮನು ಶಿವನಿಗೆ ಒಂದು ದೇವಸ್ಥಾನವನ್ನು ಕಟ್ಟಿ ಆ ದೇವರನ್ನು ಭದ್ರೇಶ್ವರನೆಂದು ಕರೆದನು. ಪಟ್ಟದಕಲ್ಲಿನಲ್ಲಿಯೂ ಅದೇ ಪದ್ಧತಿಯಿತ್ತು. ವಿಜಯಾದಿತ್ಯನು ವಿಜೆಯೇಶ್ವರ ದೇವಸ್ಥಾನವನ್ನು, ಲೋಕ ಮಹಾದೇವಿ ಮತ್ತು ತ್ರೈಲೋಕ್ಯ ಮಹಾದೇವಿಯರು ಲೋಕೇಶ್ವರ ಮತ್ತು ತ್ರೈಲೋಕೇಶ್ವರರಿಗೆ ದೇವಸ್ಥಾನಗಳನ್ನು ಕಟ್ಟಿದರು.

೮. ಕರ್ನಾಟಕದಲ್ಲಿದ್ದ ಹಾಗೆ ಕಾಂಬೋಜಾದಲ್ಲಿಯೂ ಪಾಶುಪತರು ಪ್ರಬಲರಾಗಿದ್ದರು. ಮುಂದೆ ಕರ್ನಾಟಕದ ವೀರಶೈವರಲ್ಲಿ ಪ್ರಚಲಿತವಾದ ತತ್ವಗಳು, ವಿಚಾರಗಳು ಕಾಂಬೋಜಾದಲ್ಲಿಯೂ ಇದ್ದವೆಂದು ಹೇಳುತ್ತಾರೆ. ಈಲಿಯಟ್ಟಿನ ಅಭಿಪ್ರಾಯದಲ್ಲಿ ಇವೆಲ್ಲದರ ತಾತ್ಪರ್ಯವು ಕಾಂಬೋಜಾದಲ್ಲಿ ಬೇರೂರಿದ ಭಾರತೀಯ ಮತ ಮತ್ತು ಸಂಸ್ಕೃತಿ ದಖನ್ನಿನದು.

೧೯೧೨ರಲ್ಲಿ ಈಲಿಯಟ್ ಬರೆದಿದ್ದನ್ನು ಕಲ್ಕತ್ತಾ ವಿಶ್ವವಿದ್ಯಾಲಯದ ಡಾ॥ ಕಲ್ಯಾಣಕುಮಾರ ದಾಸ ಗುಪ್ತರು ಅರ್ಧ ಶತಮಾನದ ನಂತರ ಸಮರ್ಥಿಸಿ ಹೀಗೆ ಬರೆದಿದ್ದಾರೆ : "ಅಂಕರ್‌ವಾಟಿನ ದೇವಸ್ಥಾನಗಳಿಗೂ ನಕ್ಷತ್ರಾಕಾರದ ಕರ್ನಾಟಕದ ದೇವಸ್ಥಾನಗಳಿಗೂ ಇರುವ ಹೋಲಿಕೆಗಳು ಅತ್ಯಾಶ್ಚರ್ಯವನ್ನುಂಟು ಮಾಡುತ್ತವೆ. ಕರ್ನಾಟಕ ಮತ್ತು ಕಾಂಬೋಡಿಯಾಗಳ ಮಧ್ಯ ಇದ್ದ ಸಾಂಸ್ಕೃತಿಕ ಸಂಬಂಧಗಳು ವ್ಯಾಪಾರದಿಂದ ಉಂಟಾಗಿರ ಬೇಕು. ದೇವಸ್ಥಾನಗಳನ್ನು ಕಟ್ಟಿರುವ ರೀತಿ ಅಲ್ಲದೆ ರಾವಣಾನುಗ್ರಹಮೂರ್ತಿಯಂತಹ ಶಿಲ್ಪಗಳು ಎರಡೂ ಕಡೆಯೂ ದೊರೆಯುತ್ತವೆ. ಭದ್ರವರ್ಮನ ಶಾಸನವು ಪಶ್ಚಿಮ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಪೆಟ್ಟಿಗೆ ಯಂತಹ ತಲೆ ಕಟ್ಟು ಇರುವ ಲಿಪಿಯಲ್ಲಿ ಬರೆದಿದೆ. ಆರ ನೆಯ ಶತಮಾನದಲ್ಲಿ ಚಾಲುಕ್ಯರಲ್ಲಿ ರೂಢಿಯಲ್ಲಿದ್ದ ಶಕ ಸಂವತ್ಸರವು ಇಂಡೋಚೀನಾ ಮತ್ತು ಇಂಡೋನೀ ಶಿಯಾಗಳಲ್ಲಿ ಜಾರಿಗೆ ಬಂತು. ಇವೆಲ್ಲವುಗಳಿಂದ ಭಾರ ತೀಯ ಸಂಸ್ಕೃತಿಯನ್ನು ಕಾಂಬೋಜಾ ಮತ್ತು ನೆರೆ ಹೊರೆಯ ಪ್ರಾಂತಗಳಲ್ಲಿ ಕರ್ನಾಟಕವು ಹರಡಿದ್ದು ಕಂಡು ಬರುತ್ತದೆ. ಇನ್ನು ಈ ದಿಶೆಯಲ್ಲಿ ಹೆಚ್ಚಿಗೆ ಮಾಹಿತಿ ದೊರೆಯ ಬೇಕಾದರೆ ಕನ್ನಡ ಸಾಹಿತ್ಯದ ಅಭ್ಯಾಸ ಸಹಾಯಕವಾಗ ಬಹುದು."

ಡಾ॥ ದಾಸಗುಪ್ತರ ಊಹೆ ಸರಿಯಾದುದೆಂದು ಅವರಿಗಿಂತ ಮುಂಚೆ ನಡೆಸಿದ ಡಾ॥ ಎ. ವೆಂಕಟ ಸುಬ್ಬಯ್ಯನವರ ಪಂಚತಂತ್ರದ ಮೇಲಿನ ಸಂಶೋಧನೆ ಯಿಂದ ತಿಳಿದುಬಂದಿದೆ. ದುರ್ಗಸಿಂಹನ ಕನ್ನಡ ಪಂಚ ತಂತ್ರಕ್ಕೆ ವಸುಭಾಗನ ಪಂಚತಂತ್ರವೂ ಆಧಾರವಾಗಿತ್ತು. ಇದೇ ವಸುಭಾಗನ ಪಂಚತಂತ್ರವು ಇಂಡೋನೀಶಿಯಾದ ತಂತ್ರಿಯೆನ್ನುವ ಗ್ರಂಥಕ್ಕೂ, ತೀಯಾಸದ ಮುಲ್ಲಾ ತಂತ್ರೈಯೆನ್ನುವ ಗ್ರಂಥಕ್ಕೂ ಮತ್ತು ಸಂಸ್ಕೃತದ ತಂತ್ರೋ ಪಖ್ಯಾನಕ್ಕೂ ಆಧಾರವಾಗಿತ್ತೆಂದು ಡಾ॥ ವೆಂಕಟ ಸುಬ್ಬಯ್ಯನವರು ತೋರಿಸಿಕೊಟ್ಟಿದ್ದಾರೆ.

ಕರ್ನಾಟಕದ ಕೆಲವು ಕಡೆ ಪಂಚತಂತ್ರದ ಕಥೆಗಳ ನ್ನಾಧರಿಸಿದ ಶಿಲ್ಪಗಳು ಕಂಡುಬರುತ್ತವೆ. ಈ ಸ್ಥಳ ಗಳಲ್ಲಿ ಕೆಲವು ಯಾವೆಂದರೆ ಪಟ್ಟದಕಲ್ಲು, ಬಳ್ಳಿಗಾವೆ ಮತ್ತು ಶಿರಸಿಯ ಹತ್ತಿರವಿರುವ ಎಸಳೆ, ಜಾವಾದಲ್ಲಿ ಮೆಂದುತ್, ಪನತರನ್, ಚಂಡಿಜಾಗೊಗಳಲ್ಲಿ ಪಂಚತಂತ್ರದ ಕಥೆಗಳು ಶಿಲ್ಪದಲ್ಲಿ ಕಾಣಿಸಿಕೊಂಡಿವೆ.

ಡಾ॥ ಎಸ್. ನಾಗರಾಜು ಇವರು ಮೇಲೆ ಹೇಳಿ ದ್ದನ್ನು ಸಮರ್ಥಿಸಿ, ಆಗ್ನೇಯ ಏಷ್ಯಾ ಮತ್ತು ಕರ್ನಾಟಕ ಮತ್ತು ದಕ್ಷಿಣಭಾರತದಲ್ಲಿ ಪ್ರಚಲಿತವಿರುವ ರಾಮಾಯಣ ಮತ್ತು ಮಹಾಭಾರತ ಕಥೆಗಳು ಆಗ್ನೇಯ ಏಷ್ಯಾದಲ್ಲಿ ಹರಡಿವೆಯೊ ಹೇಗೊ ಎನ್ನುವುದನ್ನು ನೋಡಬೇಕೆನ್ನು ತ್ತಾರೆ. ಕರ್ನಾಟಕದ ವಾಸ್ತುಶಿಲ್ಪದ ಬೆಳವಣಿಗೆ ಮತ್ತು ಆಗ್ನೇಯ ಏಷ್ಯಾದ ವಾಸ್ತುಶಿಲ್ಪದ ಬೆಳವಣಿಗೆಗಳಲ್ಲಿಯ ಸಾಮ್ಯಗಳನ್ನು ಹೆಚ್ಚು ಆಳವಾಗಿ ಅಭ್ಯಾಸ ಮಾಡ ಬೇಕೆಂದು ಹೇಳುತ್ತಾರೆ. ಈ ರೀತಿಯಾಗಿ ಲಿಪಿ, ಸಾಹಿತ್ಯ ಮತ್ತು ವಾಸ್ತುಶಿಲ್ಪಗಳಲ್ಲಿ ಎರಡೂ ಭಾಗ ಗಳಲ್ಲಿಯೂ ಸಾಮ್ಯಗಳನ್ನು ಹೆಚ್ಚು ಆಳವಾಗಿ ಅಭ್ಯಸಿ ಸುವ ಅಗತ್ಯವನ್ನು ಇದುವರೆಗೂ ಹೇಳಿದ್ದರಿಂದ ತಿಳಿದು ಕೊಳ್ಳಬಹುದು. ಯಾಕೆಂದರೆ ನಮ್ಮ ಸಂಸ್ಕೃತಿಯ ಅತ್ಯಂತ ಗಾಢವಾದ ಅಭ್ಯಾಸವನ್ನು ಮಾಡಿದ ಡಾ॥ ಆನಂದಕುಮಾರಸ್ವಾಮಿಯವರು ಹೇಳಿದ ಹಾಗೆ, ಕಾಂಬೋಡಿಯಾ, ಚಂಪಾ ಮತ್ತು ಜಾವಾಗಳ ಕಲೆ ಮತ್ತು ಸಂಸ್ಕೃತಿಗಳಲ್ಲಿ ದಖನ್ನಿನ ಮೂಲಗಳಿವೆಯೆ ವಿನಹ ದಕ್ಷಿಣ ಭಾರತದ ಮೂಲಗಳಿಲ್ಲ.

ಇಷ್ಟೆಲ್ಲಾ ಕರ್ನಾಟಕದವರು ಆಗ್ನೇಯ ಏಷ್ಯಾದಲ್ಲಿ ಸಂಸ್ಕೃತಿ ಪ್ರಸಾರ ಮಾಡಿದರು, ಇಲ್ಲವೆ ಮಾಡಿರಬಹುದು ಎಂದು ಹೇಳುತ್ತೀರಿ, ಇಂತಹ ಕರ್ನಾಟಕದ ಹೆಸರು ಒಂದು ಸಲವಾದರೂ ಎಲ್ಲಿಯಾದರೂ ಬರುತ್ತದೆಯೆ ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರ, ಒಂದು ಸಲ ಬರುತ್ತದೆಂದು ಹೇಳಬಹುದು.

೧೩೬೫ರಲ್ಲಿ, ಒಬ್ಬ ಮಜಪಹಿತ್ ವಂಶದ ಜಾವಾದ ದೊರೆಯ ವೈಭವವನ್ನು ವರ್ಣಿಸುವ ನಗರ ಕೆರ್ತಾಗಮವೆನ್ನುವ ಗ್ರಂಥದಲ್ಲಿ ಜಾವಾಕ್ಕೆ ಎಲ್ಲಿ ಎಲ್ಲಿಂದ ಪ್ರವಾಸಿಗಳು ಬರುತ್ತಿದ್ದರೆಂದು ವರ್ಣಿಸುವಾಗ ಈ ರೀತಿ ಹೇಳಿದೆ : "All kinds of people have continually come from other countries in multitudes. They are China, Yavana, Champa, Karnataka, Goda (Gaur) and Siam. These are places from where they come.

They come by ship with numerous merchants; monks and Brahmins are the principal ones who as they come are regaled and are well pleased during their stay."

ಈ ಉಲ್ಲೇಖದಿಂದ ಜಾವಾಕ್ಕೆ ಭಾರತದಿಂದ ಕರ್ನಾಟಕ ಮತ್ತು ಬಂಗಾಳದಿಂದ ವರ್ತಕರು, ಭಿಕ್ಷುಗಳು ಮತ್ತು ಬ್ರಾಹ್ಮಣರು ಹಡಗಿನಲ್ಲಿ ಬಹು ಸಂಖ್ಯೆಯಲ್ಲಿ ಹೋಗಿ ಅಲ್ಲಿ ಸುಖವಾಗಿದ್ದರೆಂದು ತಿಳಿಯಬರುತ್ತದೆ.

ಇದುವರೆಗೂ ಈ ವಿಷಯದ ಅಭ್ಯಾಸವು ಸಾಕಷ್ಟು ಆಗಿಲ್ಲ. ಎರಡೂ ಭಾಗಗಳಲ್ಲಿಯ ಸಾಹಿತ್ಯ, ಶಾಸನ ಮತ್ತು ಕಲೆಗಳ ಅಭ್ಯಾಸದ ಆಗತ್ಯವಿದೆಯೆನ್ನುವುದರಲ್ಲಿ ಸಂಶಯವಿಲ್ಲ.

* * *

### ಆಧಾರಗಳ ಬಗ್ಗೆ ಟಿಪ್ಪಣಿ

ಸರ್ ಚಾರ್ಲಸ್ ಈಲಿಯಟ್‌ನ Hinduism and Buddhism ಎನ್ನುವ ಮೂರು ಸಂಪುಟಗಳ ಗ್ರಂಥದಲ್ಲಿ ಈ ಮತಗಳು ಭಾರತದಲ್ಲಿ ಹೇಗೆ ಬೆಳೆದವೆನ್ನುವುದನ್ನು ಹೇಳುವುದಲ್ಲದೆ, ಆಗ್ನೇಯ ಏಷ್ಯಾ ಮತ್ತು ಚೀನಾಗಳಲ್ಲಿಯೂ ಅವುಗಳಇತಿಹಾಸವನ್ನು ಹೇಳಿದೆ. ಅದರ ೩ನೇ ಸಂಪುಟ ೧೦೬ನೇ ಪುಟದಿಂದ ಮುಂದೆ ಕರ್ನಾಟಕ ಮತ್ತು ಆಗ್ನೇಯಾ ಏಷ್ಯಾದಲ್ಲಿಯ ದೇವಸ್ಥಾನಗಳಲ್ಲಿಯ ಸಾಮ್ಯವನ್ನು ತೋರಿಸಿಕೊಟ್ಟಿದೆ. ಈ ಗ್ರಂಥವು ಹಿಂದೂ ಮತ್ತು ಬೌದ್ಧ ಮತಗಳ ತತ್ವಗಳನ್ನು ತಿಳಿಸಿಕೊಡುವುದಲ್ಲದೆ ಅವುಗಳು ಪರದೇಶಗಳಲ್ಲಿ ಹರಡಿರುವುದನ್ನು ತಿಳಿಸುತ್ತದೆ. ಇದು ೧೯೧೨ರಲ್ಲಿ ಮೊದಲನೆ ಸಲ ಪ್ರಕಟವಾಯಿತು. ಇತ್ತೀಚೆಗೆ ಇದರ ಪುನರ್ಮುದ್ರಣವಾಗಿದೆ. ನಾನು ಮೊದಲನೆಯ ಆವೃತ್ತಿಯನ್ನು ಉಪಯೋಗಿಸಿದ್ದೇನೆ.

ಕಲ್ಕತ್ತಾ ವಿಶ್ವವಿದ್ಯಾಲಯದ . ಪುರಾತನ ಭಾರತೀಯ ಇತಿಹಾಸ ಮತ್ತು ಸಂಸ್ಕೃತಿ ವಿಭಾಗದಲ್ಲಿ ಕೆಲಸ ಮಾಡುತ್ತಿರುವ ಡಾ॥ ಕಲ್ಯಾಣಕುಮಾರ ದಾಸಗುಪ್ತರು ದಕ್ಷಿಣ ಭಾರತದ ಅದರಲ್ಲಿಯೂ ಕರ್ನಾಟಕದ ಕಲೆಯ ಇತಿಹಾಸದಲ್ಲಿ ತಜ್ಞರು. ಡಾ॥ ಎನ್. ಪಿ. ಸೆನ್ ಇವರು ಸಂಪಾದಿಸಿರುವ Sourcesof theHistory of India ಮೊದಲನೆಯ ಸಂಪುಟದಲ್ಲಿ ಕರ್ನಾಟಕ ಇತಿಹಾಸದ ಆಧಾರಗಳು ಎನ್ನುವ ಡಾ॥ ದಾಸಗುಪ್ತರ ಲೇಖನದಲ್ಲಿ ಮೇಲೆ ಹೇಳಿದ ಅವರ ಅಭಿಪ್ರಾಯಗಳಿವೆ.

ಹೈದರಾಬಾದ್ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದಲ್ಲಿ ಅಧ್ಯಾಪಕರಾಗಿರುವ ಡಾ॥ ಎಸ್. ನಾಗರಾಜು ಇವರ 'ಆಗ್ನೇಯ ಏಷ್ಯಾದೊಡನೆ ಕರ್ಣಾಟಕದ ಸಾಂಸ್ಕೃತಿಕ ಸಂಬಂಧ' ಎಂಬ ಲೇಖನವು 'ಪ್ರಬುದ್ಧ ಕರ್ಣಾಟಕ', ಸಂಪುಟ ೫೧, ಸಂಚಿಕೆ ೩ರಲ್ಲಿ (೧೯೬೯) ಇದೆ. ಈ ಲೇಖನದಿಂದ ಮೇಲೆ ಹೇಳಿದ ಅವರ ಅಭಿಪ್ರಾಯಗಳನ್ನು ನಾನು ಉದಾಹರಿಸಿದ್ದೇನೆ.

Harry J. Bendeಯವರು ಸಂಪಾದಿಸಿದ The World of South-East Asia, Selected Readings ಎನ್ನುವ ಗ್ರಂಥದಲ್ಲಿಯ The Legendary Grandeur of Majapahit ಎನ್ನುವ ಅಧ್ಯಾಯದಲ್ಲಿ ೪೬ನೆಯ ಪುಟದಲ್ಲಿ ಈ ಲೇಖನದಲ್ಲಿಯ ಕೊನೆಯ ಉದ್ಧರಣವು ಇದೆ.

ಎಂ. ಎಲ್. ಶಿವಶಂಕರ

# ಚಿಕ್ಕಮಗಳೂರಿನಲ್ಲಿ ದೊರೆತ ಅಪೂರ್ವ ಹರಿಹರಮೂರ್ತಿ

ಹರಿಹರಮೂರ್ತಿಯ ಬಗ್ಗೆ ವಾಮನಪುರಾಣದಲ್ಲಿ ಪ್ರಸ್ತಾಪವಿದೆ. ವಿಷ್ಣು ಒಬ್ಬ ಋಷಿಗೆ ತಾನು ಹಾಗೂ ಶಿವ ಇಬ್ಬರೂ ಒಂದೇ ಎಂದು ತಿಳಿಸಿ ಆತನಿಗೆ ಹರಿಹರ ಮೂರ್ತಿಯ ಸ್ವರೂಪವನ್ನು ತೋರಿಸಿದನೆಂದು ಪ್ರತೀತಿ ಇದೆ.

ಶಿವ ಮತ್ತು ವಿಷ್ಣುವಿನಲ್ಲಿ ಯಾರು ಹೆಚ್ಚು ಎಂಬ ವಾಗ್ವಾದ ಆರಂಭಗೊಂಡಾಗ ಹರಿಹರಮೂರ್ತಿಯ ಸೃಷ್ಟಿ ಆಯಿತು. ಆದ್ದರಿಂದಲೇ ಹರಿಹರ ಮಹೋತ್ಸವಗಳಲ್ಲಿ ಶೈವರೂ, ವೈಷ್ಣವರೂ ಭಾಗವಹಿಸುತ್ತಾರೆ.

ಶಿಲ್ಪಶಾಸ್ತ್ರಗಳ ಪ್ರಕಾರ, ಹರಿಹರನ ಎಡಭಾಗ ಚಕ್ರ, ಶಂಖ, ಗದೆ, ಕಟಕಮುದ್ರೆ, ಶಿರೋಭಾಗದ ಅರ್ಧ ಭಾಗ ಸುಂದರವಾದ ಅಮೂಲ್ಯ ರತ್ನ ಸಹಿತವಾದ ಕಿರೀಟದಿಂದ ಕೂಡಿ, ಎಡ ಕಿವಿಯಲ್ಲಿ ಮಕರಕುಂಡಲ ಧರಿಸಿರಬೇಕು. ಕೇಯೂರ, ಕಂಕಣ ಮತ್ತು ಇತರ ಆಭರಣಗಳಿಂದ ಭುಜ ಅಲಂಕೃತವಾಗಿರಬೇಕು. ಬಲ ಗಾಲು ಸರ್ಪಾಕೃತಿಯಿಂದ, ಎಡಗಾಲು ಎಲ್ಲಾ ತರಹದ ಅಮೂಲ್ಯ ರತ್ನಗಳಿಂದ ಅಲಂಕೃತವಾಗಿರಬೇಕು. ವೈಷ್ಣವ ಭಾಗ ಹಳದಿ ಸಿಲ್ಕ್‌ವಸ್ತ್ರದಿಂದ ಅಲಂಕೃತವಾಗಿರ ಬೇಕು. ಶಿವನ ಭಾಗದ ಬಣ್ಣ ಮಂಜು ಬಿಳಿಯ ದಾಗಿ, ವಿಷ್ಣುವಿನ ಭಾಗ ಹಸಿರು ಅಥವಾ ಶ್ಯಾಮಲ ವರ್ಣದಿಂದಿರಬೇಕು. ಹರಿಹರಮೂರ್ತಿ ಸಮಭಂಗದಲ್ಲಿರ ಬೇಕು. ಬಲಭಾಗ ಭಯಂಕರವಾಗಿದ್ದು, ಎಡಭಾಗ ನಯವಾಗಿರಬೇಕು. ಶಿವನ ಭಾಗದ ಹಣೆಯಲ್ಲಿ ಮೂರ ನೆಯ ಕಣ್ಣು ಅರ್ಧಭಾಗ ಕಾಣುವ ಹಾಗೆ ಹಾಗೂ ಹರಿಹರಮೂರ್ತಿಯ ಹಿಂಭಾಗ ಶಿರಶ್ಚಕ್ರದಿಂದ ಅಥವಾ ಪ್ರಭಾವಳಿಯಿಂದ ಕೂಡಿರಬೇಕು.

ವಿಷ್ಣುಧರ್ಮೋತ್ತರಪುರಾಣದ ಪ್ರಕಾರ, ಹರಿಹರ ಮೂರ್ತಿಯ ಬಲಭಾಗದಲ್ಲಿ ನಂದಿ ಹಾಗೂ ಎಡಭಾಗದಲ್ಲಿ ಗರುಡ ಮೂರ್ತಿಗಳಿರಬೇಕು. ಬಾದಾಮಿಯ ಹರಿಹರ ಮೂರ್ತಿಯಲ್ಲಿ ಶಿವನ ಜಟಾ ಮಕುಟ ಹಾಗೂ ವಿಷ್ಣು ವಿನ ಕಿರೀಟ ಮಕುಟ ಸ್ಪಷ್ಟವಾಗಿ ಕಾಣಬರುತ್ತದೆ. ಬಲಕಿವಿಯಲ್ಲಿ ಸರ್ಪಕುಂಡಲ ಎಡಭಾಗ ನಕ್ರ ಕುಂಡಲ ಗಳಿವೆ. ಹರಿಹರಮೂರ್ತಿಯ ಬಲಭಾಗದ ಹಿಂಭಾಗದ ಕೈ ಪರಶು (ಸರ್ಪ ಸುತ್ತಿಕೊಂಡಿದೆ), ಹಿಂಭಾಗದ ಎಡಗೈ ಶಂಖದಿಂದ ಕೂಡಿವೆ. ಬಲಭಾಗದ ಮುಂಭಾಗದ ಕೈ ಅಭಯಹಸ್ತದಿಂದ ಕೂಡಿರಬಹುದಾಗಿದೆ. ಎಡಗೈ ತೊಡೆಯ ಮೇಲಿದೆ. ತಲೆಯ ಹಿಂಭಾಗದಲ್ಲಿ ಶಿರಶ್ಚಕ್ರ ವಿದೆ. ಸಮಭಂಗದಲ್ಲಿ ಹರಿಹರಮೂರ್ತಿ ನಿಂತಿದೆ. ಬಲಭಾಗದಲ್ಲಿ ಪಾರ್ವತಿ, ಎಡಭಾಗದಲ್ಲಿ ಲಕ್ಷ್ಮಿ ಇದ್ದಾರೆ. ಪಾರ್ವತಿ ಮತ್ತು ಹರಿಹರಮೂರ್ತಿಯ ಮಧ್ಯೆ ನಂದಿ (ದಂಡಪಾಣಿಯಾಗಿ) ಮತ್ತು ಎಡಗಡೆ ಲಕ್ಷ್ಮಿ ಮತ್ತು ಹರಿಹರರ ಮಧ್ಯೆ ಕುಬ್ಜ ಗರುಡನ ಮೂರ್ತಿ ಇವೆ. ಪೀಠದ ಮೇಲೆ ಗಣಗಳ ಸಮೂಹ, ವಾದ್ಯವೃಂದ ಮತ್ತು ನರ್ತನದ ಮೂರ್ತಿಗಳಿವೆ.

ಗುಪ್ತಶೈಲಿಯ ಐದನೆಯ ಶತಮಾನದ ಗೋಕರ್ಣದ ಹರಿಹರಮೂರ್ತಿ ಸುಂದರವಾಗಿದೆ. ಬಲಭಾಗ ಜಟಾ ಮಕುಟ, ಚಂದ್ರನಿಂದ ಕೂಡಿದ್ದಾಗಿ, ತ್ರಿಶೂಲ (ಮೇಲ್ಭಾಗ ಮುರಿದಿದೆ) ಅಭಯ ಹಸ್ತದಿಂದ ಕೂಡಿದೆ. ಮುಂಡಿಯ

ತಳಭಾಗ ಮತ್ತು ಎಡಭಾಗ ವಿಷ್ಣುಭಾಗದ (ಹರಿಭಾಗದ) ಕೈಗಳು ಭಿನ್ನವಾಗಿವೆ. ಶಂಖವನ್ನು ಕಾಣಬಹುದು. ಕಂಠಹಾರವೊಂದನ್ನು ಬಿಟ್ಟರೆ ದೇಹದ ಮೇಲೆ ಯಾವ ಆಭರಣಗಳೂ ಇಲ್ಲ.

ಪೂನಾದ ಹರಿಹರಮೂರ್ತಿಯ ಶಿವನ ಭಾಗ ತ್ರಿಶೂಲ ಮತ್ತು ಅಕ್ಷಮಾಲೆಯಿಂದ ಕೂಡಿದೆ. ವಿಷ್ಣು ಭಾಗ ಗದೆ ಮತ್ತು ಶಂಖಗಳಿಂದ ಕೂಡಿದೆ. ಪಾರ್ವತಿ ಮತ್ತು ಲಕ್ಷ್ಮಿಯರು ಫಲ ಮತ್ತು ಪುಷ್ಪಗಳನ್ನು ಕೈಗಳಲ್ಲಿ ಹಿಡಿದಿದ್ದಾರೆ. ಎಡಭಾಗದಲ್ಲಿ ಮಂಡಿಯೂರಿ ಕುಳಿತಿರುವ ಗರುಡ, ಬಲಭಾಗದಲ್ಲಿ ನಿಂತಿರುವ ನಂದಿ ಇವೆ. ಹರಿಹರ ಮೂರ್ತಿ ಬಹಳ ಮುದ್ದಾಗಿದೆ. ಶಿಲ್ಪಿ ಆಭರಣಗಳನ್ನು ಸೂಕ್ಷ್ಮ ರೀತಿಯಲ್ಲಿ ತೀರಾ ಆಕರ್ಷಕವಾಗಿ ಬಿಡಿಸಿದ್ದಾನೆ.

ಹರಿಹರದ ಹರಿಹರೇಶ್ವರ ದೇವಾಲಯದ ಹರಿಹರ ಮೂರ್ತಿಯ ಮೂಲವಿಗ್ರಹ ಸುಮಾರು ೧೦.೮ ಸೆ. ಮೀ ಎತ್ತರವಿದೆ. ಹರಿಹರನ ಬಲಭಾಗ ಜಟಾಮುಕುಟ, ಎಡ ಭಾಗ ಮಣಿಮುಕುಟವಾಗಿವೆ. ಬಲಗೈಯಲ್ಲಿ ಅಭಯ, ತ್ರಿಶೂಲ; ಎಡಗೈಯಲ್ಲಿ ಸಂಹಾರ ಚಕ್ರ, ಶಂಖಗಳಿವೆ. ಇದರ ಕಾಲ ಸುಮಾರು ಐದನೆಯ ಶತಮಾನ. ಹಿಂದಿನ ಎರಡು ಕೈಗಳನ್ನು ಎರಡು ಕಂಬಗಳ ಮೇಲಿಟ್ಟಿರುವರು. ಮುಖವು ಅಗಲವಾಗಿ ಚಾಲುಕ್ಯ ರೀತಿಯಲ್ಲಿದೆ, ವಿಗ್ರಹ ದಲ್ಲಿ ಶಿರ, ಎದೆ, ಎಡತೊಡೆ ಹಳೆಯ ಭಾಗವಾಗಿದ್ದು, ಬಲತೋಳುಗಳು, ಎಡಭುಜ ಮತ್ತು ತೋಳುಗಳು ಈಚಿನವಾಗಿವೆಯೆಂದು ಡಾ॥ ಎಸ್. ಶ್ರೀಕಂಠಶಾಸ್ತ್ರಿ ಯವರ ಅಭಿಪ್ರಾಯ. ದೇವರಿಗೆ ಹಾರ, ಯಜ್ಞೋಪ ವೀತ, ಕಟಿಸೂತ್ರ ಮತ್ತು ಕೌಪೀನಗಳಿವೆ. ಧೋತಿ ಇಲ್ಲ. ಮೊಣಕಾಲವರೆಗೂ ಕಲ್ಲಿನ ಪೆಟ್ಟಿಗೆಯಲ್ಲಿ ಮುಚ್ಚಲಾಗಿದೆ. ಮೂಗು ಮತ್ತು ಮೂರ್ತಿಯನ್ನು ಗಾರೆಯಿಂದ ತಿದ್ದಿದೆ. ಭಿನ್ನವಾದ ವಿಗ್ರಹಪೂಜೆಯನ್ನು ಇಲ್ಲಿ ಕಾಣಬಹುದು.

ಚಿಕ್ಕಮಗಳೂರು ಶಿಲ್ಪಗಳಿಗೆ ಹಾಗೂ ದೇವಾ ಲಯಗಳಿಗೆ ಪ್ರಸಿದ್ಧವಾಗಿದೆ. ಹರಿಹರ ಮೂರ್ತಿ ಸಮಭಂಗದಲ್ಲಿದೆ, ಇದರ ಎತ್ತರ ೧.೫೦ ಸೆಂ. ಮೀ., ಅಗಲ ೭೪ ಸೆಂ. ಮೀ. ಹರಿಹರನ ಮುಕುಟ ಬಲಭಾಗದಲ್ಲಿ ಜಟಾ, ಎಡಭಾಗದಲ್ಲಿ ಮಣಿಮುಕುಟದಿಂದ ಅಲಂಕೃತ ವಾಗಿದೆ. ಬಲಗೈಗಳಲ್ಲಿ ಅಭಯ ತ್ರಿಶೂಲ ಡಮರುಗ, ಎಡಗೈಗಳಲ್ಲಿ ಪದ್ಮ, ಗದೆ, ಚಕ್ರ ಇವೆ. ಎಂಟು ಕೈಗಳಲ್ಲಿ ಎರಡು ಕೈಗಳು ಭಿನ್ನವಾಗಿವೆ. ಮುಖ ಉಜ್ಜಿದೆ. ಆಭರಣಗಳಿಂದ ಅಲಂಕೃತವಾಗಿರುವ ರೀತಿ ಹಾಗೂ ಆಯುಧಗಳನ್ನು ಹಿಡಿದಿರುವ ರೀತಿ ಹೊಯ್ಸಳ ಶೈಲಿಯಲ್ಲಿದೆ. ಬಲಕಿವಿಯಲ್ಲಿ ನಾಗಕುಂಡಲ, ಎಡಕಿವಿ ಯಲ್ಲಿ ಕುಂಡಲಗಳಿವೆ. ಬಲಭಾಗದಲ್ಲಿ ಡಮರುಗಳನ್ನು ಹಿಡಿದಿರುವ ರೀತಿ ಮುದ್ದಾಗಿದೆ. ಪ್ರಭಾವಳಿಯಲ್ಲಿ ದಶಾ ವತಾರವನ್ನು ಕಡೆಯಲಾಗಿದೆ. ಸಿಂಹಮುಖ ಸಹ ಇದೆ. ಎಡಭಾಗದಲ್ಲಿ ತೋಳ್ಬಂದಿ, ಸುಂದರವಾದ ನೀಳವಾದ ಹಾರ (ವೈಜಯಂತಿಮಾಲಾ), ಕಂಠಹಾರ, ಉದರಬಂಧ ಮತ್ತು ಮೇಖಲಾ(ಕಟಿಸೂತ್ರ)ಗಳನ್ನು ಕಾಣಬಹುದು.

ಹರನ ಭಾಗದಲ್ಲಿ ವೀರಭದ್ರನ ವ್ಯಕ್ತಿತ್ವವನ್ನು ಹಾಗೂ ನಾಗಬಂಧವನ್ನು ವಿಶಿಷ್ಟವಾಗಿ ಕಾಣಬಹುದು. ಹರಿಹರಮೂರ್ತಿಯ ಪಕ್ಕದಲ್ಲಿ ದೇವಿಯರು (ಪತ್ನಿ ಯರು) ನಿಂತಿದ್ದಾರೆ. ಪಾರ್ವತಿ ಅಂಕುಶ, ಪಾಶವನ್ನು ಹಿಂಭಾಗದ ಎರಡು ಕೈಗಳಲ್ಲಿ ಹಿಡಿದಿದ್ದಾಳೆ.

ತೋರಣದ ಮಧ್ಯೆ ಸಿಂಹಮುಖವಿದೆ. ಹರನ ಭಾಗದಲ್ಲಿ ರುದ್ರರನ್ನು, ಹರಿಯ ಭಾಗದಲ್ಲಿ ದಶಾವತಾರ ಗಳನ್ನು ಬಿಡಿಸಿದ್ದಾರೆ. ಜಟಾಮುಕುಟ ತಾಂಡವ ಶಿವನ ಚಿಹ್ನೆಯಿಂದ ಕೂಡಿದೆ. ಇವುಗಳೆಲ್ಲವೂ ವಿಶಿಷ್ಟವಾಗಿವೆ. ಶಿವನ ಭಾಗದ ಜಟಾಮುಕುಟದಲ್ಲಿ ನಾಲ್ಕು ಬುರುಡೆಗಳನ್ನು ಬಿಡಿಸಲಾಗಿದೆ.

### ಆಧಾರ ಗ್ರಂಥಗಳು


1. Elements of Hindu Iconography, Vol. II, Part I, 1971
2. ಡಾ॥ ಎಸ್. ಶ್ರೀಕಂಠಶಾಸ್ತ್ರಿ : ಹೊಯ್ಸಳ ವಾಸ್ತುಶಿಲ್ಪ, ೧೯೮೫

ನಿರುಪಮಾ

# ವಿಜಯನಗರದ ಇತಿಹಾಸಕ್ಕೆ ತೆಲುಗು ಸಾಹಿತ್ಯದ ಆಕರಗಳು

ಕಾವ್ಯಗಳು, ಸಾಹಿತ್ಯ ರಚನೆಗಳು ತಮ್ಮ ಸಂಶೋಧನೆಗೆ ಕನಿಷ್ಟತಮ ಆಕರಗಳೆಂದು ಇತಿಹಾಸ ಸಂಶೋಧಕರ ಅಭಿಪ್ರಾಯ. ರಾಜರ ವಂಶಾವಳಿಯ ಬಣ್ಣನೆ, ಅವರು ಗಳಿಸಿರಬಹುದಾದ ಗೆಲವುಗಳ ಅತಿರಂಜಿತ ವರ್ಣನೆ, ನಡೆಸಿರಬಹುದಾದ ವೈಭವದ ಜೀವನ ಇವುಗಳನ್ನು ಹೊರತು ಪಡಿಸಿದಲ್ಲಿ ಸಮಕಾಲೀನ ಭಾವನೆಗಳು, ಸಂಪ್ರದಾಯಗಳು, ನಂಬಿಕೆಗಳು, ಸಾಮಾಜಿಕ ವಿಧಿ ವಿಧಾನಗಳು ಕಾವ್ಯಗಳಲ್ಲಿ ದರ್ಪಣದಂತೆ ಪ್ರತಿಫಲಿಸುತ್ತವೆ ಎಂಬುದನ್ನು ಒಪ್ಪಬೇಕಾಗುತ್ತದೆ. ಕವಿ ಎಷ್ಟೇ ಜಾಗರೂಕತೆ ವಹಿಸಿದರೂ ಆತನು ತನ್ನ ಕೃತಿಗೆ ಆಯ್ದುಕೊಂಡ ಕಥಾವಸ್ತು ಎಷ್ಟೇ ಪುರಾತನವಾದರೂ ಅದರಲ್ಲಿ ಸಮಕಾಲೀನ ಭಾವನೆಗಳು ಅಪಾರ ವ್ಯವಹಾರಗಳು ಹೇಗೋ ಜಾಗ ಮಾಡಿಕೊಳ್ಳುತ್ತವೆ. ತನ್ನ ಕಾಲವನ್ನು ಅತಿಕ್ರಮಿಸಿ ಯಾವ ಕವಿಯೂ ಹೋಗಲಾರ; ತನ್ನ ಕಾಲಕ್ಕಿಂತ ಮುಂದೆ ಭವಿಷ್ಯದ ಚಿತ್ರವನ್ನು ಓದುಗರ ಮುಂದೆ ಇಡಲಾರ.

ಈ ನಿಟ್ಟಿನಲ್ಲಿ ಇತಿಹಾಸದ ಗುರುತುಗಳನ್ನು ಮೂಡಿಸಿದ ತೆಲುಗು ಕಾವ್ಯ, ಸಾಹಿತ್ಯ ರಚನೆಗಳ ಕಡೆಗೆ ನಾವು ಕಣ್ಣು ಹಾಯಿಸಿದಾಗ, ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದಂತೆ ಈ ಸಾಹಿತ್ಯದ ಆಕರಗಳನ್ನು ಗಮನಿಸಿದಾಗ ಒಂದು ಅಕ್ಷಯವಾದ ಭಂಡಾರವೇ ನಮ್ಮ ಕಣ್ಣೆದುರಿಗೆ ಕಾಣಿಸುತ್ತದೆ. ಅಂಬರದಲ್ಲಿ ಮಿನುಗುವ ಅಸಂಖ್ಯಾತ ತಾರೆಗಳಂತೆ ಕವಿಗಳ ಒಂದು ಗೆಲಾಕ್ಸಿಯೇ ನಮ್ಮ ಕಣ್ಣನ್ನು ಕುಕ್ಕುತ್ತದೆ. ಚಿಕ್ಕ ಪುಟ್ಟ ಕೃತಿಗಳನ್ನು ಬಿಟ್ಟರೂ ಕಾವ್ಯಕೃತಿಗಳು ದ್ವಿಪದಿ ಮತ್ತು ಇತರ ಸಾಹಿತ್ಯ ಪ್ರಕಾರಕ್ಕೆ ಸೇರಿದ ಕೃತಿಯೆಂದು ಅಸಂಖ್ಯಾತ ಕೃತಿಗಳ ಸಾಲನ್ನೇ ನಾವು ಪರಿಶೀಲಿಸಬೇಕಾಗುತ್ತದೆ. ಅದರಲ್ಲಿ ಹೆಜ್ಜೆ ಹೆಜ್ಜೆಗೂ ಇತಿಹಾಸದ ಗುರುತುಗಳನ್ನು ಸಮಕಾಲೀನ ಜೀವನದ ಹರಹನ್ನು, ಎತ್ತರ ಬಿತ್ತರಗಳನ್ನು ಪದರು ಪದರುಗಳಾಗಿ ನಾವು ಕೈಗೆ ಎತ್ತಿಕೊಳ್ಳಬಹುದಾಗಿದೆ. ಇದರ ಬಗ್ಗೆ ಸಾವಿರಾರು ಪುಟ ಬರೆದರೂ ಕಡಿಮೆ ಎನಿಸುವಷ್ಟು ಐತಿಹಾಸಿಕ ಮಹತ್ವವಿರುವ ಮಾಹಿತಿಯು ಲಭ್ಯವಿದೆ.

ಅಪಾರವಾಗಿರುವ ಈ ಸಾಹಿತ್ಯ ರಾಶಿಯಲ್ಲಿ ಕೇವಲ ಶ್ರೀಕೃಷ್ಣದೇವರಾಯನ ಕಾಲಕ್ಕೆ ಮಾತ್ರ ಇಲ್ಲಿ ಸೀಮಿತಗೊಳಿಸಲಾಗಿದೆ, ಅಥವಾ ಸ್ವಲ್ಪ ಹಿಂದೆ ಮತ್ತು ಸ್ವಲ್ಪ ಮುಂದಿನ ಕಾಲಕ್ಕೆ ಅನ್ವಯಿಸಬಹುದು.

ಸರ್ವಜ್ಞನಾಗದವ ಸತ್ಕವಿಯಾಗಲಾರ ಎಂದು ಘೋಷಿಸಿದ ಕೊರವಿ ಗೋಪರಾಜನ (ಕ್ರಿ. ಶ. ೧೫೦೦–೧೫೩೦) 'ಸಿಂಹಾಸನ ದ್ವಾತ್ರಿಂಶಿತ' ಎಂಬ ಕಾವ್ಯದಲ್ಲಿ ಆ ಕಾಲದ ಆಚಾರ ವ್ಯವಹಾರಗಳು ಸವಿಸ್ತಾರವಾಗಿ ಬಂದಿವೆ. ವಿಜಯನಗರದ ಸಾಮಾಜಿಕ ಇತಿಹಾಸಕ್ಕೆ ಉಪಯುಕ್ತವಾಗುವಂತೆ ಬರೆದ ರಸವತ್ತಾದ ಕಾವ್ಯಗಳಲ್ಲಿ ಗೋಪರಾಜನ ಕಾವ್ಯ ಪ್ರಥಮ ಶ್ರೇಣಿಯಲ್ಲಿ ನಿಲ್ಲುತ್ತದೆ ಎಂದು ತೆಲುಗು ಇತಿಹಾಸ ಸಂಶೋಧಕರ ಅಭಿಪ್ರಾಯ. ಈತ ಅನೇಕ ವಿಷಯಗಳನ್ನು ಕೇವಲ ಕ್ಯಾಟಲಾಗಿನಂತೆ ಹೇಳಿಕೊಂಡು ಹೋಗದೆ ಬೇಸರವಾಗದಂತೆ ರಸವತ್ತಾದ ಘಟನೆಗಳ ಮೂಲಕ ಪದ್ಯಗಳಲ್ಲಿ ತಿಳಿಸುತ್ತಾನೆ. ಮಾಡಯ್ಯ ಕವಿಯ 'ಮೈರಾವಣಚರಿತ್ರೆ'ಯಲ್ಲಿ ವಿಜಯನಗರದ

ರಾಣಿವಾಸದವರಿಗೆ ಪುಣ್ಯಾಂಗನೆಯವರು ಪುರಾಣ ಹೇಳುತ್ತಿದ್ದ ರೀತಿ, ರಾಮಾಯಣ ಪಾರಾಯಣ ಮುಂತಾದ ವಿವರಗಳನ್ನು ಕಣ್ಣಿಗೆ ಕಟ್ಟಿದಂತೆ ಬಣ್ಣಿಸಿದ್ದಾನೆ. ಮನು ಮಂಚಿ ಭಟ್ಟನ 'ಅಶ್ವಲಕ್ಷಣಸಾರ'ದಲ್ಲಿ ವಿಜಯನಗರದರಸರು ಇತರ ದೇಶಗಳಿಂದ ಕೊಳ್ಳುತ್ತಿದ್ದ ಕುದುರೆ ವ್ಯಾಪಾರ, ಕುದುರೆ ಪಂದ್ಯಗಳ ವಿವರಗಳಿವೆ.

ವಿಜಯನಗರದ ಕಾಲದ ಕನ್ನಡದ ವಧುವಿಗೆ ಕತ್ತಿನಲ್ಲಿ ಕರಿಮಣಿ ಸರವನ್ನು ಮೊಟ್ಟಮೊದಲ ಬಾರಿಗೆ ಹಾಕಿಸಿದವನು ಮಾದಯಗಾರಿ ಮಲ್ಲನ, ಸಾಳ್ವ ತಿಮ್ಮರಸು ಮಂತ್ರಿಯ ಅಳಿಯನಾದ ಈತ ೧೫೧೬ ರಿಂದ ೧೫೨೦ರ ವರೆಗೆ ವಿನುಕೊಂಡ, ಗುತ್ತಿ ಪ್ರಾಂತ್ಯಗಳ ಒಡೆಯನಾಗಿದ್ದ. ಈತ ಬರೆದ 'ರಾಜಶೇಖರವಿಲಾಸ'ದ ೬೦ ರಷ್ಟು ಭಾಗವನ್ನು ವಿವಾಹದ ವರ್ಣನೆಗಳೇ ಆಕ್ರಮಿಸಿಕೊಂಡಿವೆ. ನಾಯಕನ ಲಗ್ನ ಗೊತ್ತಾದಾಗಿನಿಂದ ಗೃಹ ಪ್ರವೇಶದವರೆಗೂ ನಡೆದ ವಿವಾಹದ ವಿಸ್ತಾರ ವರ್ಣನೆ ಆ ಕಾಲದ ಸಂಪ್ರದಾಯ, ನಂಬಿಕೆಗಳು, ಆಚಾರ ವ್ಯವಹಾರಗಳನ್ನು ತಿಳಿಸುತ್ತವೆ. ಇದಕ್ಕೆ ಹಿಂದಿನ ಕಾವ್ಯಗಳಲ್ಲಿ ಮಾಂಗಲ್ಯ, ಧಾರೆ ಅಕ್ಕಿಯ ವಿವರವಿತ್ತೇ ಹೊರತು ಕರಿಮಣಿ, ಗಡಿಗೆ ನೀರು, ದಂಪತಿ ತಾಂಬೂಲಗಳ ಉಲ್ಲೇಖವಿರಲಿಲ್ಲ. ಈ ಪದ್ಧತಿಗಳನ್ನು ಇನ್ನೂ ಕೆಲ ವಿವಾಹ ವಿಧಿಗಳನ್ನು ಈತನ ಕಾವ್ಯದಲ್ಲಿ ಪ್ರಥಮವಾಗಿ ಕಾಣುತ್ತೇವೆ.

ಇನ್ನು ಕೃಷ್ಣದೇವರಾಯನೇ ಸ್ವತಃ ಬರೆದ 'ಆಮುಕ್ತಮಾಲ್ಯ'ವಂತೂ ಕೃಷ್ಣದೇವರಾಯನ ದಿನಚರಿ ಎಂದರೆ ತಪ್ಪಿಲ್ಲ. ಈತ ತನ್ನ ಕಾವ್ಯಕ್ಕೆ ಆರಿಸಿಕೊಂಡ ವಸ್ತು ಆಂಡಾಳ್ ಕಥೆ ೮ನೇ ಶತಮಾನದ್ದಾದರೂ ತನ್ನ ಕಾವ್ಯದಲ್ಲಿ ಪ್ರಜೆಗಳ, ರಾಜ್ಯದ ಅಧಿಕಾರಿಗಳ, ಅರಸರ ದೈನಂದಿನ ಜೀವನ ವಿಧಾನವನ್ನು ತನ್ನ ಕಾಲದಲ್ಲಿದ್ದಂತೆ ಯಥಾವತ್ತಾಗಿ ವರ್ಣಿಸಿದ್ದಾನೆ. ಆ ಕಾಲದ ಜನಜೀವನ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ವಾಣಿಜ್ಯ, ಸೈನಿಕ ಪರಿಸ್ಥಿತಿಗಳೆಲ್ಲವೂ ಓದುಗರ ಕಣ್ಣಮುಂದೆ ನಿಲ್ಲುತ್ತವೆ. ಈ ದೃಷ್ಟಿಯಿಂದ ಈ ಕೃತಿ ಹೆಚ್ಚು ಐತಿಹಾಸಿಕ ಮಹತ್ವವುಳ್ಳ ಕೃತಿ ಎಂದು ವಿದ್ವಾಂಸರು ಒಪ್ಪಿಕೊಂಡಿದ್ದಾರೆ.

'ಆಮುಕ್ತಮಾಲ್ಯ'ದಲ್ಲಿ ಕೃಷ್ಣದೇವರಾಯನು ವಿಜಯನಗರದ ಸಾಮಾಜಿಕ ಜೀವನ, ಆಯಾ ವರ್ಗದವರ ವೇಷ ಭೂಷಣಗಳ ವಿವರದಿಂದ ಹಿಡಿದು ಆ ಕಾಲದ ಸಾಮಾನ್ಯರ ಜೀವನ ವಿಧಾನ, ಕೈಗಾರಿಕೆ, ಕಲೆಗಳು, ವಾಣಿಜ್ಯ ವಿಧಾನ, ಕ್ರೀಡೆಗಳು, ವಿನೋದಗಳು, ಆದಾಯ ಸುಂಕಗಳ ವಿವರ, ಕಳ್ಳರು ಕಳ್ಳತನ ಮಾಡುವ ರೀತಿ, ಅವರಿಗೆ ವಿಧಿಸುವ ಶಿಕ್ಷೆ ನ್ಯಾಯ ವಿಚಾರಣೆಯ ವಿಧಾನ, ಪಂಚಾಯತಿ ಸಭೆ, ದೇಶ ರಕ್ಷಣೆಯ ವಿಧಾನ, ದೇಶದ ವಿಭಾಗಗಳ ವಿಂಗಡಣೆ, ಆಡಳಿತದ ರೀತಿ, ಅರಸನು ಅನುಸರಿಸಬೇಕಾದ ಎಚ್ಚರ ಚಚ್ಚರಗಳ ಕುರಿತು ಅಡಿಗಡಿಗೂ ಹೇಳುತ್ತ ಬಂದಿದ್ದಾನೆ. ಉದಾಹರಣೆಗೆ, ವಿಜಯನಗರದ ರಾಜಧಾನಿಯಲ್ಲಿ ವೇಶ್ಯೆಯರ ಸಂಖ್ಯೆ ಅಪಾರವಾಗಿತ್ತೆಂದು ಈ ಕಾವ್ಯದಿಂದ ತಿಳಿದುಬರುತ್ತದೆ. ಇವರು ಕೊಡುತ್ತಿದ್ದ ಸುಂಕದ ಹಣ ಗಣಾಚಾರಿ ಸುಂಕ ೧೨೦೦೦ ರಕ್ಷಕ ಭಟರ ಸಂಬಳಕ್ಕೆ ಸಾಕಾಗುತ್ತಿತ್ತಂತೆ. ಒಬ್ಬ ಜೈನ ಮತ್ತು ವೈಷ್ಣವನ ನಡುವೆ ನಡೆದ ವಿವಾದದ ತೀರ್ಪಿನ ವಿವರವನ್ನು ರಾಯನು ತುಂಬ ಸ್ವಾರಸ್ಯಕರವಾಗಿ ದಾಖಲಿಸಿದ್ದಾನೆ.

ಆ ಕಾಲದ ಪಂಚಾಯತಿ ಸಭೆಯ ನ್ಯಾಯ ವಿಚಾರಣೆಯ ವೈಶಿಷ್ಟ್ಯಗಳ ವಿವರಗಳು ತೆಲುಗು ಕಾವ್ಯಗಳಲ್ಲಿ ನಮಗೆ ಹೇರಳವಾಗಿ ಸಿಗುತ್ತವೆ. ಪ್ರಸಿದ್ಧ ವಾಗ್ಗೇಯಕಾರ ತಾಳ್ಳಪಾಕ ಅನ್ನಮಾಚಾರ್ಯರ ಮೊಮ್ಮಗ ತಾಳ್ಳಪಾಕ ತಿರುವೆಂಗಳನಾಥ ಬರೆದ 'ಪರಮಯೋಗಿ ವಿಲಾಸಂ' ಎಂಬ ಕಾವ್ಯದಲ್ಲಿ ಈ ವಿವರಗಳು ತುಂಬ ಸ್ವಾರಸ್ಯಕರವಾಗಿ, ಕೆಲವೆಡೆ ವಿನೋದಪೂರ್ಣವಾಗಿ ಬಂದಿವೆ. 'ಆಮುಕ್ತಮಾಲ್ಯದ'ದಲ್ಲಿ ಸಹ ರಾಯನು ಕೆಲವೆಡೆ ವಿನೋದಪೂರ್ಣವಾಗಿ ಹಾಸ್ಯರಸ ಉಕ್ಕುವಂತೆ ಈ ವಿವರಗಳನ್ನು ವಿವರಿಸಿದ್ದಾನೆ. ಸೇನೆಯ ವ್ಯವಸ್ಥೆ, ಯುದ್ಧ ವಿಧಾನ, ಯುದ್ಧನೀತಿ, ಯುದ್ಧ ವರ್ಣನೆ, ಬಳಸುತ್ತಿದ್ದ ಆಯುಧಗಳು, ಅವುಗಳ ಕೈಗಾರಿಕೆ ಇವುಗಳ ಕುರಿತು ನಮಗೆ ಅಸಂಖ್ಯಾತ ಕೃತಿಗಳಲ್ಲಿ ಹೇರಳವಾದ ಮಾಹಿತಿ ದೊರೆಯುತ್ತದೆ. ಬಹುಶಃ ಇದಕ್ಕೆ ಕಾರಣ ಕೃಷ್ಣದೇವರಾಯ ತಾನು ಯುದ್ಧಕ್ಕೆ ಹೋಗುವಾಗಲೆಲ್ಲ ತನ್ನೊಂದಿಗೆ ಕವಿಗಳನ್ನು ಕರೆದುಕೊಂಡು ಹೋಗುತ್ತಿದ್ದುದು ಇರಬೇಕು. ಅಲ್ಲಸಾನಿ ಪೆದ್ದನ, ನಂದಿತಿಮ್ಮನ ಕುಮಾರ ಧೂರ್ಜಟಿ ಮುಂತಾದ ಅನೇಕ ಕವಿಗಳು ಕೃಷ್ಣದೇವರಾಯನ ಕಾಲ

ದಲ್ಲಿ ನಡೆದ ಯುದ್ಧಗಳ ಕುರಿತು ತಮ್ಮ ಕಾವ್ಯಗಳಲ್ಲಿ ಬಣ್ಣಿಸಿದ್ದಾರೆ. 'ಮನುಚರಿತ್ರೆ'ಯಲ್ಲಿ ಬೇಟೆಯ ವರ್ಣನೆ ಅತ್ಯಂತ ಸಹಜವಾಗಿ, ರಾಯನು ಬೇಟೆಗೆ ಹೋಗುತ್ತಿದ್ದ ಪ್ರಸಂಗವನ್ನೇ ಕಣ್ಣೆದುರಿಗೆ ಇಟ್ಟಂತೆ ಕಾಣುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ, 'ಆಮುಕ್ತಮಾಲ್ಯದ'ದಲ್ಲಿ ಯಾಮುನಾಚಾರ್ಯನು ತನ್ನ ಮಗನಿಗೆ ರಾಜ್ಯ ಒಪ್ಪಿಸಿ ಹೋಗುವಾಗ ಹೇಳಿದ ರಾಜನೀತಿ ಅತಿಮುಖ್ಯವಾದ ಆಕರ. ರಾಯ ತಾನು ಆ ರಾಜನೀತಿಯನ್ನು ಅನುಸರಿಸುತ್ತಲೇ ಗ್ರಂಥಸ್ಥ ಮಾಡಿದ್ದಾನೆ. ಒಟ್ಟಿನಲ್ಲಿ ತನ್ನ ಸಮಕಾಲೀನ ಜೀವನವನ್ನು ಕೃಷ್ಣದೇವರಾಯನು ಒಳಹೊಕ್ಕು ಪರಿಶೀಲಿಸಿದಂತೆ ಇಷ್ಟು ಸೂಕ್ಷ್ಮವಾಗಿ ಯಾವ ಕವಿಯೂ ವೀಕ್ಷಿಸಿರಲಿಲ್ಲ. ಆ ಕಾಲದಲ್ಲಿ ರಾಯಚೂರಿನ ಬಾಣಗಳ ಕಾರ್ಖಾನೆ ಪ್ರಸಿದ್ಧವಾಗಿತ್ತು ಎಂಬುದನ್ನು ನಾವು ಕೆಲ ಕಾವ್ಯಗಳಲ್ಲಿ ನೋಡುತ್ತೇವೆ. ಉದಾಹರಣೆಗೆ, ವೆಂಕಟನಾಥನು ತನ್ನ ಪಂಚತಂತ್ರದಲ್ಲಿ,

ಕಲನ್ನೈನ ವಿರುಗೆರುಂಗನಿ ಪೋಟುಪರಿತ
ರಾಚೂರು ಕತ್ತುಲ ಮಾಟು ಚೊಟ್ಟೆಕೊನ್ನಿ

ಎಂದು ಬರೆದಿರುವುದನ್ನು ನೋಡಿದರೆ ರಾಯಚೂರಿನಲ್ಲಿ ಬಾಣಗಳನ್ನು ತಯಾರಿಸುತ್ತಿದ್ದರೆಂದು ತಿಳಿದು ಬರುತ್ತದೆ. ಈ ಬಗ್ಗೆ ಹೆಚ್ಚಿನ ಮಾಹಿತಿ 'ರಾಚೂರಿ ಬಿರುದು ತಲಾಟಮು' ಎಂಬ 'ನವನಾಥಚರಿತ್ರೆ'ಯಲ್ಲಿ ಕಾಣುತ್ತದೆ. ಆ ಕಾಲದ ವೈದ್ಯ ಹಾಗೂ ಚಿಕಿತ್ಸಾ ವಿಧಾನವನ್ನು ತೆನಾಲಿ ರಾಮಕೃಷ್ಣನ 'ಪಾಂಡುರಂಗ ಮಹಾತ್ಮ್ಯ'ದಲ್ಲಿ ನೋಡಬಹುದು.

ಕಲೆಗಳ ವಿಷಯವಂತೂ ಈ ಕಾಲದ ತೆಲುಗು ಸಾಹಿತ್ಯದಲ್ಲಿ ಅಗಾಧವಾಗಿದ್ದು ಅನೇಕ ಹೊಸ ವಿಷಯಗಳು ನಮ್ಮ ಅರಿವಿಗೆ ಬರುತ್ತವೆ. ಆ ಕಾಲದಲ್ಲಿ ಸಂಗೀತ ಶಾಸ್ತ್ರ ಅತ್ಯಂತ ಉತ್ಕೃಷ್ಟ ಸ್ಥಿತಿಯಲ್ಲಿತ್ತೆಂದು ಈ ಮೂಲಕ ತಿಳಿಯಬಹುದು. ಒಂದೊಂದು ಋತುವಿನಲ್ಲಿ ಒಂದೊಂದು ರಾಗಕ್ಕೆ ಪ್ರಾಧಾನ್ಯತೆ ಇರುತ್ತಿತ್ತು ಎನ್ನುವಂತಹ ಸಾಮಾನ್ಯ ಮಾಹಿತಿಯಿಂದ ಹಿಡಿದು ಅನೇಕ ಮಹತ್ವದ ವಿವರಗಳು ಈ ಸಾಹಿತ್ಯದಲ್ಲಿ ಸಿಗುತ್ತವೆ. ಕೃಷ್ಣದೇವರಾಯನ ಅಷ್ಟದಿಗ್ಗಜ ಕವಿಗಳಲ್ಲೊಬ್ಬನಾಗಿದ್ದ ರಾಮರಾಜ ಭೂಷಣನಿಗೆ 'ಸಂಗೀತಕಲಾರಹಸ್ಯನಿಧಿ' ಎಂಬ ಬಿರುದಿತ್ತು. ಈತ ಬರೆದ 'ವಸುಚರಿತ್ರೆ'ಯಂತೂ ಬಹು ಸುಂದರವಾದ ಸಂಗೀತ ಕಾವ್ಯದಂತೆ ಇದೆ. ವಸಂತ ರಾಗದಲ್ಲಿ ಪಂಚಮ ವರ್ಜ್ಯವೆಂದು ತಿಳಿದಿದ್ದವರು 'ವಸುಚರಿತ್ರೆ'ಯ ಒಂದು ಪದ್ಯದಿಂದ ಅದು ಸಂಪೂರ್ಣ ರಾಗವೆಂದು ಒಪ್ಪಿಕೊಂಡರೆಂದು ಸುಬ್ಬರಾಯ ದೀಕ್ಷಿತರು ೧೯೦೪ರಲ್ಲಿ ಬರೆದ 'ಸಂಗೀತ ಸಂಪ್ರದಾಯ ಪ್ರದರ್ಶಿನಿ' ಎಂಬ ಕೃತಿಯಲ್ಲಿ ಹೇಳಿಕೊಂಡಿದ್ದಾರೆ. ಆ ಕಾಲದವರೆಗೆ ವೀಣಾವಾದಕರು ಪ್ರತಿಯೊಂದು ರಾಗಕ್ಕೂ ತಂತಿಗಳನ್ನು ಬದಲಾಯಿಸಿಕೊಳ್ಳುತ್ತಿದ್ದರಂತೆ. ಶಾಶ್ವತವಾದ ಮೆಟ್ಟಿಲುಗಳನ್ನು ತಂತಿಗಳನ್ನು ಈ ಕಾಲದಲ್ಲಿ ಬಳಸುತ್ತಿರಲಿಲ್ಲ ಎಂಬುದನ್ನು ಈ ಕಾಲದ ಕೃತಿಗಳಲ್ಲಿ ಕಾಣುತ್ತೇವೆ. ನಂತರ ತಂಜಾವೂರಿನ ರಘುನಾಥ ನಾಯಕ ವೀಣೆಗೆ ಮೆಟ್ಟಿಲು ಹಾಕಿದ.

ನಾನು ಇತ್ತೀಚೆಗೆ ಆಂಧ್ರಪ್ರದೇಶದ ಪ್ರವಾಸ ಕೈಕೊಂಡಾಗ ಕೂಚಿಪೂಡಿ, ಶ್ರೀಕಾಕುಳ, ಮುವ್ವ ಮುಂತಾದ ಗ್ರಾಮಗಳಿಗೆ ಹೋದಾಗ ನನಗೆ ಅನೇಕ ಹೊಸ ವಿಷಯಗಳು ವಿಜಯನಗರ ಇತಿಹಾಸಕ್ಕೆ ಸಂಬಂಧಿಸಿದಂತೆ ತಿಳಿದವು. ಮೆಕೆಂಜಿಯವರು ಸಂಗ್ರಹಿಸಿದ 'ಮಾಚುಪಲ್ಲಿ ಕೈಫಿಯತ್ತಿ'ನ ವಿವರಗಳಲ್ಲಿ ಕ್ರಿ. ಶ. ೧೫೦೯ರಲ್ಲಿ ಕೂಚಿಪೂಡಿ ಗ್ರಾಮದ ಬ್ರಾಹ್ಮಣರು ಭಾಗವತ ವೇಷಧಾರಿಗಳಾಗಿ ವಿಜಯನಗರಕ್ಕೆ ಬಂದು ಸಿದ್ದವಟವನ್ನು ಪಾಲಿಸುತ್ತಿದ್ದ ಸಂಬೆಟಿ ಗುರುವ ರಾಜನ ದುರಾಡಳಿತವನ್ನು ತಮ್ಮ ನೃತ್ಯ ನಾಟಕಗಳ ಮೂಲಕ ಬಯಲಿಗೆಳೆದು ರಾಯನಿಂದ ಕೂಚಿಪೂಡಿ ಗ್ರಾಮವನ್ನು ಅಗ್ರಹಾರವಾಗಿ ಪಡೆದರು ಎಂಬಂತಹ ವಿಷಯವನ್ನು ಕಾಣುತ್ತೇವೆ. 'ತಾಯಕೊಂಡ'ಎಂಬ ನಾಟಕದ ತಂಡವೊಂದರ ವಿಷಯ ಅನೇಕ ಕಡೆ ನೋಡುತ್ತೇವೆ.

ಅರಮನೆಗಳಲ್ಲಿ, ಸಾಮಾನ್ಯ ಗೃಹಸ್ಥರ ಮನೆಗಳಲ್ಲಿ, ದೇವಾಲಯಗಳಲ್ಲಿ ಗೋಡೆಗಳ ಮೇಲೆ ಯಾವ ರೀತಿಯ ಚಿತ್ರಗಳನ್ನು ಬರೆಸುತ್ತಿದ್ದರು, ಭಿತ್ತಿಚಿತ್ರಗಳಿಗೆ ವಿವರಗಳು, ಅವುಗಳಿಗೆ ಬಳಸುತ್ತಿದ್ದ ಬಣ್ಣ, ಅವುಗಳ ತಯಾರಿಕೆ ಇವುಗಳ ಕುರಿತು ಅನೇಕ ಮಾಹಿತಿಗಳು ಧೂರ್ಜಟಿಯ 'ಕಾಳಹಸ್ತೀಶ್ವರ ಮಹಾತ್ಮ್ಯ' ದಲ್ಲೂ ಪೆದ್ದನನ 'ಮನುಚರಿತ್ರೆ', ತೆನಾಲಿರಾಮಕೃಷ್ಣನ 'ಪಾಂಡುರಂಗ ಮಹಾತ್ಮ್ಯೆ' ಮುಂತಾದ ಕಾವ್ಯಗಳಲ್ಲಿ ಸಿಗುತ್ತವೆ.

ಎಲ್ಲನ ಕವಿ ಬರೆದ 'ರಾಧಾ ಮಾಧವ' ಕಾವ್ಯದಲ್ಲಿ

ಅರಸರ ಅರಮನೆಗಳಲ್ಲಿ ಚಿತ್ರಿಸಿರುವ ಚಿತ್ರಗಳ ವಿವರ ಹೀಗೆ ಹೇಳುತ್ತಾನೆ :

ಆದಿನಾರಾಯಣುಡ ಪ್ಯತಾಬ್ಧಿ ಮಥಿಯಿಂಟಿ
ಯಬ್ಜವಾಸಿನಿ ಪೆಂಡ್ಲಿಮ್ಯೆನ ಕಥಲು
ಚಂದ್ರಶೇಖರುಡು ಪುಷ್ಪಾಶರಾಸುನು
ಗೆಲ್ಚಿ ಹಿಮತನಯು ಬೆಂಡ್ಲೈನ ಕಥಲು
ಶ್ರೀರಾಮಚಂದ್ರುಡು ಶಿವಧನುರ್ಭಂಜನ
ಮಡರಿಂಚಿ ಸೀತ ಬೆಂಡ್ಲೈನ ಕಥಲು
ನಲಚಕ್ರವರ್ತಿ ವೇಲ್ಪುಲು ಸಿಗ್ಗು ಪಡಗ
ಭೀಮಾಧೀಶ ತನ್ಯ ಬೆಂಡ್ಲೈನ ಕಥಲು
ಚಿತ್ತ ಭವಕೇಳಿ ಬಂಧ ವಿಚಿತ್ರ ಗತುಲು...

ವೇಶ್ಯೆಯರ ಮನೆಗಳ ಗೋಡೆಗಳ ಮೇಲೆ ಅವರಿಗೆ ತಕ್ಕಂತಹ ಚಿತ್ರಗಳಿರುತ್ತಿದ್ದವು ಎಂಬ ವಿಷಯ ಧೂರ್ಜಟಿಯ ಕಾಳಹಸ್ತೀಶ್ವರ ಮಹಾತ್ಮ್ಯದಲ್ಲಿನ ರತಿವಧೂ ಮದನುಲ, ರಂಭಾ ಕುಬೇರ ಪುತ್ರರು, ಊರ್ವಶಿ ಪುರೂರವುಲು ಮೇನಕಾ ಕೌಶಿಕುಲು, ಗೋಪಿಕಾ ಮುಕುಂದುಲು ಇತ್ಯಾದಿ ವರ್ಣನೆಗಳಿಂದ ತಿಳಿಯುತ್ತವೆ. ಈ ರೀತಿಯ ವರ್ಣನೆಗಳು ಇನ್ನೂ ಕೆಲ ಕವಿಗಳ ಕಾವ್ಯಗಳಲ್ಲಿವೆ.

ದೇವಸ್ಥಾನಗಳ ವಿವರ, ಶಿಲ್ಪಗಳ ವಿವರ ಸಹ ಈ ಕಾವ್ಯಗಳಲ್ಲಿ ಸಾಕಷ್ಟು ಸಿಗುತ್ತವೆ. ಕೃಷ್ಣದೇವರಾಯನು ಸಾಹಿತ್ಯಗೋಷ್ಠಿ ನಡೆಸುತ್ತಿದ್ದ ಸಭಾಭವನಕ್ಕೆ 'ಭುವನ ವಿಜಯ' ಎಂಬ ಹೆಸರಿತ್ತೆಂದು ನಂದಿ ತಿಮ್ಮನನ 'ಪಾರಿಜಾತಾಪಹರಣ' ತಿಳಿಸುತ್ತದೆ. ಅಲ್ಲಿ ಕವಿಗಳು ಕುಳಿತುಕೊಳ್ಳುತ್ತಿದ್ದ ಸ್ಥಳಕ್ಕೆ 'ಶಂಖಪೀಠ'ವೆಂಬ ಹೆಸರಿತ್ತೆಂದು 'ಕಾಳಹಸ್ತೀಶ್ವರ ಮಹಾತ್ಮ್ಯ', ತಿಳಿಸುತ್ತದೆ. ಆ ಕಾಲದ ಒಡತಿಗಳ ವೇಷಭೂಷಣಗಳ ವಿವರವಂತೂ ಹೆಜ್ಜೆ ಹೆಜ್ಜೆಗೂ ಸಿಗುತ್ತದೆ.

ಭಾಷೆಯ ದೃಷ್ಟಿಯಿಂದ ಸಹ ಈ ಕಾವ್ಯಗಳು ಮಹತ್ವವನ್ನು ಪಡೆದಿವೆ. ವಿಜಯನಗರದರಸರ ಆಸ್ಥಾನದಲ್ಲಿ ಸಂಸ್ಕೃತ, ಕನ್ನಡ, ತೆಲುಗು, ತಮಿಳು ಭಾಷೆಯ ಕವಿಗಳು ಜೊತೆ ಜೊತೆಯಾಗಿ ಪರಂಪರೆಯಿಂದ ಬಂದವರಾದ್ದರಿಂದ ಕನ್ನಡ ತೆಲುಗು ತಮಿಳು ಭಾಷೆಗಳ ಪರಸ್ಪರ ಪ್ರಭಾವ ಇದ್ದುದು ಸಹಜವೇ ಆಗಿದೆ. (ಈಗ್ಗೆ ಹತ್ತು ವರುಷಗಳ ಹಿಂದೆ ನಾನು ರೇಡಿಯೋ ಭಾಷಣಕ್ಕಾಗಿ ಈ ಕುರಿತ ಲೇಖನ ತಯಾರಿಸಬೇಕಾಗಿ ಬಂದಿತ್ತು. ಅದಾದ ನಂತರ ಕನ್ನಡ ಮತ್ತು ತೆಲುಗು ಕವಿಗಳ ಪರಸ್ಪರ ಪ್ರಭಾವದ ಕುರಿತು ತಕ್ಕಮಟ್ಟಿಗೆ ಅಧ್ಯಯನ ಮಾಡಿ ಒಂದು ಪುಸ್ತಕವಾಗುವಷ್ಟು ಮಾಹಿತಿ ಸಂಗ್ರಹಿಸಿದ್ದೇನೆ). ಈ ಕುರಿತು ಹೇಳುವಾಗ ಮುಖ್ಯವಾಗಿ ಧೂರ್ಜಟಿಯ ಕಾವ್ಯದ ಭಾಷೆಯನ್ನು ಉದಹರಿಸುವುದು ಸೂಕ್ತವೆನಿಸುತ್ತದೆ.

ಧೂರ್ಜಟಿಯ 'ಕಾಳಹಸ್ತಿಮಹಾತ್ಮ್ಯ'ದಲ್ಲಿ ಕೆಲ ಪದ್ಯಗಳಲ್ಲಂತೂ ತೆಲುಗು ಕನ್ನಡ ಪದಗಳು ಸಮ ಸಮವಾಗಿ ಬರುತ್ತವೆ.

ಒಬ್ಬ ಪರಿಚಾರಿಕೆಯ ಮನೆಗೆ ಶಿವನು ಮಿಂಡ ಜಂಗಮ ವೇಷದಲ್ಲಿ ಬಂದಾಗ ಆ ಪರಿಚಾರಿಕೆ ಕನ್ನಡ ಪದಗಳೊಂದಿಗೆ ಸ್ವಾಗತ ನೀಡುತ್ತಾಳೆ :

ಬಿಜಮಾಡು ದೇವರು ನಿಜಕೃಪಾದೃಷ್ಟಿ ಜೆನ್ನಾರು
ನಾಯಿಲ್ಲು ಬಿಡಾರ ಮೀಕು.
ನಾಕು ಮೀ ಪಾದಾರ್ಚನ ಚೇಯನಕ ಲಿಂಗ
ಮೂರ್ತಿ
ಒಡೆಯ ಚಿತ್ತೇಶ ! ನಾಯುನಿಕಿನಿ ಮಜ್ಜನಂಬಾಡಿ
ಶಿವಾರ್ಚನೆ ಮಾಡಬೇಕು.

ತಾಳ್ಳಪಾಕ ಅನ್ನಮಚಾರ್ಯರ ಎರಡನೇ ಮಗನಾದ ಪೆದತಿರುಮಲಯ್ಯ 'ಳ' ಕುಳದ ಬಗ್ಗೆ ಒಂದು ದೊಡ್ಡ ಪಟ್ಟಿಯನ್ನೇ ಕೊಟ್ಟಿದ್ದಾನೆ. ತೆಲುಗಿನಲ್ಲಿ ಬಂಡಿರಾ ಎಲ್ಲಿ ಬಳಸಬೇಕು, ಎಲ್ಲಿ ಸಾಧು ರೇಫ ಬರಬೇಕು ಎಂಬುದನ್ನು ವಿಸ್ತಾರವಾಗಿ ಉದಾಹರಣೆಗಳ ಮೂಲಕ ತಿಳಿಸಿದ್ದಾನೆ. ಇದು ಕನ್ನಡಕ್ಕೂ ಅನ್ವಯಿಸಬಹುದೇನೋ ಎಂಬ ಅಂಶವನ್ನು ನಮ್ಮ ಭಾಷಾ ವಿದ್ವಾಂಸರು ಗಮನಿಸಬೇಕು. ಇದು ಲಾಕ್ಷಣಿಕರಿಗೆ ತುಂಬ ಉಪಯುಕ್ತ ಗ್ರಂಥವೆಂಬ ಪ್ರಚಾರವಿದೆ. 'ಗ್ರಂಥಸಾರ' ಎಂಬ ಅಧಿಕಾರಿ ಸೈನಿಕ ವಿಭಾಗದ ಹಣಕಾಸಿನ ಲೆಕ್ಕ ಬರೆಯುತ್ತಿದ್ದ ಎಂಬ ಮಾತು, ಕೆಲ ಪದ್ಯಗಳಿವೆ. ಈ ಪದ ಸ್ಕಂದಾರಾವದಿಂದ ಬಂದಿರಬಹುದೆಂದು ವಿದ್ವಾಂಸರ ಮತ. ಈ ಮಾತಿಗೂ ಕನ್ನಡದ ಕಂದಾಚಾರಕ್ಕೂ ಏನಾದರೂ ಸಂಬಂಧವಿರಬಹುದೇ ?

ಆ ಕಾಲದ ಮಹಿಳೆಯರು ಸಹ ತಮ್ಮ ಕಾವ್ಯ ರಚನೆಯಲ್ಲಿ ಸಮಕಾಲೀನ ಭಾವನೆಗಳನ್ನು ಚಿತ್ರಿಸುವಲ್ಲಿ ಕಡಿಮೆಯಾಗಿರಲಿಲ್ಲ. 'ರಾಮಾಯಣ ಮಹಾಕಾವ್ಯ' ಬರೆದ ಆತಕೂರಿ ಮೊಲ್ಲ, 'ಮರೀಚ ಪರಿಣಯ' ಬರೆದ ಕೃಷ್ಣದೇವರಾಯನ ಪುತ್ರಿಯಾಗಿದ್ದ ಮೋಹನಾಂಗಿ ಅದಕ್ಕೆ ಮುಂಚೆಯಿದ್ದ ಗಂಗಾಂಬಿಕೆ ತಿರುಮಲಾಂಬೆಯರೂ ಉತ್ತಮ ವಿದುಷೀಮಣಿಯರೆಂದು ಹೆಸರಾಗಿದ್ದಾರೆ. ಕೊನೆಗೆ ಕಲೆಗಳಲ್ಲಿ ಮಹಿಳೆಯರದೇ ಮೇಲುಗೈಯಾಯಿತೆಂದು ಬೈಚರಾಜ ವೆಂಕಟನಾಥ ಹೀಗೆ ಗೋಳಾಡಿಕೊಂಡಿದ್ದಾನೆ: "ವೆಲ್ಲಿವಿರಿಸೆ ಪೆಂಟಿವಿದ್ಯಲು, ಮಗವಿದ್ಯ ಲಡುಗುವಟ್ಟಿ ಕ್ರಿಂದ ಪಡಿರಿ ಬುಧುಲು...."

ಹಿಂದೆ ಹೇಳಿದ ಕವಿಗಳು, ಕೃಷ್ಣದೇವರಾಯನ ಕಾಲದ ಪ್ರಮುಖ ತೆಲುಗು ಕವಿಗಳಾದ ಅಷ್ಟದಿಗ್ಗಜಗಳಲ್ಲದೇ ಚರಿಗೊಂಡ ಧರ್ಮನ್ನ (ಚಿತ್ರಭಾರತ), ನಾದೆಂಡ್ಲ ಗೋಪಮಂತ್ರಿ (ಪ್ರಬೋಧ ಚಂದ್ರೋದಯ ವ್ಯಾಖ್ಯೆ), ಸಂಕುಸಾಲ ನರಸಯ್ಯ (ಕವಿಕರ್ಣರಸಾಯನ), ರಾಧಾಮಾಧವ ಕವಿ ಎಂಬ ಹೆಸರಾದ ಎಲ್ಲನ (ವಿಷ್ಣುಮಾಯಾ ನಾಟಕ, ರಾಧಾಮಾಧವ ಕಾವ್ಯ) ಮುಂತಾದ ಖ್ಯಾತ ಕವಿಗಳಲ್ಲದೇ ಬಸವ ಕವಿ ಮುಂತಾದ ಪಿಡುಪರ್ತಿ ಕವಿಗಳ ಗುಂಪು, ತಾಳ್ಳಪಾಕ ಮನೆತನದ ಒಂದು ಕವಿ ಸೈನ್ಯವೇ ಈ ಕಾಲದಲ್ಲಿ ನಮಗೆ ಗೋಚರಿಸುತ್ತದೆ. ಅಲ್ಲದೇ ಅಲ್ಲಲ್ಲಿ ಬಿಡಿ ಬಿಡಿ ಕವಿಗಳ ಕಾವ್ಯಗಳೂ ಹೇರಳವಾಗಿವೆ.

ಈ ಕಾಲದ ಇತಿಹಾಸಕ್ಕೆ ಆಕರವಾಗುವಂತಹ ಇನ್ನೊಂದು ಮುಖ್ಯವಾದ ಸಾಹಿತ್ಯಪ್ರಕಾರ ಚಾಟು ಪದ್ಯಗಳು ಮತ್ತು ಆಶುಕವಿತೆಗಳು. ಇವುಗಳಲ್ಲಿಯಂತೂ ಐತಿಹಾಸಿಕ ಘಟನೆಗಳಾವಳಿಗಳನ್ನೇ ಕಾಣಬಹುದು.

ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಸಂಸ್ಕೃತ ಕವಿಗಳಾದ ಭಾನುದತ್ತ, ಈಶ್ವರ ದೀಕ್ಷಿತ, ಕುಮಾರ ವಾಲ್ಮೀಕಿ ನರಹರಿ ಇವರ ಕೃತಿಗಳು, ಅಹೋಬಲಮಠದ ಅನೇಕ ದಾಖಲೆಗಳು, ಶಾಸನಗಳು, ಹರಿಹರದಾಸರ 'ಇರುಸಮಯವಿಲಕ್ಕುಂ' ಎಂಬ ತಮಿಳು ಕಾವ್ಯ ಮತ್ತು ಆ ಕಾಲದ ಅನೇಕ ತಮಿಳು ಕಾವ್ಯಗಳು ಉತ್ತಮ ಆಕರಗಳಾಗುವುದೆಂಬುದರಲ್ಲಿ ಸಂಶಯವೇ ಇಲ್ಲ. (ಇನ್ನೊಂದು ಮುಖ್ಯ ವಿಷಯವೆಂದರೆ, ಕೆಲವು ವರುಷಗಳ ಹಿಂದೆ ಸಂಶೋಧನೆಯ ನಿಮಿತ್ತ ನಾನು ಕಲ್ಕತ್ತೆಗೆ ಹೋಗಿ ಅಲ್ಲಿ ಕೆಲವು ತಿಂಗಳುಗಳ ಕಾಲ ಇದ್ದು ರಾಷ್ಟ್ರೀಯ ಗ್ರಂಥಭಂಡಾರದಲ್ಲಿ ಡಾ॥ ರಾಮಚೌಧರಿ ಅವರ ಮಾರ್ಗದರ್ಶನದಲ್ಲಿ ಕೆಲಸ ಮಾಡುವಾಗ, ಚೈತನ್ಯರ ಭಾಗವತದಲ್ಲಿ ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ ಒಂದು ದಾಖಲೆ ದೊರೆಯಿತು).

ಕೃಷ್ಣದೇವರಾಯ ತೀರಿಕೊಂಡ ನಂತರ ಬೀಗರು ಎಂಬುದನ್ನು ಲೆಕ್ಕಿಸದೆ ಉತ್ಕಲದ ಗಜಪತಿ ವಿಜಯನಗರದ ಮೇಲೆ ಧಾಳಿ ಮಾಡಿದ. ಇದನ್ನು ಅಲ್ಲಸಾನಿ ಪೆದ್ದನ ಒಂದು ಚಾಟು ಪದ್ಯದಲ್ಲಿ ಹೇಳಿದ್ದಾನೆ.

ಚೈತನ್ಯನು ತನ್ನ ಭಾಗವತದಲ್ಲಿ ಈ ಘಟನೆಯನ್ನು ದಾಖಲಿಸಿದ್ದಾನೆ. ಚೈತನ್ಯ ಪ್ರಭುವು ಆ ಸಮಯದಲ್ಲಿ ಪೂರಿ ಜಗನ್ನಾಥಕ್ಕೆ ಬಂದಿದ್ದ. ಆಗ ಗಜಪತಿ ವಿಜಯನಗರದೊಂದಿಗೆ ಯುದ್ಧದಲ್ಲಿದ್ದನೆಂಬುದನ್ನು ಹೀಗೆ ಹೇಳಿದ್ದಾನೆ :

ಏಸಮಯ । ಈಶ್ವರ ಆಯಲಾ ನೀಲಾಚಲೇ

ತಖಿನೆ । ಪ್ರತಾಪರುದ್ರ ನಾಹಿಕ । ಉತ್ಕಲೇ

ಯುದ್ಧರ ಸೇ ಗೀಯಾಚ್ಛೇನ್ ವಿಜಯನಗರೇ।

ಅತೆಯೇವಾ । ಪ್ರಭೂನಾ । ದೇಖಲೇನ್।

ಸೆಯಿಬಾರೇ

ಹೀಗೆ ಕಾವ್ಯಗಳಿಂದ ಅನೇಕ ಐತಿಹಾಸಿಕ ಘಟನೆಗಳನ್ನು, ವಿವರಗಳನ್ನು ತಿಳಿದುಕೊಳ್ಳಬಹುದು. ನಮ್ಮ ಕರ್ನಾಟಕದ ಇತಿಹಾಸಕಾರರು ಅನ್ಯಭಾಷೆಗಳ ವಾಗ್ದೇವಿಯ ಭಂಡಾರವನ್ನು ಒಡೆದು ಅದರಲ್ಲಿನ ಅಮೂಲ್ಯ ರತ್ನ ಮಾಣಿಕ್ಯಗಳನ್ನು ಆಯ್ದು ಕರ್ನಾಟಕದ ಇತಿಹಾಸಕ್ಕೆ ಸತ್ವದ ಮಣಿಹಾರ ತೊಡಿಸಬೇಕಾದುದು ಅಪೇಕ್ಷಣೀಯ.

ಡಾ॥ಎ. ವಿ. ನರಸಿಂಹಮೂರ್ತಿ

# ಶಾಸನೋಕ್ತ ಗದ್ಯಾಣ ಪ್ರಭೇದಗಳು

ಕರ್ನಾಟಕದ ನಾಣ್ಯಶಾಸ್ತ್ರ ಅಧ್ಯಯನಕ್ಕೆ, ಶಾಸನಗಳು ಉತ್ತಮವಾದ ಮಾಹಿತಿಗಳನ್ನು ಒದಗಿಸುತ್ತವೆ ಎಂಬ ಅಂಶವನ್ನು ಇತ್ತೀಚಿನ ಸಂಶೋಧನೆಗಳಿಂದ ತಿಳಿಯಬಹುದಾಗಿದೆ.[1] ಈ ದಿಸೆಯಲ್ಲಿ ಅಧ್ಯಯನವು ನಡೆಯುತ್ತಿದೆ. ಪ್ರಕೃತ ಗದ್ಯಾಣವೆಂಬ ಅತ್ಯಂತ ಜನಾನುರಾಗಿಯಾಗಿದ್ದ ನಾಣ್ಯವನ್ನು ಉದಾಹರಣೆಯಾಗಿ ತೆಗೆದುಕೊಂಡರೆ, ಈ ನಾಣ್ಯದ ವಿವಿಧ ಪ್ರಭೇದಗಳನ್ನು ಶಾಸನಗಳ ಮೂಲಕ ಗಮನಿಸಬಹುದು. ಅತ್ಯಂತ ಕುತೂಹಲಕಾರಿಯಾದ ಸಂಗತಿ ಎಂದರೆ, ಇದುವರೆವಿಗೂ ನಮಗೆ ಕರ್ನಾಟಕದಲ್ಲಿ ದೊರಕಿರುವ ಯಾವ ನಾಣ್ಯದ ಮೇಲಾಗಲೀ ಗದ್ಯಾಣ ಎಂಬ ಬರಹ ಕಂಡುಬಂದಿಲ್ಲ. ಆದರೆ ಶಾಸನಗಳಲ್ಲಿ ಗದ್ಯಾಣದ ತೂಕ ಉಲ್ಲೇಖಿತವಾಗಿರುವುದರಿಂದ, ೫೨ ರಿಂದ ೬೦ ಗ್ರೇನ್ ತೂಕದ ಚಿನ್ನದ ನಾಣ್ಯಗಳನ್ನು ನಾಣ್ಯಶಾಸ್ತ್ರಜ್ಞರು ಗದ್ಯಾಣವೆಂದು ಭಾವಿಸಿದ್ದಾರೆ. ಕರ್ನಾಟಕದ ಶಾಸನಗಳಲ್ಲಿ ಗದ್ಯಾಣ, ಗದ್ಯಾ, ಅಥವಾ ಗ ಎಂಬುದಾಗಿ ಈ ನಾಣ್ಯವನ್ನು ಗುರುತಿಸಲಾಗಿದೆ.

ಗದ್ಯಾಣಗಳಲ್ಲಿ ಪ್ರಭೇದಗಳಿದ್ದುದು ನಮಗೆ ತಿಳಿಯುವುದು ಶಾಸನಗಳಿಂದ ಮಾತ್ರ. ಅನೇಕ ಸಾರಿ ಹೆಸರಿನ ಮೇಲೆ ಟಂಕಶಾಲೆಯ ಗದ್ಯಾಣವನ್ನು ಗುರುತಿಸಿದರೆ, ಮತ್ತೆ ಕೆಲವು ಸಾರಿ ಅವುಗಳ ಮೇಲಿನ ಚಿಹ್ನೆಗಳಿಂದ ಗುರುತಿಸಬಹುದು. ಇನ್ನು ಕೆಲವು ಬಾರಿ ಅವುಗಳ ಉಪಯೋಗವೂ ಈ ಪ್ರಭೇದಕ್ಕೆ ಕಾರಣವಾಗಿರಬಹುದು. ಹೀಗೆ ನಾನಾ ಕಾರಣಗಳಿಂದ ಗದ್ಯಾಣಗಳನ್ನು ಕರ್ನಾಟಕದ ಶಾಸನಗಳಲ್ಲಿ ಗುರುತಿಸಲಾಗಿದೆ, ಅವುಗಳನ್ನು ಈ ಕೆಳಗೆ ಗಮನಿಸಲಾಗಿದೆ :

**ಅಂಬಿಲಿ ಗದ್ಯಾಣ :** ಇದು ದೇವಗಿರಿಯ ಸೇವುಣರ ಶಾಸನಗಳಲ್ಲಿ ಕಾಣಸಿಗುತ್ತದೆ.[2] ಇದರ ನಿಖರವಾದ ಅರ್ಥ ಗೊತ್ತಿಲ್ಲ. ಬಹುಶಃ ಅಂಬಿಲಿ ಎಂಬಲ್ಲಿ ತಯಾರಾದ ಗದ್ಯಾಣವಿರಬೇಕೆಂದು ಊಹಿಸಬಹುದು.

**ಅರ್ಧಕಾಟಿ ಗದ್ಯಾಣ :** ಇದು ತುಳುನಾಡಿನ ಆಳುಪರ ಶಾಸನಗಳಲ್ಲಿ ಕಾಣಸಿಕೊಳ್ಳುತ್ತದೆ.[3] ಕಾಟಿ ಎನ್ನುವುದು ವಿಜಯನಗರ ಕಾಲದ ಒಂದು ನಾಣ್ಯ. ಆದುದರಿಂದ ಅರ್ಧಕಾಟಿ ಎಂದರೆ ಈ ನಾಣ್ಯದ ಅರ್ಧಭಾಗ ಎಂದಾಗುತ್ತದೆ. ಆದರೆ ಗದ್ಯಾಣದ ಜೊತೆ ಸೇರಿದಾಗ ಇದರ ಅರ್ಥ ಏನೆಂಬುದು ತಿಳಿದಿಲ್ಲ.

**ಕಾಟಿ ಗದ್ಯಾಣ :** ಇದು ವಿಜಯನಗರದ ಶಾಸನಗಳಲ್ಲಿ ಹೆಚ್ಚಾಗಿ ಕಾಣಬರುತ್ತದೆ.[4] ಕೆಲವು ಕಡೆ ಕಾಟಿ ಎಂದರೆ ನಾಲ್ಕನೆಯ ಒಂದು ಎಂದು ಅರ್ಥೈಸ

1 ಡಾ॥ ಎ. ವಿ. ನರಸಿಂಹಮೂರ್ತಿ : 'ಎಪಿಗ್ರಾಫಿಕಲ್ ಡೇಟಾ ಆನ್ ನ್ಯೂಮಿಸ್‌ಮ್ಯಾಟಿಕ್ಸ್ ಆಫ್ ಕರ್ನಾಟಕ', ಫ್ರಾಮ್ ಇಂಡಸ್ ಟು ಮೆಕಾಂಗ್ ವ್ಯಾಲಿ (ಸಂ. : ನೊಬೊರು ಕಾರಷಿಮ), ಮದ್ರಾಸು, ಪು. ೭೭–೮೬

2 ಸೋರ್ಸಸ್ ಆಫ್ ಮಿಡಿವಲ್ ಹಿಸ್ಟರಿ ಆಫ್ ದಿ ಡೆಕನ್, ಸಂ. ೨, ಪು. ೬೨

3 ಪಿ. ಗುರುರಾಜಭಟ್ : ತುಳುನಾಡಿನ ಇತಿಹಾಸ, ಪು. ೨೬೩

4 ಎಸ್. ಐ. ಐ., ಸಂ. ೪, ಶಾ. ೨೬೨

ಬಹುದು, ಆದುದರಿಂದ ಕಾಲುಗದ್ಯಾಣವನ್ನು ಕಾಟಿ ಗದ್ಯಾಣವೆಂದು ಕರೆದಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ.

**ಕಟಕ ಗದ್ಯಾಣ :** ಇದು ಚಾಲುಕ್ಯ ಭೂಲೋಕ ಮಲ್ಲನ ಕೊಂಡುಗಳಿ ಶಾಸನದಲ್ಲಿ ಉಲ್ಲೇಖಿತವಾಗಿದೆ.[5] ಕಟಕ ಎಂದರೆ ಕೋಟೆ ಅಥವಾ ಯುದ್ಧದ ನೆಲೆ, ಅಂತಹ ಕಡೆಗಳಿಂದ ನಾಣ್ಯಗಳನ್ನು ಮುದ್ರಿಸಿದ್ದಿರಬಹುದು. ಆ ರೀತಿಯ ಗದ್ಯಾಣಗಳೇ ಕಟಕ ಗದ್ಯಾಣಗಳಿರಬಹುದು.

**ಕಟಕಪ್ರಿಯ ಗದ್ಯಾಣ :** ಈ ನಾಣ್ಯವೂ ಕೂಡ ಮೇಲೆ ಉಲ್ಲೇಖಿಸಿದ ನಾಣ್ಯಕ್ಕೆ ಅತಿ ಸಮೀಪವಾಗಿಯೇ ಕಾಣಬರುತ್ತದೆ.[6] ಆದರೆ ಇದರ ಸರಿಯಾದ ಅರ್ಥವನ್ನು ತಿಳಿಯುವುದು ಕಷ್ಟ.

**ಕೇಸರಿ ಗದ್ಯಾಣ :** ಇದು ಕ್ರಿ. ಶ. ಹದಿಮೂರನೆಯ ಶತಮಾನದ ಶಾಸನಗಳಲ್ಲಿ ಕಾಣಬರುತ್ತದೆ. ಕಾಕತೀಯ ರಾಜರುಗಳಿಗೆ ರಾಯಗಜಕೇಸರಿ ಮತ್ತು ದಾಯಗಜಕೇಸರಿ ಎಂಬ ಬಿರುದುಗಳಿದ್ದುದರಿಂದ, ಕೇಸರಿ ಎನ್ನುವ ಪದವನ್ನೇ ಆಧಾರವಾಗಿಟ್ಟುಕೊಂಡರೆ, ಇದು ಕಾಕತೀಯರ ಕಾಲದ ಗದ್ಯಾಣವಿರಬಹುದು.[7] ಅಥವಾ ಗದ್ಯಾಣದ ಮೇಲೆ ಕೇಸರಿ ಅಥವಾ ಸಿಂಹವಿದ್ದರೂ, ಆ ರೀತಿ ಕರೆದಿರಬಹುದು. ಹೊಯ್ಸಳರ ನಾಣ್ಯಗಳು, ಗೋವೆಯ ಕದಂಬರ ನಾಣ್ಯಗಳ ಮೇಲೆ ಸಿಂಹವಿರುವುದರಿಂದ, ಈ ಗದ್ಯಾಣ ಅವರಿಗೆ ಸೇರಿರಬಹುದೇ ಎನ್ನುವ ಊಹೆಗೂ ಅವಕಾಶವಿದೆ.

**ಕೊಮಾರ ಗದ್ಯಾಣ :** ಇದನ್ನು ನಾವು ಕುಮಾರ ಗದ್ಯಾಣ ಎಂದು ಭಾವಿಸುವುದಾದರೆ, ರಾಜಕುಮಾರನ ಜನ್ಮದ ನೆನಪಿನಲ್ಲಿ ಈ ನಾಣ್ಯವನ್ನು ಅಚ್ಚು ಹಾಕಿಸಿರಬೇಕು. ಈ ಗದ್ಯಾಣವು ಗಂಗ ದೊರೆ ಸತ್ಯವಾಕ್ಯ ಪೆರ್ಮಾನಡಿಯ ಕೃಷ್ಣಾಪುರಂ ಶಾಸನದಲ್ಲಿ ಕಾಣಸಿಕೊಳ್ಳುತ್ತದೆ.[8]

**ಕುಲೋತ್ತುಂಗ ಗದ್ಯಾಣ :** ಇದು ಹೆಸರೇ ಸೂಚಿಸುವಂತೆ ಪೂರ್ವೀ ಚಾಲುಕ್ಯ ದೊರೆ ಕುಲೋತ್ತುಂಗನಿಂದ ಮುದ್ರಿತವಾದ ಗದ್ಯಾಣ.[9]

**ಗಜಮಲ್ಲ ಗದ್ಯಾಣ :** ಇದು ದೇವಗಿರಿಯ ಸೇವುಣರ ಶಾಸನಗಳಲ್ಲಿ ಸಿಗುತ್ತದೆ.[10] ಯಾವ ನಾಣ್ಯದ ಮೇಲಾಗಲೀ ಗಜಮಲ್ಲ ಎಂಬ ಬರಹವಾಗಲೀ ಅಥವಾ ಆನೆಯ ಮೇಲೆ ಕುಳಿತಿರುವ ಮಾಹುತನ ಚಿತ್ರವಾಗಲೀ ದೊರಕಿಲ್ಲ, ಇದನ್ನು ಗುರುತಿಸುವುದು ಕಷ್ಟ.

**ಗಂಗನ ಗದ್ಯಾಣ :** ಇದು ಹೊಯ್ಸಳರ ಶಾಸನಗಳಲ್ಲಿ ಕಾಣಬರುತ್ತದೆ. ವಿಷ್ಣುವರ್ಧನನ ಖ್ಯಾತ ಮಂತ್ರಿಯಾದ ಗಂಗರಾಜನು ಈ ನಾಣ್ಯವನ್ನು ಅಚ್ಚು ಮಾಡಿಸಿದನೇ ಎನ್ನುವ ಸಂದೇಹ ಬಂದರೂ, ಆ ರೀತಿಯ ನಾಣ್ಯ ಇದುವರೆಗೂ ದೊರಕಿಲ್ಲ.

**ಗಾವು ಗದ್ಯಾಣ :** ಇದು ಗಂಗ ಸತ್ಯವಾಕ್ಯ ಪೆರ್ಮಾನಡಿಯ ಕೃಷ್ಣಾಪುರಂ ಶಾಸನದಲ್ಲಿ ಕಾಣುತ್ತದೆ.[11] ಇದನ್ನು ಗ್ರಾಮ ಎಂದು ಭಾವಿಸುವುದಾದರೆ, ಕಟಕದಲ್ಲಿ ನಾಣ್ಯ ಅಚ್ಚು ಆಗುತ್ತಿದ್ದಂತೆ ಗ್ರಾಮಗಳಲ್ಲಿಯೂ ನಾಣ್ಯಗಳು ಅಚ್ಚಾಗುತ್ತಿದ್ದವು ಮತ್ತು ಈ ಪದವು ಆ ರೀತಿಯ ನಾಣ್ಯಗಳನ್ನು ಗುರುತಿಸುತ್ತದೆ ಎಂದು ಭಾವಿಸಬೇಕಾಗುತ್ತದೆ.

**ಘಟ್ಟಿ ಗದ್ಯಾಣ :** ಇದರ ನಿಖರವಾದ ಅರ್ಥ ತಿಳಿಯುವುದಿಲ್ಲ. ಇಂಗ್ಲಿಷಿನಲ್ಲಿ ಬಳಸುವ 'ಸಾಲಿಡ್'

---

5 ಎ. ಇಂ., ಸಂ. ೩೭, ಪು. ೧೮೯
6 ಅದೇ
7 ಪಿ. ವಿ. ಪರಬ್ರಹ್ಮಶಾಸ್ತ್ರೀ : ದಿ ಕಾಕತೀಯಾಸ್, ಪು. ೧೩೯
8 ಕೆ. ವಿ. ರಮೇಶ್ : ಗಂಗರ ಶಾಸನಗಳು, ಶಾ. ೧೨೨
9 ಎಸ್. ಐ. ಐ., ಸಂ. ೪, ಶಾ. ೯೯೭
10 ಟಿಪ್ಪಣಿ ೩ ನೋಡಿ
11 ಟಿಪ್ಪಣಿ ೮ ನೋಡಿ

ಎನ್ನುವ ಪದದ ಅರ್ಥದಲ್ಲಿ ತೆಗೆದುಕೊಂಡರೆ, ಇದರ ಚಿನ್ನ ಶುದ್ಧವಾಗಿತ್ತೆಂದೂ, ಅಂದರೆ ನಿಜವಾದ ಚಿನ್ನದ ಗದ್ಯಾಣವೆಂದೂ ಇದನ್ನು ಅರ್ಥೈಸಬೇಕಾಗುತ್ತದೆ, ಇದೇ ರೀತಿಯಲ್ಲಿ ಘಟ್ಟಿ ವರಹ, ಘಟ್ಟಿ ಹಣ ಎನ್ನುವ ಪದಗಳೂ ಶಾಸನಗಳಲ್ಲಿ ದೊರೆಯುತ್ತವೆ, ಘಟ್ಟಿ ವರಹ ಎನ್ನುವ ಪದವನ್ನು ಇಂದಿಗೂ ಉಪಯೋಗಿಸುತ್ತೇವೆ.

**ಚಕ್ರ ಗದ್ಯಾಣ :** ವಿಜಯನಗರದ ಶಾಸನಗಳಲ್ಲಿ ಕಾಣ ಸಿಗುವ ಈ ನಾಣ್ಯದ ನಿಜವಾದ ಅರ್ಥ ತಿಳಿಯುವುದು ಕಷ್ಟ.[12] ಯಾವ ವಿಜಯನಗರದ ನಾಣ್ಯದಲ್ಲಿಯೂ ಚಕ್ರವೊಂದೇ ಇಲ್ಲ. ಆದರೆ ಚಕ್ರವು ವೈಷ್ಣವ ಚಿಹ್ನೆಯಾಗಿ, ಶಂಖ ಮತ್ತಿತರ ಚಿಹ್ನೆಗಳೊಡನೆ ಕಾಣಬರುತ್ತದೆ. ಆದುದರಿಂದ ಈ ರೀತಿಯ ಚಕ್ರದ ಚಿಹ್ನೆಯುಳ್ಳ ಗದ್ಯಾಣಗಳು ಇವಿರಬೇಕೆಂದು ಊಹಿಸಬಹುದು.

**ಚಿಕ್ಕ ಗದ್ಯಾಣ :** ಇದು ವಿಜಯನಗರ ಕಾಲದ ಶಾಸನಗಳಲ್ಲಿ ಕಾಣಬರುವ ನಾಣ್ಯ. ಕೃಷ್ಣದೇವರಾಯನು ಎರಡು ಗದ್ಯಾಣ ಮೌಲ್ಯದ ನಾಣ್ಯಗಳನ್ನು ಅಚ್ಚು ಹಾಕಿಸಿದನೆಂಬ ವಿಷಯ ತಿಳಿದೇ ಇದೆ.[13] ಆದುದರಿಂದ ಈ ನಾಣ್ಯಗಳನ್ನು ಸಾಮಾನ್ಯದ ಒಂದು ಗದ್ಯಾಣದ ನಾಣ್ಯಕ್ಕಿಂತ ಭಿನ್ನವಾಗಿ ತೋರಿಸಲು ಚಿಕ್ಕ ಗದ್ಯಾಣ ಎಂಬ ಪದವನ್ನು ಬಳಸಿರಬೇಕು.

**ಚಿರವಿಧ ಗದ್ಯಾಣ :** ಇದು ಕ್ರಿ. ಶ. ಹದಿಮೂರನೆಯ ಶತಮಾನದ ಶಾಸನಗಳಲ್ಲಿ ಕಂಡುಬರುತ್ತದೆ.[14] ಆದರೆ ಇದರ ಅರ್ಥ ತಿಳಿಯದು.

**ತ್ಯಾಗಿ ಗದ್ಯಾಣ :** ಪೂರ್ವೀ ಚಾಲುಕ್ಯರ ಸಾಮಂತರಾದ ಚಾಗಿ ಅಥವಾ ತ್ಯಾಗಿ ಮನೆತನದವರು ಮುದ್ರಿಸುತ್ತಿದ್ದ ಗದ್ಯಾಣವಿರಬೇಕೆಂದು ಸುಲಭವಾಗಿ ಊಹಿಸಬಹುದು. ಇದು ಹನ್ನೆರಡನೆಯ ಶತಮಾನದ ಶಾಸನಗಳಲ್ಲಿ ದೊರಕುತ್ತದೆ.[15]

**ದೊಡ್ಡ ಗದ್ಯಾಣ :** ಇದು ವಿಜಯನಗರದ ಕಾಲದ ಶಾಸನಗಳಲ್ಲಿ ಕಂಡು ಬರುತ್ತದೆ.[16] ಚಿಕ್ಕ ಗದ್ಯಾಣಕ್ಕೆ ಪ್ರತಿಯಾಗಿ ಮುದ್ರಿಸಲಾದ ನಾಣ್ಯ ಇದೆಂದು ಸುಲಭವಾಗಿ ಗೊತ್ತಾಗುತ್ತದೆ. ಅಂದರೆ ೧೨೦ ಗ್ರೇನ್ ತೂಕದ ಎರಡು ಗದ್ಯಾಣ ಮೌಲ್ಯದ ನಾಣ್ಯಗಳನ್ನು ಇವು ಉಲ್ಲೇಖಿಸುತ್ತವೆ. ಕೃಷ್ಣದೇವರಾಯನ ವೆಂಕಟೇಶ್ವರನ ಚಿತ್ರವಿರುವ ನಾಣ್ಯ ೧೨೦ ಗ್ರೇನ್ ತೂಕದ್ದಾಗಿದ್ದು ತಿರುಪತಿಯಲ್ಲಿ ಸುವರ್ಣೋತ್ಸವಕ್ಕಾಗಿ ಮುದ್ರಿಸಿದ ನಾಣ್ಯಗಳನ್ನು ದೊಡ್ಡ ಗದ್ಯಾಣ ಎಂದು ಕರೆಯುತ್ತಿದ್ದರು.

**ಪಾಟಿ ಗದ್ಯಾಣ :** ಪಾಟಿ ಅಂದರೆ ಹಳೆಯ ಎನ್ನುವ ಅರ್ಥವಿರುವುದರಿಂದ, ಪಾಟಿ ಗದ್ಯಾಣವೆಂದರೆ ಹಳೆಯ ಗದ್ಯಾಣ ಎನ್ನುವ ಅರ್ಥ ಬರುತ್ತದೆ. ಒಬ್ಬ ರಾಜನ ಮರಣಾನಂತರ ಹೊಸ ರಾಜನು ತನ್ನದೇ ಆದ ನಾಣ್ಯಗಳನ್ನು ಮುದ್ರಿಸುತ್ತಿದ್ದನು. ಆಗ ಹಿಂದಿನ ರಾಜನ ಅಥವಾ ರಾಜರ ನಾಣ್ಯಗಳು ಹಳೆಯ ನಾಣ್ಯಗಳು ಅಥವಾ ಪಾಟಿ ನಾಣ್ಯಗಳಾಗುತ್ತಿದ್ದವು. ಆದರೆ ಅವು ಚಲಾವಣೆಯಲ್ಲಿರುತ್ತಿದ್ದವು, ಏಕೆಂದರೆ ಚಿನ್ನ ಮತ್ತು ಬೆಳ್ಳಿಯಿಂದಾಗಿ.

**ಪಾಂಡ್ಯ ಗದ್ಯಾಣ :** ದಕ್ಷಿಣಕನ್ನಡ ಜಿಲ್ಲೆಯ ಆಳುಪರು ತಮ್ಮನ್ನು ಪಾಂಡ್ಯ ವಂಶದವರೆಂದು ಕರೆದುಕೊಂಡುದು ಮಾತ್ರವಲ್ಲದೆ, ಪಾಂಡ್ಯಪಂಡಿತ, ಪಾಂಡ್ಯ ಧನಂಜಯ ಮುಂತಾದ ಬಿರುದುಗಳನ್ನೂ ಧರಿಸಿ ಅವುಗಳನ್ನು ಅವರ ನಾಣ್ಯಗಳ ಮೇಲೆ ಮುದ್ರಿಸಿದರು.[17] ಆದುದರಿಂದ ಈ ನಾಣ್ಯಗಳು ಪಾಂಡ್ಯಗದ್ಯಾಣ ಎಂಬ ಹೆಸರಿನಿಂದ ಖ್ಯಾತಿಯನ್ನು ಪಡೆದವು.

**ಪೊನ್ ಗದ್ಯಾಣ :** ಗದ್ಯಾಣವು ಚಿನ್ನದ ನಾಣ್ಯವೇ ಆದರೂ ಕೂಡ, ಆ ವಿಷಯವನ್ನು ಒತ್ತಿ

---

12 ಎಸ್. ಐ. ಐ., ಸಂ. ೧೬, ಶಾ. ೨೪೦
13 ಎ. ವಿ. ನರಸಿಂಹಮೂರ್ತಿ : ಕಾಯಿನ್ಸ್ ಆಫ್ ಕರ್ನಾಟಕ, ಪು. ೧೬೧
14 ಪೈ. ಆ. ಸೀ., ಸಂ. ೧೩, ಶಾ. ೧೦
15 ಎಸ್. ಐ. ಐ., ಸಂ. ೧೦, ಶಾ. ೧೫೩
16 ಬಿ. ಆರ್. ಗೋಪಾಲ್ : ವಿಜಯನಗರ ಶಾಸನಗಳು, ಸಂ. ೩, ಕೆಎನ್. ೧೧೪೦
17 ಎಸ್. ಐ. ಐ., ಸಂ. ೭, ಶಾ. ೩೮೧

ಹೇಳುವ ಸಲುವಾಗಿ (ಬೆಳ್ಳಿಯ ರೂಪಾಯಿ ಎನ್ನುವಂತೆ) ಈ ಪದವನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.[18]

ಪ್ರಿಯ ಗದ್ಯಾಣ : ಇದು ದೇವಗಿರಿಯ ಸೇವುಣರ ಕಾಲದ ಶಾಸನಗಳಲ್ಲಿ ಕಂಡು ಬರುತ್ತದೆ.[19] ಇದರ ನಿಖರವಾದ ಅರ್ಥ ತಿಳಿದಿಲ್ಲ. ಆದರೆ ಶುದ್ಧವಾದ ಚಿನ್ನದಿಂದ ಮಾಡಿದ ನಾಣ್ಯವಿದಿರಬೇಕೆಂದು ಊಹಿಸ ಬಹುದು.

ಬಾರಕೂರು ಗದ್ಯಾಣ : ಬಾರಕೂರು ತುಳು ನಾಡಿನ ಪ್ರಾಚೀನ ರಾಜಧಾನಿಗಳಲ್ಲಿ ಒಂದಾಗಿದ್ದಿತು. ಇಲ್ಲಿ ಟಂಕಶಾಲೆಯಿದ್ದು, ಈ ಟಂಕಶಾಲೆಯಿಂದ ಹೊರ ಬಂದ ನಾಣ್ಯಗಳಿಗೆ ಬಾರಕೂರು ಗದ್ಯಾಣವೆಂಬ ಹೆಸರಿದ್ದಿತು. ವಿಜಯನಗರ ಕಾಲದಲ್ಲಿ ಈ ಟಂಕಶಾಲೆ ಪ್ರಸಿದ್ಧಿಗೆ ಬಂದಿದ್ದಿತೆಂದೂ ಗೊತ್ತಾಗುತ್ತದೆ.[20]

ಬಾಹಿರ ಗದ್ಯಾಣ : ಬಾಹಿರ ಎಂದರೆ ಹೊರ ಗಡೆ ಎನ್ನುವ ಅರ್ಥವಿರುವುದರಿಂದ, ಹೊರಗಡೆಯಿಂದ ಬಂದ ಅಥವಾ ಹೊರಗಡೆಯಲ್ಲಿ ಮುದ್ರಿಸಲಾದ ನಾಣ್ಯ ಗಳಿರಬೇಕೆಂದು ಊಹಿಸಲು ಅವಕಾಶವಿದೆ.[21] ಅಂದರೆ ಹೊಯ್ಸಳರ ಸಮಯದಲ್ಲಿ ಚೋಳ ಮತ್ತು ಇತರ ನಾಣ್ಯಗಳನ್ನು ಬಾಹಿರ ನಾಣ್ಯಗಳು ಎನ್ನುವ ಪದದಿಂದ ಗುರುತಿಸುತ್ತಿದ್ದರೆಂಬುದು ಗೊತ್ತಾಗುತ್ತದೆ.

ಬಿರುದ ಗದ್ಯಾಣ : ಅನೇಕ ನಾಣ್ಯಗಳಲ್ಲಿ ರಾಜನ ಹೆಸರಿಗೆ ಬದಲಾಗಿ ಅವನ ಬಿರುದಗಳೇ ಮುದ್ರಿಸ ಲ್ಪಟ್ಟಿರುತ್ತವೆ. ಹೊಯ್ಸಳ ವಿಷ್ಣುವರ್ಧನನು ತನ್ನ ನಾಣ್ಯಗಳ ಮೇಲೆ ತನ್ನ ಹೆಸರನ್ನು ಮುದ್ರಿಸುವ ಬದಲು, ತನ್ನ ಬಿರುದುಗಳಾದ ತಲಕಾಡುಗೊಂಡ, ನೊಳಂಬವಾಡಿ ಗೊಂಡ ಮತ್ತು ಮಲೆಪರೊಳಗೊಂಡ ಎನ್ನುವ ಬಿರುದು ಗಳನ್ನು ಮುದ್ರಿಸಿದನು. ಆಳುಪರು ಪಾಂಡ್ಯ ಪಂಡಿತ, ಪಾಂಡ್ಯ ಧನಂಜಯ ಎನ್ನುವ ಬಿರುದುಗಳನ್ನು ತಮ್ಮ ನಾಣ್ಯದ ಮೇಲೆ ಮುದ್ರಿಸಿದರು. ವಿಜಯನಗರದ ಇಮ್ಮಡಿ ದೇವರಾಯನು ಗಜಬೇಂಟೆಕಾರ ಎನ್ನುವ ಬಿರುದನ್ನು ಮುದ್ರಿಸಿದನು. ಆದುದರಿಂದ ಬಿರುದುಗಳಿರುವ ಗದ್ಯಾಣ ಗಳಿಗೆ ಬಿರುದಗದ್ಯಾಣ ಎನ್ನುವ ಹೆಸರು ಬಂದಿರಬೇಕು.[22]

ಮತ್ಸ್ಯ ಗದ್ಯಾಣ : ತುಳುನಾಡಿನ ಆಳುಪರ ನಾಣ್ಯಗಳ ಮೇಲೆ ಒಂದು ಅಥವಾ ಎರಡು ಮತ್ಸ್ಯದ ಚಿಹ್ನೆಗಳಿವೆ. ಜೊತೆಗೆ ಅವರನ್ನು ಶಾಸನಗಳಲ್ಲಿ 'ಮೀನ ಲಾಂಛನೋಪೇತಃ' ಎಂದೂ ವರ್ಣಿಸಲಾಗಿದೆ. ಆದುದ ರಿಂದ ಈ ಗದ್ಯಾಣಗಳು ಆಳುಪರ ನಾಣ್ಯಗಳಿರಬೇಕೆಂದು ಊಹಿಸಲು ಅವಕಾಶವಿದೆ. ಹಾಗೆಯೇ ಆಂಧ್ರದಲ್ಲಿ ಮತ್ಸ್ಯವಂಶಕ್ಕೆ ಸೇರಿದ ಸಾಮಂತ ರಾಜರುಗಳು ಆಳು ತ್ತಿದ್ದರು. ಅವರ ನಾಣ್ಯಗಳು ದೊರಕಿಲ್ಲ. ಆದರೆ ಅವರ ನಾಣ್ಯಗಳಿಗೆ ಆ ರಾಜವಂಶದ ಹೆಸರನ್ನೇ ಇಟ್ಟಿದ್ದರೆ, ಆಗ ಅವು ಮತ್ಸ್ಯಗದ್ಯಾಣಗಳಾಗುವುದರಲ್ಲಿ ಸಂದೇಹ ವಿಲ್ಲ.

ಮಂಗಳೂರು ಗದ್ಯಾಣ : ತುಳುನಾಡಿನ ಮಂಗ ಳೂರು ವಿಜಯನಗರ ಕಾಲದಲ್ಲಿ ಪ್ರಮುಖ ನಗರವಾಗಿ, ಅಲ್ಲೊಂದು ಟಂಕಶಾಲೆಯಿದ್ದಿತು. ಈ ಟಂಕಶಾಲೆ ಯಲ್ಲಿ ಮುದ್ರಿತವಾದ ನಾಣ್ಯಗಳೇ ಮಂಗಳೂರು ಗದ್ಯಾಣಗಳು.[23]

ಪ್ರತಾಪ ಗದ್ಯಾಣ : ಇದು ವಿಜಯನಗರ ಕಾಲದ ಶಾಸನಗಳಲ್ಲಿ ಕಾಣಬರುತ್ತದೆ.[24] ವಿಜಯನಗರದ ದೊರೆ ಹರಿಹರನು 'ವೀರ' ಎನ್ನುವ ಪದಕ್ಕೆ ಬದಲಾಗಿ 'ಪ್ರತಾಪ' ಎನ್ನುವ ಬಿರುದನ್ನು ತನ್ನ ನಾಣ್ಯಗಳ ಮೇಲಿನ ಬರಹಗಳಲ್ಲಿ ಸೇರಿಸಿದನು. ಆದುದರಿಂದ ಈ ನಾಣ್ಯ ಗಳಿಗೆ ಪ್ರತಾಪ ಎಂಬ ಹೆಸರೂ ಬಂದಿತು. ಇದನ್ನೇ ಅಬ್ದುರ್ ರಜಾಕನು ಪರ್ತಬ್ ಎಂದೂ ಕರೆದಿದ್ದಾನೆ.

---

18 ಅದೇ, ಸಂ. ೧೫, ಶಾ. ೩೨೫

19 ಟಿಪ್ಪಣಿ ೨ ನೋಡಿ

20 ಕೆ. ವಿ. ರಮೇಶ್ : ಹಿಸ್ಟರಿ ಆಫ್ ಸೌತ್ ಕೆನರ, ಪು. ೨೭೭

21 ಅದೇ, ಪು. ೨೯೦

22 ಎಸ್. ಐ. ಐ., ಸಂ. ೪, ಶಾ. ೬೮೮, ೯೪೩, ೯೪೪

23 ಟಿಪ್ಪಣಿ ೨೦ ನೋಡಿ

24 ಎಸ್. ಐ. ಐ., ಸಂ. ೧೬, ಶಾ. ೩೨೫

ಆದುದರಿಂದ ಪ್ರತಾಪ ಎನ್ನುವ ಬರಹವಿರುವ ಗದ್ಯಾಣಗಳೇ ಪ್ರತಾಪ ಗದ್ಯಾಣ ಎನ್ನುವ ಹೆಸರಿನಿಂದ ಪ್ರಸಿದ್ಧಿ ಪಡೆದವು.

**ಪಟ್ಟವಮು ಗದ್ಯಾಣ :** ರಾಜನ ಪಟ್ಟಾಭಿಷೇಕ ಸಮಯದಲ್ಲಿ ನಾಣ್ಯಗಳನ್ನು ಅಚ್ಚು ಹಾಕಿಸುವ ಪದ್ಧತಿಯನ್ನು ಆಧರಿಸಿ ಹೇಳುವುದಾದರೆ, ಪಟ್ಟಾಭಿಷೇಕ ಸಮಯದ ಗದ್ಯಾಣಗಳನ್ನೇ ಜನರು ಆ ಹೆಸರಿನಿಂದ ವ್ಯವಹರಿಸುತ್ತಿರಬೇಕೆಂದು ತಿಳಿಯಬಹುದು.[25]

**ರಾಯ ಗದ್ಯಾಣ :** ದೇವಗಿರಿಯ ಸೇವುಣರ ಶಾಸನದಲ್ಲಿ ಇದು ಕಂಡುಬರುತ್ತದೆ.[26] ರಾಜನಿಂದಲೇ ಮುದ್ರಿತವಾದ ಗದ್ಯಾಣವಿದಿರಬೇಕು. ಏಕೆಂದರೆ ಇತರರೂ ರಾಜನಿಂದ ಅಪ್ಪಣೆ ಪಡೆದು ನಾಣ್ಯಗಳನ್ನು ಮುದ್ರಿಸುವ ಅಭ್ಯಾಸ ಪ್ರಾಚೀನ ಕರ್ನಾಟಕದಲ್ಲಿ ಇದ್ದಿತು.

**ರೇಖ ಗದ್ಯಾಣ :** ಇದು ವಿಜಯನಗರ ಕಾಲದ ಶಾಸನಗಳಲ್ಲಿ ಕಂಡು ಬರುತ್ತದೆ.[27] ಇದರ ಅರ್ಥ ತಿಳಿಯುವುದು ಕಷ್ಟ. ಇದು ಜನಾನುರಾಗಿಯಾಗಿದ್ದಿತೆಂಬುದು ಸ್ಪಷ್ಟ. ಏಕೆಂದರೆ ರೇಖ ಪೊನ್, ರೇಖ ಚಕ್ರ ಗದ್ಯಾಣ, ರೇಖ ಘಟ್ಟಿವರಹ ಗದ್ಯಾಣ ಎನ್ನುವ ಪದಗಳೂ ಕಾಣಸಿಗುತ್ತವೆ. ರೇಖ ಎನ್ನುವುದು ಕೆಲವು ಸಾರಿ ರೇಖ್ಯೆ ಎನ್ನುವ ರೂಪದಲ್ಲಿಯೂ ಬಳಕೆಯಾಗಿರುವುದು ಗಮನಾರ್ಹ ಅಂಶ.

**ಲೊಕ್ಕಿ ಗದ್ಯಾಣ–ಲೊಕ್ಕಿಗುಂಡಿ ಗದ್ಯಾಣ :** ಲೊಕ್ಕಿಗುಂಡಿಯು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಮುಖ್ಯ ನಗರಗಳಲ್ಲೊಂದಾಗಿದ್ದಿತು. ಇಲ್ಲಿ ಒಂದು ಟಂಕಶಾಲೆಯು ಕಾರ್ಯ ನಿರ್ವಹಿಸುತ್ತಿದ್ದಿತು. ಆದುದರಿಂದ ಇಲ್ಲಿ ಮುದ್ರಿತವಾದ ನಾಣ್ಯಗಳು ಲೊಕ್ಕಿ ಗದ್ಯಾಣ ಅಥವಾ ಲೊಕ್ಕಿಗುಂಡಿ ಗದ್ಯಾಣ ಎಂಬ ಹೆಸರಿನಿಂದ ಖ್ಯಾತಿಯನ್ನು ಪಡೆದಿದ್ದವು. ಕ್ರಿ. ಶ. ೧೧೪೨ರ ಚಾಲುಕ್ಯ ಇಮ್ಮಡಿ ಜಗದೇಕಮಲ್ಲನ ಕುರಹಟ್ಟಿ ಶಾಸನದಲ್ಲಿ 'ಲೊಕ್ಕಿಯಚ್ಚಿನ ಗದ್ಯಾಣ' ಎನ್ನುವುದನ್ನೂ ಕಾಣುತ್ತೇವೆ.[28] ಅಚ್ಚು ಎನ್ನುವುದಕ್ಕೆ ಟಂಕಶಾಲೆ ಮತ್ತು ನಾಣ್ಯ ಎಂಬ ಎರಡು ಅರ್ಥಗಳೂ ಇವೆ. ಇಲ್ಲಿ ಲೊಕ್ಕಿಯಚ್ಚಿನ ಅಂದರೆ ಲೊಕ್ಕಿಗುಂಡಿಯಲ್ಲಿರುವ ಟಂಕಶಾಲೆ ಎಂದು ಅರ್ಥ ಮಾಡಬೇಕಾಗುತ್ತದೆ. ಇದೇ ರೀತಿ ಲೊಕ್ಕಿ ಶ್ರಾಹೇಯ ಗದ್ಯಾಣ ಎನ್ನುವ ಪದವನ್ನೂ ಗಮನಿಸಬೇಕು.[29] ಶ್ರಾಹೇಯ ಎಂದರೆ ಪ್ರಸ್ತುತ ಎನ್ನುವ ಅರ್ಥವಿರುವುದರಿಂದ, ಇವು ಪಾಟಿನಾಣ್ಯಗಳಿಗೆ ವಿರುದ್ಧವಾದುವು. ಅಂದರೆ ಲೊಕ್ಕಿಗುಂಡಿಯಲ್ಲಿ ವಿವಿಧ ರೀತಿಯ ಗದ್ಯಾಣಗಳು ಮುದ್ರಿತವಾಗುತ್ತಿದ್ದವು ಎಂಬುದು ಗೊತ್ತಾಗುತ್ತದೆ.

**ವರ್ತಕ ಗದ್ಯಾಣ :** ಇದು ಕಲ್ಯಾಣದ ಚಾಲುಕ್ಯರ ಶಾಸನಗಳಲ್ಲಿ ಕಾಣಬರುತ್ತದೆ.[30] ನಾವು ಆಗಲೇ ಗಮನಿಸಿರುವಂತೆ ರಾಜನು ಮಾತ್ರವಲ್ಲದೆ, ವರ್ತಕ ಶ್ರೇಣಿಗಳೂ, ಸಾಮಂತರೂ ನಾಣ್ಯಗಳನ್ನು ಮುದ್ರಿಸುವ ಅಧಿಕಾರವನ್ನು ಪಡೆದಿದ್ದರು. ಇದೇ ಸಮಯದಲ್ಲಿ ಸಾವಿಮೋಜ ಎನ್ನುವವನು ನವಿಲಚ್ಚಿನ ನಾಣ್ಯಗಳನ್ನು ಲೊಕ್ಕಿಯಚ್ಚಿನ ನಾಣ್ಯಗಳಾಗಿ ಮಾರ್ಪಡಿಸಲು ರಾಜನಿಗೆ ಹಣವನ್ನು ಕೊಟ್ಟು, ಅಧಿಕಾರವನ್ನು ಪಡೆದ ವಿಷಯ ಬೆಳಕಿಗೆ ಬಂದಿದೆ.[31] ಆದುದರಿಂದ ವರ್ತಕ ಶ್ರೇಣಿಗಳಿಂದ ಮುದ್ರಿಸಿದ ನಾಣ್ಯಗಳೇ ವರ್ತಕ ಗದ್ಯಾಣಗಳಿರಬೇಕೆಂದು ಹೇಳಬಹುದು.

**ವರಹ ಗದ್ಯಾಣ :** ವರಹ ಮತ್ತು ಗದ್ಯಾಣ ಎರಡೂ ಒಂದೇ ಮೌಲ್ಯದ ನಾಣ್ಯಗಳೆಂದು ಸಾಮಾನ್ಯವಾಗಿ ತಿಳಿದಿರುವ ಸಂಗತಿ. ವಿಜಯನಗರದ ಮಿರ್ಲೆ ಶಾಸನದಲ್ಲಿ ವರಹ ಗದ್ಯಾಣ ಎನ್ನುವ ಪದ ಮೂರು

---

25 ಅದೇ, ಸಂ. ೪, ಶಾ. ೧೩೨೯

26 ಎ. ಕ., ಸಂ. ೮, ಸೊರಬ ೨೭೨

27 ಎಸ್. ಐ. ಐ., ಸಂ. ೧೬, ಶಾ. ೭೮೧

28 ಅದೇ, ಸಂ. ೧೫, ಶಾ. ೨೨

29 ಅದೇ, ಸಂ. ೯, ಭಾ. ೧, ಶಾ. ೧೬೪

30 ಎ. ಇಂ., ಸಂ. ೩೭, ಪು. ೧೮೯

31 ಟಿಪ್ಪಣಿ ೧೩ ನೋಡಿ, ಪು. ೭೯

ಸಾರಿ ಬಳಸಲ್ಪಟ್ಟಿದೆ.[32] ಆದರೆ ಕೃಷ್ಣದೇವರಾಯನ ೧೫೧೪ರ ಕಹಳ್ಳಿ ಶಾಸನದಲ್ಲಿ, ಗ್ರಾಮದ ಕಂದಾಯವು ೧೩೦ ಗದ್ಯಾಣಗಳು ಮತ್ತು ೨ ವರಹಗಳೆಂದು ಹೇಳಲಾಗಿದೆ.[33] ವರಹ ಮತ್ತು ಗದ್ಯಾಣಗಳೆರಡೂ ಒಂದೇ ಮೌಲ್ಯದ ನಾಣ್ಯಗಳಾಗಿದ್ದರೆ, ಮೇಲೆ ಹೇಳಿದ ರೀತಿಯಲ್ಲಿ ಬಿಡಿ ಬಿಡಿಯಾಗಿ ಏಕೆ ಉಲ್ಲೇಖಿಸಲಾಗಿದೆ ಎನ್ನುವುದಕ್ಕೆ ಸಮಂಜಸವಾದ ಉತ್ತರ ಸಿಗುವುದಿಲ್ಲ. ಒಟ್ಟಿನಲ್ಲಿ ಇದನ್ನು ಇನ್ನೂ ಚರ್ಚಿಸಿ ವಿಮರ್ಶಿಸಬೇಕಾಗಿದೆ.

ಈ ರೀತಿ ಕರ್ನಾಟಕದ ಶಾಸನಗಳು ವಿವಿಧ ರೀತಿಯ ಗದ್ಯಾಣಗಳನ್ನು ಉಲ್ಲೇಖಿಸುತ್ತವೆ. ಇದರಿಂದ ಸಮಕಾಲೀನ ಜನರು ಈ ಗದ್ಯಾಣಗಳಿಗೆ ಏನು ಹೆಸರುಗಳನ್ನು ಕೊಟ್ಟಿದ್ದರು, ಅವುಗಳ ಅರ್ಥವೇನು ಎಂಬ ವಿಷಯಗಳು ಬೆಳಕಿಗೆ ಬರುತ್ತವೆ. ಈ ರೀತಿಯ ಸಂಶೋಧನೆ ಇನ್ನೂ ಶೈಶವಾಸ್ಥೆಯಲ್ಲಿಯೇ ಇದೆ. ಇದು ಮುಂದುವರಿದರೆ ಕರ್ನಾಟಕದ ನಾಣ್ಯಶಾಸ್ತ್ರದ ಮೇಲೆ ಹೊಸಬೆಳಕು ಬೀಳುವುದರಲ್ಲಿ ಸಂದೇಹವಿಲ್ಲ.

---

32 ಎ. ಕ., ಸಂ. ೫, ಕೃನ. ೯೨

33 ಅದೇ, ಸಂ. ೩, ಸಂ. ೨೧೭

ಲಕ್ಷ್ಮಣ್ ತೆಲಗಾವಿ

# ಎಪ್ಪತ್ತೇಳು ಪಾಳೆಯಗಾರರು

ಕೆಲವು ಸಾಹಿತ್ಯಕ ಕೃತಿಗಳಲ್ಲೂ ಚಾರಿತ್ರಿಕ ಗ್ರಂಥಗಳಲ್ಲೂ 'ಎಪ್ಪತ್ತೇಳು ಪಾಳೆಯಗಾರರು ಅಥವಾ ನಾಯಕರು' ಎಂಬುದರ ಪ್ರಸ್ತಾಪ ಬರುತ್ತದೆ. ಈ ಪಾಳೆಯಗಾರರು ಯಾರು ? ಯಾವ ಸಂಸ್ಥಾನಿಕರು ? ಯಾವ ಕಾಲದಲ್ಲಿದ್ದವರು ?—ಇಂತಹ ಸಂದೇಹಗಳು ಈ ಹಿನ್ನೆಲೆಯಲ್ಲಿ ಸಹಜವಾಗಿಯೇ ಉದ್ಭವಿಸುತ್ತವೆ. ಸಾಮಾನ್ಯವಾಗಿ ಈ ಸಂಖ್ಯಾವಾಚಿಯು ಸಾಹಿತ್ಯಕ ಕೃತಿಗಳಲ್ಲಿ ಹೆಚ್ಚಾಗಿ ಕಂಡುಬರುವುದರಿಂದಲೂ ಮುಖ್ಯವಾಗಿ, ಜನಪದ ಸಾಹಿತ್ಯದಲ್ಲಿ ವಿಪುಲವಾಗಿ ದೊರೆಯುವುದರಿಂದಲೂ ಇದು ಕೇವಲ ರೂಢಗತವಾಗಿ ಅಥವಾ ಆಶಯರೂಪದಲ್ಲಿ ಬಳಕೆಗೆ ಬಂದಿರಬಹುದೆಂದು ಭಾವಿಸಲು ಕಾರಣವೆನಿಸಿದೆ.

'ಎಪ್ಪತ್ತೇಳು ಪಾಳೆಯಗಾರರು' ಎಂಬುದನ್ನೂ ಇದೇ ಸಂಖ್ಯೆಯನ್ನು ಹೊಂದಿರುವ ಇತರ ಸಂಖ್ಯಾವಾಚಕಗಳನ್ನೂ ಆಶಯರೂಪದವು ಮತ್ತು ಚಾರಿತ್ರಿಕವಾದುವೆಂದು ವಿಭಾಗಿಸಬಹುದು. ಈ ಸಂಬಂಧದ ಉಲ್ಲೇಖಗಳನ್ನು ಹಾಗೂ ಹಿನ್ನೆಲೆಯನ್ನು ಈ ಪ್ರಬಂಧದಲ್ಲಿ ಸೂಕ್ಷ್ಮವಾಗಿಯಾದರೂ ಪರಿಶೀಲಿಸಲು ಪ್ರಯತ್ನಿಸಲಾಗಿದೆ.

* * *

ಜಾನಪದದಲ್ಲಿ '೭' ಸಂಖ್ಯೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದ್ದು, ಸಂಖ್ಯಾ ಆಶಯಗಳಲ್ಲಿ ಇದು ಅತ್ಯಂತ ಜನಪ್ರಿಯವಾದುದಾಗಿದೆ. ಜನಪದ ಸಾಹಿತ್ಯ, ಆಚರಣೆ ನಂಬಿಕೆ, ಇತ್ಯಾದಿಗಳಲ್ಲಿ ಈ ಸಂಖ್ಯೆಗೆ ಮಹತ್ವದ ಸ್ಥಾನ ದೊರೆತಿದೆ. ಆಯಾ ಸಂದರ್ಭಕ್ಕೆ ತಕ್ಕಹಾಗೆ ಈ ಮೂಲ ಸಂಖ್ಯೆಯು ೭೦, ೭೭, ೭೦೦, ೭೦೭, ೭೭೦, ೭೭೦ ೧/೨, ೭೭೭, ೭೦೭೦, ೭೭೦೦, ೭೭ ಸಾವಿರ, ೭ ಲಕ್ಷ ೭೭ ಸಾವಿರದ ೭೭೭, ೭೦ ಕೋಟಿ, ೭೭ ಕೋಟಿ, ೭೦೭೦ ಕೋಟಿ ಎಂಬಂತೆ ಬಹ್ವಂಶವಾಗಿ ವರ್ಧಿಸಲ್ಪಟ್ಟಿರುವುದನ್ನು ಸೋದಾಹರಣವಾಗಿ ತೋರಿಸಬಹುದು. ಶಿಷ್ಟರೂ ಜನಪದರೂ ಈ ನಾನಾ ವಿಧದ ಸಂಖ್ಯಾವಾಚಕಗಳನ್ನು ಸಂದರ್ಭೋಚಿತವಾಗಿ ತಮ್ಮ ತಮ್ಮ ರಚನೆಗಳಲ್ಲಿ ಬಳಸಿಕೊಂಡಿದ್ದಾರೆ. ಶಾಸನಸಾಹಿತ್ಯದಲ್ಲೂ ಇವುಗಳನ್ನು ಉಲ್ಲೇಖಿಸಲಾಗಿದೆ. ಇಂತಹ ಉದಾಹರಣೆಗಳು ಹೇರಳವಾಗಿವೆ. (ಅನುಬಂಧ ನೋಡಿ).

* * *

ಪ್ರಸ್ತುತ ಪ್ರಬಂಧದ ವಿಷಯಕ್ಕೆ ಸಂಬಂಧಿಸಿದಂತೆ, ೭೭ ಸಂಖ್ಯೆಯ (ಸಪ್ತಸಪ್ತತಿ ಸಂಖ್ಯೆ) ಉಲ್ಲೇಖಗಳನ್ನು ಮಾತ್ರವೇ ಇಲ್ಲಿ ಪ್ರಧಾನವಾಗಿ ಪ್ರಸ್ತಾಪಿಸಲಾಗಿದ್ದು, ಚಾರಿತ್ರಿಕ ವಿಷಯಾಂತರ್ಗತ ಸಾಹಿತ್ಯಕೃತಿಗಳಲ್ಲಿ, ಚಾರಿತ್ರಿಕ ಕಡತ, ಶಾಸನ, ಇತ್ಯಾದಿಗಳಲ್ಲಿ ಉಲ್ಲೇಖಗೊಂಡ ಈ ಸಂಖ್ಯೆ ಹಾಗೂ ಈ ಸಂಖ್ಯೆಯಷ್ಟು ಪಾಳೆಯಗಾರರನ್ನು ಕುರಿತು ಇಲ್ಲಿ ವಿವೇಚಿಸಲೆತ್ನಿಸಿದೆ.

ಜಾನಾಂಗಿಕ ಮಹತ್ವದ ಜನಪದ ಸಾಹಿತ್ಯರೂಪದಲ್ಲಿ ಒಂದೆಂದು ಭಾವಿಸಲಾಗಿರುವ 'ಕಾಲಜ್ಞಾನ ಸಾಹಿತ್ಯ'ವು ಚಾರಿತ್ರಿಕ ಅಂಶಗಳನ್ನು ವಿಪುಲವಾಗಿ ಒಳಗೊಂಡಿರುವುದು ವಾಸ್ತವ ಸಂಗತಿ. ಆದರೆ ಈ ಸಾಹಿತ್ಯ ರಚನೆಯಲ್ಲಿ ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಸಂಗತಿಗಳ ಕಲಸಾಟ ಧಾರಾಳವಾಗಿ ನಡೆದಿರುವ ಪ್ರಯುಕ್ತ, ಅಭ್ಯಾಸಿಗಳಿಗೆ ಇದರಿಂದ ಕೊಂಚ ಗೊಂದಲವಾಗುವುದು ದಿಟ. ಈ ಸಾಹಿತ್ಯವೂ ೭೭ ಸಂಖ್ಯೆಗೆ ಸಂಬಂಧಿಸಿದ ಸ್ವಾರಸ್ಯಕರ ಅಂಶಗಳನ್ನು ಒದಗಿಸಿದೆ. 'ಶ್ರೀ ಪ್ರಭುದೇವರ ಕಾಲಜ್ಞಾನದ ವಚನಗಳು' ಅರಹುವ "ಎಪ್ಪತ್ತೇಳು ದುರ್ಗದವರು ಅಪವರ್ಗವಾದಾರು"[1] ಮತ್ತು 'ರುದ್ರಸ್ವಾಮಿಯ ಕಾಲಜ್ಞಾನ'ವು ದಾಖಲಿಸಿರುವ "ಅಶ್ವಪತಿ, ಗಜಪತಿ,ನರಪತಿ, ಇಂಗ್ರೀಜ್, ತಾಂಬ್ರದ ಮೋರೆಯುವರು, ಕಿರೀಟ ರಾಮರಾಜು, ಡಿಳ್ಳಿ ಸುಲ್ತಾನ್ ಪಾದಶಾಂಬವನ ಕಡೆಯುವರು ಮುಂತಾದ ಎಪ್ಪತ್ತೇಳು ಜನ ಪಾಳ್ಯಗಾರರು"[2] ಎಂಬುವು ಉದಾಹರಣೆಗಳು.

೧

ವಿಜಯನಗರ ಪೂರ್ವದ ಅಧಿಪತಿಗಳಲ್ಲಿ ಮುಖ್ಯನಾದವನೂ ಆಂಧ್ರ ಕಾಕತೀಯ ಅರಸರ ಸಮಕಾಲೀನನೂ ಆದ ಕಂಪಲಿಯ ಕಂಪಿಲರಾಯನ ಮಗನೇ ಕುಮಾರರಾಮ (ಕ್ರಿ. ಶ. ಸು. ೧೨೫೫-೧೨೯೫). ಇವನು ಕುಮ್ಮಟದುರ್ಗದಿಂದ ಆಳ್ವಿಕೆ ನಡೆಸಿದನೆಂದು ಚರಿತ್ರೆ ಹೇಳುತ್ತದೆ. ಕಾವ್ಯಗಳಲ್ಲಿ ಇವನನ್ನು 'ಪರದಾರ ಸೋದರ' ಅಥವಾ 'ಪರನಾರಿಯರಿಗೆ ಸೋದರ'ನೆಂದು ಪ್ರಶಂಸಿಸಲಾಗಿದೆ. ಈ ಕುಮಾರರಾಮನ ಬಾಲ್ಯದ ಚಿತ್ರಣವನ್ನು ನೀಡುವಾಗ ಜನಪದ ಕವಿಗಳು, ಈತನು 'ತನ್ನ ಬಲ್ಲಿದ ೭೭ ಮಾನ್ಯರ ಕೂಡುತ' ಆಟವಾಡುತ್ತಿದ್ದನೆಂದು ವರ್ಣಿಸಿರುವರು.[3]

ಈ ಕುಮಾರರಾಮನ ಸಮಕಾಲೀನನೆನಿಸಿದವನು ಹುಂಡಿಹೆತ್ತನಾಯಕ ; ಕುಂಚಿಟಿಗರ ಕುಲದ ಹಿರಿಯ. ಈತನ ಕುಲದವರ ವಿವರ, ಸಮಕಾಲೀನ ರಾಜಕೀಯ ಘಟನೆ, ಇತ್ಯಾದಿಗಳು ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾಲ್ಲೂಕು ನಂದನಹೊಸೂರಿನಲ್ಲಿ ದೊರೆತ ಕ್ರಿ. ಶ. ೧೩೩೨ರ ತಾಮ್ರಪಟಗಳಲ್ಲಿ ಪ್ರಸ್ತಾಪಗೊಂಡಿವೆ.[4] ಯಾವುದೋ ಸಂದರ್ಭದಲ್ಲಿ ಈ ಹುಂಡಿಹೆತ್ತನಾಯಕನ ವಿರುದ್ಧ, ಮಹ್ಮದ್ ಬಿನ್ ತೊಗಲಕ್ಕನ ನಂತರ ದೆಹಲಿ ಸಿಂಹಾಸನ ಏರಿದವನೆಂದು ವರ್ಣಿತನಾದ ಉಲುವುಖಾನ (ಉಲೂಘಖಾನ)ನು ತನ್ನ '೭೭೦ ಖಾನರ ಸೇನೆ'ಯನ್ನು ಕಳುಹಿಸಿದನೆಂದೂ ನಾಯಕನು ಅವರೆಲ್ಲರನ್ನೂ ಯಶಸ್ವಿಯಾಗಿ ಜಯಿಸಿದನೆಂದೂ ಅನಂತರ ಈ ನಾಯಕನು ತನ್ನ ಪರಿವಾರದೊಡನೆ ಹೊಯ್ಸಳ ರಾಜ್ಯದತ್ತ ಪ್ರಯಾಣ ಬೆಳೆಸಿ ಹಳೇಬೀಡಿನ ಬಲ್ಲಾಳರಾಯನನ್ನು ಸಂದರ್ಶಿಸಿದನೆಂದೂ ಆ ರಾಯನು ನಾಯಕನನ್ನು ಸ್ವಾಗತಿಸಿ ಅವನಿಗೆ ಹಲವಾರು ಬಿರುದುಗಳನ್ನು ನೀಡಿ ಸತ್ಕರಿಸಿದನೆಂದೂ ಅವುಗಳಲ್ಲಿ '೭೭ ಖಾನರ ಗಂಡ' ಎಂಬ ಬಿರುದು ಸಹ ಒಂದೆಂದೂ ಈ ಪಟಗಳಲ್ಲಿ ಹೇಳಿದೆ.[5]

ಚರಿತ್ರಕಾರರು ಗುರುತಿಸಿರುವಂತೆ, ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಹಿನ್ನೆಲೆಯಲ್ಲಿ ಆಂಧ್ರದ ವಾರಂಗಲ್ಲು ಕಾಕತೀಯ ಅರಸರ ರಾಜಕೀಯ, ಸಾಂಸ್ಕೃತಿಕ, ಇತ್ಯಾದಿ ಸಾಧನೆಗಳ ಪ್ರಭಾವವಿದೆ. ಈ ಅರಸರ ಕಾಲದ ಕೆಲವು ತೆಲುಗು ಕಾವ್ಯಗಳಲ್ಲೂ ಚರಿತ್ರಗ್ರಂಥ

---

1 ಶ್ರೀ ಶಿವಬಸವಸ್ವಾಮಿಗಳು (ಸಂ.) : ನಾನಾ ಕವಿಗಳ ಕೃತ ಕಾಲಜ್ಞಾನ ಸಂಗ್ರಹ–ಭಾಗ ೧, ಮೈಸೂರು, ೧೯೪೬, ಪು. ೮

2 ಅದೇ, ಪು. ೯೨

3 ಎಮ್. ಎಸ್. ಸುಂಕಾಪುರ (ಸಂ.) : ಜೀವನ ಜೋಕಾಲಿ-ಭಾಗ ೪ : ಹೋಳೀಹಾಡು ('ಧೀರ ಕುಮಾರರಾಮ'), ಧಾರವಾಡ, ೧೯೭೪, ಪು. ೧೪ ; ಬಿ. ಎಸ್. ಗದ್ದಗಿಮಠ (ಸಂ.) : ಕುಮಾರರಾಮನ ದುಂದುಮೆ, ಪ್ರಬುದ್ಧ ಕರ್ನಾಟಕ, ೪೧-೨, ೧೯೫೯, ಪು. ೧

4 Annual Report of the Mysore Archaeological Department, 1931, No. 1, 1310 A. D., p. 93

5 Ibid., p. 94

ಗಳಲ್ಲೂ ೭೭ ನಾಯಕರು ಅಥವಾ ಪಾಳೆಯಗಾರರು ವಹಿಸಿದ ಪಾತ್ರ ಮುಂತಾದ್ದನ್ನು ಸೂಕ್ಷ್ಮವಾಗಿ ವಿಶ್ಲೇಷಿಸಲಾಗಿದೆ. ಸಂದರ್ಭಾನುಸಾರ ಈ ಸಂಖ್ಯೆಯು ಏರುಪೇರಾಗಿರುವುದು ಕಂಡುಬಂದರೂ ಕಾಕತೀಯ ಅರಸರು ಸ್ಥಾಪಿಸಿದ ಈ 'ನಾಯಂಕರ' ವ್ಯವಸ್ಥೆಯನ್ನೇ ವಿಜಯನಗರದವರು ಅಳವಡಿಸಿಕೊಂಡರೆಂಬುದು ಗಮನಾರ್ಹ.

ಕಾಕತೀಯ ಅರಸ ಗಣಪತಿದೇವನ (ಕ್ರಿ. ಶ. ೧೧೯೯-೧೨೬೨) ತರುವಾಯ ಸಾಮ್ರಾಜ್ಯವನ್ನು ಪಾಲಿಸಿದವಳು ಈತನ ಮಗಳು ರುದ್ರಮದೇವಿ ಅಥವಾ ರುದ್ರಾಂಬಾ (ಕ್ರಿ. ಶ. ೧೨೬೨-೧೨೮೯). ಈಕೆಯ ಮೊಮ್ಮಗ ಇಮ್ಮಡಿ ಪ್ರತಾಪರುದ್ರದೇವನು (ಕ್ರಿ. ಶ. ೧೨೮೯-೧೩೨೩) ಈಕೆಯ ನಂತರ ಸಿಂಹಾಸನವನ್ನು ಪರಿಗ್ರಹಿಸಿದುದಲ್ಲದೆ, ಆಡಳಿತ ಸುಧಾರಣೆಯ ಕಾರ್ಯವನ್ನೂ ಕಳೆದು ಹೋದ ಪ್ರದೇಶಗಳನ್ನು ಮತ್ತೆ ಜಯಿಸುವ ಹೋರಾಟದ ಕಾರ್ಯವನ್ನೂ ಕೈಗೆತ್ತಿಕೊಂಡನು. ಕರ್ನಲ್ ಮೆಕೆಂಝಿಯು ಸಂಗ್ರಹಿಸಿದ ಈ ಅರಸರಿಗೆ ಸಂಬಂಧಿಸಿದ ಹಸ್ತಪ್ರತಿಗಳಲ್ಲೊಂದು, ಗಣಪತಿರಾಯನು ಯಾವುದೇ ಭೇದವಿಲ್ಲದೆ ಎಲ್ಲ ಕುಲದ ನಾಯಕ ಅಥವಾ ಪಾಳೆಯಗಾರರನ್ನು ಸೇರಿಸಿ ಸ್ಥಾಪಿಸಿದ್ದ ನಾಯಂಕರ ಒಕ್ಕೂಟ (confederacy) ಅಥವಾ ವ್ಯವಸ್ಥೆಯನ್ನು ಪ್ರತಾಪರುದ್ರನು ಮಾರ್ಪಡಿಸಿದನೆಂದು ಅರುಹುತ್ತದೆ. ಈತನು ತನ್ನ ಕಾಲದಲ್ಲಿ ಪ್ರಬಲರಾಗಿದ್ದ 'ಪದ್ಮನಾಯಕ' ಕುಲಕ್ಕೆ ಸೇರಿದ ೭೭ ನಾಯಕರ ಸಮೂಹದಿಂದ ಕೂಡಿದ ಆಡಳಿತ ವ್ಯವಸ್ಥೆಯನ್ನಾರಂಭಿಸಿದನೆಂದು ಹೇಳುತ್ತದೆ. ಈ ಹಸ್ತಪ್ರತಿಯು ಈ ಎಲ್ಲ ೭೭ ನಾಯಕರ ಹೆಸರುಗಳನ್ನು ಪಟ್ಟಿಮಾಡಿದೆಯೆಂದು ಹೇಳಲಾಗಿದ್ದು, ಇವರಲ್ಲಿ ಸುಮಾರು ೨೧ ನಾಯಕರು ಮುಖ್ಯರಾಗಿದ್ದರೆಂದು ವ್ಯಕ್ತಪಡುವುದು.[6]

ಆದರೆ ಪಿ. ವಿ. ಪರಬ್ರಹ್ಮಶಾಸ್ತ್ರಿ ಅವರು ಸೂಚಿಸಿರುವಂತೆ, ಗಣಪತಿದೇವನು ತನ್ನ ಸಾಮ್ರಾಜ್ಯದ ೭೨ (ಡೆಬ್ಬದಿರೆಂಡು) ಪ್ರಾಂತ್ಯಗಳ ಮೇಲೆ ಅಷ್ಟೇ ಸಂಖ್ಯೆಯಲ್ಲಿ ಪ್ರತ್ಯೇಕಾಧಿಕಾರಿಗಳನ್ನು ನೇಮಿಸಿದ್ದನು.[7] ಈ ಗಣಪತಿದೇವನ ಸಮಕಾಲೀನರಾಗಿದ್ದು, ತಮ್ಮ ಸಾಹಸಗಳಿಂದ ಆಂಧ್ರದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿರುವವರೆಂದರೆ ಪದ್ಮನಾಯಕರು. ೭೨ ಗೋತ್ರ ಮತ್ತು ೧೨ ಮನೆಗಳಿಗೆ ಸೇರಿದ ಈ ಪದ್ಮನಾಯಕರು ಗುಂಟೂರು ಜಿಲ್ಲೆಯ ಪಲನಾಡವೀರರಿಗೆ ಅವರ ಹೋರಾಟಗಳಲ್ಲಿ ನೆರವು ನೀಡಿದರಂತೆ.[8] ಪಲನಾಡವೀರರ ತರುವಾಯ ಪಲನಾಡ ಸೀಮೆಯನ್ನು, ೧೩ ನೆಯ ಶತಮಾನದಲ್ಲಿ, ಈ ಪದ್ಮನಾಯಕರು ಪಾಲಿಸಿದರು. ಈ ಮಾಹಿತಿಯು ಪರಬ್ರಹ್ಮಶಾಸ್ತ್ರಿ ಅವರು ಮೇಲೆ ಪ್ರಸ್ತಾಪಿಸಿರುವ ೭೨ ಪ್ರಾಂತ್ಯಾಧಿಕಾರಿಗಳ ಅಂಶವನ್ನು ಸಮರ್ಥಿಸುವಂತೆ ತೋರುತ್ತದೆ. ಅಲ್ಲದೆ, ಪ್ರತಾಪರುದ್ರನು ಗಣಪತಿರಾಯನ ಕಾಲದ ನಾಯಂಕರ ವ್ಯವಸ್ಥೆಯನ್ನು ಮಾರ್ಪಡಿಸುವುದರೊಡನೆ ಪದ್ಮನಾಯಕರ ಸಂಖ್ಯೆಯನ್ನು ವೃದ್ಧಿಸಿರಬೇಕೆಂಬ ಅಭಿಪ್ರಾಯ ವ್ಯಕ್ತಪಡಿಸಲೂ ಇದರಿಂದ ಅವಕಾಶ ದೊರೆತಂತಾಗುತ್ತದೆ. ಈ ಸಂಬಂಧದಲ್ಲಿ ವ್ಯಕ್ತಪಟ್ಟಿರುವ ಇನ್ನೊಂದು ಅಂಶವೆಂದರೆ, ಕಾಕತೀಯ ಒಕ್ಕೂಟವು ೭೫ ನಾಯಕರಿಂದ ಕೂಡಿದ್ದಿತು ಹಾಗೂ ಪ್ರತಾಪರುದ್ರನು ನಾಯಂಕರ ವ್ಯವಸ್ಥೆಗೆ ಒಳಪಡಿಸಿದವರಲ್ಲಿ ಮುನ್ನೂರು ನಾಯಕರೂ ೭೫ ಕುಟುಂಬಗಳಿಗೆ ಸೇರಿದ ಮುಖ್ಯಸ್ಥರೂ ಇದ್ದರು.[9] ಒಟ್ಟಿನಲ್ಲಿ ಸಂಖ್ಯೆಯ ಏರುಪೇರಾಟಕ್ಕೆ ಇದು ಉತ್ತಮ ಉದಾಹರಣೆಯೆನಿಸುತ್ತದೆ.

ಏಕಾಮ್ರನಾಥನ 'ಪ್ರತಾಪರುದ್ರ ಚರಿತ್ರಮು' ಎಂಬ ಪ್ರಕಟಿತ ತೆಲುಗು ಕೃತಿಯ ಪ್ರಕಾರ, ಪ್ರತಾಪ

---

6 Dr. V. Yashoda Devi : *After the Kakatiyas*, Hyderabad, 1975, pp. 3-5 : *Traditional Accounts–Mackenzie Manuscripts*, 13-4-30, pp. 54–60 : C. P. Brown : *Local Records*, Vol. XIX, p. 81

7 ಕಾಕತೀಯ ಚರಿತ್ರ (ತೆಲುಗು), ಹೈದರಾಬಾದ್, ೧೯೭ , ಪು. ೬೧

8 ಬಿ. ರಾಮಚಂದ್ರರಾವ್ (ಅನು.) : ಪಲನಾಡ ವೀರಚರಿತ್ರೆ, ಬೆಂಗಳೂರು, ೧೯೮೧, ಪು. ೨, ೩

9 N. G. Ranga : *Kakatiya Nayaks-Their Contribution to Dakshinapath's Independence* (1300-1370 A. D.), Nidubrolu (A. P.), 1971, pp. 20, 141

ರುದ್ರನು ಪದ್ಮನಾಯಕರನ್ನು ಕರೆಯಿಸಿ, ಸನ್ಮಾನಿಸಿ ಅವರಲ್ಲಿ ನಾಯಕತ್ವಕ್ಕೆ ಅರ್ಹ ಏರ್ಪಡಿಸಿ, ಒಂದೊಂದು ಕೊತ್ತಳದಲ್ಲಿ ಒಬ್ಬೊಬ್ಬರನ್ನು ಸರ್ವಲಕ್ಷಣ ಸಂಪನ್ನ ಭರಿತರನ್ನಾಗಿ ಮಾಡಿ, ಅವರಿಗೆ ಧನಕನಕ ವಾಹನಗಳು, ಚೀನಾವಸ್ತ್ರಾಲಂಕಾರಗಳು, ಛತ್ರ–ಚಾಮರಗಳು ಮತ್ತು ಬಿರುದುಗಳನ್ನು ಕೊಟ್ಟನು. ೭೭ ಗೋತ್ರಗಳಿಗೆ ೭೭ ಜನರನ್ನು ಬಹುಮಾನಿಸಿ ಏಕಶಿಲಾನಗರಕ್ಕೆ ಕಲ್ಲಿನ ಪ್ರಾಕಾರದಲ್ಲಿ ೭೭ ಕೊತ್ತಳಗಳು ಇರುವಂತೆ ಮಾಡಿ, ೭೭ ಜನ ನಾಯಕರನ್ನು ತನ್ನ ರಾಜ್ಯದಲ್ಲಿ ಒಂದೊಂದು ಭಾಗದಲ್ಲಿ ಹಂಚಿದನು.[10] ಈ ಚರಿತ್ರೆಯು ಮುಂದು ವರೆದು, ಈ ಪದ್ಮನಾಯಕರು ನಾಲ್ಕನೆಯ ಜಾತಿಯಾಗಿ ಬೆಳಗುತ್ತಿದ್ದರೆಂದೂ ಇಂದ್ರನಗರಿಗೆ ಸಮಾನವಾದಂತಹ ಏಕಶಿಲಾನಗರಕ್ಕೆ ಅಧೀಶ್ವರರಾದಂತಹ ಕಾಕತೀಯ ರುದ್ರನನ್ನು ಓಲೈಸುವ ನಾನಾ ದೇಶಾಧೀಶರ ಸಂಖ್ಯೆ ಗಳಲ್ಲಿ ೭೭ ಪದ್ಮನಾಯಕರೂ ಇದ್ದರೆಂದೂ ತಿಳಿಸು ತ್ತದೆ.[11]

ಪ್ರತಾಪರುದ್ರನ ತರುವಾಯ ಕಾಕತೀಯ ಸಿಂಹಾಸನವನ್ನೇರಿದವನು ಪ್ರೋಲಯನಾಯಕ. ಈತನು ಮಹಮ್ಮದೀಯರ ವಶಕ್ಕೆ ಸೇರಿ ಹೋಗಿದ್ದ ನಾಡನ್ನು ಮತ್ತೆ ಸಾಧಿಸಿ ಸಾಮ್ರಾಜ್ಯದ ಗಡಿಗಳನ್ನು ಪುನರ್ ಸಂಘಟಿಸಿದವನೆಂದು ವರ್ಣಿತನಾಗಿದ್ದಾನೆ. ಇವನ ನಂತರ ಸಾಮ್ರಾಜ್ಯದ ರಾಜಕೀಯ ಅಧಿಕಾರವು ಕಾಪಯ ನಾಯಕನಿಗೆ ವರ್ಗಾವಣೆಯಾಯಿತು. ಗಮನಾರ್ಹ ಅಂಶವೆಂದರೆ, ಈ ನಾಯಕನ ಅವಧಿಯ ಕಲುವುಚೇರು (ಆರ್ಯಾವಟಮ್) ತಾಮ್ರಪಟ ಶಾಸನವು (ಸಂಸ್ಕೃತ : ಕ್ರಿ. ಶ. ೧೪೨೩) ತಿಳಿಸುವಂತೆ, ಈತನು ತನ್ನ ೭೫ ಮಂದಿ ನಾಯಕರಿಂದ ಸೇವಿಸಲ್ಪಟ್ಟವನಾಗಿ ರಾಜ್ಯಭಾರ ನಿರ್ವಹಿಸಿದನು.[12] ಈತನ ಮರಣಾನಂತರ ಈ ೭೫ ನಾಯಕರು ತಮ್ಮ ತಮ್ಮ ಪ್ರಾಂತ್ಯಗಳ ಸಹಿತ ಸ್ವತಂತ್ರ ರಾದರು.

ಪ್ರತಾಪರುದ್ರನು ಕಾಕತೀಯ ಸಾಮ್ರಾಜ್ಯವನ್ನು ತನ್ನ ೭೭ ನಾಯಕರಿಗೆ ವಿಭಾಗಿಸಿಕೊಟ್ಟು ಆಡಳಿತ ಸುಧಾರಣೆಗೆ ಶ್ರಮಿಸಿದ ನಂತರ, ಈ 'ನಾಯಂಕರ' ವ್ಯವಸ್ಥೆಯನ್ನೇ ವಿಜಯನಗರದವರು ಅನುಸರಿಸಿದ ರೆಂಬುದು[13] ಪರಿಶೀಲನಾರ್ಹ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಹಿನ್ನೆಲೆಯಲ್ಲಿ ಪ್ರಧಾನ ಪಾತ್ರವಹಿಸಿದವ ರೆಂದು ಭಾವಿಸಲಾದ ವಿದ್ಯಾರಣ್ಯರೇ ಸ್ವತಃ ತಮ್ಮ 'ರಾಜಕಾಲ ನಿರ್ಣಯ' ಮತ್ತು 'ವಿದ್ಯಾರಣ್ಯ ಕಾಲ ಜ್ಞಾನ'ಗಳಲ್ಲಿ ಹೇಳಿರುವಂತೆ, ಸಾಮ್ರಾಜ್ಯದ ಸ್ಥಾಪನೆಯ ಮುನ್ನ ಹರಿಹರ ಮತ್ತು ಬುಕ್ಕ–ಈ ಇಬ್ಬರು ಸಹೋ ದರರೂ ಇಮ್ಮಡಿ ಪ್ರತಾಪರುದ್ರನ ಬಳಿ ಅವನ ಖಜಾನೆಯ ಅಧಿಕಾರಿಗಳಾಗಿದ್ದರೆಂಬುದು ಇಂತಹ ಹೇಳಿಕೆಗೆ ಕಾರಣವಿರಬಹುದು. ಆದರೆ ವಿಜಯನಗರವು ಅಳವಡಿಸಿಕೊಂಡ ಅಥವಾ ಮುಂದುವರೆಸಿದ ಈ ೭೭ ನಾಯಕರನ್ನು ಕುರಿತ ವೃತ್ತಾಂತವು ಅಷ್ಟು ಸ್ಪಷ್ಟವಾಗಿಲ್ಲ ವಾದರೂ ವಾರಂಗಲ್ಲು ರಾಜಧಾನಿಯು ಮುಸ್ಲಿಮರ ದಾಳಿಗೆ ಸಿಲುಕಿ ನಲುಗಿಹೋದಾಗ, ಕಾಕತೀಯ ನಾಯಂ ಕರ ಒಕ್ಕೂಟದ ನಾಯಕರನೇಕರು ವಿಜಯನಗರದ

---

10 ಡಾ॥ ಸಿ. ವಿ. ರಾಮಚಂದ್ರರಾವು (ಸಂ.) : ಏಕಾಮ್ರನಾಥುನಿ ಪ್ರತಾಪರುದ್ರ ಚರಿತ್ರಮು, ಹೈದರಾಬಾದ್, ೧೯೮೪, ಪು. ೪೦ ; ಈ ಚರಿತ್ರೆಯು ೧೯೬೯ರಲ್ಲಿ ಅಚ್ಚುಗೊಂಡ ಇದೇ ಪಾಠವನ್ನೊಳಗೊಂಡ ಮುದ್ರಿತಪ್ರತಿಯನ್ನಾಧರಿಸಿ ಪ್ರಕಟಗೊಂಡಿದೆ. ಈ ಗ್ರಂಥದ ಸಂಪಾದಕರು ಆ ಮುದ್ರಿತ ಪ್ರತಿಯನ್ನೆ ಮೂಲಪ್ರತಿ (Vulgate) ಎಂದು ಗ್ರಹಿಸಿರು ವುದಾಗಿ ತಮ್ಮ ಪೀಠಿಕೆಯಲ್ಲಿ (ಪು. ೨೫) ಪ್ರಸ್ತಾಪಿಸಿರುವರು.

11 ಅದೇ, ಪು. ೪೩–೪೪

12 "ಅಥ ಪಂಚೋತ್ತರ ಸಪ್ತತಿ ನಾಯಕ ಸಂಸೇವ್ಯಮಾನ್ ಪದಪಜ್ಞಃ" : Journal of the Telugu Academy, Vol. 1, No. 2 ; M. Somashekhara Sarma : *Kapaya Nayaka,* Journal of the Andhra Historical Research Society, Vol. V, Part 4, April 1931, p. 217 ; Anitalli Bharati, Vol. 21, No. 6, p. 553

13 S. K. Sinha : *Mediaeval History of the Deccan,* Vol. I (Bahmanids), Hyderabad, 1964, p. 24

ರಕ್ಷಣೆಯಡಿಯಲ್ಲಿ ಬಂದರೆನ್ನುವುದು[14] ನಮ್ಮ ಗಮನ ಸೆಳೆಯುತ್ತದೆ. ಈ ಒಕ್ಕೂಟದ ಕಮ್ಮ, ರೆಡ್ಡಿ, ಬೋಯ ಮತ್ತು ಬಲಿಜ ವರ್ಗಗಳ ನಾಯಕರು ತಮ್ಮ ಸಂಗಡಿಗರು ಮತ್ತು ಬಂಧುಗಳೇ ಆಗಿದ್ದ ವಿಜಯನಗರದ ಅರಸರ ಅಧೀನದ ನಾಯಂಕರ ವ್ಯವಸ್ಥೆಯನ್ನು ಒಪ್ಪಿಕೊಂಡರಲ್ಲದೆ, ಹಂಪೆ-ವಿಜಯನಗರದ ಪುರ ಮತ್ತು ಕೋಟೆಗಳ ನಿರ್ಮಾಣದಲ್ಲಿ ತಮ್ಮ ಸಹಕಾರವನ್ನು ನೀಡಿದರು.[15] ಇದರಿಂದ ತೆಲುಗು ಪ್ರದೇಶ ಮಾತ್ರವಲ್ಲದೆ ತಮಿಳುನಾಡು, ಕರ್ನಾಟಕದ ಕೋಲಾರ ಮತ್ತು ಇತರ ಪ್ರದೇಶಗಳು ವಿಜಯನಗರದ ಆಧಿಪತ್ಯಕ್ಕೆ ಒಳಪಟ್ಟು ವಿಶಾಲವಾದ ಸಾಮ್ರಾಜ್ಯವು ನಿರ್ಮಾಣಗೊಂಡಿತು.

ಅನ್ಯಮೂಲಗಳು ತಿಳಿಸುವಂತೆ, ಕ್ರಿ. ಶ. ೧೬೩೪-೩೮ ರ ಅವಧಿಯಲ್ಲಿ ವಿಜಯನಗರವು ಕನ್ನಡ, ತೆಲುಗು ಮತ್ತು ತಮಿಳು ರಾಜ್ಯಗಳಲ್ಲಿ ಕೆಲವು ಭಾಗಗಳನ್ನು ಇನ್ನೂ ತನ್ನ ವಶದಲ್ಲಿ ಇರಿಸಿಕೊಂಡಿದ್ದಿತಲ್ಲದೆ, ತೆಲುಗು ಮೂಲದಿಂದ ತಿಳಿದು ಬರುವಂತೆ ಹಾಗೂ ರೂಢಗತವಾಗಿ ಬಂದ ವೃತ್ತಾಂತದಂತೆ, ಅದು ೭೭ ನಾಯಕರ ಅಥವಾ ಪಾಳೆಯಗಾರರ ('ಡಬ್ಬೈಯೇಡು ಪಾಳೆಯಗಾರಲು') ಮಧ್ಯೆ ಹಂಚಿ ಹೋಗಿದ್ದಿತು.[16] ಇವುಗಳಲ್ಲಿ ಕನ್ನಡ ಪ್ರದೇಶದಲ್ಲಿ ಪ್ರಬಲವಾಗಿದ್ದ ಸಂಸ್ಥಾನವೆಂದರೆ ಕೆಳದಿ. ಇಕ್ಕೇರಿ ಇದರ ಆಗಿನ ರಾಜಧಾನಿ, ವಿಶಾಲವಾದ ಭೂಪ್ರದೇಶವನ್ನು ಇದು ಹೊಂದಿದ್ದಿತು. ಚಿತ್ರದುರ್ಗ, ಸಂತೆಬೆನ್ನೂರು(ತರೀಕೆರೆ)ಗಳು ಈ ಭಾಗದ ಇನ್ನೆರಡು ಪ್ರಮುಖ ಸಂಸ್ಥಾನಗಳು. ಮೈಸೂರು, ಹೊಳೆನರಸೀಪುರ, ಪಿರಿಯಾಪಟ್ಟಣಗಳು ಸಹ ಸಾಕಷ್ಟು ವಿಸ್ತಾರದ ಭೂಪ್ರದೇಶವನ್ನು ಒಳಗೊಂಡಿದ್ದವು.[17] ಏನೇ ಇದ್ದರೂ ಅಂದಿನ ಹಾಗೂ ಇಂದಿನ ಕರ್ನಾಟಕದ ರಾಜಕೀಯ ಭೂವ್ಯಾಪ್ತಿಯ ಮಟ್ಟಿಗೆ, ಇಲ್ಲಿ ಆಳ್ವಿಕೆ ನಡೆಸಿದ ನಾಯಕರ ಅಥವಾ ಪಾಳೆಯಗಾರರ ಒಟ್ಟು ಸಂಖ್ಯೆ ೭೭, ೭೫ ಅಥವಾ ೫೭ ಇದ್ದಿತೇ ಎಂಬುದು ಖಚಿತಪಡುವುದಿಲ್ಲ.

ವಿಜಯನಗರದ ಪತನಾನಂತರ ಪೆನುಗೊಂಡೆಯಿಂದ ಆಳುತ್ತಲಿದ್ದ ಒಂದನೆಯ ವೆಂಕಟಪತಿರಾಯನು (ಕ್ರಿ. ಶ. ೧೫೮೬-೧೬೧೪) ಸಹ ೭೭ ಜನ ಪಾಳೆಯಗಾರರ ನೆರವಿನೊಡನೆ ಆಡಳಿತ ನಡೆಸುತ್ತಿದ್ದನೆಂದೂ ಈ ಪಾಳೆಯಗಾರರು ಕಪ್ಪ - ಕಾಣಿಕೆಗಳನ್ನು ಒಪ್ಪಿಸುತ್ತಾ ಪರ್ವಕ್ಕೊಮ್ಮೆ ವೆಂಕಟಪತಿರಾಯನ ದರ್ಶನಕ್ಕೆ ಹೋಗಿ ಮುಜರೆ ವಗೈರೆ ಮಾಡುವ ಪದ್ಧತಿಯಿದ್ದಿತೆಂದೂ ಇವರಲ್ಲಿ ಮಹಾನಾಡ ಪ್ರಭುವಾಗಿದ್ದ ಇಮ್ಮಡಿ ಚಿಕ್ಕಪ್ಪಗೌಡ(ಚಿಕ್ಕಭೂಪಾಲ)ನು ಒಬ್ಬನಾಗಿದ್ದನೆಂದೂ ವ್ಯಕ್ತಪಡುವುದು.[18] ವೆಂಕಟಪತಿರಾಯನ ಅಧೀನದ ೭೭ ಜನ ಪಾಳೆಯಗಾರರಲ್ಲಿ ಒಬ್ಬನಾಗಿದ್ದ ಈ ಚಿಕ್ಕಪ್ಪಗೌಡನು ತನ್ನ ರಾಜ್ಯವನ್ನು ಕೋಟೆ - ಕೊತ್ತಳಗಳಿಂದ ಸುಭದ್ರಗೊಳಿಸುತ್ತಿದ್ದುದು ವೆಂಕಟಪತಿರಾಯನಲ್ಲಿ ತಪ್ಪುಭಾವನೆ ಮೂಡಿಸಿದ್ದಿತೆಂಬುದನ್ನು ಮಧುಗಿರಿಯ ಚರಿತ್ರೆಯಲ್ಲಿ ಉಕ್ತವಾದ ಘಟನೆಗಳ ಚಿತ್ರಣದ ಹಿನ್ನೆಲೆಯಲ್ಲಿ ಸಮರ್ಥಿಸಲಾಗಿದೆ.[19] ಆದರೆ 'ಆರ್ಕಾಡ ಸಂಸ್ಥಾನದ ಕೈಫೀಯತು' ತಿಳಿಸುವಂತೆ, ವೆಂಕಟಪತಿರಾಯನ ಅಧೀನದಲ್ಲಿ ಇದ್ದವರು ೭೨ ಜನ ಪಾಳೆಯಗಾರರು ಮಾತ್ರ.[20]

---

14 *Kakatiya Nayaks-Their Contribution to Dakshinapath's Independence* (1300-1370 A. D.), p. 108

15 Ibid.

16 M. H. Rama Sharma : *The History of the Vijayanagara Empire-Decline and Disappearance, 1569-1679* (Edited by M. H. Gopal), Vol. II, Bombay, 1980. p. 205; ಈ ಲೇಖಕರು 'ಡಬ್ಬೈಯೇಡು ಪಾಳೆಯಗಾರಲು' ಎಂಬ ಪ್ರಯೋಗಕ್ಕೆ 'ಐವತ್ತೇಳು ಪಾಳೆಯಗಾರರು' ಎಂದು ತಪ್ಪು ವಿವರಣೆ ನೀಡಿದ್ದಾರೆ.

17 Ibid., p. 206

18 ಕೆ. ನಾರಾಯಣಾಚಾರ್ಯ : ಮಧುಗಿರಿ ಚರಿತ್ರೆ, ಮಧುಗಿರಿ, ೧೯೪೫, ಪು. ೨೫

19 ನೋಡಿ : ಎಂ. ಎಂ. ಕಲಬುರ್ಗಿ, ಬಿ. ಆರ್. ಹಿರೇಮಠ (ಸಂ.) : ಕವಿ ಮಲ್ಲಿಕಾರ್ಜುನ ಕೃತ ಮಹಾನಾಡಪ್ರಭು ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ಧಾರವಾಡ, ೧೯೭೭ : ಪೀಠಿಕೆ, ಪು. X

20 ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೯-೨, ಜುಲೈ ೧೯೨೪, ಪು. ೧೩೩

ಗುಮ್ಮನಾಯಕನಪಾಳ್ಯವು ವಿಜಯನಗರ ಪೂರ್ವದಲ್ಲೆ (ಕ್ರಿ. ಶ. ೧೨೪೨) ಇದ್ದ ಪ್ರಮುಖ ಪಾಳೆಯಪಟ್ಟುಗಳಲ್ಲಿ ಒಂದು. ಈ ಸಂಸ್ಥಾನಕ್ಕೆ ಸೇರಿದ ನಾಯಕ ಸಹೋದರರ ವಂಶೀಕರಲ್ಲಿ ಮೂರನೆಯ ದೊರೆಯಾದ ಚಿನ್ನಮ್ಮನಾಯಕನು ಮೊದಲಿಗೆ ರಾಜ್ಯಭಾರಕ್ರಮಗಳನ್ನು ಏರ್ಪಡಿಸಿದವನೆಂಬ ಪ್ರಶಂಸೆಗೆ ಪಾತ್ರನಾಗಿದ್ದಾನೆ ; ಹಲವಾರು ಬಿರುದುಗಳಿಗೂ ಅರ್ಹನೆನಿಸಿದ್ದಾನೆ. ಈತನನ್ನು ಕುರಿತ ತೆಲುಗು ಸೀಸಪದ್ಯವೊಂದು "ಪರಡೆಬ್ಬದಿಯೇನು ಪಾಳ್ಯೆಲಲೋಪಲ ಪೆದ್ದಯ್ಯೆ ಚೆನ್ನೊಂದಿ ಪೇರ್ಮಿ ಮೆರಸಿ ।...." ಅಂದರೆ ೭೭ ಮಂದಿ ಪಾಳೆಯಗಾರರಲ್ಲಿ ಪ್ರಮುಖನೆನಿಸಿಕೊಂಡಿದ್ದವನೆಂಬುದನ್ನು ಪ್ರಸ್ತಾಪಿಸುತ್ತದೆ.[21]

ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕಿನ ಇಂದಿನ ಶ್ರೀರಾಮಪುರ(ಬೂದಿಹಾಳು)ವನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ನಡೆಸಿದ ಗೊಲ್ಲ ಸಿರುಮಣನಾಯಕನು (೧೬ನೆಯ ಶತಮಾನ), ಪೆನುಗೊಂಡೆಯಿಂದ ರಾಜ್ಯವನ್ನಾಳುತ್ತಿದ್ದ ವಿಜಯನಗರಕ್ಕೆ ಸೇರಿದ ಸಾಳುವ ನರಸಿಂಹನ ಸಮಕಾಲೀನನು. ಇವರೀರ್ವರ ಮಧ್ಯೆ ಪ್ರಾಂತೀಯ ಯುದ್ಧಸಂಘರ್ಷ ಏರ್ಪಟ್ಟು, ನರಸಿಂಹನ ವಿರುದ್ಧ ನಡೆಸಿದ ಹೋರಾಟದಲ್ಲಿ ಸಿರುಮಣನು ತನ್ನ ಪರಾಕ್ರಮವನ್ನು ಮೆರೆದನೆಂದು ಕಾವ್ಯದಲ್ಲಿ ವರ್ಣಿಸಲಾಗಿದೆ. ಇವನನ್ನು ಎದುರಿಸಲು ಸನ್ನದ್ಧನಾದ ನರಸಿಂಹನು ತನ್ನ ಬಲದೀದ "ಎಪ್ಪತ್ತೇಳು ಕೋಟದ ಬೇಡರನ್ನೆಲ್ಲ ದರ್ಪಗೆಡಿಸಿ ಸೂರೆಮಾಡಿ ಕಪ್ಪಕಾಣಿಕೆ, ಕೈಸೆರೆಗಳ ತಕ್ಕೊಂಡು ಉಪ್ಪರದಲಿ ನಡೆತಂದ"ನಂತೆ.[22]

ಕರ್ನಾಟಕದ ನಾಯಕ ಅರಸರಲ್ಲಿ ಅಗ್ರಗಣ್ಯಸ್ಥಾನದಲ್ಲಿರುವವರು ಚಿತ್ರದುರ್ಗದ ನಾಯಕರು. ಇವರಲ್ಲೆಲ್ಲ ಅತ್ಯಂತ ಪ್ರಸಿದ್ಧನಾದವನೆಂದರೆ ಸಂಸ್ಥಾನದ ಕೊನೆಯ ಅರಸ ರಾಜಾವೀರ ಮದಕರಿನಾಯಕ (ಕ್ರಿ. ಶ. ೧೭೫೪-೧೭೭೯). ಈ ದೊರೆಯುನ್ನು ಕುರಿತು ಚಂದ್ರಭೀಮನೆಂಬವನು ತಾನು ರಚಿಸಿದ ದಂಡಕದಲ್ಲಿ, "ಗೋಲಕೊಂಡೆ । ವಿಜಾಪುರ । ಕಲ್ಯಾಣ । ಕಲ್ಬುರ್ಗಿ । ಸವಣೂರು । ಗದ್ವಾಲ । ಕರ್ನೂಲು । ಶ್ರೀರಂಗಪಟ್ಣಂಬು ಮೊದಲೈನ ಡಬ್ಬೈಯೇಡಿಂಟಿ ಪಾಳ್ಯಂಬುನಾ* ನೀದೇ ಪೇರಯ್ಯ" ಎಂದು ಹೊಗಳಿರುವನು.[23] ತನ್ನ ಸಮಕಾಲೀನ ೭೭ ಪಾಳೆಯಪಟ್ಟುಗಳೆಲ್ಲೆಲ್ಲ ಈ ದೊರೆಯು ಕೀರ್ತಿವಂತನಾಗಿದ್ದನಂತೆ. ಈ ನಾಯಕನನ್ನು ಕುರಿತ ಜನಪದಗೀತೆಯೊಂದರಲ್ಲಿ ಬರುವ 'ಎಪ್ಪತ್ತೇಳು ಪಾಳೆಯಗಾರರ ಮಿಂಡ' ಎಂಬ ಪ್ರಯೋಗವೂ ಗಮನೀಯ.[24] ಇವುಗಳೊಡನೆ, 'ಎಪ್ಪತ್ತೇಳು ಗಿರಿದುರ್ಗಗಳ ಪೈಕಿ

---

21 ಡಾ॥ ಎಂ. ವಿ. ಕೃಷ್ಣರಾವ್ : ಬೆಂಗಳೂರು ಕೆಂಪೇಗೌಡ, ಬೆಂಗಳೂರು, ೧೯೬೪, ಪು. ೧೩೫-೧೩೬ : ಅನುಬಂಧ ೧ ; ಈ ಲೇಖಕರು ಈ ಸಾಲನ್ನು '೭೫ ಮಂದಿ ಪಾಳೆಯಗಾರರಲ್ಲಿ ಪ್ರಮುಖನೆನ್ನಿಸಿಕೊಂಡು' ಎಂದು ಅನುವಾದಿಸಿರುವರು. ಇಲ್ಲಿ ಆಡುನುಡಿಯಾಗಿ ಬಂದಿರುವ 'ಡೆಬ್ಬದಿಯೇನು' ಎಂದರೆ ೭೭ ; ೭೫ ಅಲ್ಲ.

22 ಡಾ॥ ಎಂ. ಎಂ. ಕಲಬುರ್ಗಿ (ಸಂ.) : ಸಿರುಮಣನಾಯಕನ ಸಾಂಗತ್ಯ (ಸಿದ್ಧಕವಿ), ಗದಗ, ೧೯೮೩ : ಸಂಧಿ ೧, ಪದ್ಯ ೬೦, ಪು. ೮

* – ಎಪ್ಪತ್ತೇಳು ಪಾಳೆಯಗಳಲ್ಲಿ

23 ಹುಲ್ಲೂರು ಶ್ರೀನಿವಾಸ ಜೋಯಿಸ (ಸಂ.) : ಮದಕರಿರಾಜೇಂದ್ರ ದಂಡಕ, ಶರಣ ಸಾಹಿತ್ಯ, ೫-೭, ೮, ಸೆಪ್ಟೆಂಬರ್-ಅಕ್ಟೋಬರ್ ೧೯೪೨, ಪು. ೨೪೭

24 ದಿವಂಗತ ಸಿ. ಪರಶುರಾಮನಾಯಕ, ಭದ್ರಾವತಿ ಅವರಿಂದ ಸಂಗ್ರಹಿಸಲಾದ ಜನಪದಗೀತೆ ; ರಾಜಾವೀರ ಮದಕರಿನಾಯಕನ ಸಾಮರ್ಥ್ಯವನ್ನು ಗುರುತಿಸುವಲ್ಲಿ ಈ 'ಬಿರುದು' ಬಳಸಲ್ಪಡುತ್ತಿದ್ದಿತೆಂಬುದನ್ನು ಈ ಅರಸು ಮನೆತನದವರು ಇಂದಿಗೂ ತಮ್ಮ ನೆನಪಿನಲ್ಲಿಟ್ಟುಕೊಂಡಿರುವರೆಂಬ ಸಂಗತಿಯನ್ನು ನನ್ನ ಗಮನಕ್ಕೆ ತರುವುದರೊಡನೆ ಜನಪದಗೀತೆಯ ಅಂಶವನ್ನು ಸಮರ್ಥಿಸಿದವರು ಚಿತ್ರದುರ್ಗ ಸಂಸ್ಥಾನದ ಅರಸು ಮನೆತನದ ಖಾಸಾ ವಂಶಸ್ಥರೂ ಮೈಸೂರು ಸ್ಟೇಟ್ ಪಾಳೇಗಾರರ ಅಸೋಸಿಯೇಷನ್‌ನ ನಿರ್ದೇಶಕರಲ್ಲೊಬ್ಬರೂ ಆಗಿರುವ ಚಳ್ಳಕೆರೆಯ ಪಿ. ಆರ್. ವೀರಭದ್ರನಾಯಕ ಅವರು.

ಹಿರೆದುರ್ಗ ಚಿನ್ಮೂಲಾದ್ರಿಗಿರಿ ಸಂಸ್ಥಾನ'ವೆಂತಲೂ ಚಿತ್ರದುರ್ಗ ಸಂಸ್ಥಾನದ ದೇವರುಗಳಿಗೆ 'ಎಪ್ಪತ್ತೇಳು ಬಿರುದು'ಗಳನ್ನು ಹಿಡಿಯಲಾಗುತ್ತದೆಂತಲೂ ಕೆಲವು ಸಾರ್ವಜನಿಕ ಪ್ರಕಟಣೆಗಳಲ್ಲಿಯೂ ಈ ಆಶಯಕ್ಕೆ ಹೆಚ್ಚಿನ ಪ್ರಚಾರ ಕೊಟ್ಟಿರುವುದುಂಟು.[25]

ಬೆಂಗಳೂರು – ಮಾಗಡಿ ಪ್ರಾಂತ್ಯವನ್ನಾಳಿದ ವಿಜಯನಗರ ಕಾಲದ ಸಂಸ್ಥಾನಿಕರಲ್ಲಿ ಯಲಹಂಕ ನಾಡ ಪ್ರಭುಗಳು ಅಥವಾ ಕೆಂಪೇಗೌಡ ಮನೆತನದವರು ಮುಖ್ಯರೆನಿಸಿರುವರು. ಮಾಗಡಿ ಕೆಂಪೇಗೌಡನು[26] ತನ್ನ ದಂಡಯಾತ್ರೆಯಲ್ಲಿ ತನ್ನ ಸಂಗಡ 'ಎಪ್ಪತ್ತುಏಳು ಮಂದಿ ಗೌಡಳಿಕೆ' (ಪಾಠಾಂ.—'ಅರವತ್ತುಆರು ಜನ ಗೌಡಾಳಿಕೆ') ಸಹಿತ 'ಎಪ್ಪತ್ತುಏಳು ಜನ ಪಾಳೆಗಾರ್‍ರ ಕಟು ಕೊಂಡು' ಹಲಸೂರಿಗೆ ಬಂದನೆಂದೂ ಅವನ ಸಂಗಡ ಇದ್ದವರಲ್ಲಿ ಕುಣಿಗಲ್ಲೂರು ತಿಮ್ಮನಾಯಕ, ಗುಬ್ಬಿ ಹೊನ್ನಪ್ಪನಾಯಕ, ರಾಮಗಿರಿಯ ನಾಯಕ, ರತ್ನಗಿರಿಯ ನಾಯಕ, ಹಾಗಲ್ವಾಡಿಯ ಮುದಿಯನಾಯಕ, ಅಜ್ಜಂಪುರದ ಸಣ್ಣನಾಮದ ನಾಯಕ—ಇಂತಹ ೭೭ ಪಾಳೆಯಗಾರರು ಇದ್ದರೆಂದೂ ಜನಪದರು ಹಾಡಿದ್ದಾರೆ.[27]

ವಾಸ್ತವವಾಗಿ, ವಿಜಯನಗರದ ಅವಧಿಯಲ್ಲಿದ್ದ ನಾಯಕರು ಅಥವಾ ಪಾಳೆಯಗಾರರ ಸಂಖ್ಯೆ ಎಷ್ಟು ? ವಿಜಯನಗರದ ಅಥವಾ ಕರ್ಣಾಟಕ ಸಿಂಹಾಸನಕ್ಕೆ ಸಾಮಂತರಾಗಿದ್ದುಕೊಂಡು ತಮ್ಮ ತಮ್ಮ ಪ್ರಾಂತ್ಯಗಳಲ್ಲಿ ಆಳ್ವಿಕೆ ನಡೆಸಿದವರು ಹಾಗೂ ಕ್ರಿ. ಶ. ೧೫೬೫ರಲ್ಲಿ ನಡೆದ ರಕ್ಕಸಗಿ–ತಂಗಡಗಿ ನಿರ್ಣಾಯಕ ಯುದ್ಧದಲ್ಲಿ ಭಾಗವಹಿಸಿ ಆ ಸಿಂಹಾಸನದ ಪರವಾಗಿ ಹೋರಾಡಿದವರು ೭೭ ವಂಶದ ನಾಯಕರು ಮತ್ತು ಅನುಯಾಯಿಗಳೆಂದು ತಿಳಿಸಲಾಗಿದ್ದು,[28] ಆ ಸಂಸ್ಥಾನಿಕರ ಹೆಸರುಗಳನ್ನು ಈ ಮುಂದಿನಂತೆ ಕೊಡಲಾಗಿದೆ : ಆನೆಗೊಂದಿ, ಚಿತ್ರದುರ್ಗ, ರತ್ನಗಿರಿ, ನಿಡುಗಲ್ಲು, ಶಿರಾ, ಬಳ್ಳಾರಿ, ಸ್ವಾದಿ, ಮೊಳಕಾಲ್ಮೂರು, ರಾಯದುರ್ಗ, ಪೆನುಗೊಂಡ, ಮದಮಸೂರ, ಇಕ್ಕೇರಿ, ಚಂದಾವರ, ಕೊಲ್ಲಾಪುರ, ಬಿದನೂರು, ಮಂಡೀಕೋಟೆ, ಬಂಕಾಪುರ, ನಂದಿಯಾಳ, ದೇವನಹಳ್ಳಿ, ಹರದನಹಳ್ಳಿ, ಪುರವರ, ಮಿಡಿಗೇಶಿ, ಮುಟ್ಟಿ, ಬೆಳಗುತ್ತಿ, ಕಡಪೆ, ಕಿತ್ತೂರು, ತಲಚೇರಿ, ತಂಜಾವೂರು, ಸುರಪುರ, ಹಾಗಲವಾಡಿ, ಮಂಗಳೂರು, ಬಸವಾಪಟ್ಟಣ, ಬೇಲೂರು, ಬಾದಾಮಿ, ದೊರೆಮಲೆ, ಜರಿಮಲೆ, ಗುಡೇಕೋಟೆ, ಗೋವನೂರು, ನನ್ನಿವಾಳ, ಹರತಿಕೋಟೆ, ಐಮಂಗಲ, ತರೀಕೆರೆ,

---

25 ಪ್ರಕಟಣ ಪತ್ರಿಕೆಗಳು : ೧. ಶ್ರೀ ಸಾರ್ವಾಡಸ್ವಾಮಿಗಳವರ ಪುತ್ರ ಶ್ರೀ ಸಾರ್ವಾಡ ತಿಪ್ಪೇಸ್ವಾಮಿ('ಚಿನ್ಮೂಲಾದ್ರಿಗಿರಿ ಸಂಸ್ಥಾನ ರಾಜಗುರು')ಯವರ ಸನ್ನಿಧಾನದಿಂದ ಹೊರಡಿಸಲಾದ ಹಾಗೂ 'ಚಲವಾದಿ ಮತದ ಏಳು ಅಮಾಸೆ ನೂರಾಒಂದು ಮಂದಲವರಿಗೂ ಮತ್ತು ಇತರೆ ಗುಡಿಕಟ್ಟೆ ಮನೆಗಳಿಗೆ ಸೇರಿದ ಮಾತಾಭಿಮಾನಿಗಳಿಗೂ' ಕರೆಕೊಟ್ಟಿರುವ ಪ್ರಕಟಣೆ ; ೨. ಶ್ರೀ ಸಾರ್ವಾಡ ತಿಪ್ಪೇಸ್ವಾಮಿ ಮತ್ತು ಚಿತ್ರದುರ್ಗ ಸಂಸ್ಥಾನದ ರಾಜ ಜಿ. ಎಸ್. ಪಾಳೆಯಗಾರರು ಸಂಯುಕ್ತವಾಗಿ ಹೊರಡಿಸಿದ 'ಶ್ರೀಮತ್ ದ್ಯಾವರಪ್ಪನ ಸಾಗಿಗೆ ಸೇರಿದ ಚಲವಾಧಿ ಮತದ ಕಟ್ಟೇಮನೆ ಯಜಮಾನರಿಗೂ ಮತ್ತು ಮಂದಲದವರಿಗೂ' ತಿಳಿಯಪಡಿಸಲಾದ ಪ್ರಕಟಣೆ (ತಾರೀಖು ೨–೨–೧೯೫೮). ಈ ಪ್ರಕಟಣೆಗಳನ್ನು ನನ್ನ ಗಮನಕ್ಕೆ ತಂದವರು ಚಿತ್ರದುರ್ಗದ ಒನಕೆಕಿಂಡಿ ಓಬಾಂಬೆಯ ವಂಶಸ್ಥರಾದ ದೊಡ್ಡಸಿದ್ದವ್ವನಹಳ್ಳಿ ಪ್ರೊ॥ ಎ. ಡಿ. ಕೃಷ್ಣಯ್ಯ, ಬೆಂಗಳೂರು ಅವರು.

26 ಈತನು ಎಷ್ಟನೆಯವನೆಂಬುದು ಸ್ಪಷ್ಟವಿಲ್ಲ. ಚರಿತ್ರೆಯಲ್ಲಿ ಕಂಡುಬರುವ ಮೂರು ಮಂದಿ ಕೆಂಪೇಗೌಡರ ಕಾಲಮಾನ ಇಂತಿದೆ : ೧ನೆಯ ಕೆಂಪೇಗೌಡ—ಕ್ರಿ. ಶ. ಸು. ೧೫೧೦–೧೫೭೦ ; ೨ನೆಯ ಕೆಂಪೇಗೌಡ—ಕ್ರಿ. ಶ. ಸು. ೧೫೮೫–೧೬೩೩ ಮತ್ತು ೩ನೆಯ ಕೆಂಪೇಗೌಡ—ಕ್ರಿ. ಶ. ೧೬೩೩–೧೬೭೮: ನೋಡಿ: Dr. Suryanath Kamath (C.Ed.): *Karnataka State Gazetteer - Bangalore Rural District*, Bangalore, 1989, pp. 69-71 .

27 ಬಿ. ಕೆ. ರಾಜಶೇಖರ ಮತ್ತು ಇತರರು (ಸಂ.) : ಮಾಗಡಿ ಕೆಂಪೇಗೌಡ (ಐತಿಹಾಸಿಕ ಜನಪದಗೀತೆಗಳ ಸಂಕಲನ), ಗುಡ್ಡೇನಹಳ್ಳಿ (ತುಮಕೂರು ಜಿಲ್ಲೆ), ೧೯೭೫, ಪು. ೯೩, ೧೦೮

28 ಹೆಚ್. ವಿ. ವೀರನಾಯಕ 'ಹರತಿ' : ಕ್ಷಾತ್ರಾಂಶ ಪ್ರಬೋಧ, ಹರತಿಕೋಟೆ (ಚಿತ್ರದುರ್ಗ ಜಿಲ್ಲೆ), ೧೯೮೭, ಪು . ೧೪; ಇದೇ ಪುಸ್ತಕದ ಪುಟ ೨೮ರಲ್ಲಿ, ನಾಯಕ ಜನಾಂಗದವರಿಂದ ಸ್ಥಾಪಿಸಲ್ಪಟ್ಟಿದ್ದ ಪಾಳೆಯಪಟ್ಟುಗಳ ಸಂಖ್ಯೆ ೭೬ ಎಂತಲೂ ಈ ಲೇಖಕರು ಸೂಚಿಸಿರುವರು.

ಪಾವಗಡ, ಶಿವರ, ಹೊಸಕೋಟೆ, ಕುಂದಾಪುರ, ಬಾಗೂರು, ಗುತ್ತಿ, ಚನ್ನಪಟ್ಟಣ, ಕಂಪಲಿ, ಮಲೇದುರ್ಗ, ಕನಕಗಿರಿ, ಗುಡಿಗುಂಟ, ಲೇಪಾಕ್ಷಿ, ಮಧುರೆ, ಆದವಾನಿ, ಚಂದ್ರಗಿರಿ, ಚಿಕ್ಕನಾಯಕನಹಳ್ಳಿ, ದೊಡ್ಡೇರಿ, ತಲಕಾಡು, ರಾಯಚೂರು, ಹದಿನಾಡು, ಯಳಂದೂರು, ಕಾರುಗಹಳ್ಳಿ, ಹುಳಿಯಾರು, ಕೊರಟಗಿ (ಕೊರಟಗೆರೆ ?), ಹೊನ್ನುಡುಕಿ, ಕರಜಗಿ, ಹರಪನಹಳ್ಳಿ, ಉಚ್ಚಂಗಿದುರ್ಗ, ಮತ್ತೋಡು ಮತ್ತು ನಾಯಕನಹಟ್ಟಿ.[29]

ಆದರೆ ಇವುಗಳೊಡನೆ ಸುಗಟೂರು, ಮಾಸ್ತಿ, ಹಿರಿಯೂರು, ಬೆಳವಡಿ, ರಾಮನಗರ (ರಾಮಗಿರಿ), ಗುಡಿಬಂಡೆ, ಆನೆಕಲ್ಲು, ಚಿಕ್ಕಬಳ್ಳಾಪುರ, ಮಾಗಡಿ, ಅಜ್ಜಂಪುರ, ಕುಣಿಗಲ್ಲು, ಗುಬ್ಬಿ, ಕಂಗುಂದಿ ಕುಪ್ಪಂ, ಕೆಂಚನಗುಡ್ಡ, ಗುಮ್ಮನಾಯಕನಪಾಳ್ಯ, ಬಾಗಲೂರು ಮುದಿಮಡಗು—ಇಂತಹ ಅಸಂಖ್ಯಾತ ಸಂಸ್ಥಾನಗಳನ್ನೂ ಗುರುತಿಸಬೇಕು.

ಇಲ್ಲಿಯ ಕೆಲವು ಸಂಸ್ಥಾನಗಳು ವಿಜಯನಗರೋತ್ತರ ಕಾಲದಲ್ಲಿ ಹುಟ್ಟಿಕೊಂಡಂತಹವೆಂಬುದನ್ನೂ ಇಲ್ಲಿ ಗಮನಿಸಬೇಕು. ಅಲ್ಲದೆ, ದಕ್ಷಿಣ ಭಾರತದಲ್ಲಿ ಅಸ್ತಿತ್ವದಲ್ಲಿದ್ದ ಎಲ್ಲ ಸಂಸ್ಥಾನಗಳನ್ನೂ ಮೇಲೆ ಕಾಣಿಸಿದ ಯಾದಿಯು ಒಳಗೊಂಡಿಲ್ಲವೆನ್ನುವುದು ಸ್ಪಷ್ಟ. ಪೆನುಗೊಂಡ, ಕಡಪೆ, ತಲಚೇರಿ, ತಂಜಾವೂರು, ಆದವಾನಿ, ಚಂದ್ರಗಿರಿ, ಗುಡಿಗುಂಟ, ಲೇಪಾಕ್ಷಿ, ಮಧುರೆ ಮೊದಲಾದ ದಕ್ಷಿಣ ಭಾರತದ ಪ್ರಮುಖ ಪ್ರಾಂತ್ಯಗಳ ಹೆಸರುಗಳು ಈ ಯಾದಿಯಲ್ಲಿ ಕಂಡುಬಂದರೂ ಇಲ್ಲಿಯ ಪ್ರತಿಯೊಂದು ಪ್ರಾಂತ್ಯದಲ್ಲೂ ಹಲವಾರು ಹೆಸರಾಂತ ಪಾಳೆಯಗಾರರು ತಮ್ಮ ಪ್ರಭುತ್ವವನ್ನು ಸ್ಥಾಪಿಸಿಕೊಂಡಿದ್ದರೆನ್ನುವುದಕ್ಕೆ ವಿಪುಲ ಮಾಹಿತಿ ಲಭ್ಯವಿದೆ. ಈ ಸಂಬಂಧದಲ್ಲಿ ಇಲ್ಲಿ ಪ್ರಸ್ತಾಪಿಸಬೇಕಾದ ಗಮನಾರ್ಹ ಅಂಶವೆಂದರೆ, ಹೈದರಾಬಾದಿನ ನಿಜಾಮ ಮತ್ತು ಇಂಗ್ಲಿಷರ ಮಧ್ಯೆ ಮರಾಠರ ದಾಳಿಯ ಭಯದ ಪರಿಣಾಮವಾಗಿ ಪರಸ್ಪರ ರಕ್ಷಣೆಯ ದೃಷ್ಟಿಯಿಂದ ಕ್ರಿ. ಶ. ೧೮೦೦ರಲ್ಲಿ ಒಪ್ಪಂದವೊಂದು ಏರ್ಪಟ್ಟಿತು. ಅದರ ಪ್ರಕಾರ ನಿಜಾಮನಿಂದ ತನ್ನ ಅಧೀನಕ್ಕೆ ವರ್ಗಾವಣೆಗೊಂಡ ಪ್ರಾಂತ್ಯಗಳ ಮೇಲೆ ಇಂಗ್ಲಿಷ್ ಸರ್ಕಾರವು ಮೇಜರ್ (ಸರ್) ಥಾಮಸ್ ಮನ್ರೋನನ್ನು ಮದರಾಸು ಸರ್ಕಾರದ ಕಂದಾಯ ಸಂಗ್ರಹಣ ಮುಖ್ಯಾಧಿಕಾರಿಯನ್ನಾಗಿ ನೇಮಿಸಿತು. ಈ ಪ್ರಾಂತ್ಯಗಳ ಪಾಳೆಯಗಾರರ ಸಮಸ್ಯೆಗಳನ್ನು, ಬೇಡಿಕೆಗಳನ್ನು ಬಗೆಹರಿಸಲು ಕಾರ್ಯೋನ್ಮುಖನಾದ ಮನ್ರೋ ಒಟ್ಟು ಎಂಬತ್ತು ಮಂದಿ ಪಾಳೆಯಗಾರರ ಯಾದಿಯನ್ನು ಸಿದ್ಧಪಡಿಸಿದನು.

ಈ ಎಂಬತ್ತು ಪಾಳೆಯಗಾರರಲ್ಲಿ ವೇಮುಲ, ಚಿತ್ವೇಲ್, ಪೊರುಮಮಿಲ್ಲ, ನರಸಾಪುರ, ತಿಪ್ಪೇರೆಡ್ಡಿಪಲ್ಲೆ, ಉಪ್ಪಲೂರು, ಕಾಮಲಾಪುರಂ, ಬೊನಮಾಲ, ಯರ್ರಗುಂಟ್ಲ, ಸೆಟ್ಟಿವಾರಿಪಾಳ್ಯಂ, ಲೋಪತನುಂಟ್ಲ, ಕೊಮ್ಮನುಂಟ್ಲ, ಚಿಂತಗುಂಟಬಂಡ, ಸನಿಪಾಯ, ಮೋಟಕಟ್ಲ, ಗೋಪಗುಡಿಪಲ್ಲೆ ಮತ್ತು ಪತ್ತೂರುಪಾಳ್ಯಂ—ಈ ಹದಿನೇಳು ಪಾಳೆಯಗಾರ ಮನೆತನದವರು ಕಡಪೆ ಪ್ರಾಂತ್ಯದಲ್ಲಿಯೂ[30] ಅನಂತಪುರ, ನಾದಿಮಿದೊಡ್ಡಿ, ರಾಯದುರ್ಗ, ತಲಮರಳ, ಗುತ್ತಿ, ಕಮ್ಮಲಪಾಡು, ಚೆಯ್ಯೇಡು, ಪಾಮುದೂರ್ತಿ ಮತ್ತು ಕೊಕ್ಕಂಟಿ—ಈ ಒಂಬತ್ತು ಪಾಳೆಯಗಾರ ಮನೆತನಗಳು ಅನಂತಪುರ ಪ್ರಾಂತ್ಯದಲ್ಲಿಯೂ[31] ಕೋಟಕೊಂಡ, ಕಪ್ಪತ್ರಳ್ಳ, ದುಡೆಕೊಂಡ, ಪಂಡಿಕೋನ, ದೇವನಕೊಂಡ, ಬಸ್ವಾಪುರ್, ಪುಲ್ಲಲಚೆರುವು, ಬೊಲ್ಲುಪಲ್ಲೇ ಸ್ಯಾಯಪನ್ಯಾನಿ, ಮರ್ರಿವೇಮುಲ, ಚಪಲಮಡುಗು, ವೆಂಕಟಾದ್ರಿಪಾಳೆಮು, ವುರ್ಲಗುಂಟ, ವೊವ್ಕ್,

---

29 ಹೆಚ್. ವಿ. ವೀರನಾಯಕ 'ಹರತಿ' (ಸಂ.) : ವಾಲ್ಮೀಕಿ (ಅಖಿಲ ಕರ್ನಾಟಕ ನಾಯಕ ಜನಾಂಗದ ದ್ವಿತೀಯ ಮಹಾ ಸಮ್ಮೇಳನದ ಸ್ಮರಣಸಂಚಿಕೆ), ದಾವಣಗೆರೆ, ಮಾರ್ಚ್ ೧೯೭೩ : ಸಂಪಾದಕೀಯ

30 Bh. Sivasankaranarayana (S. Ed.) : *Andhra Pradesh District Gazetteers–Cuddapah*, Hyderabad, 1967, pp. 111–113

31 Bh. Sivasankaranarayana (S. Ed.) : *Andhra Pradesh District Gazetteers–Anantapur*, Hyderabad, 1970, pp. 84–85

ವಲ್ಲಗುಂಟ್ಲ, ಕೋಯಿಲ್‌ಕುಂಟ್ಲ, ಸಿಂಗಪಟ್ಟಣಂ, ಪ್ಯಾಪಲಿ ಮತ್ತು ಮದ್ದಿಕೆರ—ಈ ಹತ್ತೊಂಬತ್ತು ಪಾಳೆಯಗಾರ ಮನೆತನಗಳು ಕರ್ನೂಲು ಪ್ರಾಂತ್ಯ ದಲ್ಲೂ[32] ಇದ್ದುದನ್ನು ಮನ್ರೋ ಗುರುತಿಸಿರುವನು.

ಇವುಗಳೊಡನೆ, ಯೇಡರಗುಂಟ, ಬಂಗಾರಿ, ಗುಡಿಪಾಟಿ, ಕಲ್ಲೂರು, ಕರಕಂಬಾಡಿ, ನಾರಗಂಟ, ಪುಲಿ ಚೇರ್ಲ, ತುಂಬಾ, ಪುಲ್ಲೂರು, ಪಾಕಲ, ಮೊಗರಾಲ, ಶ್ರೀ ಕಾಳಹಸ್ತಿ, ಕರವೇಟನಗರ್, ಪುಂಗನೂರು, ಕಂಗುಂದಿ—ಈ ಹದಿನಾರು ಪಾಳೆಯಗಾರ ಮನೆತನಗಳು ಚಿತ್ತೂರು ಮತ್ತು ಚಂದ್ರಗಿರಿ (ಉತ್ತರ ಆರ್ಕಾಟು) ಪ್ರಾಂತ್ಯಗಳಲ್ಲಿದ್ದುದನ್ನೂ[33] ಗಂಧರ್ವಕೋಟ್ಟೈ, ಪಾಳ್ಯ ವನಮ್, ಪಪ್ಪನಾಡು, ಕಲ್ಲಕೋಟ್ಟೈ, ಸಿಲ್ಲತೂರ್, ಸೇಂದನ್‌ಗುಡಿ, ಕೊಣೂರು, ಪಂಡಿರನ್‌ಕೋಟ್ಟೈ— ಇವೇ ಮೊದಲಾದ ಪ್ರಮುಖ ಎಂಟು ಮನೆತನಗಳನ್ನು ಒಳಗೊಂಡಂತೆ ಒಟ್ಟು ಹದಿಮೂರು ಪಾಳೆಯಗಾರ ಮನೆತನಗಳು ತಂಜಾವೂರು ಪ್ರಾಂತ್ಯದಲ್ಲಿ ಇದ್ದು ದನ್ನೂ[34] ಇದಯನ್‌ಕೋಟ್ಟೈ, ಕೊಂಬಾಯ್, ಮುಂಬ ರಾಯ್, ಸಂದೈಯೂರ್, ಎರಿಯೋಡು, ಮದುರ್, ಪಳ್ನಿ, ಸುಕ್ಕುಂಪಟ್ಟಿ, ದೇವದಾನಪಟ್ಟಿ, ಗೂಡಲೂರು, ಕಂಬಮ್, ವಡಕಾರಿ, ಅಂಬಾತುರೈ, ಅಮ್ಮಯ ನಾಯಕನೂರ್, ಬೋಡಿನಾಯಕನೂರ್, ಎಮುಕ್ಕಾಲ ಪುರಂ, ಈರಸಕ್ಕನಾಯಕ್ಕನೂರ್, ಗಂಟಮನಾಯಕ ನೂರ್, ಕನ್ನಿವಾಡಿ, ಮರುನುತ್ತು, ನೀಲಕ್ಕೋಟ್ಟೈ, ಪಳ್ಳಿಯಪ್ಪನಾಯಕನೂರ್ (ಕುವಕ್ಕಪಟ್ಟಿ) ತವಸಿಮಡೈ, ತೇವರಮ್, ತೊಟ್ಟಿಯನ್‌ಕೋಟ್ಟೈ ಮತ್ತು ವಿರುಪಾಕ್ಷಿ —ಈ ಇಪ್ಪತ್ತಾರು ಪಾಳೆಯಗಾರ ಮನೆತನಗಳು ಮಧುರೈ ಪ್ರಾಂತ್ಯದಲ್ಲಿ ಇದ್ದುದನ್ನೂ[35] ಇಲ್ಲಿ ಪ್ರಸ್ತಾಪಿಸ ಬಹುದು.

ವಿಜಯನಗರದ ವ್ಯಾಪ್ತಿಗೊಳಪಟ್ಟಿದ್ದ ಇಲ್ಲಿಯ ಪ್ರಾಂತ್ಯಗಳ ಜತೆಗೆ ಇತರ ಪ್ರಾಂತ್ಯಗಳನ್ನೂ ಗಮನಿಸ ಬೇಕಾದ್ದರಿಂದ, ಪಾಳೆಯಪಟ್ಟುಗಳ ಒಟ್ಟು ಸಂಖ್ಯೆಯು ಅಧಿಕಗೊಳ್ಳುವ ಸಾಧ್ಯತೆಯೇ ಹೆಚ್ಚು. ಒಟ್ಟಿನಲ್ಲಿ, ಕನ್ನಡ, ತೆಲುಗು ಮತ್ತು ತಮಿಳು ರಾಜ್ಯಗಳಲ್ಲಿ ವಿಜಯ ನಗರ ಪೂರ್ವದಲ್ಲಿ ಹಾಗೂ ಆಳ್ವಿಕೆಯ ಅವಧಿಯಲ್ಲಿ ೭೭ ಮಂದಿ ನಾಯಕರಷ್ಟೆ ಇದ್ದರೆಂಬುದಾಗಲೀ ಮೆಕೆಂಝಿ ಸಂಗ್ರಹದ ಹಸ್ತಪ್ರತಿಯಲ್ಲಿರಬಹುದಾದ ಇಲ್ಲಿಯ ಬಹು ಪಾಲು ನಾಯಕರು, ಮುಖ್ಯವಾಗಿ ೭೭ ನಾಯಕರ 'ಯಾದಿ'ಯಾಗಲೀ ನಿರ್ದಿಷ್ಟವಾದುದಲ್ಲವೆನ್ನಲು ಈ ಉದಾಹರಣೆಗಳಿಂದ ಸ್ಪಷ್ಟಪಡುತ್ತದೆ.

ಇಂದಿನ ಕರ್ನಾಟಕದ ರಾಜಕೀಯ ಸರಹದ್ದಿನಲ್ಲಿ ಬಂದಿರುವ ದಕ್ಷಿಣಕನ್ನಡ, ಉತ್ತರಕನ್ನಡ, ಕೊಡಗು ಮತ್ತು ಉತ್ತರ ಕರ್ನಾಟಕ ಪ್ರದೇಶಗಳಲ್ಲಿದ್ದ ಮಧ್ಯ ಕಾಲೀನ ಮತ್ತು ಈಚೀನ ಸಂಸ್ಥಾನಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ವಿಜಯನಗರ ಕಾಲದಲ್ಲಿ ತುಳುನಾಡನ್ನು ಬಾರಕೂರು ಮತ್ತು ಮಂಗಳೂರು ರಾಜ್ಯಗಳೆಂದು ವಿಭಾಗಿಸಲಾಗಿದ್ದು, ಇವು ಹಲವಾರು ಸ್ಥಳಿಕ ಅರಸು ಮನೆತನಗಳನ್ನು ಒಳಗೊಂಡಿದ್ದವು. ಈ ನಾಡಿನ ಉತ್ತರ ಭಾಗವಾದ ಬಾರಕೂರು ರಾಜ್ಯದಲ್ಲಿ ನಗಿರೆ ಮತ್ತು ಹಾಡುವಳ್ಳಿ ಪ್ರಾಂತ್ಯಗಳೂ ಮಂಗಳೂರು ರಾಜ್ಯದಲ್ಲಿ ಕಳಸ-ಕಾರ್ಕಳ, ಬಂಗ, ಚೌಟ, ನಾಳಿನ ಮತ್ತು ಸಾವಂತ ಮನೆತನಗಳವರ ಪ್ರಾಂತ್ಯಗಳೂ ಪ್ರಾಬಲ್ಯ ಹೊಂದಿದ್ದವು. ಇವುಗಳಲ್ಲಿ ಹೆಚ್ಚಿನವು ಜೈನ ಧರ್ಮಕ್ಕೆ ಸೇರಿದ್ದವು. ಇವುಗಳೇ ಅಲ್ಲದೆ, ಸುರಾಲದ ತೊಳಹ, ಪೂಂಜಳಿಯ ಅಜಿಲ, ಹೊಸಂಗಡಿಯ ಹೊನ್ನೆಯಕಂಬಳಿ, ವಿಟ್ಟಲದ ಡೊಂಬಹೆಗ್ಗಡೆ, ಕಾಪಿನ ಮದ್ದಹೆಗ್ಗಡೆ, ಎಲ್ಲೂರಿನ ಕುಂದಹೆಗ್ಗಡೆ, ಕಿನ್ನಿಕಹೆಗ್ಗಡೆ

32 M. V. Rajagopal (S.Ed.) : *Andhra Pradesh District Gazetteers-Kurnool*, Hyderabad, 1974, p. 54

33 Arthur F. Cox (Compiler) : *Madras District Manuals-North Arcot*, Vol. II, Madras, 1894, pp. 317, 336-37, 344-45, 349; Dr. N. Ramasesan (S.Ed.) : *Andhra Pradesh District Gazetteers-Chittoor*, Hyderabad, 1979, p. 46

34 Dr. B. S. Baliga : *Tanjore District Handbook*, Madras, 1957, p. 372

35 Dr. B. S. Baliga : *Madras District Gazetteers-Madurai*, Madras, 1960, p. 334

ಮೊದಲಾದ ಹಲವು ಸ್ಥಳಿಕ ಮನೆತನಗಳು ವಿಜಯನಗರದಲ್ಲೂ ಅನಂತರದ ಶತಮಾನಗಳಲ್ಲೂ ತುಳುನಾಡಿನ ಬೇರೆ ಬೇರೆ ಪ್ರಾಂತ್ಯಗಳಲ್ಲಿ ರಾಜ್ಯವಾಳಿದರೆಂದು ವ್ಯಕ್ತ ಪಡುತ್ತದೆ.[36] ಹಾಗೆಯೇ, ಗೇರುಸೊಪ್ಪೆಯ ಸಾಳುವರು, ಬೀಳಿಗಿ ಒಡೆಯರು, ಸೋಂದಾ (ಸ್ವಾದಿ) ನಾಯಕರು ಈಗಿನ ಉತ್ತರಕನ್ನಡ ಜಿಲ್ಲೆಯಲ್ಲಿ ಬರುವ ವಿಜಯನಗರ ಕಾಲದ ಪ್ರಮುಖ ಅರಸು ಮನೆತನಗಳವರಾಗಿರುವರು.

ಕೊಡಗು ಪ್ರಾಂತ್ಯದಲ್ಲಿದ್ದ ಪಾಳೆಯಗಾರ ವ್ಯವಸ್ಥೆಯು ಬೇರೆಡೆಗಳಿಗಿಂತ ಭಿನ್ನವಾಗಿರುವುದು ಗಮನಾರ್ಹ. ಬಯಲುನಾಡಿನ ಗ್ರಾಮಗಳಲ್ಲಿ ಹರವು, ವಿಸ್ತೀರ್ಣಗಳಂತೆ ಇಲ್ಲಿಯ ಗ್ರಾಮಗಳಿಗೆ ಹೋಲಿಸಲಾಗದಿರುವುದರಿಂದ ಕೊಡಗಿನ ಪಾಳೆಯಪಟ್ಟುಗಳು ತೀರಾ ಕಿರಿದಾಗಿರುವ ಉದಾಹರಣೆ ಕಾಣಸಿಗುತ್ತದೆ. ಒಬ್ಬ ಪಾಳೆಯಗಾರನ ನಾಡನ್ನು ಮತ್ತೊಬ್ಬನಿಂದ ಪ್ರತ್ಯೇಕಿಸಲು ದಟ್ಟವಾದ ಕಾಡನ್ನು ಬೆಳೆಸುವ ಪದ್ಧತಿ ಇದ್ದಿತು. ಕಾಡಿಲ್ಲದಿರುವ ಸ್ಥಳಗಳಲ್ಲಿ ಕಲ್ಲನ್ನು ನೆಟ್ಟು ಅಥವಾ ಕಂದಕ (ಕಡಂಗ ?)ಗಳನ್ನು ಅಗೆಯಿಸಿ ಗುರುತು ಮಾಡಿಕೊಳ್ಳುತ್ತಿದ್ದರು. ಇಲ್ಲಿಯ ಪಾಳೆಯಗಾರರನ್ನು 'ನಾಡ್‌ಬಾಚ್ ಕಾರರು' (ಬಾಳು ಅಥವಾ ಬಾಚಿಕಾರರು) ಎಂದು ಸಂಬೋಧಿಸಲಾಗುತ್ತಿದ್ದಿತು. ಕೊಡಗಿನ ೨೮ ನಾಡುಗಳಿಗೂ ಇವರು ಮುಖ್ಯಸ್ಥರಾಗಿದ್ದು, ಇವರಲ್ಲಿ ಪ್ರಬಲರಾಗಿ ಬೆಳೆದವರು ಎಂಟುಮಂದಿ ನಾಯಕರು. ಅವರುಗಳೆಂದರೆ, ಅಂಜಿಗೇರಿನಾಡಿನ ಕಟ್ಟೆಮನೆ ಚಿಟ್ಯಪ್ಪ ನಾಯಕ, ಎಡೆನಾಲ್ಕುನಾಡಿನ ಮುಕ್ಕಾಟಿನಾಯಕ, ಹತ್ತುಗಟ್ಟುನಾಡಿನ ಮಾಚಂಗಾಳನಾಯಕ, ಸಿದ್ದಾಪುರನಾಡಿನ ಚನ್ನಯನಾಯಕ, ತಾವಳಗೇರಿನಾಡಿನ ಕೈಬಿಲಿರನಾಯಕ, ಕಡಿಯತ್ತುನಾಡಿನ ಬಾವಲಿಯ ಕೊಳ್ಳಕೊಂಗಿನಾಯಕ, ಬೆಪ್ಪನಾಡಿನ ಉತ್ತುನಾಯಕ ಮತ್ತು ಹಾಲೇರಿಯ ಸೋಮಶೇಖರನಾಯಕ. ಇವರೆಲ್ಲರೂ ವಿಜಯನಗರದ ಅವಧಿಯಲ್ಲಿದ್ದವರು. ಉಳಿದವರಲ್ಲಿ, ನಾಗರಹೊಳೆ ಅರಣ್ಯದ ಕುಂತೂರು ಪಾಳೆಯಗಾರ ನಾಗರಾಜ, ಯಡೂರಿನ ಮಲ್ಲನಾಯಕ, ಅಜ್ಜಿಕುಟ್ಟೀರ ಅಚ್ಚುನಾಯಕ, ಕುರುಚಿನಾಯಕ ಮೊದಲಾದವರೂ ಗಮನ ಸೆಳೆಯುತ್ತಾರೆ.[37]

ಮೊಗಲರು, ಮರಾಠರು ಹಾಗೂ ಷಾಹಿ ಅರಸರ ಆಳ್ವಿಕೆಗೆ ಒಳಪಟ್ಟಿದ್ದ ದಕ್ಷಿಣ ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದ ಪ್ರಾಂತ್ಯಗಳಲ್ಲಿ ದೇಸಾಯಿಗಳೇ ಮೊದಲಾದ ವತನದಾರರು ಹಾಗೂ ಸಂಸ್ಥಾನಿಕರು ಸ್ವತಂತ್ರರಾಗಿಯೂ ಆಶ್ರಿತರಾಗಿಯೂ ಪ್ರತಿನಿಧಿಗಳಾಗಿಯೂ ತಮ್ಮ ತಮ್ಮ ಸಂಸ್ಥಾನಗಳ ಆಡಳಿತ ನೋಡಿಕೊಳ್ಳುತ್ತಿದ್ದುದನ್ನು ದಾಖಲೆಗಳು ತಿಳಿಸುತ್ತವೆ. ಇವರಲ್ಲಿ ಕೆಲವರು ವಿಜಯನಗರದ ಅವಧಿಯಲ್ಲಿಯೂ ಅನಂತರವೂ ಅಸ್ತಿತ್ವಕ್ಕೆ ಬಂದು ಪ್ರಬಲರಾದವರು. ಪರಂಪರಾಗತವಾಗಿ ಸಾಗಿಬಂದ ಕೆಲವು ರಾಜಮನೆತನ (ದೇಶಗತಿ)ಗಳವರು ಈ ಭಾಗದಲ್ಲಿ ತಮ್ಮ ಜನಪರವಾದ ಆಳ್ವಿಕೆಯಿಂದ ಇಂದಿಗೂ ಸ್ಮರಣಾರ್ಹರೆನಿಸಿಕೊಂಡಿರುವರು. ರಾಮದುರ್ಗ, ಜಮಖಂಡಿ, ನರಗುಂದ, ಸವಣೂರು ಮೊದಲಾದ ಸಂಸ್ಥಾನಿಕರು, ಹುಕ್ಕೇರಿ (ವಂಟಮುರಿ), ಮುರಗೋಡು, ಶಿರಹಟ್ಟಿ, ಡಂಬಳ, ಸೊರಟೂರು, ಗೋವನಕೊಪ್ಪ, ತೋರಗಲ್ಲು, ಹಂದಿಗನೂರು, ರಕ್ಕಸಗಿ ಮೊದಲಾದ ದೇಸಾಯಿಗಳು ಚರಿತ್ರೆಯಲ್ಲಿ ಸ್ಥಾನ ಪಡೆದಿದ್ದಾರೆ. ಬೆಳಗಾವಿ ಜಿಲ್ಲೆಯ ದೇಶಗತಿಗಳ ಪೈಕಿ ಕಿತ್ತೂರು, ತಲ್ಲೂರು, ಸಿರಸಂಗಿ(ನವಲಗುಂದ), ಕಾಕತಿ, ರುದ್ರಾಪೂರ ಮತ್ತು ಚಚಡಿ ವೀರಶೈವ ದೇಶಗತಿಗಳು ಪ್ರತ್ಯೇಕವಾಗಿ ಗುರುತಿಸಲ್ಪಟ್ಟಿವೆ.[38] ಮ್ಯಾಕ್‌ಗ್ರಿಗೊರ್ ಎಂಬವನು ಬೆಳಗಾವಿಯ ಕಲೆಕ್ಟರ್ ಆಗಿದ್ದಾಗ ಸಿದ್ಧಪಡಿಸಿದ ಯಾದಿಯ ಪ್ರಕಾರ, ಬೆಳಗಾವಿ ಜಿಲ್ಲೆಯಲ್ಲಿದ್ದ

---

36 ಡಾ॥ ಕೆ. ವಿ. ರಮೇಶ್, ಎಂ. ಜೆ. ಶರ್ಮಾ : ತುಳುನಾಡಿನ ಅರಸು ಮನೆತನಗಳು ಮತ್ತು ಧರ್ಮ ಸಮನ್ವಯ, ಉಜಿರೆ (ದಕ್ಷಿಣಕನ್ನಡ), ೧೯೮೫, ಪು. ೬೫, ೯೩–೯೫

37 ವಿವರಗಳಿಗೆ : ಎಂ. ಜಿ. ನಾಗರಾಜ್ : ಕೊಡಗಿನ ಪಾಳೆಯಗಾರರು (ಬೆಂಗಳೂರಿನ ಮಿಥಿಕ್ ಸೊಸಾಯಿಟಿಯ ಆಶ್ರಯದಲ್ಲಿ ೧೯೮೮ ಜೂನ್ ೧೧ ರಂದು ನಡೆದ 'ವಿಜಯನಗರೋತ್ತರ ಪಾಳೆಯಗಾರರು' ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ—ಅಪ್ರಕಟಿತ)

38 ಬಾಳಣ್ಣ ಸೀಗೀಹಳ್ಳಿ (ಸಂ.) : ಬೆಳಗಾವಿ ಜಿಲ್ಲೆಯ ವೀರಶೈವ ದೇಶಗತಿಗಳು, ಡಂಬಳ-ಗದಗ, ೧೯೮೯, ಪುಟಗಳು ೧೧೬

ಇನಾಂಹಳ್ಳಿಗಳ ಹಾಗೂ ಮನೆತನಗಳ ಸಂಖ್ಯೆಯು ನೂರಕ್ಕೂ ಮಿಕ್ಕಿದ್ದಿತೆಂದು ವ್ಯಕ್ತಪಡುತ್ತದೆ.[39] ನಾಯಕರ ಅಥವಾ ಪಾಳೆಯಗಾರರ ಯಾದಿಗೆ ಇಂತಹ ಸಂಸ್ಥಾನಗಳನ್ನೂ ಸೇರಿಸಿಕೊಳ್ಳಬೇಕಾಗುತ್ತದೆ.

೨

ಹದಿನೇಳು ಮತ್ತು ಹದಿನೆಂಟನೆಯ ಶತಮಾನಗಳಲ್ಲಿ ಮೈಸೂರು ಪ್ರಾಂತ್ಯದಲ್ಲಿ ಅಸ್ತಿತ್ವದಲ್ಲಿದ್ದ ಕೆಲವು ಸಂಸ್ಥಾನಗಳ ಬಗೆಗೆ ಕಾವ್ಯ, ದಾಖಲೆ, ಇತ್ಯಾದಿಗಳಿಂದ ತಿಳಿದು ಬರುತ್ತದೆ. ಕರ್ನಾಟಕ ಏಕೀಕರಣಪೂರ್ವದ ಮೈಸೂರು ರಾಜ್ಯದಲ್ಲಿ, ಅಂದರೆ ೧೭ನೆಯ ಶತಮಾನದ ಮೊದಲಾರ್ಧದ ಅವಧಿಯಲ್ಲಿ, ನೆಲಸಿದ್ದ ಪ್ರಮುಖ ಪಾಳೆಯಗಾರರನ್ನು ಗಮನಿಸಿರುವ ಬಿ. ಲೂಯಿರೈಸ್ ಅವರು, ಈ ಭೂಪ್ರದೇಶದ ಉತ್ತರದಲ್ಲಿ ಬಿದನೂರು, ಬಸವಾಪಟ್ಟಣ ಮತ್ತು ಚಿತ್ರದುರ್ಗ ನಾಯಕರೂ ಪಶ್ಚಿಮದಲ್ಲಿ ಬಲಂ ನಾಯಕರೂ ಮಧ್ಯದಲ್ಲಿ ಹಾಗಲವಾಡಿ ನಾಯಕರು, ಯಲಹಂಕ ಮತ್ತು ಬಳ್ಳಾಪುರಗಳ ಗೌಡಪ್ರಭುಗಳೂ ಪೂರ್ವದಲ್ಲಿ ಸುಗಟೂರು ಗೌಡಪ್ರಭುಗಳೂ ದಕ್ಷಿಣದಲ್ಲಿ ಮೈಸೂರು ಒಡೆಯರು, ಕಳಲೆ, ಉಮ್ಮತ್ತೂರು, ಯಳಂದೂರು ನಾಯಕರು ಮೊದಲಾದವರೂ ಇದ್ದುದನ್ನು ಪ್ರತ್ಯೇಕವಾಗಿ ಗುರುತಿಸಿಕೊಟ್ಟಿದ್ದಾರೆ.[40] (ನಕ್ಷೆ ನೋಡಿ).

ಮೈಸೂರು ಅರಸರ ಚರಿತ್ರೆಯನ್ನು ಅವಲೋಕಿಸಿದಾಗ, ಮೇಲೆ ಹೇಳಿದ ಅವಧಿಯಲ್ಲಿ ಇದ್ದ ಪಾಳೆಯಗಾರರ ಬಗೆಗೆ ಸಾಕಷ್ಟು ಮಾಹಿತಿ ದೊರೆಯುತ್ತದೆ. ಯಂ. ಯಸ್. ಪುಟ್ಟಣ್ಣ ಅವರು ಈ ಅರಸರು ವಶಪಡಿಸಿಕೊಂಡಿದ್ದ ಇಂತಹ ಸಂಸ್ಥಾನಗಳನ್ನು ಪಟ್ಟಿ ಮಾಡಿದ್ದು, ಬೆಟ್ಟದ ಚಾಮರಾಜ ಒಡೆಯನು ಶ್ರೀರಂಗಪಟ್ಟಣವನ್ನೂ ಚಾಮರಾಜ ಒಡೆಯನು ಚನ್ನಪಟ್ಟಣವನ್ನೂ ಕಂಠೀರವ ನರಸರಾಜ ಒಡೆಯನು ಅರಕಲಗೂಡು, ಬೆಟ್ಟದಪುರ ಮತ್ತು ಹೊಸೂರುಗಳನ್ನೂ ದೊಡ್ಡದೇವರಾಜ ಒಡೆಯನು ಚಿಕ್ಕನಾಯಕನಹಳ್ಳಿ, ಹುಲಿಯೂರುದುರ್ಗ, ಕುಣಿಗಲು ಮತ್ತು ಸಕ್ಕರೆಪಟ್ಟಣಗಳನ್ನೂ ಚಿಕ್ಕದೇವರಾಜ ಒಡೆಯನು ಮದ್ದಗಿರಿ ಮತ್ತು ಮಿಡಿಗೇಸಿಗಳನ್ನೂ ಚಿಕ್ಕಕೃಷ್ಣರಾಜ ಒಡೆಯನು ಕೈಲಂಚ, ದೇವನಹಳ್ಳಿ ಮತ್ತು ಕಣಿವೆ ಕೆಳಗಿನ ರಾಜ್ಯಗಳನ್ನೂ ಜಯಿಸಿದರೆಂದು ದಾಖಲಿಸಿರುವರು.[41]

ಶ್ರೀರಂಗಪಟ್ಟಣ ರಾಜಧಾನಿಯಿಂದ ಆಳ್ವಿಕೆ ನಡೆಸುತ್ತಿದ್ದ ಒಂದನೆಯ ಕಂಠೀರವ ನರಸರಾಜನು (ಕ್ರಿ. ಶ. ೧೬೩೮-೧೬೫೯) ದಿಗ್ವಿಜಯಕ್ಕಾಗಿ ಹೊರಟು, ಸಾಮಂತರನೇಕರನ್ನು ಜಯಿಸಿದ ಹಾಗೂ ಶಿಕ್ಷಿಸಿದ ಸಂಗತಿಯು ಚಾರಿತ್ರಿಕ್ಸಾಹಿತ್ಯ ಕೃತಿಯಲ್ಲಿ ಉಲ್ಲೇಖಗೊಂಡಿದೆ.[42] ಅಂತಹ ಸಾಮಂತರಲ್ಲಿ ರಾಮಗಿರಿ, ತುರುಗೆರೆ, ಬಾಗೂರು, ಕಲಿಯೂರು, ಕಡಬ, ಮಾಯಿಸಮುದ್ರ, ಗ್ರಾಮ, ಪಿರಿಯಾಪಟ್ಟಣ, ಪಾಲುಪರೆ, ಸಾಂಬಳ್ಳಿ, ಮಾರಟಹಳ್ಳಿ, ನಲ್ಲೂರು, ಒಂಟುಹಳ್ಳಿ, ಚಂಗಪಾಡಿಯ, ತೋಳೆಯ, ಆಲಂಬಾಡಿ, ಮಧುರೆ, ಚೆಂಜಿ, ತಂಜಾವೂರು, ಸತ್ಯಮಂಗಲ, ನರಸಿಂಹಪುರ, ಬೇಲೂರು, ಬಸವಪಟ್ಟಣ, ತೆಂಜಿ, ಇಕ್ಕೇರಿ, ವಿಜಯನಗರ, ಕೊಡಗು, ಕೊಂಕಣ, ಮಲೆಯಾಳ, ಕೊಂಗು, ಮಾಗಡಿ, ಕುಣಿಗಲು ಮೊದಲಾದ ಮೂವತ್ತೆರಡು ಸಂಸ್ಥಾನಿಕರ ಹೆಸರುಗಳು ಪ್ರಸ್ತಾಪಗೊಂಡಿವೆ.

ಈ ಅರಸನ ಕಾಲದಲ್ಲಿ ಶ್ರೀರಂಗಪಟ್ಟಣದ ಪ್ರಭಾವಕ್ಕೆ ಒಳಪಟ್ಟಿದ್ದ ಸ್ಥಳಗಳಲ್ಲಿ ಪೂರ್ವದಿಕ್ಕಿನಲ್ಲಿ ಮಳವಳ್ಳಿ, ಕಾನಕಾನಹಳ್ಳಿ, ಡೆಂಕಣಿಕೋಟೆ, ತಿರವಣ್ಣಾಮಲೆ ಮತ್ತು ಜಿಂಜಿ ; ಆಗ್ನೇಯದಲ್ಲಿ ರಂಗಸಮುದ್ರ, ಸೋಸಲೆ, ತಲಕಾಡು, ಸತ್ತೆಗಾಲಂ, ಆಲಂಬಾಡಿ, ಕಲಿಯೂರು, ನಿಲುಸೋಗೆ, ಉಮ್ಮತ್ತೂರು,

39 ಅಶೋಕ ಶೆಟ್ಟರ : ತಲ್ಲೂರ ದೇಶಗತಿ, ಅದೇ ಗ್ರಂಥ, ಪು. ೫೬ : ಅಡಿಟಿಪ್ಪಣಿ ೧ ; ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವು ಬಿಜಾಪುರ ಜಿಲ್ಲೆಯ ದೇಶಗತಿಗಳನ್ನು ಕುರಿತು ವಿಚಾರಸಂಕಿರಣವೊಂದನ್ನು ಏರ್ಪಡಿಸಿದ ಹಾಗೂ ಅಲ್ಲಿ ಹಲವು ಕುತೂಹಲಕರ ವಿಷಯಗಳು ಬೆಳಕಿಗೆ ಬಂದ ಬಗೆಗೂ ಈ ಲೇಖಕರು ಪ್ರಸ್ತಾಪಿಸಿದ್ದಾರೆ—ಅಡಿಟಿಪ್ಪಣಿ ೨.

40 *Mysore*, Vol. I, Westminster, 1897, p. 357

41 ಪಾಳಯಗಾರರು-ಐದು ಉಪನ್ಯಾಸಗಳು, ಬೆಂಗಳೂರು, ೧೯೭೩, ಪು. ೧೬

42 ನೋಡಿ : ಡಾ॥ ಆರ್. ಶಾಮಾಶಾಸ್ತ್ರಿ : ಗೋವಿಂದವೈದ್ಯ ಕೃತ ಕಂಠೀರವನರಸರಾಜವಿಜಯ, ಮೈಸೂರು, ೧೯೨೬ : ಪೀಠಿಕೆ, ಪು. vii-viii




ಹದಿನೇಳನೆಯ ಶತಮಾನದಲ್ಲಿ ಮೈಸೂರು ಪ್ರಾಂತ್ಯದಲ್ಲಿದ್ದ ಸಂಸ್ಥಾನಗಳು
(ಆಧಾರ : ಬಿ, ಲೂಯಿರೈಸ್ : ಮೈಸೂರು, ಸಂಪುಟ ೧, ಪುಟ ೩೫೭)

ಎಳಂದೂರು, ಹರದನಹಳ್ಳಿ, ಸತ್ಯಮಂಗಲ, ಮಾರಟಹಳ್ಳಿ, ನಲ್ಲೂರು, ಒಂಟುಹಳ್ಳಿ, ಚಂಗಪಾಡಿಯ, ತೋಳೆಯ, ಸಾಂಬಳ್ಳಿ, ತಿರುಚಂಗೂಡು, ತಿರುಚನಪಳ್ಳಿ, ತಂಜಾವೂರು ಮತ್ತು ಮಧುರೆ ; ದಕ್ಷಿಣದಲ್ಲಿ ಮೈಸೂರು, ಹುಲ್ಲಹಳ್ಳಿ, ಹೆಮ್ಮರಗಾಲು ಮತ್ತು ತೆರಕಣಾಂಬಿ ; ನೈರುತ್ಯಕ್ಕೆ ಬಿಳಿಕೆರೆ, ಮಳಲವಾಡಿ ಮತ್ತು ಮಲೆಯಾಳ ; ಪಶ್ಚಿಮದಲ್ಲಿ ಕನ್ನಂಬಾಡಿ, ತಿಪ್ಪೂರು, ಹಂಪಾಪುರ, ಪಿರಿಯಾಪಟ್ಟಣ, ಬೆಟ್ಟದಪುರ, ಪಾಲುಪರೆ, ಕೊಡಗು ಮತ್ತು ವೀರರಾಜಪೇಟೆ (ನಂಜರಾಯಪಟ್ಟಣ) ; ವಾಯುವ್ಯದಲ್ಲಿ ಬೂಕನಕೆರೆ, ಹೊಸಹೊಳಲು, ಕಿಕ್ಕೇರಿ, ಹೊಳೆನರಸೀಪುರ, ಚೆನ್ನರಾಯಪಟ್ಟಣ, ಗ್ರಾಮ, ಬೇಲೂರು, ಬಾಗೂರು, ಬಸವಪಟ್ಟಣ, ಇಕ್ಕೇರಿ, ತುಳುವ ಮತ್ತು ಕೊಂಕಣ ; ಉತ್ತರದಲ್ಲಿ ಮೇಲುಕೋಟೆ, ನಾಗಮಂಗಲ, ಬೆಳ್ಳೂರು, ಮಾಯಿಸಮುದ್ರ, ತುರುವೇಕೆರೆ, ಕಡಬ ಮತ್ತು ರಾಮಗಿರಿ ; ಈಶಾನ್ಯದಲ್ಲಿ ಮದ್ದೂರು, ಚೆನ್ನಪಟ್ಟಣ, ಮಾಗಡಿ, ಕುಣಿಗಲು ಮತ್ತು ಕೋಟೆಗೆರೆಗಳು ಮುಖ್ಯವಾದುವೆಂದು ಮೇಲೆ ಹೇಳಿದ ಕೃತಿಯಲ್ಲಿಯೇ ದಾಖಲಿಸಲಾಗಿದೆ. ಈ ಯಾದಿಯು ಮೈಸೂರಿನ ಗಡಿಯಾಚೆಯ ಪ್ರಾಂತ್ಯಗಳ ಹೆಸರುಗಳನ್ನೂ ಒಳಗೊಂಡಿದೆ. ಇಲ್ಲಿಯ ಕೆಲವು ಎಡೆಗಳ ವಿನಾ ಉಳಿದುವು, ಅಂದರೆ ಸುಮಾರು ಅರವತ್ತು ಎಡೆಗಳು, ಪಾಳೆಯಪಟ್ಟುಗಳ ಹೆಸರುಗಳೆಂದು ಸ್ಪಷ್ಟವಾಗಿ ಗುರುತಿಸಬಹುದು.

ಮೈಸೂರು ಅರಸರ ಮತ್ತು ಅವರ ಹೋರಾಟಗಳ ಯಾದಿಯನ್ನಷ್ಟೆ ಕೊಡುವ ಸಾಧಾರಣ ದಾಖಲೆಯೆಂದೂ ಕರೆಯಲಾದ 'ಮೈಸೂರು ಸಂಸ್ಥಾನದ ದೊರೆಗಳ ಪರಂಪರೆ ಕೈಫೀಯತ್ತು' (ಕ್ರಿ. ಶ. ಸು. ೧೮೦೦) ಎಂಬ ಹಸ್ತಪ್ರತಿಯು ಕೂಡ ಚಿಕ್ಕದೇವರಾಜನ (ಕ್ರಿ. ಶ. ೧೬೭೩-೧೭೦೪) ಕಾಲದ ಪಾಳೆಯಗಾರರ ಅಥವಾ ಸಾಮಂತ ರಾಜರ ಪಟ್ಟಿಯನ್ನು ಹೊಂದಿದೆ.[43] ಕ್ರಮವಾಗಿ ಉಲ್ಲೇಖಗೊಂಡಿರುವ ಅಂತಹ ಪ್ರಾಂತ್ಯಗಳೆಂದರೆ, ನರಸೀಪುರ, ಮೂಗೂರು, ಉಮ್ಮತ್ತೂರು, ಮಧುರಾ, ಮದ್ದೂರು, ಚನ್ನಪಟ್ಟಣ, ಅರಕಲಗೂಡು, ರತ್ನಗಿರಿ, ನಗರ, ಮದ್ದಗಿರಿ, ಗೋಟಾಕೆ, ಅರಕೆರೆ, ಬೇಲೂರು, ಗ್ರಾಮ, ಯಳಂದೂರು, ಆಲಂಬಾಡಿ, ಕಾರಗಳ್ಳಿ, ಮಾಗಡಿ, ಪಿರಿಯಾಪಟ್ಟಣ, ಹಾಗಲವಾಡಿ, ಶಾಲ್ಯ, ನರೇನಳ್ಳಿ, ಕನ್ನಂಬಾಡಿ, ಸರಗೂರು, ಅರೆಕೊತಾರ, ತಗಡೂರು, ಕಡಬಾ, ಸತ್ಯಮಂಗಲ, ದೇವರಾಯನದುರ್ಗ, ತೊರನಾಡು, ತುಮಕೂರು, ಐಗೂರು, ಸೋಸಲೆ-ತಲಕಾಡು, ಹೊಸಹೊಳಲು, ಹೆಗಣದ್ಯಾಣ ಕೋಟೆ, ಕಲ್ಲೂರು, ಹೊಸೂರು, ಹೊನ್ನವಳ್ಳಿ ಮತ್ತು ಬೊಮ್ಮಸಮುದ್ರ.

ಇಲ್ಲಿಯ ನಲವತ್ತು ಸಂಸ್ಥಾನಿಕರು ಮೈಸೂರು ಸಂಸ್ಥಾನದ ಸುತ್ತಮುತ್ತಲಿನಲ್ಲಿ ನೆಲಸಿದ್ದವರು ಮಾತ್ರ, ಉಳಿದವರು ದಕ್ಷಿಣದಲ್ಲಿ ಮಧುರೆಯ ನಾಯಕರಿಗೂ ಉತ್ತರದಲ್ಲಿ ಬಿಜಾಪುರದ ಸುಲ್ತಾನರಿಗೂ ಪಶ್ಚಿಮದಲ್ಲಿ ಇಕ್ಕೇರಿಯ ನಾಯಕರಿಗೂ ಅಧೀನರಾಗಿದ್ದರು. ಶಿರಾ, ದೊಡ್ಡಬಳ್ಳಾಪುರ, ಹೊಸಕೋಟೆ, ಕೋಲಾರ ಮತ್ತು ಬೆಂಗಳೂರು ಪ್ರಾಂತ್ಯಗಳು ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಪ್ರದೇಶದಲ್ಲಿಯೂ ಐಗೂರು ಇಕ್ಕೇರಿ ನಾಯಕರ ಆಶ್ರಯದಲ್ಲಿಯೂ ಇದ್ದವು. ಚಿಕ್ಕದೇವರಾಜನು ಐಗೂರನ್ನು ವಶಪಡಿಸಿಕೊಳ್ಳುವುದರೊಡನೆ ಮೈಸೂರಿನ ವಾಯುವ್ಯ ಭಾಗದಲ್ಲಿ ಮೈಸೂರಿನ ಸಾರ್ವಭೌಮತ್ವವನ್ನು ಸ್ಥಾಪಿಸಿದನು. ಈತನು ಮಧುರೆಯ ನಾಯಕರೊಂದಿಗೆ ಸೈನಿಕ ಸಂಬಂಧ ಹೊಂದಿದ್ದ ಹಾಗೂ ಮೈಸೂರಿನ ಆಗ್ನೇಯ ದಿಕ್ಕಿನಲ್ಲಿದ್ದ ಸದಮಂಗಲಂ, ತೊರೆಯೂರು, ಅನಂತಗಿರಿ ಮತ್ತು ಧಾರಾಪುರಂ ಪಾಳೆಯಗಾರರನ್ನೂ ಜಯಿಸಿದನು.[44] ಒಟ್ಟಿನಲ್ಲಿ, ಈ ಅವಧಿಯಲ್ಲಿ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ಪಾಳೆಯಗಾರರ ಅಂದಾಜು ಸಂಖ್ಯೆಯನ್ನು ಈ ಉದಾಹರಣೆ

---

43 M. A. R., 1936 : Part IV, *Manuscripts*, p. 57 ; ಡಾ॥ ಎಂ. ಎಚ್. ಕೃಷ್ಣ ಅವರು ಕೈಫೀಯತ್ತಿನಲ್ಲಿ ಕಂಡುಬರುವ ಚಿಕ್ಕದೇವರಾಜನ ಸಮಕಾಲೀನ ಪಾಳೆಯಗಾರರ ಸಂಖ್ಯೆ ಸುಮಾರು ೫೦ ಎಂದು ತಮ್ಮ ವಿವರಣೆಯಲ್ಲಿ ಹೇಳಿದ್ದರೂ ಈ ಯಾದಿಯಲ್ಲಿರುವಂತೆ ಸುಮಾರು ೪೦ ಪಾಳೆಯಪಟ್ಟುಗಳನ್ನು ಮಾತ್ರವೇ ತೋರಿಸಿರುವರು.

44 ವಿವರಗಳಿಗೆ : ಎಸ್. ತಿಮ್ಮಯ್ಯನಾಯ್ಡು : ಚಿಕ್ಕದೇವರಾಜ ಒಡೆಯನ ಕಾಲದ ಸಾಮಂತರು, ಹರತಿಸಿರಿ (ಹೆಚ್. ವಿ. ವೀರನಾಯಕ 'ಹರತಿ' ಸನಿಪಿನ ಸಂಪುಟ), ಹರ್ತಿಕೋಟೆ (ಚಿತ್ರದುರ್ಗ ಜಿಲ್ಲೆ) ೧೯೮೭, ಪು. ೨೬೯

ಗಳಿಂದ ತಿಳಿಯಬಹುದಾದರೂ ಆ ಗರಿಷ್ಠಾಂಕವು ಐವತ್ತನ್ನು ಮೀರಲಾರದೆಂದು ಭಾವಿಸಲೂ ಅವಕಾಶ ವಿದೆ.

ಮೈಸೂರಿನ ರಾಜಕೀಯ ಚರಿತ್ರೆಯ ಮಟ್ಟಿಗೆ, ಹದಿನೆಂಟನೆಯ ಶತಮಾನದ ಉತ್ತರಾರ್ಧವು ಅತ್ಯಂತ ಗಂಭೀರವೂ ಗಮನಾರ್ಹವೂ ಆದುದು. ಚಿಕ್ಕದೇವ ರಾಜನ ತರುವಾಯ ಸುಮಾರು ಆರು ದಶಕಗಳ ಕಾಲ ಮೈಸೂರು ಸಂಸ್ಥಾನವು ದುರ್ಬಲ ಅರಸರ ಆಳ್ವಿಕೆಗೊಳ ಪಡುವಂತಾಯಿತು. ಪರಿಣಾಮವಾಗಿ, ಕ್ರಿ. ಶ. ೧೭೬೧ರ ನಂತರ ಮೈಸೂರು ಸಂಸ್ಥಾನದಲ್ಲಿ ಹೊಸ ಬಗೆಯ ಆಳ್ವಿಕೆ ಮೊದಲಿಟ್ಟಿತು. ತನ್ನ ಶಕ್ತಿ-ಸಾಮರ್ಥ್ಯಗಳ ದೆಸೆ ಯಿಂದ ಬಲಿಷ್ಠನಾಗಿ ಬೆಳೆದ ಹೈದರ್‌ಅಲಿಯು ಅನಂತರ ನವಾಬನೆನಿಸಿಕೊಂಡನು. ಈತನ ತರುವಾಯ ಈತನ ಮಗ ಟಿಪ್ಪುಸುಲ್ತಾನನು ಸಂಸ್ಥಾನದ ಗಾದಿಯನ್ನೇರಿದನು. ಇವರೀರ್ವರೂ ಸುಮಾರು ನಾಲ್ಕು ದಶಕಗಳ ಕಾಲ ಅಂದರೆ ಕ್ರಿ. ಶ. ೧೭೯೯ರ ವರೆಗೆ ಮೈಸೂರಿನಲ್ಲಿ ನವಾಬರ ಆಡಳಿತ ಸ್ಥಿರವಾಗಿರುವಂತೆ ನೋಡಿಕೊಂಡರು.

ಮುಖ್ಯವಾಗಿ, ಈ ಯುಗದಲ್ಲಿ ಬೀಸಿದ ಪರಿವರ್ತ ನೆಯ ಬಿರುಗಾಳಿಗೆ ಸಿಕ್ಕಿದ ಮೈಸೂರು ಸಂಸ್ಥಾನ ಮತ್ತು ಇತರ ಪ್ರದೇಶಗಳ ಪಾಳೆಯಗಾರ ವ್ಯವಸ್ಥೆಯು ಬೇರು ಸಹಿತ ಉರುಳಿ ಬಿದ್ದಿತು. ಅವರ ಸಂಖ್ಯಾಸ್ಥಿತಿಯು ದುರ್ಬಲಗೊಂಡಿತು ಹಾಗೂ ಅವರ ವ್ಯವಸ್ಥೆಯು ತನ್ನ ಅಂತ್ಯಾವಸ್ಥೆಯನ್ನು ಕಂಡುಕೊಂಡಿತು. ಪಾಳೆಯಗಾರರು ಈ ಅವಧಿಯಲ್ಲಿ ತಮ್ಮ ಸಂಸ್ಥಾಗಳನ್ನೂ ಅಧಿಕಾರವನ್ನೂ ಕಳೆದುಕೊಂಡು ಬಲದಲ್ಲಿಯೂ ಪ್ರಭಾವದಲ್ಲಿಯೂ ಕುಗ್ಗಿ ಹೋದರು. ಆದರೆ ಅಗತ್ಯಬಿದ್ದಾಗ ನಿಗದಿತ ಪೊಗದಿ ಮತ್ತು ಸೈನಿಕ ಸಹಾಯವನ್ನು ಸಲ್ಲಿಸುವ ಒಪ್ಪಂದದ ಅನುಸಾರವಾಗಿ ಕೆಲವೇ ಪಾಳೆಯಗಾರರನ್ನು ತಮ್ಮ ಮೂಲಸ್ಥಾನದಲ್ಲಿ ಮುಂದುವರೆಯಲು ಹಾಗೂ ಬದುಕಲು ಅವಕಾಶ ಕಲ್ಪಿಸಲಾಯಿತು.

ಹೊಸಕಾಲದ ರಾಜಕೀಯ ಪರಿವರ್ತನೆಯ ಪರಿಣಾಮವಾಗಿ ಸಾಂಪ್ರದಾಯಿಕವಾದ ಪಾಳೆಯಗಾರ ವ್ಯವಸ್ಥೆಯು ಹಿಂದೆ ಸರಿದಂತೆ ಆವರೆಗೆ ಅಸ್ತಿತ್ವದಲ್ಲುಳಿದಿದ್ದ ಪಾಳೆಯಪಟ್ಟುಗಳು ಕಣ್ಮರೆಯಾಗತೊಡಗಿದವು. ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರ ಆಡಳಿತಾವಧಿಯು ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದಂತೆ ಇಂತಹ ಸಂಧಿಕಾಲದ ಆರಂಭಕ್ಕೆ ಇಂಬು ಕೊಟ್ಟಿತೆನ್ನುವುದನ್ನು ವಿದ್ವಾಂಸರನೇಕರು ಗುರುತಿಸುತ್ತಾರೆ. ಬಹುಶಃ ನಿರಂಕುಶ ವೆನ್ನಬಹುದಾದ ಆಡಳಿತ ವಿಧಾನಗಳೂ ಭಾರತೀಯ ವಲ್ಲದ ಆಡಳಿತ ಸುಧಾರಣೆಗಳೂ ಪಾಳೆಯಪಟ್ಟು ಪರಂಪರೆಯು ಮುರುಟಿ ಹೋಗಲು ಕಾರಣವೆನ್ನಬಹುದು. ಪಾಳೆಯಗಾರರನ್ನು ಅವರವರ ಅಧಿಕಾರ ಸ್ಥಾನದಿಂದ ಉಚ್ಚಾಟಿಸಿದ ಹೈದರ್‌ಅಲಿಯು, ಎಲ್ಲ ಪಾಳೆಯಗಾರ ರನ್ನೂ ಹತ್ತಿಕ್ಕಿದ ಏಕೈಕ ಸಾಮ್ರಾಟನೆಂತಲೂ ನಿಜ ಅರ್ಥದಲ್ಲಿ ಅವನು ರಾಜ್ಯವೊಂದರ ದೊರೆಯಾಗಿದ್ದ ನೆಂತಲೂ ಚರಿತ್ರಕಾರರಿಂದ ವರ್ಣಿಸಲ್ಪಟ್ಟಿದ್ದಾನೆ.[45] ಹಾಗೆಯೇ, ಇತಿಹಾಸಕಾರ ಪ್ರೊ॥ ಡಾಡ್‌ವೆಲ್ ಅವರು ಅಭಿಪ್ರಾಯ ಪಡುವಂತೆ, ಆಡಳಿತದಲ್ಲಿ ಪಾಶ್ಚಿಮಾತ್ಯ ವಿಧಿ ವಿಧಾನಗಳನ್ನು ಅಳವಡಿಸುವ ಕನಸು ಕಂಡ ಭಾರತೀಯ ಸಾಮ್ರಾಟರಲ್ಲಿ ಟಿಪ್ಪುಸುಲ್ತಾನನು ಮೊದಲಿಗ ನಾಗಿದ್ದನು.[46]

ತನ್ನ ತಂದೆಯಂತೆಯೇ ಟಿಪ್ಪುಸುಲ್ತಾನನು ಸಹ ಪಾಳೆಯಗಾರರ ವಿಚಾರದಲ್ಲಿ ತೀರಾ ಕಠಿಣವಾಗಿ ನಡೆದು ಕೊಂಡ ಬಗೆಗೆ ಅವನ ಸಮಕಾಲೀನ ಘಟನೆಗಳೇ ಸಾಕ್ಷ್ಯ ಒದಗಿಸುತ್ತವೆ. ಅಂತಃಕಲಹ ಮತ್ತು ಜನಕಂಟಕ ಪ್ರವೃತ್ತಿ ಗಳಿಂದ ರಾಜ್ಯದ ನೆಮ್ಮದಿಯನ್ನು ಕೆಡಿಸುತ್ತಿರುವರೆಂಬು ದನ್ನು ನೆಪವಾಗಿರಿಸಿಕೊಂಡು ಟಿಪ್ಪುವು ಪಾಳೆಯಗಾರರನ್ನು ಪೂರ್ಣವಾಗಿ ಮಟ್ಟಹಾಕಲು ನಿರ್ಧರಿಸಿದನು. ಪ್ರಾರಂಭ ದಲ್ಲಿ ತನಗೆ ಸಹಾಯವೆಸಗಿದ ಪಾಳೆಯಗಾರರ ಒಗೆಗೆ ಉದಾರವಾಗಿರುವಂತೆ ತೋರ್ಪಡಿಸಿಕೊಂಡರೂ ಕ್ರಮೇಣ ಒಂದಿಲ್ಲೊಂದು ನೆಪ ಹುಡುಕಿ ಅವರನ್ನೂ ಬಗ್ಗುಬಡಿ

---

45 Narendra Krishna Sinha : *Haidar Ali*, Culcutta, 1969, p. 242

46 Mohibbul Hasan : *History of Tipu Sultan*, Calcutta, 1971, p. 322

ದನು.[47] ಒಟ್ಟಿನಲ್ಲಿ, ಪಾಳೆಯಗಾರರನ್ನು ಹೈದರ್ ಅಲಿಯು ಹತ್ತಿಕ್ಕಿದರೆ, ಟಿಪ್ಪುಸುಲ್ತಾನನು ಅವರನ್ನು ನಾಶಪಡಿಸಿದನೆಂಬ ಮಾತು[48] ಈ ಸಂದರ್ಭಕ್ಕೆ ಚೆನ್ನಾಗಿ ಅನ್ವಯಿಸುತ್ತದೆ. ಈ ಹಿನ್ನೆಲೆಯಲ್ಲಿ ಇವರೀರ್ವರ ಆಡಳಿತ ಕಾಲದಲ್ಲೂ ಅನಂತರವೂ ಮೈಸೂರು ಪ್ರಾಂತ್ಯ ಮತ್ತು ಈಗಿನ ಕರ್ನಾಟಕ ವ್ಯಾಪ್ತಿಯೊಳಗಿದ್ದ ಪಾಳೆಯಗಾರರ ಸಂಖ್ಯೆಯನ್ನು ಇಲ್ಲಿ ಗಮನಿಸಬೇಕಾದುದು ಅಗತ್ಯ.

ಪುಟ್ಟಣ್ಣನವರು ನಿರೂಪಿಸಿರುವಂತೆ, ಹೈದರ್ ಅಲಿಯು ಜಯಿಸಿದ ಪಾಳೆಯಪಟ್ಟುಗಳಲ್ಲಿ ದೇವನಹಳ್ಳಿ, ಆನೆಕಲ್ಲು, ಹರಪನಹಳ್ಳಿ, ಬಿದನೂರು, ಇಕ್ಕೇರಿ, ಧಾರಾಪುರ, ಬೆಳಗುತ್ತಿ, ಮಂಜರಾಬಾದು, ಕಡಪ, ಹಾಗಲವಾಡಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಕೊಚ್ಚಿ, ಪಾಲಘಾಟು, ಗುತ್ತಿ, ಸಿದ್ಧೌಟಿ, ಹಾವನೂರು, ಗುಡೇಕೋಟೆ, ಜರಿಮಲೆ, ತರೀಕೆರೆ, ರಾಯದುರ್ಗ, ನಿಡಗಲ್ಲು, ರತ್ನಗಿರಿ, ಸೀರ್ಯ, ಆನೇಗೊಂದಿ, ಸವಣೂರು, ಚಿತ್ರದುರ್ಗ ಮುಂತಾದುವುಗಳು ಸೇರಿದ್ದವು.[49] ಇದಕ್ಕೆ ಪೂರಕವಾಗಿ, ಹೈದರ್‌ಅಲಿಯ ಆಸ್ಥಾನದ ಸಭಾಸದನಾಗಿದ್ದ ನಲ್ಲಪ್ಪನು ತಾನು ಕನ್ನಡದಲ್ಲಿ ರಚಿಸಿದ 'ಹೈದರ್‌ನಾಮಾ' ('ಹೈದರ್ ನಾಮಾ ಬಕ್ಖೈರು')ದಲ್ಲಿ ನೀಡಿರುವ ಹೈದರ್‌ಅಲಿಯ ಆಳ್ವಿಕೆಯ ಅವಧಿಯ ಕೊನೆಯ ವೇಳೆಗೆ ಇದ್ದ ಶೀಮೆಗಡಿಗಳ ಪರಿಸ್ಥಿತಿಯ ವಿವರವು ಬಹು ಮುಖ್ಯವಾದುದು.[50] ಈ ವಿವರವು ಶ್ರೀರಂಗಪಟ್ಟಣದ ಕಸಬೆ, ಕಣಿವೆ ಕೆಳಗಣ ಸೀಮೆ, ನವಾಬ ಬಹದ್ದೂರರವರು (ಹೈದರ್‌ಅಲಿ) ಸಾಧಿಸಿದ ಸೀಮೆ, ಬಾರಾಮಹಲು ತಾಲ್ಲೂಕು ಗಡಿಗಳು, ಗುತ್ತಿ ತಾಲ್ಲೂಕುಗಳು, ಬಳ್ಳಾರಿ ಸಂಸ್ಥಾನ, ನಗರದ ಸೀಮೆ, ಸೋದೆ ಸಂಸ್ಥಾನ, ಸೂಫೆ (ಸೂಪಾ) ಸಂಸ್ಥಾನ, ಚಿತ್ರದುರ್ಗದ ಸೀಮೆ, ಕಡಪೆ ಸೀಮೆ, ಗುರಂಕೊಂಡೆ ಸೀಮೆ, ಮೊಮದಲ್ಲಿ (ಮೊಹಮ್ಮದ್‌ಅಲಿ) ಸೀಮೆ, ಆರ್ಕಾಡು ವಗೈರೆ, ಮಮದಲ್ಲಿ (ಮಹಮ್ಮದ್‌ಅಲಿ)ಖಾನರಿಗೆ ಉಳಿದು ಇದ್ದ ಕಿಲ್ಲೆಗಳು, ಪೇಷ್‌ಕಶ್ ಬರುತ್ತಾ ಇದ್ದ ಸಂಸ್ಥಾನಗಳು, ಇತ್ಯಾದಿಯನ್ನು ಒಳಗೊಂಡಿದೆ. ಈ ವಿವರವು ತನ್ನ ಹಿನ್ನೆಲೆಯಲ್ಲಿರುವ ೩೦೦ಕ್ಕೂ ಹೆಚ್ಚು ಮುಖ್ಯ ಹಾಗೂ ಆಶ್ರಿತ ಸೀಮೆಗಳ ಹೆಸರುಗಳನ್ನು ಒದಗಿಸುತ್ತವೆನ್ನುವುದು ಗಮನಾರ್ಹ.

೧೭೮೨ರಲ್ಲಿ ಹೈದರ್‌ಅಲಿಯು ಮೃತನಾಗಲು ಟಿಪ್ಪುಸುಲ್ತಾನನು ನವಾಬನಾದನು. ಈತನು ಜಯಿಸಿದ ಪಾಳೆಯಪಟ್ಟುಗಳಲ್ಲಿ ಕೊಡಗು, ಗುಮ್ಮನಾಯಕನಪಾಳ್ಯ, ಅನಂತಪುರ, ಕೌಲೇದುರ್ಗ, ಇತ್ಯಾದಿಗಳು ಮುಖ್ಯವಾದುವು. ಇಂಗ್ಲಿಷರು ಟಿಪ್ಪುವಿನೊಡನೆ ಸದಾ ಯುದ್ಧ ನಡೆಸುತ್ತಿದ್ದುದರಿಂದ ಹಾಗೂ ಮೈಸೂರಿನ ಕೆಲವು ಪ್ರಾಂತ್ಯಗಳಲ್ಲಿ ಅವರು ತಮ್ಮ ಅಧಿಕಾರವನ್ನು ಸ್ಥಾಪಿಸತೊಡಗಿದ್ದರಿಂದ ಇಂತಹ ಕೆಲವು ಪಾಳೆಯಗಾರರು ಉಭಯಸಂಕಟಕ್ಕೊಳಗಾದರು. ಹೀಗಿದ್ದರೂ ಟಿಪ್ಪುವಿನ ರಾಜನೀತಿಯ ದೆಸೆಯಿಂದ ಭಯವಿಹ್ವಲರಾಗಿದ್ದ ಪಾಳೆಯಗಾರರು ಇಂಗ್ಲಿಷರು ಕೈಗೊಂಡ ಯುದ್ಧಾಚರಣೆಗಳಲ್ಲಿ ಮುಕ್ತಸಹಾಯವನ್ನೂ ಸಹಕಾರವನ್ನೂ ನೀಡಿ ಅವರನ್ನು ಪ್ರೋತ್ಸಾಹಿಸಿದುದು ಈ ಸಂದರ್ಭದಲ್ಲಿ ಕಂಡುಬಂದ ಮುಖ್ಯ ಬದಲಾವಣೆಯಾಗಿದ್ದಿತು.

ಮೂರನೆಯ ಆಂಗ್ಲೋ-ಮೈಸೂರು ಯುದ್ಧದ ಪರಿಣಾಮವಾಗಿ ಕ್ರಿ. ಶ. ೧೭೯೨ರಲ್ಲಿ ಟಿಪ್ಪು ಮತ್ತು ಇಂಗ್ಲಿಷರ ಮಧ್ಯೆ ಒಪ್ಪಂದ ನಡೆದು, ಟಿಪ್ಪುವು ತನ್ನ ಅರ್ಧರಾಜ್ಯವನ್ನು ಇಂಗ್ಲಿಷರಿಗೆ ಬಿಟ್ಟುಕೊಡಬೇಕಾಯಿತು. ಇದರೊಂದಿಗೆ ಕೆಲವು ಪಾಳೆಯಗಾರರೂ ಇಂಗ್ಲಿಷರ ಅಧೀನಕ್ಕೆ ಬಂದರು. ಈ ಅವಧಿಯ ಪಾಳೆಯಗಾರರ ಪರಿಸ್ಥಿತಿಯನ್ನು ವ್ಯಾಸಂಗ ಮಾಡಿರುವ ಪಿ. ಬಿ. ರಾಮಚಂದ್ರರಾವ್ ಅವರು, ಈ ಯುದ್ಧಗಳಲ್ಲಿ ಪಾಳೆಯಗಾರರೂ ಜಮೀನ್ದಾರರೂ ಇಂಗ್ಲಿಷರಿಗೆ ಸಹಾಯಕರಾಗಿದ್ದರೆಂಬುದನ್ನು ಸ್ಪಷ್ಟವಾಗಿ ಗುರುತಿಸಿರುವರು.[51]

---

47 Ibid., p. 342

48 G. R. Josyer : *History of Mysore and the Yadava Dynasty*, Mysore, 1948 (?), pp. 84-85

49 ಪಾಳೆಯಗಾರರು—ಐದು ಉಪನ್ಯಾಸಗಳು, ಪು. ೧೬

50 ತಿ. ತಾ. ಶರ್ಮ (ಸಂ.) : ಚಾರಿತ್ರಿಕ ದಾಖಲೆಗಳು, ಬೆಂಗಳೂರು, ೧೯೭೧ : ಹೈದರ್‌ನಾಮಾ, ಪು. ೧೩೦-೧೩೮

51 *The Poligars of Mysore and Their Civilization*, Bangalore, 1944, p. 59

೩

ಪಾಳೆಯಗಾರ ವ್ಯವಸ್ಥೆಯ ಅಳಿವು ಉಳಿವಿನ ಸಂಬಂಧದಲ್ಲಿ ಇಂಗ್ಲಿಷರು ವಹಿಸಿದ ಪಾತ್ರ ಮಹತ್ವದ್ದು. ೧೭೯೨ರ ಒಪ್ಪಂದವು ಮೈಸೂರಿನ ಪಾಳೆಯಗಾರರನ್ನು ಟಿಪ್ಪುಸುಲ್ತಾನನ ಮುಷ್ಟಿಯಿಂದ ಪಾರುಮಾಡಿತು ; ಇಂಗ್ಲಿಷರ ಸಹಾನುಭೂತಿ ಅವರಿಗೆ ದೊರಕಿತು ; ಅವರ ಸ್ಥಿತಿ-ಗತಿಗಳ ಸುಧಾರಣೆಗೆ ತಕ್ಕಮಟ್ಟಿಗೆ ನೆರವಾಯಿತು. ಆದರೆ ಈ ವೇಳೆಗಾಗಲೇ ಅಳಿದುಳಿದ ಪಾಳೆಯಗಾರರು ಹಿಂದಿನ ಕೆಲವು ದಶಕಗಳಿಂದಲೇ ತಮ್ಮ ಮೇಲೆ ಸತತವಾಗಿ ಎರಗಿದ ರಾಜಕೀಯ ಪ್ರಹರಗಳಿಂದ ಘಾಸಿಗೊಂಡು ಚೇತರಿಸಿಕೊಳ್ಳಲಾಗದಷ್ಟು ಸೊರಗಿಹೋಗಿದ್ದರು.

೧೭೯೭ರಲ್ಲಿ ಲಾರ್ಡ್ ಹೊಬಾರ್ಟನು ಇಂಗ್ಲಿಷ್ ಸರ್ಕಾರದ 'ಕೋರ್ಟ್ ಆಫ್ ಡೈರೆಕ್ಟರ್ಸ್'ಗೆ, ಈ ಪಾಳೆಯಗಾರರು ಬ್ರಿಟಿಷ್ ಸರ್ಕಾರದ ಉಪಯುಕ್ತ ಪ್ರಜೆಗಳಾಗಿ ಸೇವೆ ಸಲ್ಲಿಸುವಂತಾಗುವ ಕೆಲವು ವಿಧಾನಗಳನ್ನು ಮನಗಾಣಿಸಿಕೊಟ್ಟನು. ಸರ್ಕಾರವು ಈತನ ಸಲಹೆಗಳನ್ನು ಮಾನ್ಯ ಮಾಡುವುದರೊಡನೆ ಅದಕ್ಕೆ ಮೊದಲು ೧೭೮೯ರಲ್ಲಿ ನೀಡಿದ ಆದೇಶವನ್ನೂ ಅನುಸರಿಸುವಂತೆ ಸೂಚಿಸಿತು. ಪಾಳೆಯಗಾರರ ಅಧಿಕಾರವನ್ನು ಮೊಟಕು ಮಾಡುವುದು, ಆಯಾ ಪ್ರಾಂತ್ಯದ ಉತ್ಪನ್ನವನ್ನು ನಿಗದಿತ ರೂಪದಲ್ಲಿ ಸಂಗ್ರಹಿಸುವುದು, ಪಾಳೆಯಗಾರರ ಅತಿವೆಚ್ಚವನ್ನು ಕಡಿತಗೊಳಿಸುವುದು, ಇತ್ಯಾದಿ ಕ್ರಮಗಳು ಅನುಸರಿಸಲ್ಪಟ್ಟವು.[52]

೧೭೯೯ರಲ್ಲಿ ಟಿಪ್ಪುವನ್ನು ಅಂತಿಮವಾಗಿ ಹತ್ತಿಕ್ಕಿದ ನಂತರ, ೧೮೦೧ ಡಿಸೆಂಬರ್ ೧ ರಂದು ಮಾಡಲಾದ ಘೋಷಣೆಯಲ್ಲಿ, ಇಂಗ್ಲಿಷ್ ಸರ್ಕಾರವು ಈ ಪಾಳೆಯಗಾರರ ಮೇಲೆ ಶಸ್ತ್ರನಿಷೇಧ ಕಾಯಿದೆಯನ್ನು ಹೇರುವುದರೊಡನೆ ಸರ್ವರಿಗೂ ಕ್ಷಮಾದಾನದ ವಾಗ್ದಾನ ಮಾಡಿತು; ಅವರವರ ಸಂಸ್ಥಾನದ ವ್ಯಾಪ್ತಿ, ಹುಟ್ಟುವಳಿ, ಇತ್ಯಾದಿಗಳ ಆಧಾರದ ಮೇಲೆ ಅವರಿಗೆ ಪ್ರತಿಫಲವನ್ನು ಗೊತ್ತುಪಡಿಸುವ ಆಶ್ವಾಸನೆ ನೀಡಿತು. ಎಂ. ಶಾಮರಾವ್ ಅವರು ಉಲ್ಲೇಖಿಸಿರುವಂತೆ, ೧೭೯೯ರಲ್ಲಿ ಶ್ರೀರಂಗಪಟ್ಟಣದ ಮೇಲೆ ಇಂಗ್ಲಿಷರು ಸಾಧಿಸಿದ ವಿಜಯದಿಂದ ಪ್ರೇರಿತರಾದ ಹಲವು ಪಾಳೆಯಗಾರರು, ತಮ್ಮ ಜಹಗೀರು ಮತ್ತು ಪಾಳೆಯಪಟ್ಟಗಳನ್ನು ಪುನರ್ ಸ್ಥಾಪನೆಗೊಳಿಸಲು ಇಂಗ್ಲಿಷ್ ಸರ್ಕಾರಕ್ಕೆ ಮನವಿ ಸಲ್ಲಿಸಿದರು. ಈ ಪಾಳೆಯಗಾರರ ಗುಣ-ಸ್ವಭಾವಗಳನ್ನು ಅರಿತುಕೊಂಡಿದ್ದ ಆಗಿನ ಗೌರ್ನರ್ ಜನರಲ್ ಲಾರ್ಡ್ ಮಾರ್ನಿಂಗ್‌ಟನ್ ಇದಕ್ಕೆ ಸಮ್ಮತಿಸದೆ, ಗೌರವವೇತನ (Pension) ರೂಪದಲ್ಲಿ ಅವರು ಕೇಳಿದ ಇತರ ರಿಯಾಯಿತಿಗಳನ್ನು ನೀಡಬಹುದೆಂದು ಸೂಚಿಸಿದನು.[53]

ಮುಮ್ಮಡಿ ಕೃಷ್ಣರಾಜ ಒಡೆಯನ ಹೆಸರಿನಲ್ಲಿ ಬ್ರಿಟಿಷ್ ರೆಸಿಡೆಂಟನಿರುವ ಹೊಸ ಸರ್ಕಾರವು ಮೈಸೂರಿನಲ್ಲಿ ಸ್ಥಾಪಿತವಾಯಿತು. ಪೂರ್ಣಯ್ಯನು ದಿವಾನನಾಗಿ ಮುಂದುವರೆದನು. ಅಧಿಕಾರ ಮತ್ತು ಪ್ರಭಾವಗಳಿಲ್ಲದೆ ಹೆಸರಿಗಷ್ಟೆ ಪಾಳೆಯಗಾರರೆನಿಸಿದ್ದವರಿಗೆ ಅಥವಾ ಉಳಿದುಬಂದಿದ್ದ ಅವರ ವಂಶೀಕರಿಗೆ ಗೌರವವೇತನವನ್ನು ನಿಗದಿಪಡಿಸುವಲ್ಲಿ ಈತನು ಪ್ರಮುಖ ಪಾತ್ರ ವಹಿಸಿದನು. ಇಂಗ್ಲಿಷರ ಮಧ್ಯಸ್ಥಿಕೆಯಿಂದ ಮಾತ್ರವೇ ಈ ಸಹಾಯಧನವನ್ನು ನೀಡುವ ವ್ಯವಸ್ಥೆ ಮೊದಲಿಟ್ಟಿತೆನ್ನುವುದು ಗಮನೀಯ.

ಗೌರವವೇತನವನ್ನು ಸ್ವೀಕರಿಸುವುದರೊಡನೆ ಬದಲಾದ ವ್ಯವಸ್ಥೆಗೆ ಬಹುಪಾಲು ಮಂದಿ ಪಾಳೆಯಗಾರರು ಹೊಂದಿಕೊಂಡರು. ಇವರಲ್ಲಿ ಕೆಲವರನ್ನು ಪ್ರಜಾಪಾಲಿತದಲ್ಲಿಯೂ ಮತ್ತೆ ಕೆಲವರನ್ನು ಸೇನಾಡಳಿತದಲ್ಲಿಯೂ ಅಧಿಕಾರಿಗಳನ್ನಾಗಿ ನೇಮಿಸಿಕೊಳ್ಳಲಾಯಿತು. ಗೌರವವೇತನವನ್ನು ಪಡೆಯುವ ಪಾಳೆಯಗಾರರು ಮೈಸೂರು ನಗರದಲ್ಲಿಯೇ ಸತತವಾಗಿ ವಾಸಿಸುವಂತೆಯೂ ದಿವಾನನು ಪ್ರವಾಸ ಕೈಗೊಂಡಾಗಲೆಲ್ಲ ಇವರೂ ಅವನೊಡನೆ ಸಂಚರಿಸುತ್ತಿರುವಂತೆಯೂ ಮಾಡ

52 Ibid., pp. 59-60

53 *Modern Mysore from the Beginning to 1868*, Vol. II, Bangalore, 1936, pp. 348-349

ಲಾಯಿತು. ಪೂರ್ಣಯ್ಯನು ಇಂತಹ ಪಾಳೆಯಗಾರರನ್ನು ಸದಾ ಗೌರವದಿಂಡಲೂ ಪ್ರೀತಿ-ವಿಶ್ವಾಸಗಳಿಂದಲೂ ನಡೆಸಿಕೊಳ್ಳುತ್ತಿದ್ದನೆನ್ನಲಾಗಿದೆ.[54]

ಪಾಳೆಯಗಾರರ ಒಟ್ಟು ಸಂಖ್ಯೆಯನ್ನು ಗುರುತಿಸುವ ದೃಷ್ಟಿಯಿಂದ ೧೮೩೧ ರಲ್ಲಿ ಜಾರಿಗೆ ಬಂದ ಕಮಿಷನರುಗಳ ಆಡಳಿತವು ಇನ್ನೊಂದು ಮುಖ್ಯವಾದ ಘಟ್ಟ. ಈ ದಿಸೆಯಲ್ಲಿ ಈ ಅವಧಿಯ ಆಡಳಿತಕ್ಕೆ ಸಂಬಂಧಿಸಿದ ಕೆಲವು ಕಾಗದ-ಪತ್ರಗಳು ಬೆಳಕು ಹಾಯಿಸುತ್ತವೆ. ೧೮೩೩ ರಿಂದ ೧೯೪೪ ರ ಅವಧಿಯ ಪತ್ರಗಳು ಹಾಗೂ ಪ್ರಕಟಣೆಗಳು ಮೈಸೂರು ಪಾಳೆಯಗಾರ ಕುಟುಂಬಗಳ ಪರಿಸ್ಥಿತಿಯನ್ನೂ ಸ್ಥಾನ-ಮಾನಗಳನ್ನೂ ಸೂಕ್ಷ್ಮವಾಗಿ ವ್ಯಕ್ತಪಡಿಸುತ್ತವೆ.[55] ರಾಮಚಂದ್ರರಾವ್ ಅವರು ತಮ್ಮ ಕೃತಿಯಲ್ಲಿ ಉಲ್ಲೇಖಿಸಿರುವ, ಪಾಳೆಯಗಾರರ ಗೌರವ ವೇತನಕ್ಕೆ ಸಂಬಂಧಿಸಿದಂತೆ ಇಂಗ್ಲಿಷ್ ಸರ್ಕಾರವು ಹೊರಡಿಸಿದ ಆದೇಶದ ಸಂಖ್ಯೆ ೧೬೭೮ : ದಿನಾಂಕ ೨೯ ಅಕ್ಟೋಬರ್ ೧೮೮೭ ರ ಪ್ರಕಾರ, ಹಣದ ಮೌಲ್ಯದ ಕುಸಿತದ ಕಾರಣ ಸರ್ಕಾರವು ೧೮೬೦ ಮತ್ತು ೧೮೬೫ರಲ್ಲಿ ಒಟ್ಟು ಎರಡು ಬಾರಿ ಈ ಪಾಳೆಯಗಾರರ ಗೌರವವೇತನವನ್ನು ಕ್ರಮವಾಗಿ ಶೇಕಡ ೫೦ ಮತ್ತು ೨೫ ರಷ್ಟು ಹೆಚ್ಚಿಸಿತು.[56]

ರಾಜ್ಯ ಪತ್ರಾಗಾರದಲ್ಲಿಯ ಪತ್ರಗಳು ಈ ಅಂಶವನ್ನು ಸಮರ್ಥಿಸುವುದರೊಡನೆ ೧೮೩೪ರಲ್ಲೆ ಇಂತಹ ಪ್ರಯತ್ನ ನಡೆದುದರ ಬಗೆಗೂ ತಿಳಿಸಿಕೊಡುತ್ತವೆ. ಆ ವರುಷದಲ್ಲಿ ಜನರಲ್(ಸರ್)ಮಾರ್ಕ್ ಕಬ್ಬನ್ ಮೈಸೂರು ಸಂಸ್ಥಾನದ ಕಮಿಷನರ್ ಆಗಿ ನೇಮಕಗೊಂಡನಲ್ಲದೆ, ಪಾಳೆಯಗಾರರ ಗೌರವವೇತನದ ಮೊತ್ತವನ್ನೂ ಪರಿಷ್ಕರಿಸಿದನು. ಪೂರ್ಣಯ್ಯನ ಕಾಲದಿಂದ (೧೭೯೯) ೧೮೩೪ ರ ಜನವರಿ ತಿಂಗಳವರೆಗೆ ಮೈಸೂರು ಸರ್ಕಾರದಿಂದ ಗೌರವ ವೇತನ ಪಡೆಯುತ್ತಿದ್ದ ಎಲ್ಲ ಪಾಳೆಯಗಾರರ ಯಾದಿಯು ಅವರುಗಳಿಗೆ ನೀಡಲಾಗುತ್ತಿದ್ದ ವೇತನವನ್ನು ಹೆಚ್ಚಿಸಿದ ಮತ್ತು ಕಡಿಮೆಗೊಳಿಸಿದ ವಿವರ ಸಹಿತ ಲಭ್ಯವಿದ್ದು, ಈ ಯಾದಿಯು ಚಿತ್ರದುರ್ಗ, ಗುಡೇಕೋಟೆ, ಗುಮ್ಮನಾಯಕನಪಾಳ್ಯ, ಚಿಕ್ಕಬಳ್ಳಾಪುರ, ರಾಯದುರ್ಗ, ಬೆಳಗುತ್ತಿ, ಬಲಂ, ಕೆಂಚನಗುಡ್ಡ, ವಿಜಯರಾಮನಗರ (ವಿಶಾಖಪಟ್ಟಣ-ಆಂಧ್ರ), ಆನೇಕಲ್ಲು, ತರೀಕೆರೆ, ಮೊಳಕಾಲ್ಮೂರು, ಬಾಗಲೂರು (ಸೇಲಂ-ತಮಿಳುನಾಡು), ಐಗೂರು ಮತ್ತು ಆನೆಗೊಂದಿ—ಈ ಹದಿನೈದು ಪಾಳೆಯಗಾರ ಮನೆತನಗಳ ಹೆಸರುಗಳನ್ನು ಒದಗಿಸುತ್ತದೆ. ಈ ವೇಳೆಗೆ ಈ ಹದಿನೈದು ಮನೆತನದ ಒಟ್ಟು ೮೬ ವಂಶೀಕರು ಸರ್ಕಾರದಿಂದ ಗೌರವವೇತನ ಪಡೆಯುತ್ತಿದ್ದರು.[57] ೧೮೩೪ರಲ್ಲಿ ಈ ಯಾದಿಗೆ ಗುಡಿಬಂಡೆ, ಮುದಿಮಡಗು ಮತ್ತು ದೇವನಹಳ್ಳಿ ಪಾಳೆಯಪಟ್ಟುಗಳ ವಂಶಸ್ಥರನ್ನು ಸೇರಿಸಿ ಅವರಿಗೂ ಗೌರವವೇತನವನ್ನು ಗೊತ್ತುಪಡಿಸಲಾಯಿತು.[58] ಹೀಗೆ ಒಟ್ಟು ಹದಿನೆಂಟು ಪಾಳೆಯಗಾರ ಮನೆತನಗಳ ವಿವರವು ದೊರಕುತ್ತದೆ.

೧೮೫೪ರ ಪತ್ರವೊಂದು ಮೈಸೂರು ಪ್ರಾಂತ್ಯದಲ್ಲಿದ್ದ ಪಾಳೆಯಗಾರರು, ಅವರ ವಂಶಸ್ಥರು ಮತ್ತು ಅವರ ಸ್ಥಿತಿಗತಿಗಳ ಬಗೆಗೆ ವಿಮರ್ಶಿಸುತ್ತದೆ.[59] ಮೈಸೂರು ಪಾಳೆಯಗಾರರ ವಿವರಗಳನ್ನು ಕೋರಿ ಚಿತ್ತೂರಿನ ನ್ಯಾಯಾಧೀಶರಿಂದ ಮೈಸೂರು ಸರ್ಕಾರಕ್ಕೆ

---

54 Ibid., p. 349

55 ಈ ಕಾಗದ-ಪತ್ರಗಳನ್ನು ಬೆಂಗಳೂರಿನ ಕರ್ನಾಟಕ ರಾಜ್ಯ ಪತ್ರಾಗಾರದಲ್ಲಿ ಸಂರಕ್ಷಿಸಿಡಲಾಗಿದೆ. ಇವುಗಳನ್ನು ಪರಿಶೀಲಿಸಲು ಹಾಗೂ ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲು ಅನುಮತಿಯಿತ್ತ ಪತ್ರಾಗಾರದ ನಿರ್ದೇಶಕರಿಗೆ ಕೃತಜ್ಞನಾಗಿದ್ದೇನೆ.

56 *The Poligars of Mysore and Their Civilization*, pp. 60-61

57 Finance Department : *Salary & Allowences* (S. A.) : No. 1 of 1833-34 : *Increased rate of Pension to Palyagars*, S. No. 12

58 S. A., No. 1 of 1833-34 : *Yadi to Kandachar Cutchery-dated 25th September 1834*, S. No. 219

59 S. A.. No. 1 of 1854 : *Names of Pallegars and their male dependents residing in different taluks*, S. No. 1

ಬಂದ ಪತ್ರವನ್ನು ತನ್ನ ಆದೇಶದೊಡನೆ (ಸಂಖ್ಯೆ ೩೭೬, ದಿನಾಂಕ ೯ ಮಾರ್ಚ್ ೧೮೫೫) ಖಜಾನೆಬಕ್ಷಿಗೆ ರವಾನಿಸಿತು. ಈ ಬಕ್ಷಿಯು ಅದಕ್ಕೆ ಸೂಕ್ತ ವರದಿಯನ್ನು ಸಿದ್ಧಪಡಿಸಿ (ದಿನಾಂಕ ೨೩ ಮಾರ್ಚ್) ಒಪ್ಪಿಸಿರುವನು.

ಮೈಸೂರು ಪ್ರಾಂತ್ಯದ ಪಾಳೆಯಗಾರರು ಚಿತ್ತೂರು ಜಿಲ್ಲೆಯಲ್ಲಿರುವಂತೆ ಇನಾಂ ಭೂಮಿಯನ್ನು ಅನುಭವಿಸುತ್ತಿಲ್ಲವೆಂದೂ ಗೌರವವೇತನವನ್ನು ಪಡೆಯುವವರಲ್ಲಿ ಮಂಜರಾಬಾದ್ (ಬಲಂ), ಚಿತ್ರದುರ್ಗ ಮತ್ತು ಚಿಕ್ಕ(ಭೋಟಾ)ಬಳ್ಳಾಪುರ ಪಾಳೆಯಗಾರರ ವಿನಾ ಉಳಿದವರನ್ನು ಖಜಾನೆಯು ಪರಿಗಣನೆಗೆ ತೆಗೆದುಕೊಂಡಿಲ್ಲವಾದ್ದರಿಂದ ಅವರು ಸರ್ಕಾರದಿಂದ ಗೌರವವೇತನವನ್ನು ಪಡೆಯುತ್ತಿಲ್ಲವೆಂದೂ ಈ ಕಾರಣದಿಂದ ಪಾಳೆಯಗಾರರ ವಿವರಗಳನ್ನು ಸಂಗ್ರಹಿಸುವಲ್ಲಿ ತಾನು ಅಸಮರ್ಥನಾಗಿರುವೆನೆಂದೂ ಈ ಬಕ್ಷಿಯು ತನ್ನ ವರದಿಯಲ್ಲಿ ತಿಳಿಸಿರುವನು. ಈತನು ಮುಂದುವರೆದು, ಗೌರವವೇತನ ಪಡೆಯುವವರು ಮತ್ತು ಇತರ ಪಾಳೆಯಗಾರರ ಬಗೆಗೆ ಮೈಸೂರಿನ ಚಾರಿತ್ರಿಕ ಕಥನಗಳಲ್ಲಿ ಮಾಹಿತಿಯಿದ್ದರೂ ಯಾವ ಆಧಾರದ ಮೇಲೆ ಅವರು ಗೌರವವೇತನವನ್ನು ಪಡೆಯುತ್ತಿರುವರೆಂಬುದಕ್ಕೆ ತಕ್ಕ ಸೂಚನೆ ದೊರೆಯುವುದಿಲ್ಲವೆಂದೂ ಆದ್ದರಿಂದಲೇ ಈ ಗೌರವವೇತನ ಪಡೆಯುವ ಹಕ್ಕನ್ನು ಸಮರ್ಥಿಸಲೋಸುಗ ತಮ್ಮಲ್ಲಿರುವ ದಾಖಲೆಗಳನ್ನು ತಂದು ತನಗೆ ತೋರಿಸಬೇಕೆಂದು ಆದೇಶ ಹೊರಡಿಸಿರುವೆನೆಂದೂ ಅಂತಹ ದಾಖಲೆಗಳನ್ನು ಪಾಳೆಯಗಾರರು ತನಗೆ ತಲುಪಿಸಿದ ನಂತರ ಮೈಸೂರು ಪಾಳೆಯಗಾರರ ವಿವರಗಳನ್ನು ಪ್ರಭುಗಳ ಸನ್ನಿಧಿಗೆ ಸಲ್ಲಿಸುವೆನೆಂದೂ ಬರೆದುಕೊಂಡಿರುವನು.

ಈ ಪತ್ರವು ಮೈಸೂರು ರಾಜ್ಯದ ವ್ಯಾಪ್ತಿಗೊಳಪಡುವ ಪಾಳೆಯಗಾರರ ಪಟ್ಟಿಯನ್ನು ಸಿದ್ಧಪಡಿಸಲು ಇತರ ಅಧಿಕಾರಿಗಳಿಗೆ ಪ್ರೇರಣೆ ನೀಡಿತೆನ್ನುವುದನ್ನು ಮುಖ್ಯವಾಗಿ ಇಲ್ಲಿ ಗಮನಿಸಬೇಕು. ಖಜಾನೆಬಕ್ಷಿಯ ವರದಿ(ಅರ್ಜಿ)ಗೆ ಉತ್ತರರೂಪದಲ್ಲಿರುವ ನಿವೇದನ ಪತ್ರವೊಂದು,[60] ಮೈಸೂರು ಪಾಳೆಯಗಾರರ ಬಗೆಗೆ ಖಜಾನೆಬಕ್ಷಿ ನೀಡಿರುವ ವಿವರಗಳಿಗಿಂತ ಹೆಚ್ಚಿನ ಮಾಹಿತಿಯೇನೂ ಕಚೇರಿಯಲ್ಲಿ ಇಲ್ಲವೆಂದೂ ಈ ಸಂಬಂಧದಲ್ಲಿ ಸರ್ಕಾರದ ಎಲ್ಲ ಅಧೀಕ್ಷರುಗಳಿಗೂ ಸುತ್ತೋಲೆಯೊಂದನ್ನು ಕಳುಹಿಸಿ, ಅವರ ವಿಭಾಗ(Division)ಗಳ ವ್ಯಾಪ್ತಿಗೊಳಪಡುವ ತಾಲ್ಲೂಕುಗಳ ಅಮಲ್ದಾರರುಗಳಿಂದ ಆಯಾ ವಿಭಾಗದಲ್ಲಿರುವ ಎಲ್ಲ ಪಾಳೆಯಗಾರರು ಮತ್ತು ಅವರ ಸಂಬಂಧಿಕರ ಹೆಸರುಗಳು ಹಾಗೂ ತಮ್ಮ ಜೀವನ ನಿರ್ವಹಣೆಗೆ ಅವರು ಏನು ಮಾಡಿಕೊಂಡಿರುವರೆಂಬುದರ ಬಗೆಗಿನ ವಿವರಗಳ ಸಹಿತ ಯಾದಿಯೊಂದನ್ನು ಸಿದ್ಧಪಡಿಸಿಕೊಡುವಂತೆ ಆದೇಶಿಸಲು ಕೋರಬೇಕೆಂದೂ ತಿಳಿಸುತ್ತದೆ.

ಮೈಸೂರು ಸಂಸ್ಥಾನದಲ್ಲಿರುವ ಪಾಳೆಯಗಾರರೆಲ್ಲರ ಯಾದಿಯನ್ನು ಸಿದ್ಧಪಡಿಸಬೇಕೆನ್ನುವ ಮೇಲೆ ಪ್ರಸ್ತಾಪಿಸಿದ ನಿವೇದನ ಪತ್ರದಲ್ಲಿರುವ ಸಲಹೆಯನ್ನು ಸರ್ಕಾರವು ಅಂಗೀಕರಿಸಿ, ೧೮೫೫ ಮೇ ೯ ರಂದು ಸಂಸ್ಥಾನದ ನಾಲ್ಕು ಆಡಳಿತ ವಿಭಾಗಗಳ ಅಧೀಕ್ಷಕರುಗಳಿಗೆ ಸುತ್ತೋಲೆಯನ್ನು ಕಳುಹಿಸಿದ ಬಗೆಗೆ ದಾಖಲೆಯಿದೆ.[61] ಈ ಸುತ್ತೋಲೆಗೆ ಅಧೀಕ್ಷಕರುಗಳು ಪ್ರತಿಕ್ರಿಯಿಸಿದ್ದು, ನಗರ (ಶಿವಮೊಗ್ಗ) ವಿಭಾಗದಿಂದ ಬಂದ ವರದಿಯಲ್ಲಿ, ಆ ವಿಭಾಗದ ವಿವಿಧ ತಾಲ್ಲೂಕುಗಳಲ್ಲಿ ವಾಸಿಸುವ ಪಾಳೆಯಗಾರರು ಮತ್ತು ಅವರ ಪುರುಷ ಅವಲಂಬಿತರ ವಿವರಗಳಿವೆ.[62] ಉಳಿದ ಮೂರು ಆಡಳಿತ ವಿಭಾಗಗಳಾದ ಬೆಂಗಳೂರು,[63] ಚಿತ್ರದುರ್ಗ[64] ಮತ್ತು ಅಷ್ಟಗ್ರಾಮ(ಮೈಸೂರು)[65]ಗಳಿಂದ ಯಾದಿ

---

60 S. A., No. 1 of 1854 : *Memorandum, 5th May 1855,* Letter No. 2

61 S. A., No. 1 of 1854 : *Mysore Commissoner's Office Circular to the Superintedents of the Four Divisions, 9th May 1855,* No. 21/3

62 S. A., No. 1 of 1854, Letter No. 148/4 & 4a, 18th June 1855

63 S. A., No. 1 of 1854, Letter No. 176/5, 20th July 1855

64 S. A., No. 1 of 1854, Letter No. 275/6, 15th August 1855

65 S. A., No. 1 of 1854, Letter No. 307/7, 26th September 1855

ಯನ್ನು ಕಳುಹಿಸಲಾಗಿದೆಯೆಂದು ಅಧೀಕ್ಷರುಗಳು ತಮ್ಮ ಪತ್ರಗಳಲ್ಲಿ ತಿಳಿಸಿದ್ದರೂ ಅಂತಹ ಯಾದಿಗಳು ಆಯಾ ಪತ್ರಗಳ ಜತೆಯಲ್ಲಿ ಇಲ್ಲದಿರುವುದು ಗಮನಾರ್ಹ. ಬಹುಶಃ ಅನ್ಯ ಉದ್ದೇಶಕ್ಕಾಗಿ ಅವುಗಳನ್ನು ಆಗಲೇ ಪ್ರತ್ಯೇಕಿಸಿದ್ದಿರಬಹುದು.

೧೮೬೦ರ ವೇಳೆಗೆ ಸರ್ಕಾರವು ಸಿದ್ಧಪಡಿಸಿದ ಮೈಸೂರು ಪಾಳೆಯಗಾರರ ಯಾದಿಯಲ್ಲಿ ಹದಿನೇಳು ಮನೆತನಗಳನ್ನು ಗುರುತಿಸಲಾಯಿತು. ಕಮಿಷನರ್ ಹುದ್ದೆಗೆ ೧೮೬೧ರಲ್ಲಿ ಮಾರ್ಕ್ ಕಬ್ಬನ್ ರಾಜೀನಾಮೆ ಕೊಡುವ ಮುನ್ನವೇ, ಅಂದರೆ ೧೮೬೦ರಲ್ಲಿ, ಈ ಪಾಳೆಯಗಾರರ ಗೌರವವೇತನವನ್ನು ಮತ್ತೊಮ್ಮೆ ಪರಿಷ್ಕರಿಸಿದನು. ಪೂರ್ಣಯ್ಯ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರ ಅವಧಿಯಲ್ಲಿ ಇದ್ದ ಪಾಳೆಯಪಟ್ಟುಗಳ ಸಂಖ್ಯೆಯು ಹದಿಮೂರು ಇದ್ದು, ಹೊಸ ಸರ್ಕಾರ ಘೋಷಣೆಯ ತರುವಾಯ ಅದು ಹದಿನೆಂಟಕ್ಕೆ ಏರಿಸಲ್ಪಟ್ಟು ಅನಂತರ ೪೯ ಸದಸ್ಯರುಳ್ಳ ಹದಿನೇಳು ಮನೆತನಗಳಿಗೆ ಸೀಮಿತಗೊಂಡಿತು. ದಾಖಲೆಗಳಲ್ಲಿ ಈ ಹದಿನೇಳು ಪಾಳೆಯಪಟ್ಟುಗಳ ಯಾದಿ ಸಹಿತವಾದ ಇತರ ವಿವರಗಳು ಕಂಡುಬರುತ್ತವೆ.[66]

೧೮೬೨ ರಲ್ಲಿ ಕಮಿಷನರ್ ಆಗಿ ಅಧಿಕಾರ ಸ್ವೀಕರಿಸಿದ ಲೆವಿನ್ ಬಿ. ಬೌರಿಂಗ್ ಸಹ ೧೮೬೪ ರಲ್ಲಿ ಪಾಳೆಯಗಾರರ ಗೌರವವೇತನವನ್ನು ಶೇಕಡ ೨೫ ರಷ್ಟು ಹೆಚ್ಚಿಸಿದನು.[67] ಇವನ ಅವಧಿಯಲ್ಲಿ ಗೌರವವೇತನವನ್ನು ಪಡೆಯುತ್ತಿದ್ದ ಪಾಳೆಯಗಾರ ಮನೆತನಗಳವರ ಸಂಖ್ಯೆಯು ಹದಿನಾರು ಇದ್ದು, ಈ ಮನೆತನಗಳ ಒಟ್ಟು ೫೭ ಮಂದಿ ಈ ವೇತನವನ್ನು ಅನುಭವಿಸುತ್ತಿದ್ದರು. ಈ ಹದಿನಾರು ಮನೆತನಗಳವರೆಂದರೆ, ಚಿತ್ರದುರ್ಗ, ಮೊಳಕಾಲ್ಮೂರು, ಚಿಕ್ಕಬಳ್ಳಾಪುರ, ಗುಮ್ಮನಾಯಕನಪಾಳ್ಯ, ತರೀಕೆರೆ, ಬಾಗಲೂರು, ಮಂಜರಾಬಾದ್, ಕೆಂಚನಗುಡ್ಡ, ರಾಯದುರ್ಗ, ಬೆಳಗುತ್ತಿ, ಗುಡಿಕೋಟೆ, ಗುಡಿಬಂಡ, ದೇವನಹಳ್ಳಿ, ಆನೆಕಲ್ಲು, ಮುದಿಮಡಗು ಮತ್ತು ಆನೆಗೊಂದಿ.

ಪಾಳೆಯಗಾರ ಮನೆತನಗಳ ನಿರ್ದಿಷ್ಟ ಸಂಖ್ಯೆಯನ್ನು ತಕ್ಕಮಟ್ಟಿಗೆ ಗುರುತಿಸುವ ದಿಸೆಯಲ್ಲಿ ೧೮೬೪–೬೫ರ ಇನ್ನೊಂದು ದಾಖಲೆಯು[68] ಅತ್ಯಂತ ಗಮನಾರ್ಹವಾದುದು. ಬಿ. ರಾಮಸ್ವಾಮಿ ಎಂಬ ವ್ಯಕ್ತಿಯು ಸಿದ್ಧಪಡಿಸಿರುವ ಯಾದಿಯಲ್ಲಿ ಈ ಮುಂದಿನಂತೆ ಮೈಸೂರು ಪ್ರಾಂತ್ಯದ ಒಟ್ಟು ನಲವತ್ತೆರಡು ಪಾಳೆಯಗಾರ ಮನೆತನಗಳ ಹೆಸರುಗಳು ಕಂಡುಬರುತ್ತವೆ : ಚಿತ್ರದುರ್ಗ, ಮೊಳಕಾಲ್ಮೂರು, ಚಿಕ್ಕಬಳ್ಳಾಪುರ, ಗುಮ್ಮನಪಾಳ್ಯ, ತರೀಕೆರೆ, ಮಂಜರಾಬಾದ್, ಕೆಂಚನಗುಡ್ಡ, ಬೆಳಗುತ್ತಿ, ದೇವನಹಳ್ಳಿ, ಗುಡಿಬಂಡ, ಆನೆಕಲ್, ಮುದಿಮಡಗು, ಕೊರಟಗೆರೆ, ಹಾಗಲವಾಡಿ, ಕೆಳದಿ, ಮಾಗಡಿ, ಮದ್ದೂರು–ಚೆನ್ನಪಟ್ಟಣ, ಗುಬ್ಬಿ–ಹೊಸಹಳ್ಳಿ, ದೊಡ್ಡಬಳ್ಳಾಪುರ, ಯಲಹಂಕ, ಬೆಂಗಳೂರು, ಬಲಂ, ಬಿಳಿಚೋಡು, ಸುಣಕಲ್, ಚೆನ್ನರಾಯಪಟ್ಟಣ, ನುಗ್ಗಿಹಳ್ಳಿ, ನಿಡುಗಲ್ಲು, ಮತ್ತೋಡು, ಕುಂದೂರು–ಮಹಾರಾಜನದುರ್ಗ, ಮ್ಯಾಕಳನಾಯಕಪಾಳ್ಯ, ಹುಲಿಯೂರುದುರ್ಗ, ಉತ್ತರಿದುರ್ಗ, ಚಂದ್ರಗುತ್ತಿ, ದಾಸನಾಯಕನಪಾಳ್ಯ, ಮಧುಗಿರಿ, ಘಾಟ್‌ಪಾಳ್ಯ, ನಾಯಕನಹಟ್ಟಿ, ಐಗೂರು, ತಿಮ್ಮಳನಾಯ್ಕನ ಹೊಸಕೋಟೆ, ಸಿರಾ, ಮಿಡಿಗೇಶಿ, ಹುಲಿಕಲ್ ಮತ್ತು ಮಾಸ್ತಿ. ಇವುಗಳಲ್ಲದೆ, ಕಂಪನಿಯ ಸರ್ಕಾರದಲ್ಲಿ ಇನ್ನೂ ನಲವತ್ತೆರಡು ಪಾಳೆಯಪಟ್ಟುಗಳು ಇರುವುವೆಂದು ತಿಳಿದುಬರುತ್ತದೆಂದೂ ತನಗೆ ದೊರೆತ ಆದೇಶದಂತೆ ಅವುಗಳನ್ನು ಈ ಯಾದಿಯಲ್ಲಿ ಸೇರಿಸಿಲ್ಲ

---

66 S. A., No. 1 of 1854, *Memorandum, 13th January 1860* & *Nominal List of all the Polegars receiving Pensions, and their respective allowances, with the proposed increase*

67 S. A., No. 1 of 1864-65, *Incresae rate of Pension to Poliyagars during the year 1864*, Letter No. 337 of dated 6th December 1877

68 S. A., No. 1 of 1864-65, *Increase rate of Pension to Paliyagars during the year 1865 : Statement shewing the number of the Pollaims in Mysore*, Letter No. 18/1

ವೆಂದೂ ಈತನು ಈ ಪತ್ರದ ಕಡೆಯಲ್ಲಿ ಸೂಚಿಸಿರುವನು.

ಆದರೆ ಈ ಯಾದಿಯು ಮೈಸೂರು ಪಾಳೆಯಗಾರರ ಸಂಖ್ಯಾಬಲದ ಬಗೆಗೆ ಬೆಳಕು ಚೆಲ್ಲುತ್ತದೆಂದರೂ ಇದು ಕೇವಲ ಇಂಗ್ಲಿಷ್ ಸರ್ಕಾರದ ಅಧಿಕಾರದ ಮುದ್ರೆ ಪಡೆದ ಮನೆತನಗಳನ್ನು ಮಾತ್ರ ಒಳಗೊಂಡಿದೆಯೆಂದು ಭಾವಿಸಲೂ ಅವಕಾಶವಿದೆ. ಇಂತಹ ಇನ್ನೂ ಹಲವಾರು ಪಾಳೆಯಗಾರ ಮನೆತನಗಳು ಮೈಸೂರಿನಲ್ಲಿದ್ದವೆಂಬುದನ್ನು ಈ ಮೇಲೆ ಪ್ರಸ್ತಾಪಿಸಿದ ಹಾಗೂ ವಿವಿಧ ಮೂಲಗಳನ್ನಾಧರಿಸಿದ ಸಂಗತಿಗಳಿಂದ ವ್ಯಕ್ತಪಡುತ್ತದೆ.

೧೮೬೯–೭೦ ರಲ್ಲಿ ಹದಿನಾರು ಪಾಳೆಯಗಾರ ಮನೆತನಗಳಿಗೆ ಸಂಬಂಧಿಸಿದ ೫೬ ಮಂದಿಯೂ ೧೮೭೬ ರಲ್ಲಿ ವಿಜಯನಗರವೂ ಸೇರಿದಂತೆ ಹದಿನೇಳು ಮನೆತನಗಳವರೂ ೧೮೮೯–೯೦ರ ವೇಳೆಗೆ ವಿಜಯನಗರದ ಹೊರತು ಹಿಂದಿನ ಹದಿನಾರು ಮನೆತನಗಳವರೂ ಇಂಗ್ಲಿಷ್ ಸರ್ಕಾರದಿಂದ ಅಂಗೀಕರಿಸಲ್ಪಟ್ಟು ಗೌರವ ವೇತನವನ್ನು ಪಡೆಯುತ್ತಿದ್ದರು.

* * *

ಈಗಾಗಲೇ ಪ್ರಸ್ತಾಪಿಸಿದ ಮೇಲ್ಕಂಡ ಅಂಶಗಳ ಪರಿಶೀಲನೆ–ಪರಾಮರ್ಶೆಯೊಡನೆ ಎಪ್ಪತ್ತೇಳು ಪಾಳೆಯಗಾರರನ್ನು ಕುರಿತ ಕೆಲವು ಆಲೋಚನೆಗಳನ್ನು ಈ ಮುಂದಿನಂತೆ ಮಂಡಿಸಬಹುದು : ೧. '೭' ಎಂಬುದು ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿರುವ ತಾಂತ್ರಿಕ ಹಾಗೂ ಆಧ್ಯಾತ್ಮಿಕ ಭಾವಾಂತರ್ಗತವಾದ ಸಂಖ್ಯೆ (Mystic Number)ಯಾಗಿದ್ದು,'೭೭' ಎಂಬುದು ಸಹ ಕಾಲಕ್ರಮೇಣ ಈ ಮೂಲಾಂಕದ ರೂಪಾಂತರವನ್ನೂ ಅರ್ಥವನ್ನೂ ಹೊಂದಿ ಸಾಂಪ್ರದಾಯಿಕ ಅಥವಾ ಸಾಂಕೇತಿಕ ಕಲ್ಪನೆ (Conventional Conception) ಯನ್ನು ಮೈಗೂಡಿಸಿಕೊಂಡು ವಿಸ್ತಾರಗೊಂಡ ಸಂಖ್ಯೆಯಾಗಿದೆ ; ೨. ಶಿಷ್ಟ ಮತ್ತು ಜಾನಪದ ಸಂಪ್ರದಾಯಗಳ ಹಿನ್ನೆಲೆಯುಳ್ಳ ಧರ್ಮ, ನಂಬಿಕೆ, ಆಚರಣೆ, ಸಾಹಿತ್ಯ, ಇತ್ಯಾದಿಗಳಲ್ಲಿ ಕಂಡುಬರುವ '೭೭'ಅಥವಾ ಇದೇ ವರ್ಗಕ್ಕೆ ಸೇರಿದ ವಿವಿಧ ರಾಶಿಯ ಸಂಖ್ಯಾವಾಚಕಗಳಲ್ಲಿ ಬಹುಪಾಲು ಕೇವಲ ಆಶಯದಿಂದ ಕೂಡಿರುವಂತಹವು ; ೩. '೭೭ ಮಂದಿ ನಾಯಕರು ಅಥವಾ ಪಾಳೆಯಗಾರರು' ಎಂಬುದು ಸಹ ಇಂತಹದೇ ಮೂಲದಿಂದ ಸೃಷ್ಟಿಗೊಂಡು ಪ್ರಚಾರಕ್ಕೆ ಬಂದಿರುವಂತಹದು ; ೪. ಯಾವ ಕಾಲದಲ್ಲೂ ಯಾವ ಪ್ರದೇಶದಲ್ಲೂ ೭೭ ರಷ್ಟು ನಿರ್ದಿಷ್ಟ ಸಂಖ್ಯೆಯಲ್ಲಿ ಪಾಳೆಯಗಾರರು ಅಸ್ತಿತ್ವದಲ್ಲಿದ್ದ ಬಗೆಗೆ ವಿಶ್ವಸನೀಯ ಸೂಚನೆಗಳು ದೊರೆಯುವುದಿಲ್ಲ, ಹಾಗೂ ೫. '೭೭' ಕುರಿತ ಸಂಖ್ಯಾವಾಚಿಗಳು ಸಾಂಪ್ರದಾಯಿಕವಾಗಿ ಮಾತ್ರವಲ್ಲದೆ, ಕೆಲವೊಮ್ಮೆ ಪ್ರತಿಷ್ಠೆಯ ಸಂಕೇತವಾಗಿಯೂ ಬಳಕೆಗೊಂಡಿವೆ.

## ಅನುಬಂಧ

೭ : ಈ '೭' ಸಂಖ್ಯೆಯಿಂದ ಪ್ರಶಸ್ತಿ ಪಡೆದ ಅಸಂಖ್ಯ ಪದಾರ್ಥಗಳು, ಸಂಗತಿಗಳು, ಆಶಯ, ಇತ್ಯಾದಿಗಳು ಇರುವುದು ಶಿಷ್ಟಸಾಹಿತ್ಯಕೃತಿಗಳಿಂದಲೂ ಜನಪದಕಾವ್ಯಗಳಿಂದಲೂ ಶಾಸನಸಾಹಿತ್ಯದಿಂದಲೂ ಚಾರಿತ್ರಿಕ ಕಡತಗಳಿಂದಲೂ ತಿಳಿದುಬರುತ್ತದೆ. ವಿದ್ವಾಂಸರು ಭಾವಿಸಿರುವಂತೆ, ಜಾನಪದ ಮತ್ತು ಜನಪ್ರಿಯ ಸಂಪ್ರದಾಯಗಳಲ್ಲಿ ಸಂಖ್ಯಾ ಆಶಯಗಳಿಗ ಪ್ರಾಮುಖ್ಯತೆಯಿದ್ದು, ಕೆಲವು ಸಂಖ್ಯಾ ಆಶಯಗಳು ಬೆಡಗಿನ ಆಶಯಗಳ ಉದ್ಭವಕ್ಕೂ ಕಾರಣವಾಗಿದ್ದು ಅದರಲ್ಲಿ ಏಳರ ಸಂಖ್ಯೆಯು ಮಹತ್ವಪೂರ್ಣವಾದುದು.[69] ಈ ಸಂಖ್ಯೆಯು ಸಾಮಾನ್ಯವಾಗಿ ಜನಪದಕಥೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆನ್ನುವುದು[70] ಗಮನಾರ್ಹ. ಜಾನಪದದಲ್ಲಿ ಇದು ಪ್ರೇರಣೆಯ ಅಂಕಿಯೆಂತಲೂ ಪುರಾಣ ಮತ್ತು ಶಾಸ್ತ್ರಗಳಲ್ಲಿ ಇದೊಂದು ಗಣನೀಯ ಸಂಖ್ಯೆಯೆಂತಲೂ

69 ದುರ್ಗಾ ಭಾಗವತ್ : ಭಾರತೀಯ ಜಾನಪದ ಸಮೀಕ್ಷೆ (ಅನುವಾದ : ಕೆ. ಮರುಳಸಿದ್ದಪ್ಪ), ಬೆಂಗಳೂರು, ೧೯೭೪, ಪು. ೭೬

70 ಬಿ. ಎನ್. ನಾಗರಾಜಭಟ್ಟ : 'ಜನಪದ ಕಥೆ–ಒಂದು ಪ್ರಾಯೋಗಿಕ ವಿಮರ್ಶೆ', ಹಬ್ಬಲಿ ಅವರ ರಸಬಳ್ಳಿ (ಮೈಸೂರು ಜಿಲ್ಲಾ ಜನಪದ ಕಲಾಮಹೋತ್ಸವದ ನೆನಪಿನ ಸಂಪುಟ), ಮೈಸೂರು, ೧೯೭೬, ಪು. ೧೧೨

ಹಾಗೆಯೇ ಇದೊಂದು ದ್ವೇಷದ ಸಂಖ್ಯೆಯೆಂತಲೂ[71] ಇದರ ಗುಣಾವಲೋಕನ ಮಾಡಲಾಗಿದೆ.

ದಿನ ಒಂದಱಲ್ಲಿ ವಾರ ಏಳು ನೋಡಾ.
ಆ ಏಳು ವಾರಗಳೆಂಬುವುದು ಕಲ್ಪಿತವಲ್ಲದೆ
ದೃಷ್ಟಿಯನ್ನಿಟ್ಟು ನೋಡಬಾರದು ನೋಡಾ.

—ಮಹೇಶ್ವರಸ್ಥಲ, ವಚನ ೫೬೮[72]

ಅಧ್ಯಾತ್ಮತತ್ತ್ವದ ಹಿನ್ನೆಲೆಯಲ್ಲಿ ಸಾಂಕೇತಿಕ ಸತ್ಯವನ್ನು ಒಳಗೊಂಡಂತೆ ರಚನೆಯಾಗಿರುವ ಈ ಬೆಡಗಿನ ವಚನದಲ್ಲಿಯ 'ಕಲ್ಪಿತ' ಶಬ್ದವು 'ಏಳು' ಸಂಖ್ಯೆಯು ಆಶಯರೂಪದ್ದೆಂತಲೂ ಸ್ಪಷ್ಟಪಡಿಸುತ್ತಿರುವುದೆಂದು ಭಾವಿಸಲೂ ಅವಕಾಶವಿದೆ. ಇದರೊಡನೆ, "ಕುಲವೆರಡಲ್ಲದೆ ಹಲವಿಲ್ಲ, ದಿನವೆರಡಲ್ಲದೆ ಸಪ್ತದಿನವಿಲ್ಲ...." ಎಂಬ ಮಧುವಯ್ಯಗಳ ವಚನವೊಂದರ ಸಾಲಿನಲ್ಲೂ[73] ಇಂತಹ ಆಶಯವೇ ವ್ಯಕ್ತಪಟ್ಟಿರುವಂತೆ ತೋರುತ್ತದೆ.

ಈ ಮೂಲಸಂಖ್ಯೆ ಅಥವಾ ಆಧಾರಸಂಖ್ಯೆಯು ವಿಸ್ತಾರಗೊಂಡು ಬಹುಸಂಖ್ಯೆಯಲ್ಲಿ ತನ್ನ ವೈಶಿಷ್ಟ್ಯ, ಮಹತ್ವಗಳನ್ನು ತೋರಿರುವುದಕ್ಕೆ ಹೇರಳ ಉದಾಹರಣೆಗಳಿವೆ. ಇಂತಹ ಸಂಖ್ಯೆಗಳ ಹುಟ್ಟುವಿಕೆ ಹಾಗೂ ಬಳಕೆಯಲ್ಲಿ ವಕ್ತೃವಿನ ಕೈವಾಡವಿರುವುದೂ ಇಲ್ಲಿಯ ಉದಾಹರಣೆಗಳಿಂದ ಸ್ಪಷ್ಟಪಡುತ್ತದೆ. ಲಭ್ಯವಿರುವ ಅಂತಹ ಕೆಲವು ಸಂಖ್ಯೆಗಳನ್ನು ಇಲ್ಲಿ ಪಟ್ಟಿ ಮಾಡಿದೆ ; ಕೆಲವನ್ನು ಸೋದಾಹರಣವಾಗಿ ಪ್ರಸ್ತಾಪಿಸಿದೆ :

೨೦, ೨೦೦, ಇತ್ಯಾದಿ : ಜನಪದಕಾವ್ಯಗಳಲ್ಲಿ ಬರುವ ೨೦ ಮುಚ್ಚಳಗಲ್ಲು, ೨೦ ಜಡೆಯ ಶರಣರು, ೨೦ ಗಾವುದ,[74] ೨೦ ಗಿಳಿಗಳು,[75] ೨೦ ರಾಜ್ಯ,[76] ೨೦ ಬೆಜ್ಜಲು,[77] ೨೦ ಆನೆ, ಕುದುರೆ,[78] ೨೦ ಮಿಣಿ ಮಿಣೆ,[79] ೨೦ ಗಿರಿ,[79ಅ] ೨೦ ಗ್ರಾಮ,[79ಆ] ಇತ್ಯಾದಿ ಈ ೨೦ ಸಂಖ್ಯೆಗೆ ಕೆಲವು ಉದಾಹರಣೆಗಳು. "ಏಳೇ ಮರುಳೋ ಎಪ್ಪತ್ತೇ ಮರುಳೋ" ಎಂಬ ಗಾದೆಯೂ[80] ಇಂತಹ ಆಶಯವನ್ನು ಸ್ವಾರಸ್ಯಕರವಾಗಿ ವ್ಯಕ್ತಪಡಿಸುತ್ತದೆಯೆನ್ನಬಹುದು. ಅಳಿಯಸಂತಾನದಲ್ಲೂ 'ಯಪ್ಪತ್ತು ತಲೆ' ನಡೆದು ಬಂದುದನ್ನು 'ಅಜಿಲರ ಕೈಫಿಯತು' ದಾಖಲಿಸಿದೆ.[81]

ಹಾಗೆಯೇ, ಲಂಕಾನಗರವನ್ನು ಹೊಕ್ಕು ರಾಮಬಂಟ ಹನುಮಂತನು "ಉಕ್ಕುವತಿಶಯ ವೀರರಸದೊಳ ಸೊಕ್ಕಿನಲಿ ಲಂಕಾಪುರವನೆಡಕಿಕ್ಕಿ ಹಾಱಿದನತ್ತ ಮೇಲೇಳ್ನೂಱುಯೋಜನವ" ಎಂಬುದಾಗಲೀ[82] "ಅಱಿದೇಳು

---

71 ಡಾ॥ ಚಂದ್ರಶೇಖರ ಕಂಬಾರ (ಸಂ.) : ಕನ್ನಡ ಜಾನಪದ ವಿಶ್ವಕೋಶ-ಭಾಗ ೧, ಬೆಂಗಳೂರು, ೧೯೮೫, ಪು. ೨೪೭–೪೮

72 ಡಾ॥ ಆರ್. ಸಿ. ಹಿರೇಮಠ (ಸಂ.) : ಶ್ರೀ ಸಿದ್ಧರಾಮೇಶ್ವರ ವಚನಗಳು, ಧಾರವಾಡ, ೧೯೭೯, ಪು. ೧೨೦

73 ಡಾ॥ ಆರ್. ಸಿ. ಹಿರೇಮಠ (ಸಂ.) : ಸಕಲಪುರಾತನರ ವಚನಗಳು, ಧಾರವಾಡ, ೧೯೭೨, ಪು. ೪೬ : ವಚನ ೧೬೮ (೬೮)

74 ಸ. ಚ. ಮಹದೇವನಾಯಕ್ (ಸಂ.) : ಜಾನಪದ ರಸಗಂಗೆ, ಮೈಸೂರು, ೧೯೬೨, ಪು. ೯, ೧೨, ೧೪

75 ದೇಜಗೌ : ಜಾನಪದ ಸೌಂದರ್ಯ, ಮೈಸೂರು, ೧೯೭೭, ಪು. ೪೩ : ಉತ್ತರದೇವಿಯ ಪ್ರಸಂಗ

76 ಕರಾಕೃ (ಸಂ.) : ಗುಡ್ಡಾಗಡಿನ ಹಾಡ್ಗತೆಗಳು, ಮೈಸೂರು, ೧೯೬೩, ಪು. ೫೦ ; ಕೃಷ್ಣಮೂರ್ತಿ ಹನೂರು (ಸಂ.) : ಕತ್ತಾಲ ದಾರಿ ದೂರ, ಬೆಂಗಳೂರು, ೧೯೮೧, ಪು. ೭೨ ; ಪಾಠಾಂ.–'೪೦ ರಾಜ್ಯ'-ಅದೇ, ಪು. ೭೧

77 ನೀ. ಗಿರಿಗೌಡ (ಸಂ.) : ಎರಡು ಜನಪದ ಕಾವ್ಯಗಳು, ಮೈಸೂರು, ೧೯೭೩, ಪು. ೩೨

78 ಮತಿಘಟ್ಟ ರಾಮಸ್ವಾಮಿ, ಮತಿಘಟ್ಟ ಕೃಷ್ಣಮೂರ್ತಿ (ಸಂ.) : ನಾಡಪದಗಳು, ಬೆಂಗಳೂರು, ೧೯೪ , ಪು. ೯೮

79 ಎಚ್. ಎಲ್. ನಾಗೇಗೌಡ (ಸಂ.) : ಸೋಬಾನೆ ಚಿಕ್ಕಮ್ಮನ ಪದಗಳು, ಬೆಂಗಳೂರು, ೧೯೭೨, ಪು. ೭೦, ೧೭೬

79 ಅ ಬಿ. ಎಂ. ಸಂಜಯ್ಯ (ಸಂ.): 'ಮಾದೇಶ್ವರನ ಪದಗಳು', ಚುಂಚನಗಿರಿ (ಕರ್ನಾಟಕ ಮೂರನೆಯ ಜಾನಪದ ಸಮ್ಮೇಳನದ ನೆನಪಿನ ಸಂಪುಟ), ನಾಗಮಂಗಲ, ಅಕ್ಟೋಬರ್ ೧೯೭೧, ಪು. ೬೩

79 ಆ ಶ್ರೀ ಸಿದ್ಧರಾಮೇಶ್ವರ ವಚನಗಳು, ಪು. ೫೧೭ : ಅಷ್ಟಾವರಣ ತ್ರಿವಿಧಿ, ವಚನ ೫೬ ; ಪಾಠಾಂ.–'೭೫ ಗ್ರಾಮ'–ಅದೇ, ಅಡಿಟಿಪ್ಪಣಿ

80 ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–ಮೊದಲನೆಯ ಸಂಪುಟ, ಬೆಂಗಳೂರು, ೧೯೭೦, ಪು. ೧೧೩೮

81 ದಕ್ಷಿಣಕನ್ನಡ ಜಿಲ್ಲೆಯ ಕೈಫಿಯತ್ತುಗಳು, ಪು. ೧೧೭

82 ಎನ್. ಬಸವಾರಾಧ್ಯ (ಸಂ.) : ತೊರವೆಯ ರಾಮಾಯಣ–ಸಂಪುಟ ೧ (ನರಹರಿ-ಕುಮಾರ ವಾಲ್ಮೀಕಿ), ಮೈಸೂರು, ೧೯೫೬ : ಸುಂದರಕಾಂಡ, ಸಂಧಿ ೧, ಪದ್ಯ ೨೪, ಪು. ೪೫೬

ನೂರ್ವರುಪವಳಿಯದೇಳ್ನೂರು ವರುಷ ಸಂದ ರೇವಣ ಸಿದ್ಧನಾಡಿ ತಪ್ಪುವನೆ" ಎಂಬುದಾಗಲೀ[83] ಶಿಷ್ಟಸಾಹಿತ್ಯ ಕೃತಿಗಳು ಈ '೭೦೦' ಸಂಖ್ಯೆಗೆ ನೀಡಿರುವ ಮಹತ್ವಕ್ಕೆ ಉತ್ತಮ ಉದಾಹರಣೆಗಳು.

೭೦೦ ವಿರಕ್ತ ಗಣವರರು, ೭೦೦ ಬುಡಕಟ್ಟುಗಳು, ೭೦೦ ಬುಡಕಟ್ಟಿನ ಚರಮೂರ್ತಿಗಳು,[84] ೭೦೦ ಪೇಟೆ ದೈವ,[85]೭೦೦ ಬಲಿ, ೭೦೦ ಗಾವುದ,[86] ೭೦೦ ಬಸದಿ, ೭೦೦ ವರುಷ, ೭೦೦ ಭೂತ,[87] ೭೦೦ ಮದಾಂಧ ಸಿಂಧುರಂಗಳು,[88] ಇತ್ಯಾದಿ ಪ್ರಯೋಗಗಳು ವೀರಶೈವ ಧರ್ಮಗುರು ಹಾಗೂ ಪೀಠಗಳನ್ನು ಕುರಿತು ಹೇಳಿರುವ ಗ್ರಂಥಗಳಲ್ಲಿ ಉಕ್ತಗೊಂಡಿವೆ. '೭೦೦ ಕುಮಾರಕರ ಸಮ್ಮೇಳದಲಿ' ಎಂಬ ಪ್ರಯೋಗವು 'ತೊರವೆಯ ರಾಮಾಯಣ'ದಲ್ಲಿ ಕಂಡುಬರುತ್ತದೆ.[88ಅ] "ನಾವು ಹೋದ ಏಳುನೂರು ವರುಷದ ಮೇಲೆ ಕಲುಬುರುಗಿ ಕೆಟ್ಟು ಬಿದುರೆ ಪಟ್ಟಣವೆಂಬ ಪೆಸರಾದೀತು" ಎಂಬುದು ಸಂಗನ ಬಸವರಾಜದೇವರ ಕಾಲಜ್ಞಾನ ವಚನ.[89] '೭೦೦ ಕವಿಲೆ' ಎಂಬುದು ಶಾಸನದಲ್ಲಿಯೂ ಕಂಡು ಬರುತ್ತದೆ.[90]

ಚರಿತ್ರೆ ಹೇಳುವಂತೆ, ಕ್ಯಾಪ್ಟನ್ ಸೈಕ್ಸ್ ಎಂಬ ಬ್ರಿಟಿಷ್ ದಳಪತಿಯು ಬಿಜಾಪುರದ ಕೋಟೆಯನ್ನು ಸಂದರ್ಶಿಸಿದಾಗ, ಅಲ್ಲಿಯ ಹಿಂದಿನ ಅರಸರ ಅಧಿಕಾರಿಗಳಲ್ಲೊಬ್ಬನು ಈ ದಳಪತಿಗೆ ನಗರದರ್ಶನ ಮಾಡಿಸಿ, ನಗರದಲ್ಲಿ ಮೆಟ್ಟಲು ಸಹಿತವಾದ ೭೦೦ ಬಾವಿಗಳೂ ಮೆಟ್ಟಲು ರಹಿತವಾದ ೩೦೦ ಬಾವಿಗಳೂ ಕಲ್ಲಿನಲ್ಲಿ ನಿರ್ಮಾಣಗೊಂಡ ೭೦೦ ಹಾಗೂ ಸುಣ್ಣ ಮತ್ತು ಇಟ್ಟಿಗೆಗಳಿಂದ ನಿರ್ಮಾಣಗೊಂಡ ೭೦೦ ಮಸೀದಿ ಮತ್ತು ಸಮಾಧಿಗಳೂ ಇರುವುವೆಂದು ತಿಳಿಸಿದುದನ್ನು ದಾಖಲಿಸಲಾಗಿದ್ದು,[91] ಬಿಜಾಪುರದಂತಹ ಬೃಹತ್ ನಗರದಲ್ಲಿ ಇಷ್ಟು ಸಂಖ್ಯೆಯಲ್ಲಿ ಬಾವಿ, ಮಸೀದಿ ಮತ್ತು ಸಮಾಧಿಗಳು ಇರುವುದನ್ನು ನಂಬದಿರಲು ಸಾಧ್ಯವಿಲ್ಲ ವೆಂಬ ಸಮರ್ಥನೀಯವಾದ ಮಾತನ್ನೂ ಆಡಲಾಗಿದೆ.[92]

ಈ ಸಂಖ್ಯೆಯನ್ನು ವರ್ಧಿಸಿ ಪ್ರಯೋಗಿಸಲಾದ ಸಂಖ್ಯಾವಾಚಕಗಳಲ್ಲಿ '೭೦ ಕೋಟಿ ನವಿಲಿಂಡು'[93] ಎಂಬುದೂ ಒಂದು.

೭೭, ೭೭೦, ೭೭ ಕೋಟಿ, ಇತ್ಯಾದಿ : ಜನಪ್ರಿಯ ಸಂಖ್ಯಾ ಆಶಯಗಳಲ್ಲಿ ೭೭ನೇ ಸಂಖ್ಯೆಗೆ ಅಧಿಕ ಮಹತ್ವ ಪ್ರಾಪ್ತವಾದಂತಿದೆ. ಜನಪದ ಮತ್ತು ಶಿಷ್ಟಕಾವ್ಯಗಳಲ್ಲಿ ವಿಪುಲವಾಗಿ ದೊರಕುವ ಉಲ್ಲೇಖಗಳು ಇದನ್ನು ಸಮರ್ಥಿಸುತ್ತವೆ. ಕೆಲವು ಉದಾಹರಣೆಗಳು : ೭೭

83 ಪ್ರೊ॥ ಟಿ. ಎಸ್. ವೆಂಕಣ್ಣಯ್ಯ, ಡಿ. ಎಲ್. ನರಸಿಂಹಾಚಾರ್ (ಸಂ.) : ರಾಘವಾಂಕ ಕವಿಯ ಸಿದ್ಧರಾಮ ಚಾರಿತ್ರ, ಶಿವಮೊಗ್ಗ, ೧೯೪೧ : ಸಂಧಿ ೧, ಪದ್ಯ ೪೫, ಪು. ೧೪

84 ಫ. ಗು. ಹಳಕಟ್ಟಿ (ಸಂ.) : ನಿರಂಜನ ವಂಶರತ್ನಾಕರ-ಭಾಗ ೧, ಬಿಜಾಪುರ, ೧೯೩೨, ಪು. ೩೯, ೪೦ ; ಪಾಠಾಂ.-'೭೭೫ ಚರಂತಿಗೆ ಬುಡಕಟ್ಟುಗಳು'—ಶ್ರೀ ಚೆನ್ನಮಲ್ಲಿಕಾರ್ಜುನ (ಸಂ.) : ನಿರಂಜನ ವಂಶರತ್ನಾಕರ-ಭಾಗ ೨, ಹಾವೇರಿ, ಪು. ೩೦ ; ಈ ೨ನೆಯ ಭಾಗದಲ್ಲಿ ಸಕಲ ಬುಡಕಟ್ಟಿನ ಚರಮೂರ್ತಿಗಳು ಮತ್ತು ಪಟುಸ್ಥಲ ಬ್ರಹ್ಮಗಳಾದ ವಿರಕ್ತರ ಸಂಖ್ಯೆಯನ್ನು ೭೭೦ ಎಂದು ಉಲ್ಲೇಖಿಸಿದ್ದು, ಪಾಠದಲ್ಲಿ (ಪು. ೪-೭) ಬಿಡಿ-ಬಿಡಿಯಾಗಿ ಸೂಚಿಸಿರುವ ಆಯಾ ಬಗೆಯ ಚರಮೂರ್ತಿಗಳ ಸಂಖ್ಯೆಯನ್ನು ಕೂಡಿದರೆ ಅದು ೧೦೮೬ ಆಗುತ್ತದೆಂಬುದು ಗಮನಾರ್ಹ.

85 ನಿರಂಜನ ವಂಶರತ್ನಾಕರ-ಭಾಗ ೨, ಪು. ೬೪

86 ನಾನಾ ಕವಿಗಳ ಕೃತ ಕಾಲಜ್ಞಾನ ಸಂಗ್ರಹ-ಭಾಗ ೧, ಪು. ೧೪೧-೪೨

87 ಡಾ॥ ಆರ್. ಸಿ. ಹಿರೇಮಠ (ಸಂ.) : ಭೀಮಕವಿ ಕೃತ ಬಸವಪುರಾಣ, ಧಾರವಾಡ, ೧೯೫೮, ಪು. ೨೦, ೩೦, ೫೦, ೫೨

88 ಅದೇ, ಸಂಧಿ ೫, ಪದ್ಯ ೧೮, ಪು. ೮೦; '೭೦೦ ಆನೆ' – ಕತ್ತಾಲ ದಾರಿ ದೂರ, ಪು. ೧೭ ; ಪಾಠಾಂ.—'೮೦೦ ಆನೆ'-ಅದೇ

88ಅ ಸಂಪುಟ ೧, ಸುಂದರಕಾಂಡ, ಸಂಧಿ ೫, ಪದ್ಯ ೧೨, ಪು. ೫೧೫

89 ನಾನಾ ಕವಿಗಳ ಕೃತ ಕಾಲಜ್ಞಾನ ಸಂಗ್ರಹ—ಭಾಗ ೧, ಪು. ೩

90 *Epigraphia Carnatica*, Vol. V (Revised), Mysore District, K.R. Nagar 52 (12th c.)

91 Emma Robert : *Hindoostan, Etc., Etc.*, Delhi, 1972, p. 76

92 Ibid.

93 ಜಾನಪದ ರಸಗಂಗೆ, ಪು. ೨೮

ಹೆಡೆ ಮಹಾಶೇಷ,[94] ೭೭ ಹೆಡೆ (ಮಹಾ)ಸರುಪ,[95] ೭೭ ಹುಲಿ,[96] ೭೭ ಕವಲು,[97] ೭೭ ಮಲೆ,[98] ೭೭ ಮಂಡಲ,[99] ೭೭ ತೀರ್ಥ,[100] ೭೭ ಜಡೆ,[101] ೭೭ ಜೇತ್ಗಾರ್ರು,[102] ೭೭ ಮೇಳಿ (ಮೇಣಿ),[103] ೭೭ ಕವಲು ಮರ,[104] ೭೭ ಬಸದಿ (ಬಸ್ತಿ),[105] ೭೭ ನಮುಗಣ ದೇರು,[106] ೭೭ ನವಿಲಿಂಡು,[107] ೭೭ ಶಿವಸ್ಥಾನ,[108]

---

94 ಎ. ಹಿರಿಯಣ್ಣ (ಸಂ.) : ಕಿನ್ನರಿ ಸಂಪ್ರದಾಯದ ಕಾವ್ಯಗಳು. ಮೈಸೂರು, ೧೯೭೯, ಪು. ೬೯, ೩೧, ೩೨೨; ಪಾಠಾಂ.—'೭ ಹೆಡೆ ಮಹಾಶೇಷ'

95 ಪಿ. ಕೆ. ರಾಜಶೇಖರ (ಸಂ.) : ಮಲೆಯ ಮಾದೇಶ್ವರ—ಸಂಪುಟ ೨, ಮೈಸೂರು, ೧೯೭೩, ಪು. ೧೨೩೭ ; ಪಾಠಾಂ.—'೭ ಹೆಡೆ ಸರ್ಪ'—ಜೀ. ಶಂ. ಪರಮಶಿವಯ್ಯ (ಸಂ.) : ಜಾನಪದ ಖಂಡಕಾವ್ಯಗಳು, ಮೈಸೂರು, ೧೯೬೮, ಪು. ೭೨

96 ಪಿ. ಕೆ. ರಾಜಶೇಖರ (ಸಂ.) : ಮುದ್ದು ಮಾದೇವನ ನೆನೆದೇವು, ಮೈಸೂರು, ಪು. ೨೫ ; '೭೭ ಬರ್ಗ (=ಹುಲಿ)'— ಮಲೆಯ ಮಾದೇಶ್ವರ—ಸಂಪುಟ ೨, ಪು. ೭೫೪-೫೫ : '೭೭ ಬರಗಾ'— ಎರಡು ಜನಪದ ಕಾವ್ಯಗಳು, ಪು. ೫೭

97 ಮುದ್ದು ಮಾದೇವನ ನೆನೆದೇವು. ಪು. ೩೪; ಪಾಠಾಂ.—'೮೭ ಕವಲು'— ಎರಡು ಜನಪದ ಕಾವ್ಯಗಳು, ಪು. ೩೨

98 ಎಚ್. ಎಲ್. ನಾಗೇಗೌಡ : ಹೆಳವರು ಮತ್ತು ಅವರ ಕಾವ್ಯಗಳು, ಬೆಂಗಳೂರು, ೧೯೮೨, ಪು. ೨೬೪ ; ಜಾನಪದ ರಸಗಂಗೆ, ಪು. ೨೩ ; ಮಲೆ ಮಾದೇಶ್ವರ—ಸಂಪ್ರಟ ೨, ಪು. ೧೨೮೨, ೧೩೧೧, ಇತ್ಯಾದಿ ; ಮುದ್ದು ಮಾದೇವನ ನೆನೆದೇವು, ಪು. ೪೪

ಈ '೭೭ ಮಲೆ'ಯ ಬಗೆಗಿನ ವಿವರಣೆ ಇಂತಿದೆ: "ಕೊಳ್ಳೇಗಾಲದ ಬಳಿ ಇರುವ ಏಳು ಬೆಟ್ಟಗಳುಳ್ಳ ಪ್ರದೇಶಕ್ಕೆ 'ಏಳು ಮಲೆ' ಎಂದು ಕರೆಯುತ್ತಾರೆ. ಏಳುಮಲೆಯು ಮಹದೇಶ್ವರನ ವಾಸಸ್ಥಾನ. ಅನುಮಲೆ, ಜೇನುಮಲೆ, ಗುಂಜಿನಮಲೆ, ಗುರುಗುಂಜಿಮಲೆ, ಕಾನುಮಲೆ, ಈಬುತ್ತಿಮಲೆ, ನಾಗಮಲೆ—ಇವು ಏಳುಮಲೆಗಳು. ಇವುಗಳ ಜೊತೆಗೆ ಪದುಮಮಲೆ, ಪಚ್ಚೆಮಲೆ, ಪೂಜೆಮಲೆ—ಇತ್ಯಾದಿಯಾಗಿ ಇನ್ನೂ ಎಪ್ಪತ್ತು ಬೆಟ್ಟಗಳಿವೆ ಎಂದು ಹೇಳುತ್ತಾರೆ"—ಕನ್ನಡ ಜಾನಪದ ವಿಶ್ವಕೋಶ-೧, ಪು. ೨೪೮-೪೯.

99 ಎರಡು ಜನಪದ ಕಾವ್ಯಗಳು, ಪು. ೫೪ ; ಮಲೆಯ ಮಾದೇಶ್ವರ ಸಂಪುಟ—೨

100 ಜೀ. ಶಂ. ಪರಮಶಿವಯ್ಯ (ಸಂ.) : ಭಾಗವಂತಿಕೆ ಮೇಳ, ಮೈಸೂರು, ೧೯೭೪, ಪು. ೯೪

101 ಪಂಡಿತ ಮ. ಮಲ್ಲಪ್ಪ (ಸಂ.) : ಓರುಗಲ್ಲು ಸೂರೆ, ಬೆಂಗಳೂರು, ೧೯೭೯, ಪು. ೩೨, ೫೩ ; ಪಾಠಾಂ.—'೭೭ ಜಡೆ ಯೋರು', '೨೭ ಜಡೆಯೋರು'—ಕತ್ತಾಲ ದಾರಿ ದೂರ, ಪು. ೨೫೮, ೩೬೧-೬೨

102 ಮಲೆಯ ಮಾದೇಶ್ವರ—ಸಂಪುಟ ೨, ಪು. ೮೩೮, ೮೪೨, ೮೭೫, ಇತ್ಯಾದಿ

103 ಅದೇ, ಪು. ೮೩೮ ; ಮೇಳಿ = ನೇಗಿಲನ್ನು ನೆಲಕ್ಕೆ ಊರಲು ಒತ್ತಿ ಹಿಡಿಯುವ ಮರದ ಕವಡ—ಅರ್ಥಕೋಶ, ಪು. ೧೩೪೮

104 ದೇವಂಗಿ ಟಿ. ಚಂದ್ರಶೇಖರ (ಸಂ.) : ಬಣ್ಣಪಾಡು, ಬೆಂಗಳೂರು, ೧೯೮೧, ಪು. ೧೯ ; ಪಾಠಾಂ.—'೭೭ (ಹಿಪ್ಪೆಯ) ಮರ'—ಜಿ. ಎಸ್. ಭಟ್ಟ ಉಬರಡ (ಸಂ.) : ಸಿರಿಗಂಧ ಸೂಸ್ಯಾವೆ, ಚೊಕ್ಕಾಡಿ (ದ. ಕ.), ೧೯೬೮, ಪು. ೬೪ ; '೭೧ (ಅರಳೀ)ಮರ'—ಮಳಲಿ ವಸಂತಕುಮಾರ್ (ಸಂ.) : ಕೋಲುಪದಗಳು, ಮೈಸೂರು, ೧೯೭೮, ಪು. ೧೦೨ ; '೨೫ ಕವಲು ಮರ'—ಶ್ರೀ ಚನ್ನಮಲ್ಲಿಕಾರ್ಜುನ (ಸಂ.) : ಸರ್ವಪುರಾತನರ ವಚನಗಳು, ವಚನ ೫೬೬, ಪು. ೧೦೫

105 ಮತಿಘಟ್ಟ ಕೃಷ್ಣಮೂರ್ತಿ (ಸಂ.) : ಗೀತೆಗಳು—ಸಂಪುಟ ೧, ಬೆಂಗಳೂರು, ೧೯೭೫, ಪು. ೮೧೩, ೮೧೭

106 ಕೆ. ನಾರಾಯಣ, ಬಿ.ಎನ್. ಲಕ್ಷ್ಮೀನಾರಾಯಣ (ಸಂ.) : ತುಂಬೇ ಹೂವಿಟ್ಟು ಶರಣೆನ್ನಿ, ಮೈಸೂರು, ೧೯೭೯, ಪು. ೩೧

107 ಸ. ಚ. ಮಹದೇವನಾಯಕ್ (ಸಂ.): ನಾನೆದ್ದು ನೆನೆವೇನು, ಮೈಸೂರು, ೧೯೭೧; ಪಾಠಾಂ.—'೭೭ ಕೋಟಿ ನವಿಲಿಂಡು'— ಮಲೆಯ ಮಾದೇಶ್ವರ—ಸಂಪುಟ ೨, ಪು. ೧೨೩೭ ; ಬಣ್ಣ ಪಾಡು, ಪು. ೧೯

108 ಡಾ॥ ಬಿ. ಎಸ್. ಎಸ್. ಆಚಾರ್ಯ (ಸಂ.) : ಶ್ರೀ ಕೃಷ್ಣದೇವರಾಯನ ದಿನಚರಿ, ಬೆಂಗಳೂರು, ೧೯೮೩, ಪು. ೧ : "ಯೇಕಾಂಬರನಾಥ । ಜಂಬುಲಿಂಗೇಶ್ವರ ।ಅರುಣಾಚಲೇಶ್ವರ । ಕಾಳಹಸ್ತೀಶ್ವರ । ಚಿದಂಬರ ಮೊದಲಾದ ಯೆಪ್ಪತ್ತೇಳು ಶಿವಸ್ಥಾನಂಗಳಲ್ಲಿಯೂ ।..." ; ಪಾಠಾಂ.—'೭೨ ದೇವಸ್ಥಾನಗಳು'—ಕೆ. ರಾಮಾಂಜನೇಯುಲು : 'ರಾಯವಾಚಕಂ ಮತ್ತು ಶ್ರೀ ಕೃಷ್ಣದೇವರಾಯನ ದಿನಚರಿ : ಒಂದು ಪರಿಶೀಲನೆ', ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೭೦-೨, ಡಿಸೆಂಬರ್ ೧೯೮೫, ಪು. ೭೪

೭೭ ಮತ್ತು ೭೨ ಸಂಖ್ಯೆಗಳಲ್ಲಿ ಪರಸ್ಪರ ಸಾಮ್ಯವಿರುವಂತೆ ತೋರುತ್ತದೆ. ಈ ಎರಡು ಸಂಖ್ಯೆಗಳೂ ಕೆಲವೆಡೆ ಪರಸ್ಪರ ಹೊಂದಿಕೊಂಡು ಬಂದಿರುವುದಕ್ಕೆ ಕೆಲವು ಉದಾಹರಣೆಗಳು ದೊರಕುತ್ತವೆ. ೭೨ ಸಹ ೭೭ರಂತೆಯೇ ಆಶಯರೂಪವೆಂಬು ವುದಕ್ಕೆ ಈ ಮುಂದಿನ ಸಾಲುಗಳನ್ನು ಗಮನಿಸಬಹುದು : "ಕರ್ನಾಟಕ ಸಂಗೀತಕ್ಕೆ ೭೨ ಮೇಳಗಳು. ಲೆಕ್ಕಕ್ಕೆ ೭೨ ಮೇಳ

೭೨ ಲೋಕ, ೭೨ ಕರ್ಪೂರದ ಗಿರಿ, ೭೨ ಉರಿಯ ವಾದ್ಯ,[113] ೭೨ ಚರಂತರು,[114] ೭೨ ಖಾನರು,[115]
ಕಂಬ, ೭೨ ಅರಗಿನ ಪುತ್ಥಳಿ,[109] ೭೨ ಸಿಂಹಾಸನ,[110] ಇತ್ಯಾದಿ.
೭೨ ಗಟ್ಟ,[111] ೭೨ ಬಿರುದು,[112] ೭೨ ಬಿರುದು

---

ಕರ್ತ ರಾಗಗಳಿವೆಯೇ ಹೊರತು ಮೂವತ್ತಾರು ಮೇಳಕರ್ತಗಳಲ್ಲಿ ರಚನೆಗಳೇ ಇಲ್ಲ. ಅವನ್ನು ಸಾಮಾನ್ಯವಾಗಿ ಯಾರೂ ಬಳಸುವುದಿಲ್ಲ"—ಕೆ. ವಾಸುದೇವಾಚಾರ್ಯ : ನೆನಪುಗಳು, ಮೈಸೂರು, ೧೯೮೪, ಪು. ೧೧೫–೧೧೬.

ಆದರೆ 'ಬಾಹತ್ತರ ನಿಯೋಗ'ವೆಂಬುದು ಗುರುವಿನಿಂದ ಕಠಾರಿಕನವರೆಗೆ ಒಟ್ಟು ೭೨ ವಿಧದ ಅಧಿಕಾರ ಹಾಗೂ ನಿರ್ವಹಣೆಯ ಸ್ಥಾನಗಳನ್ನು ನಿರ್ದೇಶಿಸುತ್ತದೆಯೆನ್ನುವುದು ಗಮನಾರ್ಹ. ಇಂತಹ ಒಂದೆರಡು ಅಪರೂಪದ ಉದಾಹರಣೆಗಳ ವಿನಾ ಸಾಮಾನ್ಯವಾಗಿ ೭೨ ಸಂಖ್ಯೆಯ ನಿರ್ದಿಷ್ಟ ಬಳಕೆ ಮತ್ತು ಉದ್ದೇಶಗಳು ೭೭ರ ಸಂಖ್ಯೆಯಂತೆಯೇ ಸ್ಪಷ್ಟಪಡುವುದಿಲ್ಲ. 'ಯೆಪ್ಪತ್ತೆರಡು ಮಾಸಕ್ಕೆ ಯೆಪ್ಪತ್ತೆರಡು ದಿವಸ' (ದಕ್ಷಿಣಕನ್ನಡ ಜಿಲ್ಲೆಯ ಕೈಫಿಯತ್ತುಗಳು, ಪು. ೨೫೪ : ಅಜಿಲರ ಕೈಫಿಯತು) ಮತ್ತು "ಮಧುರೆಯ ಕೋಟೆಯ ಎಪ್ಪತ್ತೆರಡು ಕೊತ್ತಲಗಳನ್ನು ಕಾಯಲು ಎಪ್ಪತ್ತೆರಡು ಪಾಳೆಯಗಾರರಿದ್ದರು" (ಡಾ॥ ಬಿ. ಎ. ಸಾಲೆತ್ತೊರೆ, ಡಾ॥ ದೇಸಾಯಿ ಪಾಂಡುರಂಗರಾಯರು : ಕನ್ನಡನಾಡಿನ ಚರಿತ್ರೆ—ಭಾಗ ೧, ಬೆಂಗಳೂರು, ೧೯೮೮, ಪು. ೭೩)—ಇವು ಉದಾಹರಣೆಗಳು.

109 ಸರ್ವಪುರಾತನರ ವಚನಗಳು, ವಚನ ೭೨೭, ಪು. ೧೫೧ : "ಸರ್ಪನ ಹೆಡೆಯ ಮೇಲಿಪ್ಪ ಎಪ್ಪತ್ತೇಳು ಲೋಕವ ಕಂಡೆನಯ್ಯಾ, ಎಪ್ಪತ್ತೇಳು ಲೋಕದೊಳಗಿಪ್ಪ ಎಪ್ಪತ್ತೇಳು ಕರ್ಪುರದ ಗಿರಿಗಳ ಕಂಡೆನಯ್ಯಾ, ಎಪ್ಪತ್ತೇಳು ಕರ್ಪುರದ ಗಿರಿಗಳ ಮೇಲಿಪ್ಪ ಎಪ್ಪತ್ತೇಳು ಉರಿಯ ಕಂಬವ ಕಂಡೆನಯ್ಯಾ. ಆ ಎಪ್ಪತ್ತೇಳು ಉರಿಯ ಕಂಬದಮೇಲಿಪ್ಪ ಎಪ್ಪತ್ತೇಳು ಅರಗಿನ ಪುತ್ಥಳಿ ಕರಗಿ ಹೋದವು. ಆ ಎಪ್ಪತ್ತೇಳು ಕರ್ಪುರದ ಗಿರಿಗಳೆಲ್ಲಾ ಉರಿದು ಹೋದವು. ಆ ಎಪ್ಪತ್ತೇಳು ಲೋಕವೆಲ್ಲವೂ ಹಾಳಾಗಿಹೋದವು. ಆ ಸರ್ಪ ಬೆಂದು ಸತ್ತುಹೋಯಿತ್ತು...."

110 ಡಾ॥ ಎಂ. ಎಂ. ಕಲಬುರ್ಗಿ (ಸಂ.) : ಕೊಲ್ಲಾಪುರ ನಿಂಬಸಾಮಂತ ಚರಿತೆ, ಬೆಂಗಳೂರು, ೧೯೮೧, ಪು. ೩೫ : ಸಂಧಿ ೨, ಪದ್ಯ ೬೦ ; ಪಾಠಾಂ.—'೭೪ ಸಿಂಹಾಸನ' (ಚತುಸ್ಸಪ್ತತಿ ಸಂಖ್ಯಾಕ ಸಿಂಹಾಸನಸ್ಥಾಯಿ)—M. A. R., 1939, No. 42, Mysore District, 1825 A.D., pp. 157, 167; '೭ ಸಿಂಹಾಸನ'—E. C., Vol. V, Part II, Hassan District, Arsikere 102, c 1100 A.D.

111 ಕೋಲುಪದಗಳು, ಪು. ೮೪

112 ನಾಗೇಶ : ಮುರಿಗೆಸ್ವಾಮಿಗಳವರ ಪದ (ಲಾವಣಿ), ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿರುವ ಕಾಗದದ ಪ್ರತಿ, ಬಿ ೧೩೯೭/೪, ಪು. ೨೧ ; ಪಾಠಾಂ.—'೭೨ ಬಿರುದು'— ಡಾ॥ ಎಲ್. ಬಸವರಾಜು (ಸಂ.) : ಮಹಾದೇವನ ಮಹಾಲಿಂಗೇಂದ್ರವಿಜಯ, ಚಿತ್ರದುರ್ಗ, ೧೯೭೧, ಪು. ೨೮ : ಸಪ್ತದಶೋಧ್ಯಾಯಃ, ಪದ್ಯ ೮೧ ; ನಿರಂಜನ ವಂಶರತ್ನಾಕರ—ಸಂಪುಟ ೧ ಮತ್ತು ೨, ಪು. ೬, ೧೪, ಇತ್ಯಾದಿ ಮತ್ತು ಪು. ೪, ೭, ಇತ್ಯಾದಿ ; '೭೨ ಬಿರುದಾವಳಿ'—ನಿಂಗಣ್ಣ ಸಣ್ಣಕ್ಕಿ, ಶಿವಲಿಂಗಪ್ಪ ಭಾವಿಕಟ್ಟಿ (ಸಂ.) : ಜಾನಪದದಲ್ಲಿ ಅಂಕಲಗಿಯ ಅಡವೀಶ, ಅಕ್ಕತಂಗೇರಹಾಳ (ಬೆಳಗಾವಿ ಜಿಲ್ಲೆ), ೧೯೭೨, ಪು. ೪೩

ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿಯಲ್ಲಿ ಶಿವೈಕ್ಯರಾದ ಶರಣ ತಿಪ್ಪೇಸ್ವಾಮಿಗೆ ಅಲ್ಲಿಯ ಅರಸ ಹಟ್ಟಿ ಮಲ್ಲಪ್ಪನಾಯಕನು ೭೭ ಬಿರುದು ಸಹಿತವಾಗಿ ರಾಜ್ಯಭಾರವನ್ನು ಭಕ್ತಿಪುರಸ್ಸರವಾಗಿ ವಹಿಸಿಕೊಟ್ಟನೆಂದೂ ಅಲ್ಲಿಗೆ ಅವನ ರಾಜ್ಯಭಾರವು ಮುಕ್ತಾಯಗೊಂಡಿತೆಂದೂ ಮಿತ್ರರಾದ ಶ್ರೀ ಕೃಷ್ಣಮೂರ್ತಿ ಹನೂರು ಅವರು ತಿಳಿಸಿರುವರು. ಆದರೆ ಅವರು ಒದಗಿಸಿರುವ ಈ ೭೭ ಬಿರುದಿಗೆ ಸಂಬಂಧಿಸಿದ ಪಟ್ಟಿಯಲ್ಲಿರುವ ವಸ್ತುಗಳು ಕೇವಲ ೨೬ ಮಾತ್ರ.

ಇಲ್ಲಿ ಪ್ರಸ್ತಾಪಿಸಬಹುದಾದ ಇನ್ನೊಂದು ಸಂಗತಿಯೆಂದರೆ, ಶ್ರೀ ಪರ್ವತ ಮಲ್ಲಿಕಾರ್ಜುನ ಸ್ವಾಮಿಗಳವರು ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕಿನ ಮತ್ತೋಡು ಮಠದಯ್ಯಗಳ ಮನೆತನದ ಮೂಲದವರಾಗಿದ್ದು, ಇವರ ವಂಶದವರು ಮತ್ತೋಡು ಸಂಸ್ಥಾನದ ೭೭ ಹಳ್ಳಿಗಳ ಮೇಲೆ ವೀರಶೈವಾಚಾರ, ಹವ್ಯಕವ್ಯ, ಇತ್ಯಾದಿಗಳನ್ನು ನೋಡಿಕೊಳ್ಳುವ ಅಧಿಕಾರವುಳ್ಳವರೆಂದು ಅದೇ ವಂಶಜರಾದ ಸೋಮೇನಹಳ್ಳಿಮಠದ ಶ್ರೀ ಎಚ್. ಶ್ರೀಶೈಲ ಆರಾಧ್ಯ, ಚಿತ್ರದುರ್ಗ—ಅವರು ತಿಳಿಸಿರುವರು.

113 ಮುರಿಗೆಸ್ವಾಮಿಗಳವರ ಪದ (ಲಾವಣಿ), ಪು. ೨೩

114 ಚಿತ್ರದುರ್ಗ ಶ್ರೀ ಬೃಹನ್ಮಠದ ರಹದಾರಿ ಪತ್ರಗಳು : ಮೈಸೂರು ಧೊರೆಗಳ ಶೀಮೆಯ ರಾಜ್ಯಭಾರದ ಕಮಿಷನ ಇಸ್ತಿಹಾರುನಾಮೆ, ತಾರೀಖು ೧ ಸೆಪ್ಟೆಂಬರ್ ೧೮೩೫, ಪು. ೫೨

115 M. A. R., 1931, No. 1, *Nandana Hosur Copper Plate*, pp. 93, 94 ; ಪಾಠಾಂ.—'೭೭೦ ಖಾನರು'. '೭೭ ಖಾನರ ಗಂಡ' ಎಂಬ ಬಿರುದು ಸಹ ಇದೇ ತಾಮ್ರಪಟದಲ್ಲಿ (ಪು. ೯೩) ಉಕ್ತವಾಗಿದೆ.

ಋಷಿಸದೃಶ ದಾರ್ಶನಿಕನೂ ವಚನಕಾರನೂ ಆದ ಸೊನ್ನಲಿಗೆ ಸಿದ್ಧರಾಮನ ಹೆಸರಿನಲ್ಲಿ 'ಧರೆಯಲ್ಲಿ ೭೭ ಕಡೆ ಪಲ್ಲವಿಸಿರುವ ನಿಜಾನಂದ ಶಿವಯೋಗ ಸಮಾಧಿ'ಗಳಿವೆಯೆಂದು ವ್ಯಕ್ತಪಡಿಸಲಾಗಿದೆ.[116] ಸೊನ್ನಲಿಗೆಯು (ಮಹಾರಾಷ್ಟ್ರದಲ್ಲಿರುವ ಇಂದಿನ ಸೊಲ್ಲಾಪುರ) ಆದಿ ಗದ್ದುಗೆಯೆಂದೂ ತುಮಕೂರು ಜಿಲ್ಲೆ, ತಿಪಟೂರು ತಾಲ್ಲೂಕಿನ ಕಾರೆಕುರ್ಚಿದೊಣೆ ಗಂಗಾಕ್ಷೇತ್ರವು ೭೬ನೆಯ ಗದ್ದುಗೆಯೆಂದೂ ಇದೇ ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಗೋಡೆಕೆರೆ ಗದ್ದುಗೆಯು ಕೊನೆಯದು, ಅಂದರೆ ೭೭ನೆಯದೆಂದೂ ಹೇಳಲಾಗಿದೆ, ಆದರೆ ಆದಿ ಗದ್ದುಗೆ ಸಹಿತ ಕರ್ನಾಟಕದ ವಿವಿಧ ಎಡೆಗಳಲ್ಲಿರುವ ಹಾಗೂ ಈವರೆಗೆ ಬೆಳಕಿಗೆ ಬಂದಿರುವ ಗದ್ದುಗೆಗಳ ಸಂಖ್ಯೆ ಸುಮಾರು ೩೨ ಮಾತ್ರ.[117] ಹಾಗೆಯೇ, ಇದುವರೆಗೆ ದ್ವಾರಕಾಪೀಠವನ್ನಾಳಿದ ೭೭ ಜಗದ್ಗುರುಗಳ ಸಾಧನೆ ಬಗೆಗೆ ಯಾವ ಲಿಖಿತ ಮಾಹಿತಿಯೂ ಇಲ್ಲವೆನ್ನುವುದು[118] ಸಹ ಗಮನಾರ್ಹ.

ಸಂಖ್ಯೆ ೧ ರಿಂದ ೭೭ರವರೆಗೆ ಪೂರ್ತ ಯಾದಿಯುಳ್ಳ ವಿರಳ ಉದಾಹರಣೆಗಳಲ್ಲಿ 'ಸಪ್ತಸಪ್ತತಿ ಏಕಾರೇಯ ಗೋತ್ರಮುಲು (ವೈಶ್ಯ ಗೋತ್ರಮುಲು),' 'ಸಪ್ತಸಪ್ತತಿ ಕ್ರೈಸ್ತು ವಂಶಾವಳಿ' ಮತ್ತು 'ಸಪ್ತಸಪ್ತತಿ ನರಕಾಲು' ಮುಖ್ಯವಾದುವು.[119] 'ಸಪ್ತಸಪ್ತತಿ ಕ್ರೈಸ್ತು ವಂಶಾವಳಿ'ಯು ಆಡಮ್‌ನಿಂದ ಏಸುವಿನವರೆಗೆ ಆಗಿ ಹೋದ ೭೭ ಮಂದಿಯ ಹೆಸರುಗಳನ್ನು ಒಳಗೊಂಡಿದೆ. ಆದರೆ ಇವುಗಳ ವಿಶ್ವಸನೀಯತೆಯನ್ನು ಪರಿಶೀಲಿಸದೆ ಇರುವಂತಿಲ್ಲ. 'ಸಿದ್ಧೇಶ್ವರ ಚರಿತ್ರಮು', 'ಶಿವಯೋಗ ಸಾರಮು', 'ಪ್ರತಾಪ ಚರಿತ್ರಮು' ಮೊದಲಾದ ತೆಲುಗುಸಾಹಿತ್ಯ ಗ್ರಂಥಗಳಲ್ಲಿ '೭೭ ದುರ್ಗ'ಗಳ ಪ್ರಸ್ತಾಪವಿದೆಯೆಂದು ತಿಳಿಯುತ್ತದೆ.[120] ಇವೆಲ್ಲವೂ ಪರಿಶೀಲನಾರ್ಹ ಅಂಶಗಳೇ.

---

ಕಂಪಲಿಯ ಮೇಲೆ ಮೊಗಲರ ಪರವಾಗಿ ದಾಳಿ ಮಾಡಿದ ಮಾತಂಗಿಯನ್ನು ಎದುರಿಸಿ ರಣಕಾದವರಲ್ಲಿ ರಾಮರಾಯ(ಕುಮಾರ ರಾಮ)ನ ಸಂಗಡಿಗ ಕಾಟಣ್ಣನೂ ಇದ್ದು, ಈತನನ್ನು ಜನಪದರು 'ಏಳುರಾಯರ ಗಂಡ'ನೆಂದು ಸಂಬೋಧಿಸಿರುವರು — ಡಾ॥ ಬಿ. ಎಸ್. ಗದ್ದಗಿಮಠ (ಸಂ.) : ಜನತಾ ಗೀತೆಗಳು, ಧಾರವಾಡ, ೧೯೫೬, ಪು. ೨೫. ಇದಕ್ಕೆ ಪಾಠಾಂತರವಾಗಿ ಕಾರ್ಕಳದ ಅರಸರು ಧರಿಸಿದ ಬಿರುದುಗಳಲ್ಲಿ ಒಂದೆಂದು ನಮೂದಿಸಲಾದ 'ಅರವತ್ತುನಾಲ್ಕು ಮಂಡಲಿಕರ ಗಂಡ' ಎಂಬುದನ್ನು ಉದಾಹರಣೆಯಾಗಿ ತೋರಿಸಬಹುದು — ದಕ್ಷಿಣಕನ್ನಡ ಜಿಲ್ಲೆಯ ಕೈಫಿಯತ್ತುಗಳು, ಪು. ೧೧೧: ಕಾರ್ಕಳ ಅರಸರ ಕೈಫಿಯತ್ತು. 'ಎಟ್ಬರ ಗಂಡ' ಎಂಬುದು ಇದಕ್ಕೆ ಇನ್ನೊಂದು ಉದಾಹರಣೆ. 'ಎಟ್ಬರ ಗಂಡ' (ಶ್ರೀಮತು ಎಟ್ಬರ ಗಂಡ ಮರಳೋಜನ....) = ಏಳುಜನರ ಗಂಡ (= ಒಂದು ಬಿರುದು)—E. C., Vol. VIII, Shimoga District, Sagar 103-1, 1089 A.D. ; ಇಂತಹದೇ ಮತ್ತೊಂದು ಉದಾಹರಣೆ : 'ಎಳ್ಪಂದಿರು (= ಎಪ್ಪತ್ತು ಜನ) ಪ್ರಭುಗಳು'— Ibid., Vol. VI, Chikmagalur 15-12, 1074 A. D.

'೭೭ ಪಾಳೆಯಗಾರರು' ಎಂಬುದರ ರೂಪಾಂತರವೇ ಈ '೭೭ ಖಾನರು'. '೭ ಪಾಳೆಯಗಾರರು' [ಜೀ. ಶಂ. ಪರಮಶಿವಯ್ಯ (ಸಂ.) : ದೊಂಬಿದಾಸರ ಲಾವಣಿಗಳು, ಮೈಸೂರು, ೧೯೭೪, ಪು. ೧೩೮], '೭ ರಾಯರು' (ನಾನಾ ಕವಿಗಳ ಕೃತ ಕಾಲಜ್ಞಾನ ಸಂಗ್ರಹ, ಪು. ೬೮ : ನಂಜೇಶನ ಕಾಲಜ್ಞಾನ, ಪದ್ಯ ೧೧೨), ಇತ್ಯಾದಿ ಇದೇ ಆಶಯವುಳ್ಳ ಪಾಠಾಂತರಗಳು. "ಮುಸಲ್ಮಾನರು ಏಳು ಚಕ್ರ(ರಾಜ್ಯ)ವನೆತ್ತಿ ರಾಜಕುಲವೆನಿಸಿ ರಾಜ್ಯವನಾಳ್ಯಾರು" (ಅದೇ, ಪು. ೩ : ಸಂಗನಬಸವರಾಜದೇವರ ಕಾಲಜ್ಞಾನ ವಚನ) ಎಂಬುದು ಸಹ ಇದನ್ನೇ ವ್ಯಕ್ತಪಡಿಸುತ್ತದೆನ್ನಬಹುದು.

116 ಆರ್. ಎಸ್. ಸಿದ್ಧರಾಮಶಾಸ್ತ್ರಿ : 'ಶ್ರೀ ಸಿದ್ಧರಾಮನ ಗದ್ದುಗೆಗಳು', ಸಿದ್ಧಶ್ರೀ (ಶ್ರೀ ಸಿದ್ಧರಾಮಜಯಂತಿ ಮಹೋತ್ಸವ ಸ್ಮರಣಸಂಚಿಕೆ), ತುಮಕೂರು, ಜನವರಿ ೧೯೮೨, ಪು. ೪೯-೫೦

117 ಅದೇ, ಪು. ೫೦ ; ಈ ಬಗೆಗೆ ಈ ಲೇಖಕರ ನಿಲುವು ಇಂತಿದೆ : "ನನಗೆ ಗೊತ್ತಿರುವ ಗದ್ದುಗೆಗಳಿಷ್ಟು. ಉಳಿದ ಎಲ್ಲಾ ಗದ್ದುಗೆಗಳ ಸ್ಥಳಪುರಾಣಸಹಿತ ತಿಳಿದು ಮುದ್ರಿಸಿ ಪ್ರಕಟಿಸಬೇಕೆಂಬ ಆಕಾಂಕ್ಷೆಯಿದೆ."

118 ಗ್ರಾಮಕೂಗು (ವಾರಪತ್ರಿಕೆ), ಭರಮಸಾಗರ (ಚಿತ್ರದುರ್ಗ ಜಿಲ್ಲೆ), ದಿನಾಂಕ ೧೦-೧೧-೧೯೮೭

119 ಬಿ. ಅನಂತರಾವು (ಸಂಕಲನಕರ್ತ) : ಸಂಖ್ಯಾವಾಚಕ ಪದಕೋಶಮು (ತೆಲುಗು), ವಿಜಯವಾಡ (ಆಂಧ್ರ ಪ್ರದೇಶ), ಪು. ೩೭೭-೭೧೫

120 ಈ ಅಂಶದೊಡನೆ ಪೂರಕ ವಿಷಯಗಳನ್ನೂ ತಿಳಿಸಿ ಸಹಕರಿಸಿದವರು ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸ ವಿಭಾಗದಲ್ಲಿ ಪ್ರವಾಚಕರಾಗಿರುವ ಡಾ॥ ಪ್ರತಿಭಾ ಚಿಣ್ಣಪ್ಪ ಅವರು.

೭೭ರ ನಂತರದ ಪ್ರಮುಖ ಸಂಖ್ಯೆಯೆಂದರೆ ೭೭೦. ಈ ಮುಂದಿನ ಉಲ್ಲೇಖಗಳು ಈ ಸಂಖ್ಯೆಯೂ ಆಶಯ ಪೂರಿತವಾದುದೆಂದು ಸ್ಪಷ್ಟಪಡಿಸುತ್ತವೆ: ೭೭೦ವರುಷ,[121] ೭೭೦ ವರುಷಕೆ ಸುವ್ವಿ,[122] ೭೭೦ ತೂಕ ಚಿನ್ನ,[123] ೭೭೦ ಮನೆ,[124] ೭೭೦ ಗಣ,[125] ೭೭೦ ಅಮರಗಣ,[126]

---

121 ಜಾನಪದದಲ್ಲಿ ಅಂಕಲಗಿಯ ಅಡವೀಶ, ಪು. ೨೯

122 ಜಾನಪದ ಸಾಹಿತ್ಯ ದರ್ಶನ—ಭಾಗ ೫, ಧಾರವಾಡ, ೧೯೮೦, ಪು. ೨೯೬ ೨೨೮-೨೨೯

123 ಡಾ॥ ಎಚ್. ಪಿ. ಮಲ್ಲೇದೇವರು (ಸಂ.) : ಉರಿಲಿಂಗಪೆದ್ದಿಗಳ ವಚನಗಳು, ಧಾರವಾಡ, ೧೯೭೫ ಪು. ೧೭೭ : ವಚನ ೨೪೦

124 ಡಾ॥ ಆರ್. ಸಿ. ಹಿರೇಮಠ (ಸಂ.) : ತೋಂಟದ ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಲಜ್ಞಾನಸಾರಾಮೃತ, ಧಾರವಾಡ, ೧೯೬೪, ಪು. ೩೩೮ : ಐಕ್ಯಸ್ಥಲದ ವಚನ

125 ನಿಂಗಣ್ಣ ಸಣ್ಣಕ್ಕಿ (ಸಂ.) : ಗಂಡುಸರ ಜನಪದ ಹಾಡುಗಳು, ಪು. ೧೮೨ ; ಪಾಠಾಂ.—'೭೭೦ ಗಣಂಗಳು' : "ದೊಡ್ಡಳ ಬಾಚರಸ, ಸುಂಕದ ಬಂಕಣ್ಣ, ಹಡವದ ಅಪ್ಪಣ್ಣ, ಕೊಂಡಗೂಳಿಯ ಕೇಶಿರಾಜಯ್ಯಗಳು, ಮೊದಲಾದ ಏಳುನೂರ ಎಪ್ಪತ್ತು ಗಣಂಗಳು...."—ನಾನಾ ಕವಿಗಳ ಕೃತ ಕಾಲಜ್ಞಾನ ಸಂಗ್ರಹ—ಭಾಗ ೧, ಪು. ೨, ೬-೭, ೧೧, ೮ , ೧೦೭ ; '೭೭ ಸಾವಿರ ಗಣಂಗಳು'—ಹೆಳವರು ಮತ್ತು ಅವರ ಕಾವ್ಯಗಳು, ಪು. ೨೬೩ ; '೧,೯೬,೦೦೦ ಗಣಂಗಳು'—ನಿರಂಜನ ವಂಶರತ್ನಾಕರ—ಭಾಗ ೧, ಪು. ೨

126 ಉತ್ತಂಗಿ ಚನ್ನಪ್ಪ (ಸಂ.) : ಶ್ರೀ ಆದಯ್ಯನ ವಚನಗಳು, ಧಾರವಾಡ, ೧೯೫೭, ಪು. ೧೬೩-೧೬೪ ; ಪಾಠಾಂ.—'೭೭೧ ಅಮರಗಣಂಗಳು'—ಜಾನಪದದಲ್ಲಿ ಅಂಕಲಗಿಯ ಅಡವೀಶ, ಪು. ೩೮, ೪೦-೪೧, ೪೩-೪೪ ; ಇತರ ಉದಾಹರಣೆಗಳು : '೭೭೧ ಮಂದಿ' ಮತ್ತು '೭೭೧ ಲಿಂಗ'—ಅದೇ, ಪು. ೩೯ ಮತ್ತು ೪೦

ವಚನಗಳಲ್ಲಿ ಬರುವ '೫೬ ದೇಶಂಗಳು', '೭೭೦ ಅಮರಗಣ ಸಹಿತ' ಮತ್ತು '೮೮ ಪವಾಡಮಂ ಗೆಲಿದು' ಎಂಬ ಸಂಖ್ಯಾ ವಾಚಕಗಳು ಕೇವಲ ಆಶಯದ ಹಿನ್ನೆಲೆಯಲ್ಲಿ ಸೃಷ್ಟಿಗೊಂಡಂತಹವು—ಉಲ್ಲೇಖಗಳಿಗೆ : ಶ್ರೀ ಸಿದ್ಧರಾಮೇಶ್ವರ ವಚನಗಳು, ಪು. ೯೦. ಇಲ್ಲಿಯ '೫೬ ದೇಶಂಗಳು' ಅಥವಾ 'ಚ(ಛ)ಪ್ಪನ್ನ ದೇಶಗಳು' ಎಂಬುದು ಜನಪ್ರಿಯ ಆಶಯವಾಗಿದ್ದು ಸಾಹಿತ್ಯ ಕೃತಿ ಮತ್ತು ಶಾಸನಪಾಠಗಳಲ್ಲಿ ವಿಪುಲವಾಗಿ ಕಂಡುಬರುತ್ತದೆ. ಸಂಖ್ಯಾ ಆಶಯಕ್ಕೆ ಇದು ಪ್ರಮುಖ ಉದಾಹರಣೆ. 'ಚ(ಛ)ಪ್ಪನ್ನ ದೇಶಗಳು' ಕುರಿತು ವ್ಯಕ್ತಪಟ್ಟಿರುವ ಅಭಿಪ್ರಾಯ ಇಂತಿದೆ : "...ಈ ದೇಶಭೇದ ವಿವರಗಳಲ್ಲಿ ಯಾವ ಪ್ರಯೋಗ ಪ್ರಮಾಣಭೂತವಾದುದು, ಅಂಗೀಕಾರಯೋಗ್ಯವಾದುದು ಎಂಬುದನ್ನು ನಿರ್ಧರಿಸಿ ಹೇಳುವುದು ಸಾಧ್ಯವಿಲ್ಲ ; ಅಲ್ಲದೆ ಅದು ಅವಶ್ಯಕವೂ ಅಲ್ಲ. ಏಕೆಂದರೆ ಇಲ್ಲಿಯ ಪ್ರಯೋಗಗಳೆಲ್ಲ ಬಹುಮಟ್ಟಿಗೆ ಸಂಪ್ರದಾಯ ಶರಣ್ಯವೂ ಸಾಂಕೇತಿಕವೂ ಆದ ಈಚಿನ ಕಾಲದವು. ನಿಜವಾದ ಸಮಸ್ಯೆಯೆಂದರೆ ರಾಜಕೀಯವಾದ ಯಾವ ಸ್ಥಾನಮಾನಗಳನ್ನು ಹೊಂದಿ ಯಾವ ೫೬ ದೇಶಗಳು ಏಕಕಾಲದಲ್ಲಿ ಎಂದು ಭರತವರ್ಷದಲ್ಲಿ ಪ್ರಸಿದ್ಧವಾಗಿದ್ದುವು ಎಂಬುದು....ಸಾಹಿತ್ಯಿಕ ಆಧಾರಗಳನ್ನು ಗಮನಿಸಿದರೆ ಪ್ರಚಲಿತವೂ ಪ್ರಸಿದ್ಧವೂ ಆದ ೫೬ ದೇಶಗಳು ಪೂರ್ವಸ್ಥಿತವಾಗಿದ್ದುದು ಬರುಬರುತ್ತ ರಾಜಕೀಯ ಸ್ಥಿತ್ಯಂತರಗಳಿಂದ ಬದಲಾವಣೆಗಳಿಗೆ ಒಳಗಾಗಿರಬಹುದಾದರೂ, ಛಪ್ಪನ್ನದೇಶಗಳ ಗಣನೆ, ಕಲ್ಪನೆ, ಉಕ್ತಿ ಬೌದ್ಧಕಾಲೀನ ಸಾಂಪ್ರದಾಯಿಕ ಸೋಳಸಮಹಾಜನಪದಗಳಂತೆ ಮುಂದೆ ಒಂದು ಸಾಂಪ್ರದಾಯಿಕ ಸರಣಿಯಾಗಿ ಪರಿಣಮಿಸಿದಂತೆ ತೋರುತ್ತದೆ"—ಟಿ. ವಿ. ವೆಂಕಟಾಚಲ ಶಾಸ್ತ್ರೀ : ಸಾಹಿತ್ಯ ಮಂಥನ, ಬೆಂಗಳೂರು, ೧೯೭೨, ಪು. ೧೪೯-೧೫೦ : 'ಚ(ಛ)ಪ್ಪನ್ನ ದೇಶಗಳು'.

ಹಾಗೆಯೇ, ಹದಿನೆಂಟು ಜಾತಿಗಳನ್ನು ಕುರಿತ ವಿವರಣೆ ಸಹ ಇಂತಹ ಸಂಖ್ಯಾ ಆಶಯಗಳಿಗೆ ಪೂರಕವಾಗಿರುವಂತಹದು. ಉದಾಹರಣೆಗೆ, ಹದಿನೆಂಟು ಜಾತಿಗಳೆಂಬ ಪ್ರಾಚೀನ ಕಲ್ಪನೆ ಮೊದಲಿನಿಂದ ಇದ್ದಿರಬೇಕೆಂಬ ಭಾವನೆ ದೃಢವಾಗಲು ಬೇರೆ ಬೇರೆ ಕಾರಣಗಳಿವೆಯೆಂಬ ಅಭಿಪ್ರಾಯವಿದ್ದರೂ "...ಸಾಹಿತ್ಯ ಹಾಗೂ ಶಾಸನಗಳಲ್ಲಿ ಪದೇ ಪದೇ ಉಲ್ಲೇಖಿತವಾಗುವ ಈ ಹದಿನೆಂಟು ಜಾತಿ ಎಂಬುದು ಸಮಾಜದ ಒಂದು ಸಾಂಪ್ರದಾಯಿಕ ವರ್ಗೀಕರಣವೇ ಅಲ್ಲದೆ ಇನ್ನೇನೂ ಅದಕ್ಕೆ ಹೆಚ್ಚಿನ ಮಹತ್ವವಿಲ್ಲವೆಂಬ ನಿರ್ಣಯಕ್ಕೆ ಬರಲು ಅವಕಾಶವಿದೆ" ಎಂತಲೂ ಹೇಳಿರುವುದುಂಟು—ಡಾ॥ ಸೂರ್ಯನಾಥ ಕಾಮತ್ : 'ಹದಿನೆಂಟು ಜಾತಿ', ಆಸ್ವಾದ (ಪ್ರೊ॥ ಎಂ. ವಿ. ಸೀತಾರಾಮಯ್ಯ ಅಭಿನಂದನ ಗ್ರಂಥ), ಬೆಂಗಳೂರು, ೧೯೮೩, ಪು. ೪೩೩.

ಈ ಎರಡು ಉದಾಹರಣೆಗಳೂ '೭' ಮೂಲಾಂಕವನ್ನಾಧರಿಸಿದ ಇದೇ ವರ್ಗದ ಇತರ ಸಂಖ್ಯಾವಾಚಕಗಳು ಹೊಂದಿರುವ ಆಶಯದ ಹಿನ್ನೆಲೆಯನ್ನು ಸ್ಪಷ್ಟವಾಗಿ ನಿಶ್ಚಯಿಸಲು ನೆರವಾಗುತ್ತವೆ.

೭೭೦ ಚರಲಿಂಗ,[127] ೭೭೦ ದಿಡ್ಡಿ,[128] ಇತ್ಯಾದಿ. ಮಹಮ್ಮದೀಯರು ೭೭೦ ವರುಷ ಕಲ್ಯಾಣವನ್ನು ಆಳಿದವರು.[129] "ನಾವು (ಬಸವಣ್ಣ) ಹೋದ ಏಳುನೂರ ಎಪ್ಪತ್ತು ವರುಷದ ಮೇಲೆ ಉತ್ತರದಲ್ಲಿ ರಾಕ್ಷಸಿ ಹುಟ್ಯಾಳು," "ನಾವು ಹೋದ ಏಳುನೂರ ಎಪ್ಪತ್ತು ವರುಷಕ್ಕೆ ಬಿದುರೆಯೆಂಬ ಪಟ್ಟಣ ಕೆಟ್ಟು ಹುಲಿ ಕರಡಿ ಆಡ್ಯಾವು,"[130] "ಅಪ್ಪ ಬಸವಣ್ಣ ಬರುವುದು ಏಳ್ನೂರು ಎಪ್ಪತ್ತು ವರುಷಕ್ಕೆ"[131]—ಇಂತಹ ಹಲವಾರು ಹೇಳಿಕೆಗಳಲ್ಲಿ ಇರುವ ೭೭೦ ಸಂಖ್ಯೆಯು ಸಾಂಕೇತಿಕವಾಗಿಯಷ್ಟೆ ಸೇರಿಕೊಂಡಿದೆಯೆಂಬುದು ಆಯಾ ಸಂದರ್ಭಗಳನ್ನು ಪರಿಶೀಲಿಸಿದರೆ ವ್ಯಕ್ತಪಡುತ್ತದೆ.

ದಕ್ಷಿಣ ಸೊಲ್ಲಾಪುರ ತಾಲ್ಲೂಕಿನ ತೀರ್ಥ ಎಂಬಲ್ಲಿ ದೊರೆತ ಕ್ರಿ. ಶ. ೧೧೦೬ರ ಶಾಸನವೊಂದರಲ್ಲಿ "ಶ್ರೀಮದ್ವೀರ ಖಣ್ಡೆಯ ಪಾಪವಿನಾಶ ದೇವರ ಏಳುನೂಱೆಳ್ಪತ್ತ[ರ] ವೊದಲಡವಕೆಯ ಮಟದ...." ಎಂಬ ಸಾಲುಗಳಲ್ಲಿಯೂ[132] ಈ ೭೭೦ ಸಂಖ್ಯೆಯು ಅವಕಾಶ ಪಡೆದಿದೆ. ಬೆಂಗಳೂರು ಜಿಲ್ಲೆ, ಹೊಸಕೋಟೆ ತಾಲ್ಲೂಕಿನ ಸೂಲಿಬೆಲೆ ಮತ್ತು ಖಾಜಿಹೊಸಳ್ಳಿ ಮೊದಲಾದೆಡೆಗಳಲ್ಲಿ ಸಂತ ಸುಜ್ಞಾನಮೂರ್ತಿಯ ಗದ್ದುಗೆಗಳನ್ನು ಆರಾಧಿಸಲಾಗುತ್ತಿದ್ದು, ಈ ಸಂತನ ಭಕ್ತರಾಗಿರುವ ಪಾಂಚಾಳ(ವಿಶ್ವಕರ್ಮ)ರು ಇಂತಹ ಗದ್ದುಗೆಗಳು ೭೭೦ ಕಡೆ ನೆಲೆಗೊಂಡಿವೆಯೆಂದು ಹೇಳುವುದು[133] ಸಹ ಪರಿಶೀಲನಾರ್ಹ.

"ಏಳುನೂರದ ಎಪ್ಪತ್ತೇಳು ಪ್ರಮಥರ ಮ್ಯಾಳಗೂಡಿತು...." ಎಂಬುದು ಮೇದಾರ ಕೇತಯ್ಯನನ್ನು ಕುರಿತ ಕೋಲುಪದದಲ್ಲಿ ಉಪಲಬ್ಧವಿದ್ದು,[134] ೭೭೭ರ ಸಂಖ್ಯಾವಾಚಕಕ್ಕೆ ಉದಾಹರಣೆಯಾಗಿ ನಿಲ್ಲುತ್ತದೆ.

'೭೭ ಕೋಟಿ' ಕುರಿತ ಸಂಖ್ಯಾವಾಚಕಗಳು ಸಾಹಿತ್ಯಕೃತಿ ಮತ್ತು ಶಾಸನಗಳಲ್ಲಿ ಕಂಡುಬರುತ್ತವೆ. ಉದಾಹರಣೆಗೆ, '೭೭ ಕೋಟಿ ಗಿರಿ'ಯ ಉಲ್ಲೇಖವು ಜನಪದಸಾಹಿತ್ಯದಲ್ಲಿ ಕಂಡುಬಂದರೆ,[135] ಜಗದರಸ ರಾಮನಿಗೆ '೭೭ ಕೋಟಿ ಬಲಪತಿಗಳು' ಕೈ ಮುಗಿದು ಸಾರುತಿರ್ದರೆಂದು ನರಹರಿ(ಕುಮಾರ ವಾಲ್ಮೀಕಿ)ಯು ತನ್ನ ಕೃತಿಯಲ್ಲಿ ಹೇಳಿರುವುದನ್ನು ಗಮನಿಸಬಹುದು.[136] ಸೊನ್ನಲಿಗೆ ಸಿದ್ಧರಾಮನ ರಚನೆಯೆಂದು ನಂಬಲಾಗಿರುವ ಹಾಗೂ ಈವರೆಗೆ ಕೆಲವು ಶಾಸನಕಲ್ಲುಗಳಲ್ಲಿ ಮಾತ್ರವೇ ದೊರೆತಿರುವ ಕನ್ನಡ ಹಾಗೂ ಸಂಸ್ಕೃತ ಅನುವಾದದ 'ಶಾಸನವಚನ'('ಗುರುವಚನ')ವೊಂದು '೭೭ ಕೋಟಿ

---

127 ನಾನಾ ಕವಿಗಳ ಕೃತ ಕಾಲಜ್ಞಾನ ಸಂಗ್ರಹ—ಭಾಗ ೧, ಪು. ೧೧

128 ಈ ಸಂಖ್ಯೆ ಸಹಿತವಾದ ಕಲ್ಯಾಣಪಟ್ಟಣದ ನಿರ್ಮಾಣ ಕುರಿತ ವಿವರಣೆ ಇಂತಿದೆ : "ಬಿದುರುಕೋಟೆಯಲ್ಲಿ ವೀರಸಂಗಯ್ಯನ ಗದ್ದಿಗೆ ಅಡಿಯಲಿರ್ದ ಕೋಟಿ ತೊಂಬತ್ತೊಂದು ದ್ರವ್ಯವ ತೆಗೆದು ಇನ್ನು ಸಮಸ್ತ ದ್ರವ್ಯಗಳ ಖರ್ಚು ಮಾಡಿಸಿ, ಮಹಾ ಕಲ್ಯಾಣ ಪಟ್ಟಣವ ಕಟ್ಟಿಸ್ಯಾರು. ದೆಸೆದೆಸೆಯಲ್ಲು ಬಳಸಿ ಬಂದ ಕೋಟೆ ನಲವತ್ತೆಂಟು ಯೋಜನ ಪ್ರಮಾಣ. ತಟ್ಟು ಹನ್ನೆರಡು ಯೋಜನ. ಅದಕ್ಕೆ ಮುನ್ನೂರ ಅರವತ್ತು ಬಾಗಿಲು. ಏಳುನೂರು ಎಪ್ಪತ್ತು ದಿಡ್ಡಿ. ಒಂಬೈನೂರು ಚೋರದಿಡ್ಡಿ...." ಇಲ್ಲಿಯ ಸಂಖ್ಯೋತ್ಪ್ರೇಕ್ಷೆಯನ್ನು ಗಮನಿಸಿ ; ಪಾಠಾಂ.—'೭೭೧ ಮಹಾದ್ವಾರ'—ಜಾನಪದದಲ್ಲಿ ಅಂಕಲಗಿಯ ಅಡವೀಶ, ಪು. ೩೮

129 ನಿರಂಜನ ವಂಶರತ್ನಾಕರ—ಭಾಗ ೧, ಪು. ೧೦

130 ನಾನಾ ಕವಿಗಳ ಕೃತ ಕಾಲಜ್ಞಾನ ಸಂಗ್ರಹ—ಭಾಗ ೧, ಪು. ೩, ೧೩

131 ಅದೇ, ಪು. ೧೩೮, ೧೪೦ : ಎಮ್ಮೆಬಸವಣ್ಣನ ಕಾಲಜ್ಞಾನ ಹಾಗೂ ನೀಲಮ್ಮನ ಕಾಲಜ್ಞಾನ

132 Shrinivas Ritti, Anand Kumbhar (Eds.) : *Inscriptions from Solapur District*, No. 2, Dharwad ,1988, pp. 2-3

133 *Karnataka State Gazetteer-Bangalore Rural District*, p. 145

134 ಡಾ|| ಎಂ. ಎಸ್. ಸುಂಕಾಪುರ (ಸಂ.): ಜೀವನ ಜೋಕಾಲಿ—ಭಾಗ ೮ : ಕೋಲು ಪದ, ಧಾರವಾಡ, ೧೯೭೬, ಪು. ೫೨

135 ಡಾ|| ಎಂ. ಎಸ್. ಸುಂಕಾಪುರ (ಸಂ.) : ಜೀವನ ಜೋಕಾಲಿ—ಭಾಗ ೬ : ಡೊಳ್ಳಿನ ಹಾಡು, ಧಾರವಾಡ, ೧೯೭೬, ಪು. ೫೦

136 ತೊರವೆಯ ರಾಮಾಯಣ—ಸಂಪುಟ ೧, ಪು. ೪೧೨ : ಕಿಷ್ಕಿಂಧಾ ಕಾಂಡ, ಸಂಧಿ ೮, ಪದ್ಯ ೨

ಸಂಖ್ಯೆಯನ್ನು ತನ್ನಲ್ಲಿ ಗರ್ಭೀಕರಿಸಿಕೊಂಡು ಅದಕ್ಕೆ ಮಹತ್ವವನ್ನು ತಂದುಕೊಟ್ಟಿದೆ. ಈ ಸಂಖ್ಯಾವಾಚಕವು ಕೆಲವಾರು ಪಾಠಾಂತರಗಳೊಂದಿಗೆ ಪ್ರಸ್ತಾಪಗೊಂಡಿದ್ದು, ಬಹುಸಂಖ್ಯೆಯ ಶಾಸನಗಳಲ್ಲಿ ಎಡೆ ದೊರಕಿಸಿಕೊಂಡಿರುವುದು ಗಮನೀಯ ಅಂಶ.[137]

೭೭೦೦, ೭೦೭೦ ಕೋಟಿ, ಇತ್ಯಾದಿ : ಈ ಸಂಖ್ಯೆಗಳು ಹಾಗೂ ವಿಸ್ತಾರಗೊಂಡ ಇತರ ಸಂಖ್ಯಾರೂಪಗಳು ದಾಖಲಾಗಿರುವ ಬಗೆಗೆ ಕೆಲವು ಉದಾಹರಣೆಗಳು ದೊರಕುತ್ತವೆ. ಜನಪದಗೀತೆಯೊಂದರಲ್ಲಿಯ '೭೭೦೦ ಜಂಗಮರು'[138] ಹಾಗೂ ನಂದನಹೊಸೂರು ತಾಮ್ರಪತ್ರದಲ್ಲಿಯ '೭೭೦೦ ಬಂಡಿಗಳು'[139] ಎಂಬ ಉಲ್ಲೇಖಗಳು ಮುಖ್ಯವಾದುವು.

'೭೦೭೦ ಕೋಟಿ' ಎಂಬುದು ವಚನವೊಂದರಲ್ಲಿ ಲಭ್ಯವಿರುವುದು[140] ಗಮನಾರ್ಹ.

ಈ ಎಲ್ಲವುಗಳ ಜತೆಯಲ್ಲಿ ಪ್ರಸ್ತಾಪಿಸಬೇಕಾದ ಇನ್ನೊಂದು ಕುತೂಹಲಕಾರಿ ಉದಾಹರಣೆಯೆಂದರೆ, ಸರ್ವಜ್ಞಕವಿಯು ಸಾರಿದ ವಚನಗಳು ಒಟ್ಟು '೭ ಲಕ್ಷದ ೭೭ ಸಾವಿರದ ೭೭೭' ಎಂದು ಅಂದಾಜು ಮಾಡಲಾಗಿದೆಯೆಂಬುದು.[141]

ಒಟ್ಟಿನಲ್ಲಿ, '೭' ಮೂಲಾಂಕವನ್ನಾಧರಿಸಿದ ಈ ವರ್ಗದ ಇತರ ಸಂಖ್ಯಾವಾಚಕಗಳೆಲ್ಲವೂ ಕೇವಲ ಸಾಂಕೇತಿಕವಾಗಿದ್ದು, ಸಾಂಪ್ರದಾಯಿಕ ಸಂಖ್ಯಾ ಆಶಯದ ಮಹತ್ವವನ್ನು ಮನಗಾಣಿಸಿಕೊಡುತ್ತವೆಂಬುದನ್ನು ಇಲ್ಲಿ ಇನ್ನೊಮ್ಮೆ ನಿರ್ಣಯಯುತವಾಗಿ ಹೇಳಬಹುದು.*

---

137 ಈ ಸಂಖ್ಯಾವಾಚಕವನ್ನುಳ್ಳ 'ಶಾಸನ ವಚನ'ದ ಸಾಲು ಸಾಮಾನ್ಯವಾಗಿ ಇಲ್ಲಿಯ ಎಲ್ಲ ಶಾಸನಗಳಲ್ಲೂ ಈ ಮುಂದಿನಂತೆ ಇರುತ್ತದೆ : "....ಆತನ ಮಾತಾಪಿತೃಗಳೆಲ್ಲವಂ ಎಪ್ಪತ್ತೇಳು ಕೋಟಿ ವರುಷಂಬರಂ ಹುಳುಗೊಂಡದ ನರಕದೊಳಗಿಕ್ಕಿ ನೀನಾಹುತಿಗೊಂಡಿರು," ಇತ್ಯಾದಿ.
*South Indian Inscriptions*, Vols. XV & XX; E. C., Vol. VII, Shimoga District & Vol. XI, Chitradurga District; *Karnataka Inscriptions*, Vol. XXIII; *Journal of the Karnataka University*, Vol. II (1962) ಮತ್ತು *Inscriptions from Solapur District*, No. 2 ಸಂಗ್ರಹಗಳಲ್ಲಿ ಅಚ್ಚುಗೊಂಡ ಹಾಗೂ 'ಶ್ರೀ ಸಿದ್ಧರಾಮೇಶ್ವರ ವಚನಗಳು' ಗ್ರಂಥದಲ್ಲಿ ಪ್ರಸ್ತಾಪಗೊಂಡ ಈ ವಚನವಿರುವ ಕೆಲವು ಶಾಸನಗಳೆಂದರೆ — ಚೂರ್ಗಿ ಶಾಸನ (ಕ್ರಿ. ಶ. ೧೧೯೦), ಸಂಖ ಶಾಸನ (ಕ್ರಿ. ಶ. ೧೧೯೪), ಕೂಡಿಗಿ ಶಾಸನ (ಪಾಠಾಂ.—'ಯೆಪ್ಪತ್ತು ಕೋಟಿ', ಕ್ರಿ. ಶ. ೧೨೦೧), ಗುಂಡಕರ್ಜಗಿ ಶಾಸನ (ಕ್ರಿ. ಶ. ೧೨೦೦–೧೨೪೭), ಅಕ್ಕಲಕೋಟೆ ಶಾಸನ (ಕ್ರಿ. ಶ. ೧೨೫೫), ಟಾಕಳಿ ಶಾಸನ ('ಸಪ್ತಸಪ್ತತಿ ಕೋಟಿ ವರ್ಷ ಪರ್ಯಂತ್'—ಸಂಸ್ಕೃತ, ಕ್ರಿ. ಶ. ೧೨೪೭-೧೨೬೧), ಕೋಳಿಸಾಲೆ ಶಾಸನ (ಕ್ರಿ. ಶ. ೧೨೫೬), ಫಡೇಕನೂರು ಶಾಸನ (ಕ್ರಿ. ಶ. ೧೨೫೬-೧೨೫೭), ಜಟ್ಟಗಿ ಶಾಸನ (ಕ್ರಿ. ಶ. ೧೨೫೭), ತಡವಳ ಶಾಸನ (ಕ್ರಿ. ಶ. ೧೨೫೭ ?), ಬುಡರಸಿಂಗಿ ಶಾಸನ (ಕ್ರಿ. ಶ. ೧೨೫೭), ಕೊಟ್ಟಗಿ ಶಾಸನ (ಕ್ರಿ. ಶ. ೧೨೬೪), ಸಂಗೂರು ಶಾಸನ (ಕ್ರಿ. ಶ. ೧೨೬೫), ಯಡಹಳ್ಳಿ ಶಾಸನ (೧೩ನೆಯ ಶತಮಾನ), ಗುಂಜಿಗಾಂವ ಶಾಸನ (೧೩ನೆಯ ಶತಮಾನ), ಸೊಲ್ಲಾಪುರ—ಉತ್ತರತಾಲ್ಲೂಕು ಶಾಸನ ('ಸಪ್ತಸಪ್ತತಿ ಕೋಟಿ ವರ್ಷ ಪರ್ಯಂತ್'—ಸಂಸ್ಕೃತ, ಕ್ರಿ. ಶ. ೧೩೧೬) ಮತ್ತು ಚಿತ್ರದುರ್ಗ ಶಾಸನ (ಕ್ರಿ. ಶ. ೧೩೫೬).

138 ಕ್ಯಾತನಹಳ್ಳಿ ರಾಮಣ್ಣ (ಸಂ.) : ಫ್ಲೀಟರು ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳು, ಮೈಸೂರು, ೧೯೭೨, ಪು. ೮೯

139 M. A. R., 1931, No. 1, p. 93

140 ಪಿ. ಎಂ. ಗಿರಿರಾಜು (ಸಂ.) : ಬಾಚಿಕಾಯಕದ ಬಸವರಾಜದೇವರ ವಚನಗಳು, ಮೈಸೂರು, ೧೯೭೭, ವಚನ ೧೨

141 ತ. ಪ್ರ. ವೆಂಟಕರಾಮ್ : 'ಸಾಹಿತ್ಯ—ಒಂದು ನೋಟ', ಅಂಬಾರಿ (ಬೆಂಗಳೂರು ಗ್ರಾಮಾಂತರ ಜಿಲ್ಲಾ ಎರಡನೇ ಕನ್ನಡ ಸಾಹಿತ್ಯ ಸಮ್ಮೇಳನದ ನೆನಪಿನ ಸಂಚಿಕೆ), ಆನೇಕಲ್, ೧೯೮೧

* ಕೆಲವು ಉಲ್ಲೇಖಗಳನ್ನು ನನ್ನ ಗಮನಕ್ಕೆ ತರುವುದರ ಮೂಲಕ ಉಪಕರಿಸಿದ ಸರ್ವಶ್ರೀ ಎಸ್. ಶಿವಣ್ಣ, ಡಾ॥ ಆರ್. ಶೇಷಶಾಸ್ತ್ರಿ, ಎಚ್. ಪಿ. ಶಶಿಧರಮೂರ್ತಿ, ಅಲ್ಲ. ಚಿರಂಜೀವಿ ಮತ್ತು ಎಂ. ಜಿ. ನಾಗರಾಜ್ ಅವರುಗಳಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಡಾ॥ ಸೂರ್ಯನಾಥ ಕಾಮತ್

# ಮಧ್ಯಯುಗದ ಕರ್ನಾಟಕದ ಬಗ್ಗೆ ಸಂಶೋಧನೆ

ವಿಜಯನಗರದ ಆರಂಭದಿಂದ ಟಿಪ್ಪುವಿನ ಪತನದ ವರೆಗಿನ ಅವಧಿ(೧೩೩೬-೧೭೯೯)ಯನ್ನು ಕರ್ನಾಟಕದ ಇತಿಹಾಸದ ಮಧ್ಯಯುಗ ಎಂದು ಪರಿಗಣಿಸಬಹುದಾಗಿದೆ. ಮುಖ್ಯವಾಗಿ ಕರ್ನಾಟಕದ ಇತಿಹಾಸದಲ್ಲಿ ಈ ಅವಧಿಯಲ್ಲೇ ಅನೇಕ 'ಕಳೆದುಹೋದ ಗೊಣಸುಗಳು' ('ಮಿಸ್ಸಿಂಗ್ ಲಿಂಕ್ಸ್') ಹಾಗೂ 'ಕತ್ತಲಿನ' ಅವಧಿಗಳು ಇರುವುದು. ರಾಜಕೀಯವಾಗಿ ವಿಜಯನಗರ ಹಾಗೂ ಬಹುಮನಿ ರಾಜ್ಯದ ಅಸ್ತಿತ್ವ, ಈ ಎರಡೂ ಸಾಮ್ರಾಜ್ಯಗಳು ಒಡೆದು ಉಂಟಾದ ಪಾಳೆಯಗಾರರ ಪ್ರಾಬಲ್ಯ ಪೋರ್ತುಗೀಸರಿಂದ ಆರಂಭಿಸಿ ಐರೋಪ್ಯರ ಆಗಮನ, ಮರಾಠರ ಹಾಗೂ ಮುಘಲರ ಚಟುವಟಿಕೆಗಳು, ಹೈದರನ ಪ್ರಯತ್ನದಿಂದ ಕರ್ನಾಟಕ ಬಹುಪಾಲು ಪಾಳೆಯಗಾರರ ವಿಸರ್ಜನೆ ಹಾಗೂ ಒಂದು ರೀತಿಯಲ್ಲಿ ಬಹುಪಾಲು ಕರ್ನಾಟಕದ ರಾಜಕೀಯ ಐಕ್ಯಸಾಧನೆ ಮತ್ತು ಈ ಅವಧಿಯ ಕೊನೆಗೆ ಇಡೀ ಕರ್ನಾಟಕದಲ್ಲಿ ಬ್ರಿಟಿಷರ ಆಧಿಪತ್ಯದ ಸ್ಥಾಪನೆ, ಇವು ಈ ಅವಧಿಯ ಮುಖ್ಯ ರಾಜಕೀಯ ಘಟನೆಗಳು. ಇಸ್ಲಾಂ ಹಾಗೂ ಕ್ರೈಸ್ತ ಧರ್ಮಗಳ ಪ್ರಸಾರ, ಪಾಶ್ಚಾತ್ಯ ವ್ಯಾಪಾರ ಹಾಗೂ ಸಂಪರ್ಕಗಳಿಂದ ಆದ ಆರ್ಥಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು ಹಾಗೂ ಕಲೆ, ಸಂಸ್ಕೃತಿಯ ಕ್ಷೇತ್ರದಲ್ಲಿ ಆದ ಅನೇಕ ಸ್ಥಿತ್ಯಂತರಗಳು ಈ ಕಾಲದ ಗಣ್ಯ ವಿದ್ಯಮಾನಗಳು.

ಸಂಶೋಧನೆಯ ದೃಷ್ಟಿಯಿಂದ ಸಾಮಗ್ರಿಗಳಲ್ಲಿ ಶಾಸನಗಳ ಜೊತೆಗೇ ಅದಕ್ಕೂ ಹೆಚ್ಚಾಗಿ ಕಾಗದ ಪತ್ರಗಳಿಗೆ, ಸಂಸ್ಕೃತ, ಕನ್ನಡಗಳ ಜೊತೆಗೆ ಪರ್ಶಿಯನ್, ಮರಾಠಿ, ಪೋರ್ತುಗೀಸ್, ಫ್ರೆಂಚ್ ಹಾಗೂ ತೆಲುಗು ಭಾಷಾಮೂಲಗಳಿಗೆ ಈ ಕಾಲದಲ್ಲಿ ಹೆಚ್ಚಿನ ಮಹತ್ವ ಬರುತ್ತದೆ.

ವಿಜಯನಗರದ ಬಗ್ಗೆ ರಾಬರ್ಟ್ ಸ್ಯುಯೆಲ್. ಎಚ್. ರಾಮಶರ್ಮ, ಎಚ್. ಕೃಷ್ಣಶಾಸ್ತ್ರಿ ಇವರುಗಳು ರಾಜಕೀಯ ಇತಿಹಾಸದ ಬಗ್ಗೆ ಬರೆದ ಗಣ್ಯ ಕೃತಿಗಳೇ ಅಲ್ಲದೆ ಡಾ॥ ಸಾಲೆತೊರೆ, ಡಾ॥ ಮಹಾಲಿಂಗಂ, ಕನ್ನಡದಲ್ಲಿ ಇತ್ತೀಚೆಗೆ ಡಾ॥ ಕೆ. ಶ್ರೀಕಂಠಯ್ಯ ಇವರುಗಳು ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳ ಬಗ್ಗೆ ತಮ್ಮ ಅಧ್ಯಯನಗಳನ್ನು ಪ್ರಕಟಿಸಿದ್ದಾರೆ. ಡಾ॥ ಮಹಾಲಿಂಗಂ ಹಾಗೂ ಡಾ॥ ಬಿ. ಆರ್. ಗೋಪಾಲರು ಶಾಸನಗಳ ಸಮಗ್ರ ಸಾರಸಂಗ್ರಹಣದ ಬೃಹತ್ ಕಾರ್ಯ ಕೈಕೊಂಡಿದ್ದಾರೆ. ಕಲೆ, ಸಾಹಿತ್ಯ, ಆಡಳಿತಕ್ಕೆ ಸಂಬಂಧಿಸಿ ಸಾಕಷ್ಟು ಕೆಲಸವಾಗಿದೆ. ಆದರೂ ವಿಜಯನಗರ ಸಾಮ್ರಾಜ್ಯವು ಅಧ್ಯಯನಶೀಲರಿಗೆ ಒಂದು ಅಕ್ಷಯ ಪಾತ್ರೆ ಇದ್ದಂತೆ. ವಿಜಯನಗರ ಒಬ್ಬೊಬ್ಬ ಗಣ್ಯ ಅರಸರ ಸಾಧನೆಯ ಬಗೆಗೆ ಹಾಗೂ ಕರ್ನಾಟಕದ ಒಂದೊಂದು ಜಿಲ್ಲೆಯಲ್ಲೂ ವಿಜಯನಗರದ ಆಡಳಿತದ ವ್ಯಾಪ್ತಿ, ಸ್ವರೂಪ, ಚಟುವಟಿಕೆಗಳ ಚಿತ್ರಣ ನೀಡಬಹುದಾಗಿದೆ. ಆ ಕಾಲದ ಕಂದಾಯ, ಕರಗಳ ವ್ಯವಸ್ಥೆ, ಶಿಕ್ಷಣ ವ್ಯವಸ್ಥೆಗಳ ಚಿತ್ರಣ ಮೂಡಿಸಲು ಯತ್ನ ಆಗಬೇಕಾಗಿದೆ. ೧೩೦೦ ರಿಂದ ೧೮೦೦ರ ವರೆಗಿನ ಕೈಗಾರಿಕೆ, ಮಾರ್ಗಗಳು, ವ್ಯಾಪಾರ, ಸಂತೆಗಳು, ಮುಂತಾದ ಆರ್ಥಿಕ ಚಟುವಟಿಕೆಗಳ ವಿವರ ಚಿತ್ರಣ ಮೂಡಿಸಲು ಅವಕಾಶವಿದೆ. ಸೂಸನ್ ಎಸ್. ಬೀನ್ ಎಂಬ ಅಮೇರಿಕನ್ ಮಹಿಳೆ 'ದಿ ಫ್ಯಾಬ್ರಿಕ್ ಆಫ್ ಸೋಶಲ್ ಲೈಫ್ ಇನ್ ಪ್ರಿ-ಬ್ರಿಟಿಷ್ ಮೈಸೂರ್' ಎಂಬುದಾಗಿ ಇತ್ತೀಚೆಗೆ

(೧೯೮೬) 'ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ'ಯಲ್ಲಿ ಬರೆದ ನೇಯ್ಗೆ ವ್ಯವಸಾಯದ ಬಗೆಗಿನ ಉಪಯುಕ್ತ ಲೇಖನದ ಬಗ್ಗೆ ಇಲ್ಲಿ ವಿದ್ವಾಂಸರ ಗಮನ ಸೆಳೆಯಬಯಸುತ್ತೇನೆ.

ಬಹಮನಿ ಆಡಳಿತದ ಬಗ್ಗೆ ಪಿ. ಎಂ. ಜೋಶಿ, ಶೇರ್ವಾನಿ, ಯಜ್ದಾನಿ, ಎಸ್. ಕೆ. ಸಿಂಹ, ಡಾ॥ ಎಲ್. ಆರ್. ಕುಲ್ಕರ್ಣಿ ಮುಂತಾದವರುಗಳ ಕೆಲಸದ ಬಗ್ಗೆ ಗಮನ ಸೆಳೆಯುತ್ತ, ಅವರ ಆಡಳಿತ ವ್ಯವಸ್ಥೆಯ ಬಗ್ಗೆ ಅಧ್ಯಯನ ನಡೆಸಲು ಇರುವ ಅವಕಾಶದ ವಿಚಾರ ಒತ್ತಿ ಹೇಳಬಯಸುತ್ತೇನೆ. ಹಳೆಯ ಆಡಳಿತ ವ್ಯವಸ್ಥೆ ಎಷ್ಟರ ಮಟ್ಟಿಗೆ ಮುಂದುವರಿಯಿತು, ಆಡಳಿತ ಘಟಕ, ಅಧಿಕಾರಿಗಳ ಹೆಸರು ಹಾಗೂ ಸ್ಥಾನಮಾನ, ತೆರಿಗೆ ಮುಂತಾದವುಗಳಲ್ಲಿ ಏನೇನು ಬದಲಾವಣೆಗಳಾದವು ಎಂಬುದರ ಅಧ್ಯಯನಕ್ಕೆ ಅವಕಾಶವಿದೆ. ಇವರ ಕಾಲಕ್ಕೆ ರೂಢಿಗೆ ತರಲ್ಪಟ್ಟ ಔತ್ತರೇಯ ಹಾಗೂ ಪರ್ಶಿಯನ್ ಆಡಳಿತ ಪದಗಳ ವಿವರಣೆಗೆ ಅವಕಾಶವಿದೆ. ಬೆಳಗಾವಿ ಜಿಲ್ಲಾ ಪ್ರದೇಶದಲ್ಲಿ ಇರುವ ಬಹುಪಾಲು ಬ್ರಾಹ್ಮಣ ದೇಶಪಾಂಡೆಗಳು ಶಹರ್ ಬೀದರ್ ಪ್ರದೇಶದಿಂದ ಬಂದವರೆಂದು ಈ ಬಗ್ಗೆ ಗಂಗಾಧರರಾವ್ ದೇಶಪಾಂಡೆಯವರು ತಮ್ಮ ಜೀವನಚರಿತ್ರೆಯಲ್ಲಿ ಹೇಳಿದ ಅಂಶದ ಕಡೆ ಗಮನ ಸೆಳೆಯಬಯಸುತ್ತೇನೆ.

ವಿಜಯನಗರ ಕೈಕೆಳಗಿದ್ದು ಮುಂದೆ ಒಂದು ರೀತಿಯಲ್ಲಿ ಸ್ವತಂತ್ರರಾದ ಪಾಳೆಯಗಾರರಪಟ್ಟಿತಯಾರಿಸುವಿಕೆ, ಅವರ ಅಧಿಕಾರ ವ್ಯಾಪ್ತಿ, ಇವುಗಳ ವಿವರಗಳನ್ನೊಳಗೊಂಡ ಒಂದು ನಕಾಶೆಯ ರಚನೆ ಮಾಡಲು ಅವಕಾಶವಿದೆ. ಈಗ ಕರ್ನಾಟಕದ ಎಲ್ಲ ಜಿಲ್ಲಾ ಗ್ಯಾಸೆಟಿಯರ್‌ಗಳ ಪ್ರಕಟಣೆ ಆಗಿರುವುದರಿಂದ ಈ ಬಗ್ಗೆ ಮೂಲಭೂತ ಮಾಹಿತಿ ಅವುಗಳಲ್ಲಿ ಸಿಗುವುದು. ಕೆಲವೊಂದು ಹಿರಿಕಿರಿ ಪಾಳೆಯಗಾರರ ಬಗ್ಗೆ ಬಿಡಿಬಿಡಿಯಾಗಿ ಅಧ್ಯಯನ ಸಾಗಿದೆ. ಆದರೆ ಈ ಬಗ್ಗೆ ಒಂದು ಸಮಗ್ರ ಅಧ್ಯಯನ ಆಗಬೇಕು. ಅವರ ಆಡಳಿತ ಕ್ರಮ, ಅದರಲ್ಲಿ ಬೇರೆ ಬೇರೆ ಪಾಳೆಯಗಾರರು ಜಾರಿಗೆ ತಂದಿರಬಹುದಾದ ಸುಧಾರಣೆಗಳು ಅಧ್ಯಯನಯೋಗ್ಯವಾಗಿವೆ. ಇದು ಒಂದು ಸಂಕಲಿತ (ಇಂಟೆಗ್ರೇಟೆಡ್) ಅಧ್ಯಯನ ಆಗಬೇಕು. ಅವರ ಕಾಲದಲ್ಲಿ ರಚನೆಯಾದ ಕಲಾತ್ಮಕ ದೇವಾಲಯಾದಿ ಸೌಧಗಳು, ಅವರು ಪ್ರೋತ್ಸಾಹಿಸಿದ ಕವಿಗಳು, ವಿದ್ವಾಂಸರು. ಮುಂತಾದ ಸಂಗತಿಗಳ ಜೊತೆ ಅವರ ಪರಸ್ಪರ ರಾಜಕೀಯ ಸಂಬಂಧಗಳ ಚಿತ್ರವೂ ಇಲ್ಲಿ ಮೂಡಿ ಬರಬೇಕು. ಕೆಳದಿ, ಮೈಸೂರು, ಚಿತ್ರದುರ್ಗ, ಬೆಂಗಳೂರುಗಳ ಅರಸರ ಬಗ್ಗೆ ಅಧ್ಯಯನ ನಡೆದಂತೆ ಇಂಥ ೧೫೦ ಹಿರಿಕಿರಿ ಪಾಳೆಯಗಾರರಾದರೂ ವಿಜಯನಗರೋತ್ತರ ಕಾಲದಲ್ಲಿ ಇದ್ದರು. ಇವರಲ್ಲಿ ಕೆಲವರು ಮುಂದೆ ವಿಜಾಪುರಕ್ಕೆ ಅಧೀನರಾದರು, ಹೈದರ್‌ಅಲಿಯ ಕಾಲದವರೆಗೂ ಇವರ ಪ್ರಾಬಲ್ಯ ಮುಂದುವರಿಯಿತು.

ವಿಜಾಪುರದ ಇತಿಹಾಸವು ಸಾಕಷ್ಟು ಸಾಧನ ಸಾಮಗ್ರಿಗಳಿಂದ ತುಂಬಿದೆ. ಫರಿಷ್ತಾ, ಜಿರಾಜಿ, ಜುಬೇರಿ ಇವರ ಬರಹಗಳನ್ನು ಆಧರಿಸಿ ಪಿ.ಎಂ. ಜೋಷಿ, ಎಸ್.ಕೆ. ಸಿಂಹ, ಡಿ. ಸಿ. ವರ್ಮ, ಶೇರ್ವಾನಿ, ನಯೀಂ ಮುಂತಾದವರು ಈ ಬಗ್ಗೆ ಸಾಕಷ್ಟು ಬರವಣಿಗೆ ಮಾಡಿರುವರಾದರೂ ಕರ್ನಾಟಕದ ಆಂತರಿಕ ದೃಷ್ಟಿಯನ್ನು ಗಮನಿಸಿ, ಇಲ್ಲಿನ ಆಡಳಿತ, ಕೃಷಿ, ವ್ಯಾಪಾರ, ಧಾರ್ಮಿಕ ಆಗುಹೋಗುಗಳ ವಿವರ ಅಧ್ಯಯನಕ್ಕೆ ಅವಕಾಶವಿದೆ. ಇದನ್ನು ಕರ್ನಾಟಕದ ವಿದ್ವಾಂಸರೂ ಮಾಡಬೇಕು. ಅವರ ಕಾಲದ ದೇಸಾಯಿ ದೇಶಪಾಂಡೆ, ಜಾಗಿರ್ದಾರರುಗಳ ವಂಶಸ್ಥರು, ಮಸೀದಿ, ಕನ್ನಾಪಗಳ ವಶದಲ್ಲಿ ಇರುವ ದಾಖಲೆಗಳು, ಇವೆಲ್ಲದರ ಅಧ್ಯಯನ ಆಗಬೇಕು. ರಕ್ಕಸ-ತಂಗಡಿ ಯುದ್ಧದ ಕಾಲದಲ್ಲಿ ರಕ್ಕಸಗಿ, ಶಿರಸಂಗಿ ದೇಸಾಯಿಗಳು ವಿಜಾಪುರದ ಕಡೆ ಇದ್ದರು. ಹೀಗೆ ಒಂದೊಂದು ಪಾಳೆಯಗಾರರ ಮನೆತನದ ನಿಲುವು, ನೀತಿಗಳನ್ನು ತಿಳಿಯಲು ಅವಕಾಶವಿದೆ. ಮುಸಲ್ಮಾನರು ಕರ್ನಾಟಕಕ್ಕೆ ತಂದ ಹೊಸ ಉದ್ಯಮಗಳಾದ ಸುಗಂಧ ದ್ರವ್ಯ, ಊದುಬತ್ತಿ, ಕಾಗದ, ಬಿದರಿ ಕಲಾವಸ್ತುಗಳ ಉಗಮ ವಿಕಾಸಗಳ ಅಧ್ಯಯನಕ್ಕೂ ಅವಕಾಶವಿದೆ. ಈ ಕಾಲದ ಸೂಫೀ ಸಂತರ ಬಗ್ಗೆ ಪ್ರಿನ್ಸ್‌ಟನ್ ವಿಶ್ವವಿದ್ಯಾಲಯದ ವಿದ್ವಾಂಸರೊಬ್ಬರು ಮಾಡಿದ ಅಧ್ಯಯನ ಸ್ಮರಣೀಯ. ಈ ಕಾಲದ ಕಟ್ಟಡಗಳ ಚಿತ್ರಕಲೆಯ, ಸಂಗೀತದ ವಿಚಾರ ಕೂಡ ವಿವರವಾದ, ವ್ಯಾಪಕವಾದ ಅಧ್ಯಯನ ಆಗಬೇಕು. ವಿಜಾಪುರದ ಹೊರಗೂ ಆದಿಲ್‌ಷಾಹಿಗಳ ಅನೇಕ ಕಟ್ಟಡಗಳಿವೆ. ವಿಶೇಷವಾಗಿ ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳಲ್ಲಿ ಅವು ಕಾಣಬರುತ್ತವೆ.

ಪೋರ್ತುಗೀಸರ ಚಟುವಟಿಕೆಗಳ ಬಗ್ಗೆ ಮೊರಾಯಿಸ್, ಡಾ॥ ಬಿ. ಎಸ್. ಶಾಸ್ತ್ರಿ ಇವರುಗಳು ಮಾಡಿದ ಕೆಲಸವೇ ಅಲ್ಲದೆ, ಇನ್ನೂ ಹೆಚ್ಚು ವ್ಯಾಪಕ ಅಧ್ಯಯನಕ್ಕೆ ಅವಕಾಶವಿದೆ. ಪೋರ್ತುಗೀಸರು ಭಾರತಕ್ಕೆ ತಂದ ತಂಬಾಕು, ಮೆಣಸಿನಕಾಯಿ, ಶೇಂಗಾಗಳ ಕೃಷಿ ಇಲ್ಲಿ ಹೇಗೆ ಜನಪ್ರಿಯವಾಯಿತೆಂಬ ಹಂತಗಳ ಚಿತ್ರಣ ಸಾಧ್ಯವಾದರೆ ಅದು ತೀರ ಸ್ವಾರಸ್ಯದ್ದಾಗಬಹುದು.

'ಕರ್ನಾಟಕದಲ್ಲಿ ಮುಘಲರು' ಎಂಬ ವಿಷಯದ ಬಗ್ಗೆ ಒಂದು ವ್ಯಾಪಕ ಅಧ್ಯಯನಕ್ಕೆ ಅವಕಾಶವಿದೆ. ಈಗಾಗಲೇ ನಯೀಂ, ಪಗಡಿ ಈ ಬಗ್ಗೆ ಆರಂಭಿಕ ಕೆಲಸವನ್ನು ಮಾಡಿದ್ದಾರೆ. ಅದೇ ರೀತಿ ಕರ್ನಾಟಕದಲ್ಲಿ ಫ್ರೆಂಚರ ಚಟುವಟಿಕೆಗಳ ಚಿತ್ರಣ ಕೂಡ ನೀಡಬಹುದು. ಡಚ್ಚರ ಚಟುವಟಿಕೆಯ ಬಗ್ಗೆ ಡಾ॥ ಕೆ. ಜಿ. ವಸಂತ ಮಾಧವ ಪ್ರಕಟಿಸಿದ ಒಂದು ಕಿರುಪ್ರಬಂಧವು ಇಲ್ಲಿ ಉಲ್ಲೇಖನೀಯ.

ಕರ್ನಾಟಕದಲ್ಲಿ ಮರಾಠರ ಚಟುವಟಿಕೆಯ ಚಿತ್ರ ಡಾ॥ ಬಿ. ಮುದ್ದಾಚಾರಿ, ಡಾ॥ ಕೆ. ಎನ್. ಚಿಟ್ನಿಸ್, ಡಾ॥ ಪಗಡಿ, ಡಾ॥ ಸೂರ್ಯನಾಥ ಕಾಮತ್ ಇವರ ಬರಹಗಳಿಂದ ತಕ್ಕಮಟ್ಟಿಗೆ ಮೂಡಿಬಂದಿದೆ. ಮರಾಠರು ಆಡಳಿತದಲ್ಲಿ ತಂದ ಬದಲಾವಣೆ, ಅವರ ವಲಸೆಗಳು, ಶಿಕ್ಷಣದಲ್ಲಿ ತಂದ ಬದಲಾವಣೆ, ಅವರು ಸ್ಥಾಪಿಸಿದ ಅಗ್ರಹಾರಗಳು, ಮುಂತಾದವುಗಳ ಅಧ್ಯಯನಕ್ಕೆ ಅವಕಾಶ ಉಂಟು.

ಹದಿನೆಂಟನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಆದ ರಾಜಕೀಯ ಚಟುವಟಿಕೆ, ಘಟನಾವಳಿಗಳ ಒಂದು ಸಮಗ್ರ ಚಿತ್ರಣ ಮೂಡಿಬರುವುದು ಅವಶ್ಯ. ಮರಾಠರು ಮೊಘಲರು, ಪಾಳೆಯಗಾರರು, ಇವರ ಚಟುವಟಿಕೆ, ಪಾಶ್ಚಾತ್ಯರ ಚಟುವಟಿಕೆ, ಹೈದರ್, ಟಿಪ್ಪುಗಳ ಚಟುವಟಿಕೆಗಳ ಪರಿಣಾಮ, ಪಾಳೆಯಗಾರರ ಸ್ಥಿತಿಗತಿ ಇವುಗಳೆಲ್ಲದರ ಚಿತ್ರ ಇಲ್ಲಿ ನೀಡಬಹುದು. ಇದೇ ಕಾಲಕ್ಕೆ ಮುಘಲರ, ಮರಾಠರ ಹಾಗೂ ಅನ್ಯಶಕ್ತಿಗಳ ಪ್ರಭಾವದಿಂದ ಮೂಡಿದ ಆರ್ಥಿಕ, ಸಾಮಾಜಿಕ ಸಂಸ್ಥೆಗಳ ಅಧ್ಯಯನ ಕೂಡ ಸಾಧ್ಯ. ಇಂಥ ಅಧ್ಯಯನವು ೧೯ನೇಯ ಶತಮಾನದವರೆಗೂ ಮುಂದುವರಿಯಬಹುದು. ಬ್ರಿಟಿಷರ ಆಗಮನ ಪೂರ್ವದ ಕೃಷಿ, ಕೈಗಾರಿಕೆ, ಶಿಕ್ಷಣಗಳ ಒಂದು ಚಿತ್ರಣ ನೀಡುವುದೂ ಸಾಧ್ಯ. ಬುಕನನ್‌ನ ಪ್ರವಾಸ ಇಂಥ ಅಧ್ಯಯನಕ್ಕೆ ಮುಖ್ಯ ಸಾಧನ ಸಾಮಗ್ರಿ ಆಗಬಹುದು.

ಕೆಳದಿ ನಾಯಕರ ಬಗೆ ಎಂ. ಎಸ್. ಪುಟ್ಟಣ್ಣ, ಲಕ್ಷ್ಮೀನಾರಾಯಣರಾವ್, ಕೆ.ಡಿ.ಸ್ವಾಮಿನಾಥನ್,ಚಿಟ್ನಿಸ್ ಗುಂಡಾಜೋಯಿಸ್, ಡಾ॥ ಸಾ. ಶಿ. ಮರುಳಯ್ಯ ಇವರುಗಳೆಲ್ಲ ಮಾಡಿದ ಅಧ್ಯಯನ ವ್ಯಾಪಕವಾದುದು. ಈ ನಾಯಕರ ವಾಣಿಜ್ಯ ವ್ಯವಹಾರ ಹಾಗೂ ಶಿವಪ್ಪ ನಾಯಕನು ರೂಢಿಗೆ ತಂದ 'ಸಿಸ್ತು' ವ್ಯವಸ್ಥೆಯ ಶುದ್ಧ ಸ್ವರೂಪದ ಚಿತ್ರ ಇನ್ನು ಮೂಡಿಬರಬೇಕು. ಈ ಬಗ್ಗೆ ಮಲೆನಾಡಿನಲ್ಲಿ ಇರಬಹುದಾದ ಕಾಗದ ಪತ್ರಗಳ ವ್ಯಾಪಕ ಸಂಗ್ರಹ ಆಗಬೇಕು.

ಮೈಸೂರಿನ ಬಗ್ಗೆ ವ್ಯಾಪಕ ಅಧ್ಯಯನ ರಾಜರ ಪ್ರೋತ್ಸಾಹಗಳಿಂದಲೂ ನಂತರ ನಡೆದ ಸ್ವತಂತ್ರ ಅಧ್ಯಯನಗಳಿಂದಲೂ ಆಗಿದೆ. ಬೆಂಗಳೂರು ವಿಶ್ವವಿದ್ಯಾಲಯದ ಐದಾರು ತರುಣ ಸಂಶೋಧಕರು ಈ ಬಗ್ಗೆ ಕೆಲಸಮಾಡಿದ್ದು ಉಲ್ಲೇಖನೀಯ. ಹೈದರನ ಆಗಮನ ಪೂರ್ವದ ಕರ್ನಾಟಕದ ವಿವಿಧ ಪಾಳೆಯಪಟ್ಟುಗಳ ಸ್ಥಿತಿಗತಿಗಳ ಒಂದು ಸಮಗ್ರ ಚಿತ್ರ ಮೂಡಿಬರಬೇಕು. ಈ ಬಗ್ಗೆ ಕಾಗದ ಪತ್ರಗಳ ಸಂಗ್ರಹ ಆಗಬೇಕು. ಫ್ರೆಂಚ್, ಪೋರ್ತುಗೀಸ್, ಮರಾಠಿ, ಪರ್ಷಿಯನ್ ಅರಿತವರು ಈ ಕಾರ್ಯದಲ್ಲಿ ತೊಡಗಬೇಕು.

ಬ್ರಿಟಿಷರ ಆಗಮನ ಪೂರ್ವದ ಈ ಕಾಲಖಂಡದ ಸಮಗ್ರ ಅಧ್ಯಯನಕ್ಕೆ ಇರುವ ಕಾಗದ ಪತ್ರಗಳ ಬಳಕೆಯ ಜೊತೆಗೇ ಕಾಗದ ಪತ್ರಗಳ ಅನ್ವೇಷಣೆ, ಸಂಶೋಧನೆ, ಸಂಗ್ರಹ ಕೂಡ ಆಗಬೇಕೆಂಬುದು ಇಲ್ಲಿ ಒತ್ತಿ ಹೇಳಬೇಕಾದ ಅಂಶ.

ಎಚ್. ಪಿ. ಶಶಿಧರಮೂರ್ತಿ

# ಕರ್ನಾಟಕ ಇತಿಹಾಸದಲ್ಲಿ ಆಗಬೇಕಾದ ಸಂಶೋಧನೆ: ಆಧುನಿಕ ಕಾಲ (೧೮೦೦-೧೯೫೬)

ಈ ಲೇಖನದ ವ್ಯಾಪ್ತಿಯಿಂದ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಹೊರಗಿಡಲಾಗಿದೆ ಮತ್ತು ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಬಹಳ ಸಂಕ್ಷಿಪ್ತವಾಗಿ ಪ್ರಸ್ತಾವಿಸಲಾಗಿದೆ. ಇದೇರೀತಿ, ಭಾರತದ ಚರಿತ್ರೆಗೆ ಸಂಬಂಧಿಸಿದಂತೆ ಬರೆಯಲ್ಪಟ್ಟು ಕರ್ನಾಟಕದ ಬಗೆಗೆ ಅತ್ಯಲ್ಪ ಮಾಹಿತಿ ನೀಡುವ ಗ್ರಂಥಗಳು, ಅಂದರೆ ಇತಿಹಾಸ ಎನ್ನುವುದಕ್ಕಿಂತ ಇತಿಹಾಸ ರಚನೆಗೆ ಮೂಲ ಸಾಮಗ್ರಿ ಎನ್ನಬಹುದಾದ ಸ್ವಾನುಭವ ವೃತ್ತಾಂತಗಳು (Memoirs), ಆತ್ಮಕಥನಗಳು (Autobiographies), ಜೀವನಚರಿತ್ರೆಗಳು (Biographies) ಹಾಗೂ ಬಿಡಿ-ಬಿಡಿಯಾದ ಸಂಶೋಧನಾ ಲೇಖನಗಳನ್ನು ಸಮೀಕ್ಷಿಸುವ ಯತ್ನವನ್ನು ಇಲ್ಲಿ ಮಾಡಿಲ್ಲ.

**ಇದುವರೆಗಿನ ಸಾಧನೆ :** ಕರ್ನಾಟಕದ ಇತಿಹಾಸದ ಬಗೆಗೆ ಇದುವರೆಗೆ ಆಗಿರುವ ಸಾಧನೆಯ ಸಮೀಕ್ಷೆಯಲ್ಲಿ ಪ್ರಥಮ ಸ್ಥಾನ ಸಲ್ಲಬೇಕಾದ್ದು ಗ್ಯಾಸೆಟಿಯರ್‌ಗಳು ಅಥವಾ ಪ್ರಾದೇಶಿಕ ಮಾಹಿತಿಕೋಶಗಳ ಸಿದ್ಧತೆಗೆ. ಒಂದು ಗ್ಯಾಸೆಟಿಯರ್ ನಿರ್ದಿಷ್ಟ ಭೌಗೋಳಿಕ ಪ್ರದೇಶವೊಂದರ ಬಗೆಗೆ ವಿದ್ಯಾವಂತ ವ್ಯಕ್ತಿಯೋರ್ವನು ಅರಿತುಕೊಳ್ಳ ಬಯಸುವ ಎಲ್ಲಾ ವಿಧವಾದ ಮಾಹಿತಿಯನ್ನೂ ಸಂಕ್ಷಿಪ್ತರೂಪದಲ್ಲಿ ಒದಗಿಸುವ ಪ್ರಯತ್ನ ಎನ್ನಬಹುದು. ಕರ್ನಾಟಕದಲ್ಲಿ ಗ್ಯಾಸೆಟಿಯರ್ ತಯಾರಿಕೆಯ ಒಂದು ಸಂಪ್ರದಾಯವೇ ಇದೆ ಎಂದು ಹೇಳಲಾಗಿದೆ. ರೆವರೆಂಡ್ ಬಿ. ರಿಚ್ಟರ್ ಸಂಕಲಿಸಿರುವ *Manual of Coorg : A Gazetteer of the National Features of the Country and the Social and Political Condition of its Inhabitants* (೧೮೭೦) ಇಂತಹ ಸಂಪ್ರದಾಯಕ್ಕೆ ಬುನಾದಿ ಹಾಕಿದ ಗ್ರಂಥವಾಗಿದೆ. ಇದಾದ ನಂತರ ಬಿ. ಲೂಯಿ ರೈಸ್ *Mysore and Coorg : A Gazetteer* ಎಂಬ ಗ್ರಂಥವನ್ನು ಸಿದ್ಧಪಡಿಸಿದರು. ಇದರಲ್ಲಿ ಪ್ರಥಮ ಸಂಪುಟ (೧೮೭೭) ಮತ್ತು ದ್ವಿತೀಯ ಸಂಪುಟಗಳು ಮೈಸೂರು ಸಂಸ್ಥಾನವನ್ನು ಕುರಿತಂತೆಯೂ ಮತ್ತು ತೃತೀಯ ಸಂಪುಟ ಕೊಡಗು ಪ್ರಾಂತ್ಯವನ್ನು ಕುರಿತಂತೆಯೂ ಇವೆ. *The Imperial Gazetteer of India* ಸಂಪುಟಗಳ ಸಂಪಾದಕರಾಗಿದ್ದ ಸರ್. ವಿಲಿಯಂ ಹಂಟರ್‌ರವರು ಹೇಳಿರುವಂತೆ, ಇವು ಬಂಗಾಳದ ಬಗ್ಗೆ ಅವರೇ ಮಾಡಲು ಸಾಧ್ಯವಾದುದಕ್ಕಿಂತ ಹೆಚ್ಚು ಉತ್ತಮವಾದ ಕೃತಿಗಳಾಗಿವೆ. ಇದಕ್ಕೂ ಹೆಚ್ಚು ವಿಶಾಲ ವ್ಯಾಪ್ತಿಯ ಮತ್ತು ಸಂಪೂರ್ಣ ಎನ್ನಬಹುದಾದ ಪ್ರಯತ್ನವನ್ನು ಸಿ. ಹಯವದನರಾವ್ ಮಾಡಿದರು. ಅವರ ಸಂಪಾದಕತ್ವದಲ್ಲಿ ಸಿದ್ಧಪಡಿಸಿದ ೯ ಸಂಪುಟಗಳ *Mysore Gazetteer* ಬಗ್ಗೆ ಸರ್. ಫ್ರಾಂಕ್ ನಾಯ್ಸ್‌ರವರು "ಇದುವರೆಗೆ ಪ್ರಕಟವಾಗಿರುವ ಭಾರತದ ಇನ್ನಾವದೇ ಭಾಗದ ಇತಿಹಾಸಕ್ಕಿಂತ ಅತ್ಯಂತ ಪರಿಪೂರ್ಣವಾದ ಯತ್ನ" ಎಂದು ಹೇಳಿದ್ದಾರೆ. ಬಾಂಬೆ-ಕರ್ನಾಟಕದ ಬಗ್ಗೆ ಇಂಗ್ಲಿಷ್‌ನಲ್ಲಿ ಪ್ರಕಟವಾಗಿದ್ದ ನಾಲ್ಕು ಜಿಲ್ಲಾ ಗ್ಯಾಸೆಟಿಯರ್‌ಗಳ ಸಂಕ್ಷಿಪ್ತರೂಪವಾಗಿ ವೆಂಕಟರಂಗೋ ಕಟ್ಟಿ ಸಿದ್ಧಪಡಿಸಿದ *Gazetteer of the Bombay Karnataka on the Districts of Dharwar, Belgaum, Bijapur, Kanara with the Southern Maratha States* (೧೮೯೩) ಬಹಳ ಪ್ರಸಿದ್ಧವಾದ

ಮತ್ತೊಂದು ಗ್ರಂಥವಾಗಿದೆ. ಗ್ಯಾಸೆಟಿಯರ್ ಆಫ್ ಇಂಡಿಯಾ ಯೋಜನೆಯಡಿ ಸಿದ್ಧಪಡಿಸಲಾಗಿರುವ ಕರ್ನಾಟಕದ ಜಿಲ್ಲಾ ಗ್ಯಾಸೆಟಿಯರ್‌ಗಳು ಪರಿಪೂರ್ಣವಾದ ಪ್ರಯತ್ನ ಎನ್ನಬಹುದು. ಈ ಮಾಲೆಯಲ್ಲಿ ಒಂದೆರಡು ಜಿಲ್ಲೆಗಳ ವಿನಾ ಕರ್ನಾಟಕದ ಉಳಿದ ಜಿಲ್ಲೆಗಳ ಗ್ಯಾಸೆಟಿಯರ್‌ಗಳೂ ಪ್ರಕಟವಾಗಿವೆ. ಇವುಗಳ ಜೊತೆಗೆ ಗ್ಯಾಸೆಟಿಯರ್ ಇಲಾಖೆಯು ಇಂಗ್ಲಿಷ್ ಭಾಷೆಯಲ್ಲಿ ಈಗಾಗಲೇ ಸಮಗ್ರ ಕರ್ನಾಟಕದ ಬಗ್ಗೆ *Karnataka State Gazetteer* ಎಂಬ ಎರಡು ಸಂಪುಟಗಳನ್ನು ಹೊರತಂದಿದೆ. ಕನ್ನಡ ಆವೃತ್ತಿಯು ಮೂರು ಭಾಗಗಳಲ್ಲಿ ಪ್ರಕಟಗೊಂಡಿದೆ.

ಇವುಗಳೇ ಅಲ್ಲದೆ, ಕರ್ನಾಟಕದ ಬಗೆಗೆ ಅನೇಕ ಡೈರೆಕ್ಟರಿಗಳು, ಇಯರ್ ಬುಕ್ಕುಗಳು, ಪ್ರವಾಸಿ ಮಾರ್ಗದರ್ಶಿಗಳು, ಪ್ರವಾಸಿಗಳ ಕಥನಗಳು, ನೀಲಿ ಪುಸ್ತಕಗಳು ಇತ್ಯಾದಿ ಪುಸ್ತಕಗಳು ಪ್ರಕಟವಾಗಿವೆ ಮತ್ತು ಸುಲಭವಾಗಿ ದೊರಕದ ಅದೆಷ್ಟೋ ರೀತಿಯ ಮಾಹಿತಿಗಳು ಇವುಗಳಿಂದ ನಮಗೆ ಲಭ್ಯವಿವೆ ಎಂಬುದನ್ನು ಇಲ್ಲಿ ಹೇಳಬಹುದು.

ವಿಶಾಲ ವ್ಯಾಪ್ತಿಯುಳ್ಳ ಮತ್ತು ಪರಿಪೂರ್ಣ ಎಂದು ಪರಿಗಣಿಸಲು ಅರ್ಹತೆ ಹೊಂದಿರುವ ಕರ್ನಾಟಕದ ಸಮಗ್ರ ಇತಿಹಾಸ ನೀಡುವಂತಹ ಕೃತಿ ಇನ್ನೂ ಬರಬೇಕಿದೆ. ಇಂತಹ ಕೊರತೆಯನ್ನು ನೀಗಲು ಇದುವರೆಗೆ ಆಗಿರುವ ಯತ್ನಗಳಲ್ಲಿ ಹೆಸರಿಸಬೇಕಾದವೆಂದರೆ, ಎಂ. ವಿ. ಕೃಷ್ಣರಾವ್ ಮತ್ತು ಕೇಶವಭಟ್ಟರ 'ಕರ್ನಾಟಕ ಇತಿಹಾಸ ದರ್ಶನ' (೧೯೭೦), ಆರ್. ಆರ್. ದಿವಾಕರ್ ಮತ್ತು ಇತರರು ಸಂಪಾದಿಸಿರುವ *Karnataka Through the Ages* (೧೯೬೮) ಮತ್ತು ಇದರ ಕನ್ನಡ ಪ್ರತಿರೂಪವಾದ ಎರಡು ಸಂಪುಟಗಳ 'ಕರ್ಣಾಟಕ ಪರಂಪರೆ' (೧೯೭೦) ಈ ಕೃತಿಗಳು ಆನುಷಂಗಿಕ ಆಧಾರಗಳನ್ನು ಹೆಚ್ಚಾಗಿ ಅವಲಂಬಿಸಿದ್ದರಿಂದ ಮತ್ತು ಅನೇಕ ಲೇಖಕರು ರಚಿಸಿರುವ ಪ್ರಬಂಧಗಳ ಸಂಕಲನವಾದುದರಿಂದ ಇದರಲ್ಲಿ ಹಲವಾರು ಲೋಪ ದೋಷಗಳು ಕಂಡು ಬರುತ್ತವೆ. ಇಷ್ಟೊಂದು ಭಾರಿ ಗಾತ್ರವನ್ನು ಪಡೆಯದಿದ್ದರೂ ಕರ್ನಾಟಕದ ಇತಿಹಾಸದ ಸಮಗ್ರ ಚಿತ್ರಣ ನೀಡುವಲ್ಲಿ ಯಶಸ್ವಿಯಾಗಿರುವ ಕೆಲವು ಕೃತಿಗಳಿವೆ. ಅವುಗಳೆಂದರೆ, ಡಾ॥ ರಂ. ಶ್ರೀ. ಮುಗಳಿಯವರ *The Heritage of Karnataka* (೧೯೫೩), ಡಾ॥ ಸೂರ್ಯನಾಥ ಕಾಮತರ 'ಕರ್ನಾಟಕದ ಸಂಕ್ಷಿಪ್ತ ಇತಿಹಾಸ' (೧೯೭೩) ಮತ್ತು ಡಾ॥ ಎಚ್.ವಿ. ಶ್ರೀನಿವಾಸ ಮೂರ್ತಿ ಮತ್ತು ಆರ್. ರಾಮಕೃಷ್ಣ ಇವರ 'ಕರ್ನಾಟಕದ ಇತಿಹಾಸ' (೧೯೭೯). ಇತಿಹಾಸದ ವಿದ್ಯಾರ್ಥಿಗಳಲ್ಲಿ ಹೆಚ್ಚು ಜನಪ್ರಿಯವಾಗಿರುವ ಈ ಕೃತಿಗಳ ಇಂಗ್ಲಿಷ್ ಆವೃತ್ತಿಗಳು ಲಭ್ಯವಿವೆ; ರಂ. ಶ್ರೀ. ಮುಗಳಿಯವರ ಕೃತಿಯ ಕನ್ನಡ ಆವೃತ್ತಿಯೂ ಲಭ್ಯವಿದೆ.

ಮೈಸೂರು ಸಂಸ್ಥಾನದ ಇತಿಹಾಸದ ಬಗ್ಗೆ ಸಮಗ್ರ ಮಾಹಿತಿ ನೀಡುವ ಕೆಲವು ಕೃತಿಗಳಿವೆ. ಅವುಗಳೆಂದರೆ, ಎರಡು ಸಂಪುಟಗಳ ಮೈಸೂರು ಸಂಸ್ಥಾನದ ಪ್ರಭುಗಳ 'ಶ್ರೀಮನ್ಮಹಾರಾಜರವರ ವಂಶಾವಳಿ' *(The Annals of the Mysore Royal Family)*. ಮೊದಲನೆಯ ಸಂಪುಟ(೧೯೧೬)ದಲ್ಲಿ ಪ್ರಾರಂಭದಿಂದ ಕ್ರಿ.ಶ. ೧೭೯೯ ನೆಯ ಇಸವಿಯಲ್ಲಿ ಶ್ರೀಮನ್ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ಪಟ್ಟಾಭಿಷೇಕ ಆಗುವವರೆಗಿನ ಇತಿಹಾಸವು ಲಭ್ಯ; ಎರಡನೆಯ ಸಂಪುಟ(೧೯೨೨)ದಲ್ಲಿ ಕ್ರಿ.ಶ. ೧೭೯೯ ರಿಂದ ೧೮೬೮ನೇ ಇಸವಿ ಸೆಪ್ಟೆಂಬರ್ ವರೆಗಿನ ಇತಿಹಾಸವು ಲಭ್ಯ. ಅರಮನೆಯಲ್ಲಿ ಮತ್ತು ಸರ್ಕಾರದ ಸಚಿವಾಲಯದಲ್ಲಿ ಲಭ್ಯವಿದ್ದ ಹಳೆಯ ದಾಖಲೆಗಳು ಮತ್ತು ಇತರ ಕೆಲವು ಮೂಲಗಳಿಂದ ಪಡೆದ ಮಾಹಿತಿಗಳನ್ನು ಇದರಲ್ಲಿ ಹೆಚ್ಚಾಗಿ ಬಳಸಿಕೊಂಡಿರುವುದೊಂದು ವಿಶೇಷ. ಜಿ. ಆರ್. ಜೋಸ್ಯರ್‌ರವರ *History of Mysore and the Yadava Dynasty* (೧೩೯೯-೧೯೫೦) ಮತ್ತೊಂದು ಅಧಿಕೃತ ಚರಿತ್ರೆಯಾಗಿದ್ದು ಇದರಲ್ಲಿ ಮೂಲ ಸಾಮಗ್ರಿಗಳನ್ನು ಹೇರಳವಾಗಿ ಉಪಯೋಗಿಸಿಕೊಳ್ಳಲಾಗಿದೆ (೧೯೫೧). ಹೆಸರಿಸಲೇಬೇಕಾದ ಇನ್ನುಳಿದ ಕೃತಿಗಳೆಂದರೆ, ಕೃಷ್ಣಸ್ವಾಮಿ ಅಯ್ಯಂಗಾರರ *Mysore Under the Wodeyars* (೧೮೯೯), ಎಸ್. ಶ್ರೀಕಂಠಯ್ಯನವರ *Mysore Through the Ages* (೧೯೩೪), ಸಿ. ವಿ. ಕೃಷ್ಣಸ್ವಾಮಿಯವರ *The Golden Age of Mysore* (೧೯೩೯) ಮತ್ತು ಚಕ್ರಪಾಣಿ ಅಯ್ಯಂಗಾರರ *Mysore from the Rendition to the Installation of Krishnaraja Wodeyar* (೧೯೦೨).

ಎಂ. ಶಾಮರಾವ್‌ರವರ ಎರಡು ಸಂಪುಟಗಳ *Modern Mysore* (೧೯೩೬) ವಿಪುಲವಾಗಿ ಮೂಲ ಸಾಮಗ್ರಿಗಳನ್ನು ಬಳಸಿಕೊಂಡು ರಚಿಸಿರುವ ಅಧಿಕೃತವೂ ಜನಪ್ರಿಯವೂ ಆದ ಕೃತಿಯಾಗಿದೆ. ಮತ್ತೊಂದು ಉಲ್ಲೇಖಾರ್ಹ ಗ್ರಂಥವೆಂದರೆ ಎಂ. ಕರಂಚಂದರ *Mysore-The Model State* (೧೯೪೧).

ಲೆಫ್ಟಿನೆಂಟ್ ಕರ್ನಲ್ ಮಾರ್ಕ್ ವಿಲ್ಕ್ಸ್‌ರವರ *History of Mysore, Coorg and Its Rajas* (೧೮೫೭) ಮೂಲ ಸಾಮಗ್ರಿಗಳನ್ನು ಹೆಚ್ಚಾಗಿ ಬಳಸಿಕೊಂಡಿರುವ ಒಂದು ಉತ್ತಮ ಕೃತಿಯಾಗಿದೆ. ಜೆ.ಡಿ.ಬಿ. ಗ್ರಿಬಲ್‌ರವರ *Two Native States - Hydrabad and Mysore* (೧೮೮೬) ಮತ್ತೊಂದು ಕುತೂಹಲ ಕೆರಳಿಸುವ ಉಪಯುಕ್ತ ಕೃತಿ. *Mysore's Part in the War (1914-1918)* ಎಂಬ ಗ್ರಂಥ(೧೯೧೯)ದಲ್ಲಿ ಪ್ರಥಮ ಜಾಗತಿಕ ಸಮರ ಕಾಲದಲ್ಲಿ ಬ್ರಿಟಿಷರಿಗೆ ಮೈಸೂರು ಸಂಸ್ಥಾನವು ಸಲ್ಲಿಸಿದ ಸಹಾಯದ ವಿವರಗಳು ಸಿಗುತ್ತವೆ.

ಮೈಸೂರಿನ ಆಡಳಿತದ ಇತಿಹಾಸಕ್ಕೆ ಸಂಬಂಧಿಸಿದಂತೆ ಅನೇಕ ಗ್ರಂಥಗಳು ಲಭ್ಯವಿವೆ. ಇವುಗಳಲ್ಲಿ ಸಿ. ರಂಗಾಚಾರ್ಲುರವರ *British Administration of Mysore* (೧೮೭೪) ಮೈಸೂರು ಸಂಸ್ಥಾನದಲ್ಲಿ ಬ್ರಿಟಿಷ್ ಕಮಿಷನರುಗಳ ಆಡಳಿತದ ಬಗ್ಗೆ ಒಂದು ದಿಟ್ಟ ಹಾಗೂ ವಸ್ತುನಿಷ್ಠ ಟೀಕೆಗಳಿಂದ ಕೂಡಿದ ಕೃತಿಯಾಗಿದೆ. ಶ್ರೀಮತಿ ವೇದವಲ್ಲಿಯವರ *Administrative History of Mysore (1902-1927)*, ಕೆ. ಎನ್. ವಿ. ಶಾಸ್ತ್ರಿಯವರ *The Administration of Mysore Under Sir Mark Cubbon*, ಕೆ. ಎನ್. ವೆಂಕಟಸುಬ್ಬಶಾಸ್ತ್ರಿಯವರ *An Introduction to the History of Administration of Mysore* (೧೯೩೭), ಎಚ್. ಎನ್. ಸುಬ್ಬರಾವ್‌ರವರ *Mysore Administration*, ನಾರಾಯಣ ಅಯ್ಯಂಗಾರ್ ಮತ್ತು ಶ್ರೀನಿವಾಸಚಾರ್‌ರವರ *The Mysore Prdhans* (೧೯೦೨), ಜೇಮ್ಸ್ ಮ್ಯಾನರ್‌ರವರ *Political Changes in an Indian State : Mysore (1917 – 1955)* (೧೯೭೭) ಮುಂತಾದವು ಹೆಚ್ಚು ಉಪಯುಕ್ತವೂ ಕುತೂಹಲಕಾರಿಯೂ ಆದ ಸಂಶೋಧನ ಗ್ರಂಥಗಳಾಗಿವೆ. ಜೇಮ್ಸ್ ಮ್ಯಾನರ್ ಕರ್ನಾಟಕ ರಾಜ್ಯ ಅಭಿಲೇಖಾಗಾರದಲ್ಲಿ ಲಭ್ಯವಿರುವ ದಾಖಲೆಗಳನ್ನು ವಿಶೇಷವಾಗಿ ಬಳಸಿಕೊಂಡಿದ್ದಾರೆ. ಡಾ॥ ಎನ್. ಎಚ್. ಕುಲಕರ್ಣಿಯವರ *British Relations with Surapur* ಒಂದು ಅಪೂರ್ವ ಕೊಡುಗೆಯಾಗಿದ್ದು ಅಭಿಲೇಖಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದಾರೆ. ಡಾ॥ ಬಿ, ಮುದ್ದಾಚಾರಿಯವರ *Mysore-Maratha Relations in the 17th Century* ಒಂದು ಉಪಯುಕ್ತ ಸಂಶೋಧನಾ ಗ್ರಂಥವಾಗಿದೆ.

ಸ್ಥಳೀಯ ಇತಿಹಾಸದ ಬಗ್ಗೆ ಅನೇಕ ಗ್ರಂಥಗಳಿವೆ. ಫಜ್ಲಲ್ ಹಸನ್‌ರವರ *Bangalore Through the Centuries* (೧೯೭೨) ಒಂದು ಉತ್ತಮ ಗ್ರಂಥವಾಗಿದ್ದು ಲಭ್ಯವಿರುವ ಮೂಲ ಸಾಮಗ್ರಿಯನ್ನು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ. ಆದರೂ ಇದನ್ನು ಪರಿಷ್ಕರಿಸಿ ವಿಸ್ತರಿಸಿ ಪ್ರಕಟಿಸುವ ಅಗತ್ಯ ಇದೆ ಎನ್ನಬಹುದು. ಇತ್ತೀಚೆಗೆ ಪ್ರಕಟಿಸಲಾದ ಬ. ನ. ಸುಂದರರಾಯರ 'ಬೆಂಗಳೂರಿನ ಭವ್ಯ ಇತಿಹಾಸ'ವು (೧೯೮೫) ಓದಬಹುದಾದ ಗ್ರಂಥವಾಗಿದೆ. ಇತಿಹಾಸ ಸಂಶೋಧನೆಯ ವಿಧಿ–ವಿಧಾನಗಳ ಬಗೆಗೆ ಲೇಖಕರು ಸಾಕಷ್ಟು ನಿಗಾ ತೆಗೆದುಕೊಂಡಿಲ್ಲದಿರುವುದರಿಂದ ಇದು ಮಿತಿಮೀರಿ ದೊಡ್ಡದಾಗಿದೆ, ಅಲ್ಪ ಸ್ವಲ್ಪ ಮಾರ್ಪಾಟುಗಳೊಡನೆ ಇದನ್ನು ಆಧುನಿಕ ಮೈಸೂರಿನ ಇತಿಹಾಸ ಎಂದೇ ಕರೆಯಬಹುದಿತ್ತು. 'ರಾಜೇಂದ್ರನಾಮೆ' (೧೬೦೦–೧೮೦೭) ಕೊಡಗಿನ ಇತಿಹಾಸದ ಬಗ್ಗೆ ಇರುವ ಒಂದು ಅತಿ ಮುಖ್ಯವಾದ ಗ್ರಂಥವಾಗಿದೆ. ರಾಜಕೀಯ ಕಾರಣಗಳಿಗಾಗಿ ಹಿಂದಿನ ಕೆಲವು ತಾರೀಖುಗಳನ್ನು ವಿರೂಪಗೊಳಿಸಿರುವುದನ್ನು ಗಮನಿಸಬಹುದು. ಈ ಅಧಿಕೃತ ಚರಿತ್ರೆಯ ಇಂಗ್ಲಿಷ್ ಭಾಷಾಂತರವನ್ನು ಲೆಫ್ಟಿನೆಂಟ್ ಅಂಬರ್‌ಕ್ರಾಂಬಿ (೧೮೦೮) ಮಾಡಿದ್ದಾರೆ. ಡಿ. ಎನ್. ಕೃಷ್ಣಯ್ಯನವರ *A Souvenir on Coorg* (೧೯೬೦) ಮತ್ತು 'ಕೊಡಗಿನ ಇತಿಹಾಸ' (೧೯೭೪) ಈ ಸಂದರ್ಭದಲ್ಲಿ ಹೆಸರಿಸಲೇಬೇಕಾದ ಕೃತಿಗಳು. 'ಕೊಡಗಿನ ಇತಿಹಾಸ' ಒಂದು ಸಂಪೂರ್ಣ ಮತ್ತು ಸಮಗ್ರ ಕೃತಿ. ಆದರೆ ಇತಿಹಾಸ ಸಂಶೋಧನೆಯ ಶಾಸ್ತ್ರೀಯ ವಿಧಿ ವಿಧಾನಗಳನ್ನು

ಅನುಸರಿಸಲು ವಿಫಲವಾಗಿರುವುದರಿಂದ ಈ ಗ್ರಂಥವು ಅಗತ್ಯಕ್ಕಿಂತ ಹೆಚ್ಚು ಗಾತ್ರ ಪಡೆದುಕೊಂಡಿದೆ. ಕೆಲವೆಡೆ ಇತಿಹಾಸ ಗ್ರಂಥ ಎನಿಸುವುದಕ್ಕಿಂತ ಕತೆ ಪುಸ್ತಕವೇನೋ ಎಂಬ ಭ್ರಮೆಯನ್ನು ಉಂಟುಮಾಡುತ್ತದೆ. ವಿಪುಲವಾಗಿ ಸಂಗ್ರಹಿಸಿಟ್ಟುಕೊಂಡಿದ್ದ ಅಭಿಲೇಖ ಸಾಮಗ್ರಿಗಳನ್ನು ಬಳಸಿಕೊಳ್ಳುವ ಕಾರ್ಯದಲ್ಲಿ ಎಡವಿರುವುದೇ ಇದಕ್ಕೆ ಕಾರಣ ಎನ್ನಬಹುದು. ಇಷ್ಟಾದರೂ ಕೊಡಗಿನ ಇತಿಹಾಸದ ಬಗೆಗೆ ಇದುವರೆಗೆ ಬಂದಿರುವ ಕೃತಿಗಳಲ್ಲಿ ಇದೇ ಅತ್ಯಂತ ಉಪಯುಕ್ತವೂ ಜನಪ್ರಿಯವೂ ಆದ ಕೃತಿ ಎನ್ನುವದರಲ್ಲಿ ಸಂದೇಹವಿಲ್ಲ. ಅಭಿಲೇಖಗಳ ಬಳಕೆಯಲ್ಲಿ ಹೆಚ್ಚು ಆಸಕ್ತಿ ತೋರಿಸಿರುವ ಮತ್ತು ದಿಟ್ಟ, ಅಷ್ಟೇ ವಿವಾದಾತ್ಮಕ ಬರವಣಿಗೆಗೆ ಹೆಸರಾದ ಐ.ಎಂ.ಮುತ್ತಣ್ಣನವರ *History of Karnataka* ಮತ್ತು *A Tiny Model State of South India* ಹೆಸರಿಸಬೇಕಾದ ಗ್ರಂಥಗಳಾಗಿವೆ. ಎನ್. ಹೆಗ್ಡೆಯವರ 'ದಕ್ಷಿಣಕನ್ನಡ ಜಿಲ್ಲೆಗಳ ಚರಿತ್ರೆ' (೧೯೧೩), ಗಣಪತಿ ಐಗಳ 'ದಕ್ಷಿಣ ಕನ್ನಡದ ಇತಿಹಾಸ', ಎಸ್. ಸಿಲ್ವರವರ *History of Christianity in Canara* (೧೯೫೭) ದಕ್ಷಿಣಕನ್ನಡ ಜಿಲ್ಲೆಯ ಇತಿಹಾಸದ ಬಗೆಗೆ ಓದಲೇಬೇಕಾದ ಕೃತಿಗಳಾಗಿವೆ. ಕರ್ನಾಟಕ ವಿಶ್ವವಿದ್ಯಾಲಯದವರು ಹೊರತಂದಿರುವ 'ಕಿತ್ತೂರುನಾಡಿನ ಇತಿಹಾಸ ಮತ್ತು ಸಂಸ್ಕೃತಿ–ಏಳು ಉಪನ್ಯಾಸಗಳು' (೧೯೭೬) ಮತ್ತು ವಿ. ಜಿ. ಮ್ಯಾರಿಹಾಳರ 'ಕಿತ್ತೂರಿನ ಇತಿಹಾಸ' (೧೯೭೭) ಇವು ಕಿತ್ತೂರುನಾಡಿನ ಇತಿಹಾಸ, ಸಂಸ್ಕೃತಿ ಮತ್ತು ವಿಶೇಷವಾಗಿ ಬ್ರಿಟಿಷರ ವಿರುದ್ಧ ಅದು ನಡೆಸಿದ ಹೋರಾಟದ ಬಗ್ಗೆ ಉಪಯುಕ್ತ ಗ್ರಂಥಗಳಾಗಿವೆ.

ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣ ಚಳವಳಿ ಬಗ್ಗೆ ಅನೇಕ ಗ್ರಂಥಗಳು ಪ್ರಕಟವಾಗಿವೆ. ಬ್ರಿಟಿಷರ ವಿರುದ್ಧ ನಡೆದ ಹಿಂಸಾತ್ಮಕ ಹೋರಾಟಕ್ಕೆ ಸಂಬಂಧಿಸಿದಂತೆ ಇರುವ ಕೃತಿಗಳೆಂದರೆ, ಡಿ. ಎಸ್. ಕೃಷ್ಣಯ್ಯನವರ 'ರಾಜ್ಯಾಭಿಯೋಗಿ ಕಲ್ಯಾಣಸ್ವಾಮಿ ಅಥವಾ ಅಮರಸುಳ್ಯದ ಕಾಟಕಾಯಿ' (೧೯೪೮) ಎಂಬ ಕಿರುಪುಸ್ತಕ ಮತ್ತು *The South Kanara Insurrection* ಮತ್ತು ತಿ. ತಾ. ಶರ್ಮರವರ 'ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ' (೧೯೫೭). ಎಂ. ವಿ. ಕೃಷ್ಣರಾವ್ ಮತ್ತು ಜಿ. ಎಸ್. ಹಾಲಪ್ಪ ಎರಡು ಸಂಪುಟಗಳಲ್ಲಿ ಸಂಪಾದಿಸಿರುವ *History of Freedom Movement in Karnataka* (೧೯೬೨) ಬ್ರಿಟಿಷರ ವಿರುದ್ಧ ಕರ್ನಾಟಕದಾದ್ಯಂತ ನಡೆದ ಹಿಂಸಾತ್ಮಕ ಮತ್ತು ಅಹಿಂಸಾತ್ಮಕ ಹೋರಾಟದ ವಿವರಗಳನ್ನು ನೀಡುತ್ತದೆ. ವಿ. ಗೋವಿಂದ ರಾಜಾಚಾರಿಯವರ *Role of the State of Hyderabad in the Uprising of 1857* (೧೯೭೨), ಬೇರೆ ವಿಷಯಗಳೊಂದಿಗೆ ಸುರಪುರದ ರಾಜಾ ವೆಂಕಟಪ್ಪನಾಯಕ, ಮುಂಡರಗಿ ಭೀಮರಾಯ ಮುಂತಾದವರು ಬ್ರಿಟಿಷರ ವಿರುದ್ಧ ನಡೆಸಿದ ಹೋರಾಟದ ವಿವರಗಳನ್ನು ನೀಡುತ್ತದೆ. *The Freedom Struggle in Hyderabad (1800–1947)* ಎಂಬ ನಾಲ್ಕು ಸಂಪುಟಗಳ ಗ್ರಂಥದಲ್ಲಿಯೂ ಹೈದರಾಬಾದ್-ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ನಡೆದ ಬಂಡಾಯಗಳ ವಿವರಗಳು ಲಭ್ಯವಿವೆ. ಈ ಸಂಪುಟಗಳನ್ನು ಆಂಧ್ರಪ್ರದೇಶ ಸರ್ಕಾರವು ಪ್ರಕಟಿಸಿದೆ. *Freedom Struggle in Bombay Presidency* ಎಂಬ ಕೃತಿಯಲ್ಲಿ ಬಾಂಬೆ–ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ನಡೆದ ಬಂಡಾಯಗಳ ವಿವರಗಳು ಲಭ್ಯವಿವೆ. ಈ ಎಲ್ಲಾ ಗ್ರಂಥಗಳ ರಚನೆಯಲ್ಲಿ ಅಭಿಲೇಖ ಸಾಮಗ್ರಿಗಳನ್ನು ವಿಪುಲವಾಗಿ ಬಳಸಿಕೊಂಡಿರುವುದನ್ನು ಗಮನಿಸಬಹುದು.

ಅಹಿಂಸಾತ್ಮಕ ಹೋರಾಟದ ಬಗ್ಗೆ ಮಾತ್ರ ಪ್ರಕಟವಾಗಿರುವ ಕೆಲವು ಗ್ರಂಥಗಳನ್ನೂ ಇಲ್ಲಿ ಹೆಸರಿಸಬಹುದು: ನಾಡಿಗ ಕೃಷ್ಣಮೂರ್ತಿಯವರ 'ಕರ್ನಾಟಕದ ಕಣ್ಮರೆಯಾದ ಆಗಸ್ಟ್ ವೀರರು' (೧೯೪೭), ಎಂ. ಬಿ. ಬೂದಿಹಾಳು ಮಠ ಇವರ 'ಸ್ವಾತಂತ್ರ್ಯದ ಹಾದಿಯಲ್ಲಿ ಕನ್ನಡಿಗ' (೧೯೪೮), ಆರ್. ಆರ್. ದಿವಾಕರರ 'ಕರ ನಿರಾಕರಣೆಯ ವೀರಕಥೆ', ಎಚ್. ಎಸ್. ದೊರೆಸ್ವಾಮಿಯವರ 'ಹೋರಾಟದ ದಿಟ್ಟಹೆಜ್ಜೆಗಳು' (೧೯೭೨) ಮತ್ತು ಡಾ॥ ಕೆ. ವೀರತಪ್ಪನವರ 'ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳವಳಿ' (೧೯೭೭). ಇದೇ ಸಂದರ್ಭದಲ್ಲಿ ವಿಶೇಷವಾಗಿ ಹೆಸರಿಸಬೇಕಾದ ಗ್ರಂಥವೆಂದರೆ, ಡಾ॥ ಸೂರ್ಯನಾಥ ಕಾಮತ್ ಸಂಗ್ರಹಿಸಿ ಮೂರು ಸಂಪುಟಗಳಲ್ಲಿ ಸಂಪಾದಿಸಿರುವ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು'. ಕರ್ನಾಟಕದ ಒಟ್ಟು ೮೦೦ ಸ್ವಾತಂತ್ರ್ಯ

ಹೋರಾಟಗಾರರ ಸ್ಮೃತಿಗಳ ಅಮೂಲ್ಯ ಸಂಗ್ರಹವಾದ ಇದನ್ನು ವಿಪರೀತ ಶ್ರಮವಹಿಸಿ ಸಮರ್ಥವಾಗಿ ಸಂಪಾದಿಸ ಲಾಗಿರುವುದರಿಂದ ಅನೇಕ ರೀತಿಯಲ್ಲಿ ಇತಿಹಾಸ ರಚನೆಗೆ ಮೂಲ ಸಾಮಗ್ರಿಯನ್ನು ಒದಗಿಸಬಲ್ಲುದಾಗಿದೆ. ಇಡೀ ಭಾರತದಲ್ಲಿಯೇ ಇಂತಹ ಮತ್ತೊಂದು ಗ್ರಂಥವನ್ನು ಸಂಗ್ರಹಿಸಿ ಸಂಪಾದಿಸುವ ಯತ್ನ ನಡೆದಿಲ್ಲ. ಸ್ವಾತಂತ್ರ್ಯ ಹೋರಾಟಕ್ಕೆ ಪ್ರಧಾನವಾಗಿ ಸಂಬಂಧಿಸಿದ್ದರೂ ಈ ಸಂಪುಟಗಳು ಅಂದಿನ ಸಮಾಜದ ವಿವಿಧ ಮುಖಗಳ, ಸಮಸ್ಯೆಗಳ ಮತ್ತು ಸುಧಾರಣೆ ಯತ್ನಗಳ ಬಗೆಗೂ ಅಮೂಲ್ಯ ಮಾಹಿತಿಯನ್ನು ನೀಡುತ್ತವೆ.

ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟದ ಬಗ್ಗೆ ಬಂದಿರುವ ಪ್ರಕಟಣೆಗಳಲ್ಲಿ ಸಾಮಾನ್ಯವಾಗಿ ಕರ್ನಾಟಕ ಏಕೀಕರಣ ಯತ್ನಗಳ ಇತಿಹಾಸವನ್ನು ಸೇರಿಸಲಾಗಿರುತ್ತದೆ. ಇದೇ ವಿಷಯದ ಬಗ್ಗೆ ಅನೇಕ ಪ್ರತ್ಯೇಕ ಗ್ರಂಥಗಳೂ ಪ್ರಕಟವಾಗಿವೆ. ಆರ್. ಆರ್. ದಿವಾಕರರ 'ಕರ್ನಾಟಕ ಏಕೀಕರಣದ ಕಥೆ' (೧೯೫೬), ಕರ್ನಾಟಕ ಯೂನಿಫಿಕೇಷನ್ ಸಭಾದ *United Karnataka : A Case for Karnataka Unification* (೧೯೨೮), ಎಸ್. ಸಿರದಿಯವರ 'ಕರ್ನಾಟಕ ಏಕೀಕರಣ ಮತ್ತು ಸ್ತ್ರೀಯರು' ಮುಂತಾದವು ಇಲ್ಲಿ ಉಲ್ಲೇಖನೀಯ ವಾದುವು.

ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳನ್ನು ಕುರಿತಂತೆ ಅನೇಕ ಉಪಯುಕ್ತ ಗ್ರಂಥಗಳು ಪ್ರಕಟವಾಗಿವೆ, ಅವುಗಳಲ್ಲಿ ಕೆಲವನ್ನು ಇಲ್ಲಿ ಹೆಸರಿಸಬಹುದು: *Experiences of a Planter in the Jungles of Mysore*, ಎಂ. ಶಾಮರಾವ್‌ರವರ *Ten Years of Native Rule in Mysore* (೧೮೯೧) ; *A Decade of Modern Mysore (1926-1936) by a Mysorean* (೧೯೩೬); ಪದ್ಮನಾಭ ಅಯ್ಯರರ *Progress in Mysore-Quin-Quennial Record* (೧೯೩೧); ಸರ್ ಎಂ. ವಿಶ್ವೇಶ್ವರಯ್ಯನವರ *Visions of a Prosperous Mysore* (೧೯೨೭) ಮತ್ತು ಎರಡು ಸಂಪುಟಗಳ *Village Industries Hand Book* (೧೯೫೨); ವಿ. ಎಸ್. ಸಾಂಬಶಿವ ಐಯರ್‌ರವರ *Mysore-Industrial and Commercial : Being a Preliminary Sketch of the Resources, Industries, Trade and Commerce of Mysore State* (೩ ಸಂಪುಟಗಳು); ಸಿ. ಆರ್. ರೆಡ್ಡಿಯವರ *Education, Industry and Commerce and Local Government* (೧೯೧೬); ಜಿ. ರುದ್ರಪ್ಪನವರ *The Work of Rural Reconstruction in the Mysore State and British India-Further Reflections and Thoughts* (೧೯೩೫); ಶಂಕರ ಲಿಂಗೇಗೌಡರ *Political and Economic Life Under the Rule of H. H.Jayacham araja Wodeyar* (೧೯೪೧). ಎಚ್. ಸ್ಟೀಫೆನ್ ಬರೆದಿರುವ *Plague-proof Town-planning in Bangalore South India* (೧೯೧೪) ಮತ್ತೊಂದು ಗಮನಾರ್ಹ ಗ್ರಂಥ.

ಕರ್ನಾಟಕದ ಎಲ್ಲಾ ಭಾಗಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ವರ್ಣಿಸುವ ಕೆಲವು ಗ್ರಂಥಗಳನ್ನು ಇಲ್ಲಿ ಹೆಸರಿಸಬಹುದು: ಜಿ. ಆರ್. ಕುಪ್ಪುಸ್ವಾಮಿಯವರ *Economic Conditions in Karnataka* ; ಎಸ್. ಗುರುರಾಜಾಚಾರ್ಯರ *Some Aspects of Economic and Social Life in Karnataka* (೧೯೭೪).

೨. **ಆಗಬೇಕಾದ ಕಾರ್ಯ:** ಆಧುನಿಕ ಕರ್ನಾಟಕದ ಇತಿಹಾಸ ರಚನೆ ಮತ್ತು ಪುನರ್ರಚನೆ ಕಾರ್ಯ ಬಹಳ ಮಂದಗತಿಯಲ್ಲಿ ಸಾಗುತ್ತಿದೆ ಎಂದು ಹೇಳಬಹುದು. ಆಗಬೇಕಾದ ಕಾರ್ಯಕ್ಕೆ ಹೋಲಿಸಿದರೆ ಆಗಿರುವ ಕಾರ್ಯ ಕಡಿಮೆ ಎಂದು ಯಾರಿಗಾದರೂ ಅನಿಸದಿರದು. ಯಾವ್ಯಾವ ವಿಷಯಗಳ ಬಗ್ಗೆ ಸಾಕಷ್ಟು ದಾಖಲೆಗಳು ಲಭ್ಯವಿದ್ದೂ ಆಳವಾದ ಸಂಶೋಧನೆ ನಡೆಯದೆ ಉಳಿದಿದೆ ಎಂಬುದರ ಬಗ್ಗೆ ಈ ಕೆಳಗಿನಂತೆ ವಿವರಣೆ ನೀಡಬಹುದು :

ಕರ್ನಾಟಕದಲ್ಲಿ ವೆಲ್ಲೆಸ್ಲಿ (ನಂತರದ ಡ್ಯೂಕ್ ಆಫ್ ವೆಲ್ಲಿಂಗ್‌ಟನ್)ಯು ಟಿಪ್ಪುಸುಲ್ತಾನ್, ಧೊಂಡಿಯಾ ವಾಘ್, ಮರಾಠರು ಮತ್ತು ಅನೇಕ ಸಣ್ಣಪುಟ್ಟ ಸಂಸ್ಥಾನಿಕರ ವಿರುದ್ಧ ನಡೆಸಿದ ಹೋರಾಟದ ಸಮಗ್ರ ಚಿತ್ರಣವನ್ನು ಇದುವರೆಗೆ ಯಾರೂ ನೀಡಿಲ್ಲ. ದಿವಾನ್ ಪೂರ್ಣಯ್ಯನವರ ಆಳ್ವಿಕೆಯ ಬಗ್ಗೆ ಕೂಡ ಸಂಶೋಧನೆ

ಆಗಬೇಕಾಗಿದೆ. ನಿಜ ಹೇಳಬೇಕೆಂದರೆ, ಅಂದಿನ 'ದಿವಾನ್' ಹುದ್ದೆಯ ಜವಾಬ್ದಾರಿ ಮತ್ತು ಕರ್ತವ್ಯಗಳೇನಿದ್ದವು ಎಂಬುದರ ಬಗ್ಗೆಯೇ ಸ್ಪಷ್ಟ ತಿಳಿವಳಿಕೆ ನೀಡುವ ಯತ್ನ ನಡೆದಿಲ್ಲ. ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಮೈಸೂರಿನ ಆರ್ಥಿಕ ಸ್ಥಿತಿ ಬಹಳ ಉತ್ತಮವಾಗಿತ್ತಷ್ಟೆ. ಇದಕ್ಕೆ ಪೂರ್ಣಯ್ಯನವರ ಅಸಾಮಾನ್ಯ ಬುದ್ಧಿವಂತಿಕೆಯೇ ಕಾರಣ ಎಂಬಂಥ ಅಭಿಪ್ರಾಯವನ್ನು ಸಾಮಾನ್ಯವಾಗಿ ಬಿಂಬಿಸಲಾಗುತ್ತಿದೆ. ಆದರೆ ವಸ್ತುಸ್ಥಿತಿ ಇದಕ್ಕಿಂತ ಭಿನ್ನವಾಗಿತ್ತು. ಇಂಗ್ಲಿಷರು ಮತ್ತು ಮರಾಠರ ನಡುವಿನ ಯುದ್ಧಗಳು, ಬಿಳಿ ಸೈನಿಕರ ಬಂಡಾಯ, ಬ್ರಿಟಿಷ್ ಸೈನ್ಯದ ಕಂಟೋನ್ಮೆಂಟ್‌ಗಳು, ಟಿಪ್ಪುಸುಲ್ತಾನ್ ಸಂಗ್ರಹಿಸಿಟ್ಟಿದ್ದ ಗಂಧದ ತುಂಡುಗಳ ಸಂಗ್ರಹದ ವಿಲೇವಾರಿ ಮುಂತಾದವುಗಳಿಂದಾಗಿ ಮೈಸೂರು ಆರ್ಥಿಕವಾಗಿ ಎಷ್ಟು ಲಾಭ ಪಡೆದುಕೊಳ್ಳಲು ಸಾಧ್ಯವಾಯಿತು ಎಂಬುದರ ವಿವರವಾದ ಅಧ್ಯಯನ ಆಗಿಲ್ಲ. ಇದೇ ರೀತಿ ಪೂರ್ಣಯ್ಯನವರ ಮಹತ್ವಾಕಾಂಕ್ಷೆಗಳೇನಿದ್ದವು, ಅವರಿಗೆ ಬ್ರಿಟಿಷರು ಅತಿ ಎನಿಸುವಷ್ಟು ಬೆಂಬಲ ಮತ್ತು ಗೌರವ ನೀಡಲು ಕಾರಣಗಳೇನಿದ್ದವು ಎಂಬ ವಿಷಯಗಳ ಬಗ್ಗೆ ಆಳವಾದ ಅಧ್ಯಯನ ಆಗಬೇಕು.

ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ನಡೆದ ಹಿಂಸಾತ್ಮಕ ಹೋರಾಟದ (೧೭೯೯-೧೮೬೦) ಸಮಗ್ರ ಚಿತ್ರಣವನ್ನು ನೀಡಲು ಇದುವರೆಗೆ ಪ್ರಕಟವಾಗಿರುವ ಗ್ರಂಥಗಳು ಯಶಸ್ವಿಯಾಗಿಲ್ಲ. ಕೆಲವು ಗ್ರಂಥಗಳು ಲಭ್ಯವಿರುವ ದಾಖಲೆಗಳ ಪೂರ್ಣಪಾಠವನ್ನೇ ಇತಿಹಾಸವೆಂಬಂತೆ ಮುದ್ರಿಸುವುದರಲ್ಲಿ ತೃಪ್ತಿಪಟ್ಟಿವೆ. ಅನೇಕ ಅಭಿಲೇಖಾಲಯಗಳಲ್ಲಿ ಹುದುಗಿರುವ ದಾಖಲೆಗಳನ್ನು ಪತ್ತೆಹಚ್ಚಲು ಗಂಭೀರ ಯತ್ನಗಳಾಗಿಲ್ಲ. ಧೊಂಡಿಯಾವಾಘ್‌ನ ದಿಟ್ಟ ಹೋರಾಟ, ನಗರದ ಬಂಡಾಯ (೧೮೩೦-೩೧), ಕೊಡಗಿನ ಬಂಡಾಯ (೧೮೩೪-೩೭), ತರಿಕೆರೆ ಸರ್ಜಪ್ಪನಾಯಕನ ಬ್ರಿಟಿಷ್ ವಿರೋಧಿ ಚಟುವಟಿಕೆಗಳು, ಮೈಸೂರಿನ ಗಲಭೆಗಳು (೧೮೫೮-೬೦), ಇವೇ ಅಲ್ಲದೆ ಹೈದರಾಬಾದ್ ಮತ್ತು ಬಾಂಬೆ–ಕರ್ನಾಟಕದಲ್ಲಿ ನಡೆದ ಹೋರಾಟದ ವಿವರಪೂರ್ಣ ಮತ್ತು ಸಮಗ್ರ ಅಧ್ಯಯನ ಇನ್ನೂ ಹೆಚ್ಚು ಆಧಾರ ಸಹಿತವಾಗಿ ನಡೆಯಬೇಕಾಗಿದೆ. ಕರ್ನಾಟಕದಲ್ಲಿ ಠಕ್ಕರ (Thugs) ಚಟುವಟಿಕೆಗಳ ಬಗೆಗೆ ವಿಪುಲ ಮೂಲ ಸಾಮಗ್ರಿ ಲಭ್ಯವಿದ್ದರೂ ಇದನ್ನು ಕಡೆಗಣಿಸಿರುವುದು ದುರದೃಷ್ಟಕರ.

ಮೈಸೂರು ಸಂಸ್ಥಾನವನ್ನು ಒಡೆಯರ್ ವಂಶಸ್ಥರಿಗೆ ಹಿಂತಿರುಗಿಸದೆ ತಮ್ಮಲ್ಲಿಯೇ ಉಳಿಸಿಕೊಳ್ಳಲು ಬ್ರಿಟಿಷರು ಮಾಡಿದ ಕುಟಿಲೋಪಾಯಗಳು, ತಪ್ಪು ಲೆಕ್ಕಾಚಾರಗಳು ಯಾವ ರೀತಿ ಅಸಾಮಾನ್ಯ ಚಾರಿತ್ರಿಕ ಸನ್ನಿವೇಶಗಳಿಂದಾಗಿ ವಿಫಲವಾದವು ಎಂಬುದರ ಆಳವಾದ ಅಧ್ಯಯನವನ್ನು ಮಾಡಬೇಕಾಗಿದೆ.

ಮೈಸೂರು ಸಂಸ್ಥಾನ ಮತ್ತು ನಂತರದ ಕರ್ನಾಟಕ ರಾಜ್ಯದ ಸಚಿವಾಲಯದ ಬೆಳವಣಿಗೆಯನ್ನು ಯಾರೂ ಅಭ್ಯಸಿಸಿಲ್ಲ. ಈ ರಾಜ್ಯದ ಆಡಳಿತದ ಇತಿಹಾಸದಲ್ಲಿ ಇದೊಂದು ಪ್ರಮುಖ ವಿಷಯವೆಂಬುದು ಯಾರ ಗಣನೆಗೂ ಬಂದಿಲ್ಲ. ಇದೇ ರೀತಿ ಜಯಚಾಮರಾಜ ಒಡೆಯರವರ ಆಳ್ವಿಕೆಯ ಬಗ್ಗೆ ಕೂಡ ಅಧ್ಯಯನ ನಡೆದಿಲ್ಲ. ಕರ್ನಾಟಕ ಸರ್ಕಾರದ ಪ್ರಮುಖ ಇಲಾಖೆಗಳ ಹುಟ್ಟು, ಬೆಳವಣಿಗೆ ಮತ್ತು ಸಾಧನೆ ಕುರಿತಂತೆ ಸಹ ಅಧ್ಯಯನ ಆಗಬೇಕು. ಅರಣ್ಯ ಇಲಾಖೆ, ವ್ಯವಸಾಯ ಇಲಾಖೆ, ಪೊಲೀಸ್ ಇಲಾಖೆ, ಆರೋಗ್ಯ ಇಲಾಖೆ, ಇತ್ಯಾದಿ ನ್ಯಾಯಾಡಳಿತದ ಬಗ್ಗೆ ಕೂಡ ಹೆಚ್ಚಿನ ಸಂಶೋಧನೆ ನಡೆದಿಲ್ಲ. ಅನುವಂಶಿಕ ಗ್ರಾಮಾಧಿಕಾರಿಗಳು ಎಂಬ ವಿಷಯದ ಬಗ್ಗೆ ಕೂಡ ಕೆಲಸವಾಗಬೇಕು. ಇನ್ನುಳಿದ ಕೆಲವು ವಿಷಯಗಳೆಂದರೆ, ಪ್ರಥಮ ಮತ್ತು ದ್ವಿತೀಯ ಜಾಗತಿಕ ಯುದ್ಧಗಳ ಕಾಲದಲ್ಲಿ ಕರ್ನಾಟಕದ ಪಾತ್ರ, ಬ್ರಿಟಿಷರಿಗೆ ಮೈಸೂರು ಸಂಸ್ಥಾನ ನೀಡಿದ ಸಹಾಯ, ಯುದ್ಧಕಾಲದಲ್ಲಿ ಕರ್ನಾಟಕದ ಆರ್ಥಿಕ ಸ್ಥಿತಿಗತಿಗಳು, ಇತ್ಯಾದಿ.

ಕರ್ನಾಟಕದಲ್ಲಿ ಅಹಿಂಸಾತ್ಮಕ ಸ್ವಾತಂತ್ರ್ಯ ಹೋರಾಟ (೧೯೨೦–೧೯೪೭) : ಅಸಹಕಾರ ಚಳವಳಿ, ಕಾನೂನು ಉಲ್ಲಂಘನೆ, ಭಾರತದಿಂದ ತೊಲಗಿ ಚಳವಳಿ, ಮೈಸೂರು ಚಲೋ ಚಳವಳಿ–ಕುರಿತಂತೆ ಸಮಗ್ರವಾದ ಗ್ರಂಥವೊಂದು ಇನ್ನೂ ಲಭ್ಯವಿಲ್ಲ. ಇದೇ ರೀತಿ ಕರ್ನಾಟಕದ ಏಕೀಕರಣಕ್ಕಾಗಿ ನಡೆಸಿದ ಹೋರಾಟದ ಸ್ಪಷ್ಟ ಚಿತ್ರಣ ಕೂಡ ಲಭ್ಯವಿಲ್ಲ. ಇದುವರೆಗೆ ಬರೆದಿರುವ ಬಿಡಿ ಲೇಖನಗಳು ಲಭ್ಯವಿರುವ ಮಾಹಿತಿಯ ಪೂರ್ಣ ಉಪ

ಯೋಗ ಮಾಡಿಲ್ಲ. ಇದೇ ರೀತಿ ಮೈಸೂರಿನ ಸಂವಿಧಾನಿಕ ಬೆಳವಣಿಗೆ–ಮೈಸೂರು ಪ್ರಜಾಪ್ರತಿನಿಧಿ ಸಭೆ ಮತ್ತು ಕೌನ್ಸಿಲ್ ಬಗ್ಗೆ ಅಪಾರ ಮಾಹಿತಿ ಇದ್ದರೂ ಆಗಿರುವ ಉಪಯೋಗ ಅತ್ಯಲ್ಪ.

ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಹೇಳುವುದಾದರೆ ಕರ್ನಾಟಕದಲ್ಲಿ ದುಷ್ಕಾಳ ಎಂಬ ವಿಷಯದ ಬಗ್ಗೆ ಲಭ್ಯವಿರುವ ವಿಪುಲ ಮಾಹಿತಿಯ ಉಪಯೋಗವಾಗಿಲ್ಲ. ಕರ್ನಾಟಕದ ಆರ್ಥಿಕ ಬೆಳವಣಿಗೆ, ವ್ಯವಸಾಯ, ನೀರಾವರಿ, ವ್ಯಾಪಾರ ಮತ್ತು ವಾಣಿಜ್ಯ, ವಾಣಿಜ್ಯ ಬೆಳೆಗಳು ಮತ್ತು ಪ್ಲಾಂಟೇಷನ್‌ಗಳು, ಮಲೆನಾಡು ಅಭಿವೃದ್ಧಿ, ಸಣ್ಣ ಮತ್ತು ಭಾರಿ ಪ್ರಮಾಣದ ಕೈಗಾರಿಕೆಗಳು, ಗಣಿ ಉದ್ಯಮ—ಕುರಿತಂತೆ ಸಂಶೋಧನೆ ಆಗಬೇಕಾಗಿದೆ, ಕರ್ನಾಟಕದ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಯಲ್ಲಿ ರೈಲ್ವೆ ಮತ್ತು ರಸ್ತೆ ಸಾರಿಗೆಯ ಪಾತ್ರದ ಬಗ್ಗೆ ಪ್ರತ್ಯೇಕ ಅಧ್ಯಯನಗಳಾಗಬೇಕಾಗಿದೆ. ಕರ್ನಾಟಕದ ಎರಡು ಹೆಮ್ಮೆಯ ಉದ್ಯಮಗಳಾದ ಬ್ಯಾಂಕಿಂಗ್ ಮತ್ತು ಹೋಟೆಲ್ ಉದ್ಯಮಗಳ ಬೆಳವಣಿಗೆಯನ್ನು ಗುರುತಿಸುವ ಸಂಶೋಧನೆ ಆಗಬೇಕು. ಮಲೆನಾಡು ಅಭಿವೃದ್ಧಿಯ ಸಂಬಂಧವಾಗಿ ಭಟ್ಕಳ ಅಥವಾ ಮಲ್ಪೆಯನ್ನು ಪ್ರಮುಖ ಬಂದರನ್ನಾಗಿ ಅಭಿವೃದ್ಧಿಪಡಿಸಬೇಕೆಂದು ಮೈಸೂರು ಸರ್ಕಾರ ನಡೆಸಿದ ಗಂಭೀರ ಯತ್ನಗಳು ವಿಫಲವಾದರೂ ಅಧ್ಯಯನಯೋಗ್ಯವಾದ ವಿಷಯವಾಗಿದೆ. ಕರ್ನಾಟಕದಲ್ಲಿ ಉದ್ಯೋಗಾವಕಾಶದ ಬೆಳವಣಿಗೆ ಮತ್ತು ಕಾರ್ಮಿಕ ಚಳವಳಿ ಕೂಡ ಅಧ್ಯಯನಯೋಗ್ಯ ವಿಷಯಗಳು.

ಕರ್ನಾಟಕದ ಸಾಮಾಜಿಕ ಸ್ಥಿತಿಗತಿಗಳ ವೈಜ್ಞಾನಿಕ ಮತ್ತು ವಿವರಪೂರ್ಣ ಅಧ್ಯಯನಕ್ಕೆ ಭಾರಿ ಯೋಜನೆಯೊಂದನ್ನೇ ಹಾಕಿಕೊಳ್ಳಬೇಕಾದ ಅಗತ್ಯವಿದೆ. ಕ್ರಿ. ಶ. ೧೮೫೦ ರಿಂದ ೧೯೫೦ರ ಒಂದು ಶತಮಾನದ ಅವಧಿಯಲ್ಲಿ ಹಿಂದೆಂದೂ ಕೇಳರಿಯದ ರೀತಿಯ ಬದಲಾವಣೆಗಳನ್ನು ಕಂಡು ಅಳವಡಿಸಿಕೊಂಡ ಕರ್ನಾಟಕ (ಒಂದು ರೀತಿಯಲ್ಲಿ ಇಡೀ ಭರತಖಂಡ) ಸಮಾಜದ ಸ್ಥಿತಿಗತಿಗಳನ್ನು ಆಳವಾಗಿ ಅಭ್ಯಾಸ ಮಾಡಬೇಕಾದ ಅಗತ್ಯವಿದೆ. ಈ ಅವಧಿಯಲ್ಲಿ ನಮ್ಮ ಸಮಾಜವು ಹಿಂದೆ ಊಹೆಗೂ ನಿಲುಕದಿದ್ದಂತಹ ಈ ಮುಂದಿನ ಮಾರ್ಪಾಡುಗಳನ್ನು ಅಳವಡಿಸಿಕೊಳ್ಳಬೇಕಾಯಿತು : ಇಂಗ್ಲಿಷ್ ವಿದ್ಯಾಭ್ಯಾಸ, ಹೊರದೇಶಗಳೊಡನೆ ಸಂಪರ್ಕ, ಪಾಶ್ಚಾತ್ಯ ಶೈಲಿಯ ಉಡುಗೆ ತೊಡುಗೆಗಳು, ನಾಟಕ, ಸಿನಿಮಾ, ಕುದುರೆ ಜೂಜು, ಬೀಡಿ, ಸಿಗರೇಟು ಸೇವನೆ, ಪಾಶ್ಚಾತ್ಯರ ಮದ್ಯಗಳ ಅಭ್ಯಾಸ, ಕಾಫಿ ಮತ್ತು ಟೀ ಕುಡಿಯುವ ಅಭ್ಯಾಸ, ಆಧುನಿಕ ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆ (ರೈಲುಗಾಡಿಗಳು, ಮೋಟಾರು ವಾಹನಗಳು, ವಿಮಾನ, ರೇಡಿಯೋ, ಅಂಚೆ, ಟೆಲಿಗ್ರಾಫ್, ಟೆಲಿಫೋನ್, ದಿನ ಪತ್ರಿಕೆಗಳು ಮತ್ತು ನಿಯತಕಾಲಿಕೆಗಳು, ಇತ್ಯಾದಿ), ರಾಜ್ಯಾಡಳಿತದಲ್ಲಿ ಸಾಮಾನ್ಯ ಜನರ ಭಾವನೆ ಮತ್ತು ಹಿತಾಸಕ್ತಿಗಳನ್ನು ಗೌರವಿಸುವ ವ್ಯವಸ್ಥೆ, ಅನೇಕ ಸಾಮಾಜಿಕ ಅನಿಷ್ಟಗಳ ವಿರುದ್ಧ ಹೋರಾಟ, ಆಧುನಿಕ ವೈದ್ಯಕೀಯ ಸೇವೆಗಳ ಬೆಳವಣಿಗೆ ಮತ್ತು ಇಂಗ್ಲಿಷ್ ಔಷಧಿಗಳ ಉಪಯೋಗ, ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯ ವ್ಯವಸ್ಥೆ, ಆಧುನಿಕ ಕೈಗಾರಿಕೆಗಳ ಸ್ಥಾಪನೆ ಮತ್ತು ನಗರೀಕರಣ, ವಿದ್ಯುತ್ತಿನ ಉಪಯೋಗದ ಪರಿಚಯ, ನಲ್ಲಿಯಲ್ಲಿ ಶುದ್ಧ ನೀರಿನ ಸರಬರಾಜು, ಬೀದಿ ದೀಪದ ವ್ಯವಸ್ಥೆ, ಇತ್ಯಾದಿ. ಏನೆಲ್ಲ ಎಷ್ಟೆಲ್ಲ ಹೊಸ ವಿಷಯಗಳನ್ನು ಈ ಅವಧಿಯಲ್ಲಿ ಜೀವಿಸಿದ್ದ ಓರ್ವ ದೀರ್ಘಾಯು ವ್ಯಕ್ತಿ ತನ್ನ ಜೀವಿತ ಕಾಲದಲ್ಲಿ ಕಂಡು ಕೇಳಿ ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಬೇಕಾಗಿತ್ತು ಮತ್ತು ಈ ಯತ್ನಗಳಲ್ಲಿ ಏನೆಲ್ಲ ಪೇಚಿನ ಪ್ರಸಂಗಗಳನ್ನು ಎದುರಿಸಬೇಕಾಗಿ ಬರುತ್ತಿತ್ತು ಎಂಬುದು ಒಂದು ರೋಚಕ ಅಧ್ಯಯನವಾಗುವುದರಲ್ಲಿ ಸಂಶಯವಿಲ್ಲ. ಕೆಲವರು ಪಾಶ್ಚಾತ್ಯರನ್ನು ಅನುಕರಿಸಲು ಕೆಲವೊಮ್ಮೆ ಗಂಭೀರ, ಕೆಲವೊಮ್ಮೆ ಹಾಸ್ಯಾಸ್ಪದ ಮತ್ತೆ ಕೆಲವೊಮ್ಮೆ ಅತಿರೇಕ ಎನ್ನಬಹುದಾದ ರೀತಿಯಲ್ಲಿ ಯತ್ನಿಸುತ್ತಿದ್ದರೆ, ಸಾಂಪ್ರದಾಯಿಕ ಮೌಲ್ಯಗಳ ರಕ್ಷಣೆಗಾಗಿ ಅದೇ ರೀತಿಯಲ್ಲಿ ಉಳಿದವರು ಶ್ರಮಿಸುತ್ತಿದ್ದುದು ನಿಜವಾಗಿಯೂ ಆಸಕ್ತಿದಾಯಕ ಸಂಶೋಧನಾತ್ಮಕ ವಿಷಯವಾಗಿದೆ. ಮೈಸೂರಿನ ಬ್ರಾಹ್ಮಣೇತರ ಚಳವಳಿಯ ಬಗ್ಗೆ ಸ್ವಲ್ಪ ಅಧ್ಯಯನ ನಡೆದಿದ್ದರೂ ಮಿಲ್ಲರ್ ಕಮಿಟಿಯ ಮೀಸಲಾತಿ ಸೌಲಭ್ಯದ ಲಾಭ ಪಡೆದುಕೊಂಡ ಅದೃಷ್ಟಶಾಲಿ ಜಾತಿಗಳಾವುವು ಎಂಬುದು ಬಯಲಿಗೇ ಬಂದಿಲ್ಲ.

ಇತ್ತೀಚೆಗೆ ಕೆಲವು ವಿದ್ವಾಂಸರು, ಮೈಸೂರು

ಒಂದು ಮಾದರಿ ಸಂಸ್ಥಾನವಾಗಿತ್ತು ಎಂಬುದು ಪ್ರಶ್ನಾರ್ಹ, ಅದೊಂದು ಕಟ್ಟುಕಥೆ (Myth) ಮುಂತಾದ ಕುತ್ಸಿತ ಸಿದ್ಧಾಂತಗಳನ್ನು ಮಂಡಿಸುತ್ತಿರುವುದು ಒಂದು ಕೆಟ್ಟ ಬೆಳವಣಿಗೆಯಾಗಿದೆ ಎನ್ನದೆ ವಿಧಿಯಿಲ್ಲ. ಸರ್ ಫ್ರಾಂಕ್ ನಾಯ್ಸ್ ಎಂಬ ವಿದ್ವಾಂಸರು ಸಿ. ಹಯವದನರಾಯರು ಸಂಪಾದಿಸಿರುವ ಮೈಸೂರು ಗ್ಯಾಸೆಟಿಯರ್ ಸಂಪುಟಗಳ ಸಮೀಕ್ಷೆ ಮಾಡುವ ಸಂದರ್ಭದಲ್ಲಿ ಹೇಳಿರುವ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹದು: "It seems a pity that no attempt has been made to compare them (i. e., economic conditions) with those prevailing in British India........there is every reason for thinking that Mysore would have emerged most creditably from such a test" *(Mysore Economic Journal*, Vol .18, February,1932).

*Wilk's Histroy of Mysore*, Vol. I (Reprint 1930) ಎಂಬ ಗ್ರಂಥದಲ್ಲಿ ವಿಲ್ಕ್ಸ್ ಬಗ್ಗೆ ಬರೆದಿರುವ ಟಿಪ್ಪಣಿಯಲ್ಲಿ "Mysore is the best administered State in India" ಎಂದು ಅಭಿಪ್ರಾಯ ಪಡಲಾಗಿದೆ. ದೇಶೀಯ ಸಂಸ್ಥಾನಗಳಾದ ಹೈದರಾಬಾದ್ ಮತ್ತು ಜೈಪುರ ೧೯೩೦ ರಲ್ಲಿ ಕೂಡ ಮೈಸೂರಿಗಿಂತ ಬಹಳ ಹಿಂದುಳಿದಿದ್ದವೆಂದು ಹೇಳಲಾಗಿದೆ. ಭಾರತದಾದ್ಯಂತ ಒಮ್ಮೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಗೃಹ ಕೈಗಾರಿಕೆಗಳನ್ನು ತಮ್ಮ ಸ್ವಾರ್ಥಕ್ಕಾಗಿ ಹಾಳುಗೆಡವಿದ ಬ್ರಿಟಿಷರು "India's salvation lies in its villages and development of agriculture" ಎಂದು ಭಾರತೀಯರನ್ನು ಹಾದಿ ತಪ್ಪಿಸಲು ಸತತವಾಗಿ ಯತ್ನಿಸುತ್ತಿದ್ದಾಗ ಮೈಸೂರಿನ ದಿವಾನರು ಹೇಳುತ್ತಿದ್ದುದೇನೆಂದರೆ, "No country can prospur unless its agricultural and manufacturing industries were equally fostered" (C. Rangacharlu) ಮತ್ತು "Agriculture and Manufacture should go hand in hand. An atmosphere congenial to the growth of industrial and commercial activities should be gradually created" (Visweswaraiah). ಮೈಸೂರಿನ ಉದ್ಯಮಿಗಳು ಮತ್ತು ವರ್ತಕರ ಎರಡು ನಿಯೋಗಗಳನ್ನು ಕ್ರಮವಾಗಿ ೧೯೧೬ ಮತ್ತು ೧೯೧೭ರಲ್ಲಿ ಸರ್ಕಾರವು ಜಪಾನಿಗೆ ಕಳುಹಿಸಿತ್ತು ಎಂಬುದನ್ನು ಇಲ್ಲಿ ಉಲ್ಲೇಖಿಸಬೇಕು.

ನೈಜ ಸಂಶೋಧನೆ ನಡೆಸುವ ಇಚ್ಛೆ ಮತ್ತು ಉತ್ಸಾಹ ಇದ್ದಲ್ಲಿ ವಿಷಯಗಳಿಗೇನೂ ಕೊರತೆ ಇಲ್ಲ. ನಿಜ ಹೇಳಬೇಕೆಂದರೆ, ನನ್ನ ಈ ಲೇಖನದ ಅಪೂರ್ಣತೆಯನ್ನು ಟೀಕಿಸಲು ಅನೇಕ ಲೇಖನಗಳನ್ನೇ ಬರೆಯಬಹುದು—ಇವೆಲ್ಲವೂ ಅಪೂರ್ಣವಾಗಿಯೇ ಇರುವುದರಲ್ಲಿ ಸಂದೇಹವಿಲ್ಲ. ಲಭ್ಯವಿರುವ ಅವಕಾಶಗಳು ಅಪಾರ.

೩. ಲಭ್ಯವಿರುವ ಮೂಲ ಸಾಮಗ್ರಿಗಳು : ಆಧುನಿಕ ಇತಿಹಾಸದ ಪ್ರತಿಯೊಂದು ಅಂಶದ ಬಗೆಗೂ ಅಪಾರ ಅಧಿಕೃತ ಮೂಲಸಾಮಗ್ರಿಯ ಕಣಜಗಳೆಂದರೆ ಅಭಿಲೇಖಾಗಾರಗಳು. ಅಭಿಲೇಖಗಳೆಂದರೆ ಸೃಷ್ಟಿಸಲಾದ ನಿರ್ದಿಷ್ಟ ಉದ್ದೇಶ ಸರ್ವ ವಿಧದಲ್ಲಿಯೂ ಈಡೇರಿದ ನಂತರ ಪರಾಮರ್ಶನೆ ಮತ್ತು ಸಂಶೋಧನೆಗಾಗಿ ಅನಿರ್ದಿಷ್ಟ ಕಾಲದವರೆಗೆ ಉಪಯುಕ್ತವೆನಿಸುವ ಸಾಧ್ಯತೆಗಳಿವೆಯೆಂದು ನಿಷ್ಕರ್ಷಿಸಿ ಆಯ್ದಿಡಲಾದ ಒಂದು ವಿಶಿಷ್ಟ ಮಾದರಿಯ ದಾಖಲೆಗಳು. ಇವು ಸರ್ಕಾರಿ ದಾಖಲೆಗಳಾಗಿರಬಹುದು,ಅರೆ ಸರ್ಕಾರಿ ದಾಖಲೆಗಳಾಗಿರಬಹುದು ಅಥವಾ ಕೈಗಾರಿಕಾ ಮತ್ತು ವಾಣಿಜ್ಯ ಇತ್ಯಾದಿ ಸಂಸ್ಥೆಗಳ ದಾಖಲೆಗಳಾಗಿರಬಹುದು ಅಥವಾ ಕುಟುಂಬ ಮತ್ತು ವ್ಯಕ್ತಿಗಳ ದಾಖಲೆಗಳಾಗಿರಬಹುದು. ಅಭಿಲೇಖಗಳೆನಿಸಿಕೊಳ್ಳಲು ಅವುಗಳನ್ನು ಪ್ರಜ್ಞಾಪೂರ್ವಕವಾಗಿ ಒಂದು ಕ್ರಮವಾದ ರೀತಿಯಲ್ಲಿ ಜೋಡಿಸಿ ಅನಿರ್ದಿಷ್ಟ ಕಾಲದವರೆಗೆಂದು ಸಂರಕ್ಷಿಸಿ ಇಟ್ಟಿರಬೇಕು. ಅಭಿಲೇಖಗಳನ್ನು ಕರಾರುವಾಕ್ಕಾಗಿ ವ್ಯವಸ್ಥೆಗೊಳಿಸಿರಲಾಗುತ್ತದೆ ಮತ್ತು ಅತ್ಯಂತ ಸುಲಭವಾಗಿ ಉಪಯೋಗಿಸಬಹುದು—ಅವು ತಮ್ಮ ಕತೆಯನ್ನು ಅವಿಚ್ಛಿನ್ನವಾಗಿ ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಓದುಗನೆದುರು ತೆರೆದಿಡುತ್ತಾ ಸಾಗುತ್ತವೆ. ಅಭಿಲೇಖಗಳು ಅನೇಕ ಭೌತಿಕ ರೂಪಗಳಲ್ಲಿ ಕಂಡುಬರುತ್ತವೆ. ಕಾಗದ, ಕಡತ, ತಾಳೆಗರಿಗಳು, ಧ್ವನಿಮುದ್ರಿಕೆಗಳು, ಮೈಕ್ರೊಫಿಲಂ, ಮೈಕ್ರೊಫಿಶ್, ಇತ್ಯಾದಿ. ಇವುಗಳಲ್ಲಿ ಅನೇಕ ವಿಧಗಳೂ ಇವೆ—ಫೈಲುಗಳು, ಭೂಪಟಗಳು, ಡೈರಿಗಳು, ಛಾಯಾಚಿತ್ರಗಳು, ಪುಸ್ತಕಗಳು, ಲಘು ಪುಸ್ತಕಗಳು, ಮೊಹರುಗಳು, ಪತ್ರಿಕೆಗಳು, ಪತ್ರಗಳು, ಚಲನಚಿತ್ರಗಳು, ಇತ್ಯಾದಿ.

ಆಧುನಿಕ ಕರ್ನಾಟಕದ ಇತಿಹಾಸದ ಬಗೆಗೆ ಅಪಾರ ಗಾತ್ರದ ಅಭಿಲೇಖಗಳ ಸಂಗ್ರಹಗಳು ಕಂಡು ಬರುವ ಅಭಿಲೇಖಾಗಾರಗಳೆಂದರೆ, ೧. ಕರ್ನಾಟಕ ರಾಜ್ಯ ಅಭಿಲೇಖಾಗಾರ, ೨. ತಮಿಳುನಾಡು ರಾಜ್ಯ ಅಭಿಲೇಖಾಗಾರ, ೩. ಆಂಧ್ರಪ್ರದೇಶ ರಾಜ್ಯ ಅಭಿ ಲೇಖಾಗಾರ, ೪. ಮಹಾರಾಷ್ಟ್ರ ರಾಜ್ಯ ಅಭಿಲೇಖಾ ಗಾರ, ೫. ಗೋವಾ ರಾಜ್ಯ ಅಭಿಲೇಖಾಗಾರ, ಮತ್ತು ಭಾರತದ ರಾಷ್ಟ್ರೀಯ ಅಭಿಲೇಖಾಗಾರ. ಇವುಗಳೇ ಅಲ್ಲದೆ, ಕರ್ನಾಟಕ ರಾಜ್ಯದ ಜಿಲ್ಲಾಧಿಕಾರಿಗಳ ಕಛೇರಿ ಗಳಲ್ಲಿ, ಪುಣೆಯಲ್ಲಿರುವ ಏಲಿಯೆನೇಷ‌ನ್ ಕಛೇರಿ (Alienation Office) ಮತ್ತು ಲಂಡನ್‌ನಲ್ಲಿರುವ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ ಕೂಡ ಬಹಳಷ್ಟು ದಾಖಲೆಗಳು ಸಿಗುತ್ತವೆ. ಇನ್ನೂ ಕೆಲವು ಮೂಲಗಳು ತೀವ್ರ ಆಸಕ್ತಿ ಇರುವ ವಿದ್ವಾಂಸರಿಗೆ ಎಟಕುತ್ತವೆ. ಉದಾಹರಣೆಗೆ, ಪ್ಯಾರಿಸ್‌ನಲ್ಲಿರುವ ಫ್ರೆಂಚ್ ನ್ಯಾಷನಲ್ ಆರ್ಕೀವ್ಸ್ ಮುಂತಾದವು.

ಆಧುನಿಕ ಕರ್ನಾಟಕಕ್ಕೆ ಸಂಬಂಧಿಸಿದಂತೆ ಅತಿ ಹೆಚ್ಚು ಗಾತ್ರದ ಅಭಿಲೇಖನಗಳ ಸಂಗ್ರಹ ಕಂಡುಬರು ವುದು ಸಹಜವಾಗಿಯೇ ಬೆಂಗಳೂರಿನಲ್ಲಿರುವ ಕರ್ನಾಟಕ ರಾಜ್ಯ ಅಭಿಲೇಖಾಗಾರದಲ್ಲಿ. ಇಲ್ಲಿ ಈ ಕೆಳಗಿನ ದಾಖಲೆ ಗಳು ಸಂಶೋಧಕರಿಗೆ ಲಭ್ಯವೆಂದು ಸಂಕ್ಷಿಪ್ತವಾಗಿ ಹೇಳಬಹುದು : ಹಳೇ ಮೈಸೂರು ಮತ್ತು ಕರ್ನಾಟಕ ಸರ್ಕಾರದ ಸಚಿವಾಲಯ ಇಲಾಖೆಗಳ ದಾಖಲೆಗಳು (೧೮೭೧–೧೯೫೦) ; ಹಳೇ ಮೈಸೂರಿನ ಕಂದಾಯ ವಿಭಾಗಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳ ಕಛೇರಿ ಗಳ ದಾಖಲೆಗಳು (೧೮೦೦–೧೮೮೦) ; ದೇಶೀ ಭಾಷೆ ಗಳಾದ ಕನ್ನಡ ಮತ್ತು ಮರಾಠಿ ಭಾಷೆಗಳಲ್ಲಿರುವ ಮೋಡಿ ದಾಖಲೆಗಳು ಮತ್ತು ಪರ್ಶಿಯನ್ ಭಾಷೆ ಯಲ್ಲಿರುವ ದಾಖಲೆಗಳು (೧೮೦೦–೧೮೮೧ ಮತ್ತು ಇದಕ್ಕೂ ಸ್ವಲ್ಪ ಹಿಂದಿನ ಕೆಲವು ಬಿಡಿ ದಾಖಲೆಗಳು) ; ಮತ್ತು, ೧೯೫೬ ರಿಂದ ಈಚಿನ ವರ್ಷಗಳಲ್ಲಿ ಖಾಸಗಿ ದಾಖಲೆಗಳ ಪ್ರಾದೇಶಿಕ ಪರಿವೀಕ್ಷಣಾ ಸಮಿತಿ ಹಾಗೂ ರಾಜ್ಯ ಅಭಿಲೇಖಾಗಾರ (೧೯೭೩) ಸಂಗ್ರಹಿಸಿರುವ ಖಾಸಗಿ ವ್ಯಕ್ತಿಗಳು, ಮಠಗಳು, ದೇವಾಲಯಗಳು, ಸಾರ್ವಜನಿಕ ಸಂಘ ಸಂಸ್ಥೆಗಳು ಮುಂತಾದವುಗಳ ದಾಖಲೆಗಳು. ಇವುಗಳಲ್ಲಿ ಕರ್ನಾಟಕದ ಅನೇಕ ಭಾಗ ಗಳಿಂದ ಪ್ರಕಟಿಸಲಾಗುತ್ತಿದ್ದ ವೃತ್ತಪತ್ರಿಕೆಗಳು, ನಿಯತ ಕಾಲಿಕೆಗಳು ಇತ್ಯಾದಿಗಳ ಸಂಗ್ರಹವೂ ಸೇರಿದೆ. ಇತ್ತೀಚೆಗೆ ಕರ್ನಾಟಕ ರಾಜ್ಯ ಅಭಿಲೇಖಾಗಾರವು ಮೈಸೂರು ನಗರ ದಲ್ಲಿ ವಿಭಾಗೀಯ ಕಛೇರಿಯೊಂದನ್ನು ಸ್ಥಾಪಿಸಿದ್ದು, ಅಲ್ಲಿ ಮೈಸೂರು ಅರಮನೆಯ ದಾಖಲೆಗಳನ್ನು ಸಂಗ್ರಹಿಸಿಡ ಲಾಗಿದೆ. ಈ ಕಛೇರಿ ಕೂಡ ಅನೇಕ ಸರ್ಕಾರಿ, ಅರೆ ಸರ್ಕಾರಿ ಮತ್ತು ಖಾಸಗಿ ಮೂಲಗಳಿಂದ ಉಪಯುಕ್ತ ದಾಖಲೆ ಮತ್ತು ಪುಸ್ತಕಗಳನ್ನು ಸಂಗ್ರಹಿಸುತ್ತಾ ಇದೆ. ಇಲ್ಲಿ ಮೌಖಿಕ ದಾಖಲೆಗಳ (Oral Archives) ಸಂಗ್ರಹ ಕಾರ್ಯಕ್ರಮವೊಂದನ್ನು ಕೈಗೆತ್ತಿಕೊಳ್ಳಲಾಗಿದ್ದು ಈಗಾಗಲೇ ಇಬ್ಬರು ಪ್ರಮುಖ ವ್ಯಕ್ತಿಗಳ ನೆನಪುಗಳನ್ನು ಧ್ವನಿ ಮುದ್ರಿಸಿಕೊಳ್ಳಲಾಗಿದೆ.

ಮೈಸೂರು ಸಂಸ್ಥಾನ, ಕರ್ನಾಟಕ ರಾಜ್ಯ, ಮದ್ರಾಸ್ ಪ್ರೆಸಿಡೆನ್ಸಿ, ಕೊಡಗು, ಬಾಂಬೆ ಪ್ರೆಸಿಡೆನ್ಸಿ ಮತ್ತು ಹೈದರಾಬಾದ್ ಸಂಸ್ಥಾನದ ಸರ್ಕಾರಗಳು ಹೊರಡಿಸುತ್ತಿದ್ದ ಸರ್ಕಾರಿ ಪ್ರಕಟಣೆಗಳನ್ನು ಸಹ ಕರ್ನಾಟಕ ರಾಜ್ಯ ಅಭಿಲೇಖಾಗಾರದಲ್ಲಿ ಸಂಗ್ರಹಿಸಿಡ ಲಾಗಿದೆ. ಇವುಗಳಲ್ಲಿ ಗೆಜೆಟ್ಟುಗಳು, ಸರ್ಕಾರದ ನಡವಳಿಕೆ ಗಳು, ಅಧಿ ನಿಯಮಗಳು, ನಿಯಮಾವಳಿಗಳು, ಇಲಾಖಾ ಕೈಪಿಡಿಗಳು, ಆಡಳಿತದ ವರದಿಗಳು, ಜನಗಣತಿ ವರದಿ ಗಳು, ಸಮಿತಿಗಳ ಮತ್ತು ಆಯೋಗಗಳ ವರದಿಗಳು, ಪೊಲೀಸ್ ವರದಿಗಳು ಇತ್ಯಾದಿಗಳು ಸೇರಿವೆ. ಜೊತೆಗೆ, ಅನೇಕ ಅಭಿವೃದ್ಧಿ ಕಾರ್ಯಗಳ ಬಗೆಗೆ ಹೊರತರಲಾದ ಇಲಾಖಾ ಪ್ರಕಟಣೆಗಳು, ದಿವಾನರ, ಮಹಾರಾಜರ ಮತ್ತು ಮಂತ್ರಿ ಮಹೋದಯರ ಭಾಷಣಗಳು, ಮುದ್ರಿತ ಐತಿಹಾಸಿಕ ದಾಖಲೆಗಳು ಮತ್ತು ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಇರುವ ಪುಸ್ತಕಗಳೂ ಇವೆ. ಕರ್ನಾಟಕ ರಾಜ್ಯ ಅಭಿಲೇಖಾಗಾರ ದಲ್ಲಿ ಭೂಪಟಗಳು ಅಥವಾ ನಕಾಶೆಗಳ ಒಂದು ಸಂಗ್ರಹವೂ ಇದೆ. ಇದರಲ್ಲಿ ಮುಖ್ಯವಾಗಿ ಸರ್ವೇ ಆಫ್ ಇಂಡಿಯಾದ ಟೋಪೋ ಹಾಳೆಗಳು, ರೆವೆನ್ಯೂ ಸರ್ವೇ, ಫಾರೆಸ್ಟ್ ಸರ್ವೇ ಹಾಳೆಗಳು, ಪಟ್ಟಣಗಳು ಮತ್ತು ನಗರ ಪ್ರದೇಶದ ಭೂಪಟಗಳು, ರಸ್ತೆಗಳು, ರೈಲು ಹಾದಿಗಳು, ನದಿಗಳು, ಜನಸಂಖ್ಯೆ, ಖನಿಜ ಸಂಪತ್ತು, ವ್ಯವಸಾಯೋತ್ಪನ್ನಗಳು, ಇತ್ಯಾದಿಗಳನ್ನು ತೋರಿಸುವ ನಕ್ಷೆಗಳು ಸೇರಿವೆ. ಹಿಂದಿನ ಕೊಡಗು ಪ್ರಾಂತ್ಯದ

ದಾಖಲೆಗಳು (೧೮೩೪ ರಿಂದ ೧೯೪೪) ಕೊಡಗಿನ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಇವೆ. ಹಿಂದಿನ ಮದ್ರಾಸ್ ಪ್ರೆಸಿಡೆನ್ಸಿ, ಬಾಂಬೆ ಪ್ರೆಸಿಡೆನ್ಸಿ ಮತ್ತು ಹೈದರಾಬಾದ್ ಸಂಸ್ಥಾನದಲ್ಲಿ ಸೇರಿದ್ದ ಇಂದಿನ ಕರ್ನಾಟಕದ ಭಾಗಗಳಿಗೆ ಸಂಬಂಧಿಸಿದ ಸರ್ಕಾರಿ ದಾಖಲೆಗಳು ಕ್ರಮವಾಗಿ ತಮಿಳುನಾಡು, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶ ರಾಜ್ಯಗಳ ಅಭಿಲೇಖಾಲಯಗಳಲ್ಲಿ ಉಳಿದು ಬಿಟ್ಟಿವೆ. ಇವುಗಳಲ್ಲಿ ಸುಮಾರು ೧೯೨೦ ರಿಂದೀಚೆಗಿನ ದಾಖಲೆಗಳನ್ನು ರಾಜ್ಯಗಳ ಪುನರ್ವಿಂಗಡನೆ (೧೯೫೬)ಯಾದ ನಂತರ ಹೊಸ ಮೈಸೂರು ರಾಜ್ಯದ ಸಚಿವಾಲಯದ ಸಾರ್ವತ್ರಿಕ ದಾಖಲೆಗಳ ವಿಭಾಗಕ್ಕೆ ವರ್ಗಾಯಿಸಲಾಗಿದ್ದು ಅವುಗಳು ಈಗ ಅಭಿಲೇಖಾಗಾರದಲ್ಲಿವೆ. ಪುಣೆಯಲ್ಲಿರುವ ಪೇಶ್ವ ದಫ್ತರ (Alienation Office) ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದ ಮಹತ್ವದ ಕಾಗದ ಪತ್ರಗಳನ್ನು ಹೊಂದಿರುವ ಮತ್ತೊಂದು ಕಛೇರಿಯಾಗಿದೆ. ಭಾರತದ ರಾಷ್ಟ್ರೀಯ ಅಭಿಲೇಖಾಗಾರದಲ್ಲಿ ಮೈಸೂರು ರೆಸಿಡೆನ್ಸಿಯ ದಾಖಲೆಗಳು ಮಾತ್ರವೇ ಅಲ್ಲದೆ, ಕೊಡಗು ಮತ್ತು ಮೈಸೂರಿನ ಆಡಳಿತಕ್ಕೆ ಸಂಬಂಧಿಸಿದ ದಾಖಲೆಗಳಿವೆ. ಕರ್ನಾಟಕದ ಅನೇಕ ಸಣ್ಣಪುಟ್ಟ ಸಂಸ್ಥಾನಗಳಿಗೆ ಸಂಬಂಧಿಸಿದ ದಾಖಲೆಗಳೂ ಇಲ್ಲಿ ಸಿಗುತ್ತವೆ. ಇಲ್ಲಿ ಇತ್ತೀಚೆಗೆ ತೆರೆದಿಟ್ಟ ಸ್ವಾತಂತ್ರ್ಯ ಹೋರಾಟದ ವರ್ಷಗಳಲ್ಲಿ ಮುಟ್ಟುಗೋಲು ಹಾಕಿಕೊಂಡಿದ್ದ ನಿಷೇಧಿತ ಪ್ರಕಟಣೆಗಳಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದ ಅನೇಕ ಪುಸ್ತಕಗಳು ಕಂಡುಬಂದಿವೆ.

ಅನೇಕಾನೇಕ ಸರ್ಕಾರಿ ಮತ್ತು ಸಾರ್ವಜನಿಕ ಗ್ರಂಥಾಲಯಗಳಲ್ಲಿ ಮತ್ತು ಸಂಶೋಧನಾ ಕೇಂದ್ರಗಳಲ್ಲಿ ಕೂಡ ಬಿಡಿ ಚಾರಿತ್ರಿಕ ದಾಖಲೆಗಳು ಮತ್ತು ಹಸ್ತಪ್ರತಿಗಳು, ಖಾಸಗಿ ದಾಖಲೆಗಳು, ಪತ್ರಿಕೆಗಳು ಮತ್ತು ನಿಯತಕಾಲಿಕೆಗಳು, ಸ್ಮರಣ ಸಂಚಿಕೆಗಳು, ಛಾಯಾಚಿತ್ರಗಳು ಇತ್ಯಾದಿ ಸಂಗ್ರಹಿಸಲ್ಪಟ್ಟಿವೆ. ಇವುಗಳಲ್ಲಿ ಮುಖ್ಯವಾದುವೆಂದರೆ, ಪುಣೆಯ ಭಾರತ ಇತಿಹಾಸ ಸಂಶೋಧಕ ಮಂಡಲ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯ ಗ್ರಂಥಾಲಯ, ಕರ್ನಾಟಕ ಸರ್ಕಾರದ ಕೇಂದ್ರ ಗ್ರಂಥಾಲಯ, ವಿಧಾನ ಮಂಡಲದ ಗ್ರಂಥಾಲಯ, ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆ, ಮಿಥಿಕ್ ಸೊಸೈಟಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತು. ಅನೇಕ ಮಠಗಳು– ಶೃಂಗೇರಿ ಮಠ, ಪರಕಾಲ ಮಠ (ಮೈಸೂರು), ಸಿದ್ಧಗಂಗಾ ಮಠ (ತುಮಕೂರು), ಕೂಡ್ಲಿಗಿ ಮಠ, ಮುರುಘರಾಜೇಂದ್ರ ಮಠ (ಚಿತ್ರದುರ್ಗ) ಮುಂತಾದವು ಮತ್ತು ಚರ್ಚುಗಳಲ್ಲಿ ಕರ್ನಾಟಕದ ಇತಿಹಾಸ ಮತ್ತು ಸಾಂಸ್ಕೃತಿಕ ಬೆಳವಣಿಗೆಯನ್ನು ಚಿತ್ರಿಸಲು ನೆರವಾಗುವಂತಹ ದಾಖಲೆಗಳ ಭಂಡಾರಗಳು ಇವೆ. ಇತಿಹಾಸ ಸಂಶೋಧಕರಿಗೆ ತಿಳಿದಿರುವ ಮತ್ತು ತಿಳಿದಿಲ್ಲದ ಇನ್ನೂ ಹಲವಾರು ಅಮೂಲ್ಯ ಸಂಗ್ರಹಗಳು ಉಂಟೆಂದು ನಾವು ಭಾವಿಸುವುದರಲ್ಲಿ ತಪ್ಪಿಲ್ಲ.

ಈ ರಾಶಿ ರಾಶಿ ಅಭಿಲೇಖಗಳನ್ನು ಅಭ್ಯಾಸ ಮಾಡಲು ಇರುವ ಅನುಕೂಲಗಳೇನು ? ಸಾಮಾನ್ಯವಾಗಿ ಪ್ರತಿಯೊಂದು ಅಭಿಲೇಖಾಗಾರದಲ್ಲಿಯೂ ಸಂಶೋಧಕರಿಗೆ ನೆರವಾಗುವ ಅನೇಕ ರೀತಿಯ ಪರಾಮರ್ಶನ ಮಾಧ್ಯಮ(Reference Media)ಗಳು ಲಭ್ಯವಿರುತ್ತವೆ: ಅಭಿಲೇಖ ಮಾರ್ಗದರ್ಶಿ (Guide), ವಿಷಯ ಪಟ್ಟಿ (Subject List), ವಿವರಣಾತ್ಮಕ ಪಟ್ಟಿ (Discript-ive List), ವಿಷಯಸೂಚಿ (Index), ಕೈಪಿಡಿ (Hand Book) ಮತ್ತು ಕ್ಯಾಲೆಂಡರ್ (Calendar). ಅಭಿಲೇಖಾಗಾರಗಳು ಪ್ರಕಟಿಸುವ ನಿಯತಕಾಲಿಕೆಗಳು ಅಲ್ಲಿರುವ ದಾಖಲೆಗಳ ಸಂಗ್ರಹ ಮತ್ತು ಮಹತ್ವವನ್ನು ವಿವರಿಸುವ ಜೊತೆಗೆ ಹೊಸ ಸಂಗ್ರಹಗಳನ್ನೂ ಪರಿಚಯಿಸುವ ಕಾರ್ಯವನ್ನು ಮಾಡುತ್ತವೆ. ಕರ್ನಾಟಕ ರಾಜ್ಯ ಅಭಿಲೇಖಾಗಾರ ಹೊರಡಿಸುತ್ತಿರುವ 'ಪತ್ರಾಗಾರ ವಾರ್ತಾ' ಇದಕ್ಕೊಂದು ಉದಾಹರಣೆ. ಭಾರತದ ರಾಷ್ಟ್ರೀಯ ಅಭಿಲೇಖಾಗಾರವು 'ಇಂಡಿಯನ್ ಆರ್ಕೀವ್ಸ್' ಎಂಬ ನಿಯತಕಾಲಿಕೆಯನ್ನು ಪ್ರಕಟಿಸುತ್ತದೆಯಲ್ಲದೆ ಪ್ರತಿವರ್ಷವೂ 'ನ್ಯಾಷನಲ್ ರಿಜಿಸ್ಟರ್ ಆಫ್ ಪ್ರೈವೇಟ್ ರೆಕಾರ್ಡ್ಸ್' ಎಂಬ ಪ್ರಕಟಣೆಯನ್ನು ಪರಿಷ್ಕರಿಸುವ ಕಾರ್ಯವನ್ನು ಮಾಡುತ್ತಿದೆ. ಅಭಿಲೇಖಾಗಾರಗಳು ಸಂಶೋಧಕ ವಿದ್ವಾಂಸರ ಅನುಕೂಲಕ್ಕೆಂದು ಝೆರಾಕ್ಸ್, ಫೋಟೋ ಕಾಪಿಯಿಂಗ್, ಮೈಕ್ರೋಫಿಲ್ಮಿಂಗ್ ಮುಂತಾದ ಪ್ರತಿ ತೆಗೆದು ಒದಗಿಸುವ ಸೌಲಭ್ಯಗಳನ್ನು ಸ್ಥಾಪಿಸಿವೆ. ಇವುಗಳಿಗೆ ದುಬಾರಿ ಶುಲ್ಕ ವಿಧಿಸುತ್ತಿಲ್ಲ ಮತ್ತು ಅನಗತ್ಯ ವಿಳಂಬ ಮಾಡುತ್ತಿಲ್ಲ ಎಂದು ಹೇಳಬಹುದು. ಸಂಶೋಧನೆಗೆ ಅನುಮತಿ

ನೀಡುವ ನಿಯಮಾವಳಿಗಳು ಸರಳಗೊಳಿಸಲ್ಪಟ್ಟಿವೆ. ವಿದ್ವಾಂಸರಿಗೆ ಸಾಮಾನ್ಯವಾಗಿ ಪ್ರತ್ಯೇಕ ಪರಾಮರ್ಶನ ಕೊಠಡಿಗಳು (Reference Halls), ಉತ್ತಮ ಪೀಠೋಪಕರಣಗಳು, ಇತ್ಯಾದಿ ಸೌಲಭ್ಯಗಳನ್ನು ಯಾವುದೇ ಶುಲ್ಕವಿಲ್ಲದೆ ಒದಗಿಸಲಾಗುತ್ತಿದೆ. ದಾಖಲೆಗಳ ಪ್ರತಿಗಳನ್ನು ಒದಗಿಸುವಲ್ಲಿ ಅರ್ಹ ಸಂದರ್ಭಗಳಲ್ಲಿ ರಿಯಾಯಿತಿ ನೀಡುವ ವ್ಯವಸ್ಥೆಯೂ ಇದೆ.

ಇಷ್ಟೆಲ್ಲಾ ಸೌಲಭ್ಯಗಳಿದ್ದರೂ ಅಭಿಲೇಖಾಗಾರಗಳ ಉಪಯೋಗ ಪಡೆದುಕೊಳ್ಳಲು ಬರುವ ವಿದ್ವಾಂಸರ ಸಂಖ್ಯೆ ಅತ್ಯಲ್ಪ. ಕರ್ನಾಟಕದಮಟ್ಟಿಗಂತೂ ಇದು ನಿರಾಶೆಯುಂಟುಮಾಡುವಷ್ಟು ಕಡಿಮೆ. ಇದಕ್ಕೆ ಹಲವಾರು ಕಾರಣಗಳಿವೆ : ೧. ಪುರಾತತ್ವ ಮೂಲ ಸಾಮಗ್ರಿಗಳ ಬಗೆಗೆ ಶತಮಾನಕ್ಕೂ ಹೆಚ್ಚು ಕಾಲದಿಂದ ಬೆಳೆದು ಬಂದಿರುವ ವಿಶ್ವಾಸ, ಅವಲಂಬನೆ ಮತ್ತು ಪಕ್ಷಪಾತ; ೨. ಅಭಿಲೇಖಾಗಾರಗಳಲ್ಲಿರುವ ಮೂಲ ಸಾಮಗ್ರಿಗಳ ಬಗೆಗಿರುವ ಅಜ್ಞಾನ (ಮತ್ತು, ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಅದರ ನವೀನತೆ); ೩. ಪ್ರತಿ ಮಾಡಿಸಿಕೊಳ್ಳಲು ತಗಲುವ ವೆಚ್ಚ; ೪. ಪ್ರಯಾಣವೆಚ್ಚ, ಹೆಚ್ಚಿನ ಶ್ರಮ ಮತ್ತು ಸಮಯಾಭಾವ, ಮತ್ತು ೫. ಮರಾಠಿ, ಕನ್ನಡ, ಉರ್ದು ಮತ್ತು ಪರ್ಶಿಯನ್ ಭಾಷೆಗಳ(ಮುಖ್ಯವಾಗಿ ಈ ಭಾಷೆಗಳ ಹಳೇ ಅಥವಾ ಮೋಡಿ ಲಿಪಿ)ನ್ನು ಓದಲು ಇರಬೇಕಾದ ವಿಶೇಷ ಜ್ಞಾನ ಮತ್ತು ಪರಿಶ್ರಮದ ಕೊರತೆ. ಸೂಕ್ಷ್ಮವಾಗಿ ಹೇಳಬೇಕೆಂದರೆ, ಪುರಾತತ್ವ ಮೂಲ ಸಾಮಗ್ರಿಗಳ ಕನಿಷ್ಟ ಗಾತ್ರವು ಸಂಶೋಧಕರನ್ನು ಆಕರ್ಷಿಸಿದರೆ, ಅಭಿಲೇಖ ಮೂಲ ಸಾಮಗ್ರಿಗಳ ಬೃಹತ್ ಗಾತ್ರವು ಅವರನ್ನು ವಿಕರ್ಷಿಸುತ್ತದೆ. ಈ ಸ್ಥಿತಿ ಭವಿಷ್ಯದಲ್ಲಿ ಬದಲಾಗುವುದು ನಿಶ್ಚಿತ.

# ಕನ್ನಡಿಗ: ಒಂದು ಐತಿಹಾಸಿಕ ವ್ಯಕ್ತಿಚಿತ್ರ

ಡಾ|| ಕೆ. ವಿ. ರಮೇಶ್

ನಾನು ನನ್ನ ಪ್ರಬಂಧವನ್ನು ಮಂಡಿಸುವುದಕ್ಕೆ ಪೂರ್ವಭಾವಿಯಾಗಿ ಕೆಲವು ಮಾತುಗಳನ್ನು ಹೇಳಲೇಬೇಕು. ಕರ್ನಾಟಕ ಇತಿಹಾಸ ಅಕಾದೆಮಿಯ ಮೊದಲ ವಾರ್ಷಿಕ ಸಮ್ಮೇಳನದ ಕೊನೆಯ ದಿನವಾದ ಇಂದು ನನಗೆ ವಿಶೇಷ ಉಪನ್ಯಾಸ ನೀಡುವ ಗೌರವ ತೋರಿದ್ದಕ್ಕಾಗಿ ನಾನು ಅಕಾದೆಮಿಯ ಅಧಿಕಾರೀ ವರ್ಗದವರಿಗೆ ಚಿರಋಣಿ. ನಾನು ಆರಿಸಿಕೊಂಡಿರುವ ವಿಷಯುವು ಕ್ಲಿಷ್ಟವಾದದ್ದು. ಇತಿಹಾಸದಲ್ಲಿ ನಡೆದು ಹೋದ ಕೆಲವು ವಿವಾದಾಸ್ಪದ ಘಟನೆಗಳ, ಬೆಳವಣಿಗೆಗಳ ಬಗ್ಗೆ ಮಾತನಾಡುವಾಗ, ನಾನು ಕನ್ನಡಿಗನನ್ನೆ ನಿಂದಿಸಿದಂತೆ ಭಾಸವಾಗಬಹುದು; ಅಥವಾ ನೆರೆಹೊರೆಯ ಮತ್ತು ದೂರದ ಇತರ ಭಾರತೀಯ ಜನಾಂಗದವರನ್ನು ಖಂಡಿಸಿದಂತೆ ಭಾಸವಾಗಬಹುದು; ಇತಿ ನಾನು ಇತಿಹಾಸಕಾರನಾಗಿ, ನಿರ್ಲಿಪ್ತನಾಗಿ ಮಾಡುವ ನಿಂದನೆ, ಖಂಡನೆ. ನಿಮ್ಮೆದುರಿಗಿರುವ ರಮೇಶನೆಂಬ ವ್ಯಕ್ತಿಯು ಕನ್ನಡಿಗನೂ ಹೌದು, ಕಟ್ಟಾ ಭಾರತೀಯನೂ ಹೌದು. ಅದನ್ನು ದೃಢೀಕರಿಸುವ ರೀತ್ಯಾ ಪ್ರಬಂಧವನ್ನು ಓದುವ ಮೊದಲೇ ಒಂದು ಬಾರಿ 'ಜೈಹಿಂದ್' ಎಂದು ಘೋಷಿಸಿ ಬಿಡುತ್ತೇನೆ !

ಕೆಲವು ದಿನಗಳ ಹಿಂದೆ ಗೆಳೆಯ ಡಾ|| ಸೂರ್ಯನಾಥ ಕಾಮತರು ನಾನು ಈ ವಿಶೇಷ ಉಪನ್ಯಾಸವನ್ನು ಮಾಡಬೇಕೆಂದು ಆದೇಶ ನೀಡಿ, ಮರುದಿನವೇ ನಾನು ಉಪನ್ಯಾಸದ ಶೀರ್ಷಿಕೆಯನ್ನು ತಿಳಿಸಬೇಕೆಂದೂ ಒತ್ತಾಯಿಸಿದರು. ಒಂದಿಷ್ಟು ಯೋಚಿಸಿದ ನಂತರ ನಾನೂ ಮರುದಿನ ಬೆಳಗ್ಗೆ ಅವರನ್ನು ದೂರವಾಣಿಯ ಮೂಲಕ ಸಂಪರ್ಕಿಸಿ, 'ಕನ್ನಡಿಗ– ಒಂದು ಐತಿಹಾಸಿಕ ವ್ಯಕ್ತಿಚಿತ್ರ' ಎಂಬ ವಿಷಯವಾಗಿ ಒಂದು ವಿಶೇಷ ಪ್ರಬಂಧವನ್ನು ಮಂಡಿಸುವುದಾಗಿ ತಿಳಿಸಿದೆ. ಆದರೆ ಈ ಕೆಲಸಕ್ಕೆ ಕೈ ಹಾಕಿದೊಡನೆಯೇ ನೂರಾರು ಸಮಸ್ಯೆಗಳು ನನ್ನೆದುರು ತಾಂಡವ ನೃತ್ಯವಾಡತೊಡಗಿದವು. ಕನ್ನಡಿಗನು ತನ್ನ ವ್ಯಕ್ತಿತ್ವವನ್ನು ಉಳಿಸಿಕೊಂಡಿರುವನೇ ಎಂಬ ಮೂಲಭೂತ ಸಮಸ್ಯೆಯಂತೂ ಭೂತಾಕಾರವನ್ನೆ ತಳೆಯಿತು. ವಿವಾದಕ್ಕೆಡೆಗೊಡದಂತೆ ಈ ವಿಷಯವಾಗಿ ಏನನ್ನೂ ಹೇಳುವುದೂ ಅಸಾಧ್ಯವೆನಿಸಿತು. ಇನ್ನೇನು ಕಾಮತರಿಗೆ ಕೈ ಕೊಟ್ಟು, ಭಾನುವಾರವಿಡೀ ಮನೆಯಲ್ಲೇ ಕುಳಿತು ದೂರದರ್ಶನದ ಎಡೆಬಿಡದ ಹಿಂದಿ ಕಾರ್ಯಕ್ರಮಗಳನ್ನೇ ದಿನವಿಡೀ ನೋಡುತ್ತ ಕಾಲ ಕಳೆಯುವುದೇ ಲೇಸು ಎಂದು ತೀರ್ಮಾನಿಸುವಷ್ಟರಲ್ಲಿ ಆಂಗ್ಲ ಇತಿಹಾಸ ವಿಮರ್ಶಕನೊಬ್ಬನ ಹೇಳಿಕೆಯೊಂದು ನೆನಪಿಗೆ ಬಂತು. ಅದೇನೆಂದರೆ—"ಇತಿಹಾಸಕಾರನು ದೇವರಿಗಿಂತಲೂ ದೊಡ್ಡವನು. ಏಕೆಂದರೆ ಸೃಷ್ಟಾರನಾದ ದೇವರೂ ಕೂಡ ತಾನೇ ಸೃಷ್ಟಿಸಿದ ಗತಕಾಲವನ್ನು ಬದಲಾಯಿಸಲಾರನು. ಆದರೆ ಇತಿಹಾಸಕಾರ ಬದಲಾಯಿಸಬಲ್ಲ." ಈ ಹೇಳಿಕೆಯು ನೆನಪಾದ ಕೂಡಲೇ ನನಗೆ ಎಲ್ಲೋ ಓಡಿ ಹೋಗಿರುವುದೆಂದೆನಿಸಿದ ನನ್ನ ಆತ್ಮವಿಶ್ವಾಸವು ನನ್ನಲ್ಲೇ ಇದೆ ಎಂಬ ಅರಿವಾಗಿ, ಸರಸರನೆ ಪ್ರಬಂಧವನ್ನು ಬರೆಯತೊಡಗಿದೆ. ಅದೇ ಪ್ರಬಂಧವನ್ನು ನಾನು ಓದಿ, ಕೇಳಲಿರುವ ನಿಮ್ಮೆಲ್ಲರಿಗೂ ನನ್ನ ಹೃತ್ಪೂರ್ವಕ ಸಂತಾಪವನ್ನು ಅರ್ಪಿಸುವುದು ನನ್ನ ಕರ್ತವ್ಯ.

ಇತಿಹಾಸವೆಂಬ ಶಬ್ದದ ವ್ಯುತ್ಪತ್ತಿ ಮತ್ತು ಅರ್ಥ ಎಂಬ ಪ್ರಶ್ನೆಗೆ ನಾವೆಲ್ಲರೂ ಸರ್ವಸಾಮಾನ್ಯವಾಗಿ 'ಇತಿ–ಹ–ಆಸ' : 'ಇದು ಹೀಗಿತ್ತು' ಎಂದು ಸಮರ್ಥನೆ ನೀಡಿ ಕೈತೊಳೆದುಕೊಂಡು ಬಿಡುತ್ತೇವೆ. ಐತಿಹಾಸಿಕ ಪುರಾವೆಗಳ ಸಹಾಯ

ಪಡೆದು ಗತಕಾಲದ ಘಟನೆಗಳನ್ನು ಬಿಡಿಬಿಡಿಯಾಗಿ ಪರಸ್ಪರ ಸಂಬಂಧವಿಲ್ಲದಂತೆ ವಿವರಿಸಿ, ಇದು ಹೀಗಿತ್ತು ಎನ್ನುವುದು ಇತಿಹಾಸವಾಗಲಾರದು. ನನಗನಿಸುವಂತೆ, ನಮ್ಮ ಸಮಾಜದಲ್ಲಿ ಇಂದು ನಡೆಯುವ ಯಾವುದೇ ಮಹತ್ವದ ಘಟನೆಯು ನಮ್ಮ ಗಮನವನ್ನು ಸೆಳೆದಾಗ, ಅದಕ್ಕೆ ಕಾರಣನಾದ ಮಾನವನಿಗೆ—ಅವನು ರಾಷ್ಟ್ರಮಟ್ಟದಲ್ಲಿ ಭಾರತೀಯನೇ ಆಗಿರಲಿ, ಪ್ರಾಂತೀಯ ಮಟ್ಟದಲ್ಲಿ ಕನ್ನಡಿಗನೇ ಆಗಿರಲಿ–ಆ ಘಟನೆಯನ್ನು ತಂದೊಡ್ಡುವಲ್ಲಿಯ ಅವನ ವಿಶಾಲ ಅಥವಾ ಸಂಕುಚಿತ ಮನೋಭಾವ, ಒಳ್ಳೆಯ ಅಥವಾ ಕೆಟ್ಟ ಧೋರಣೆ, ಶಕ್ತಿ ಅಥವಾ ದೌರ್ಬಲ್ಯ ಯಾವಾಗಿನಿಂದ ಎಲ್ಲಿಂದ ಬಂದವು ಎಂಬುದನ್ನು ಸಾಧಾರಣವಾಗಿ ಪರಿಶೀಲಿಸಿ, ನದೀ ಮೂಲವನ್ನು ಹುಡುಕುವ ರೀತಿ, ಹೆಜ್ಜೆ ಹೆಜ್ಜೆ ಹಿಂದಿಟ್ಟು ಎಳೆಬಿಡದ ವಿವರಣೆಯನ್ನು ನೀಡುವುದೇ ಇತಿಹಾಸ. ಇದೇ ಕ್ರಮವನ್ನು ಅನುಸರಿಸಿ ನಾನು ಇಲ್ಲಿ ಕನ್ನಡಿಗನ ನುಡಿ ಮತ್ತು ಸಾಮಾಜಿಕ-ರಾಜಕೀಯ-ಧಾರ್ಮಿಕ ಜೀವನಕ್ಕೆ ಸಂಬಂಧಿಸಿದಂತೆ ಅವನ ಐತಿಹಾಸಿಕ ವ್ಯಕ್ತಿಚಿತ್ರವನ್ನು ಬಿಡಿಸುವ ಪ್ರಯತ್ನ ಮಾಡುವವನಿದ್ದೇನೆ.

ಇಂದಿಗೆ ಸುಮಾರು ಎರಡು ಸಾವಿರದ ಮುನ್ನೂರು ವರ್ಷಗಳಷ್ಟು ಹಿಂದಿನ ಮಾತು. ಉತ್ತರಾಪಥದಲ್ಲಿ ಹನ್ನೆರಡು ವರ್ಷಗಳ ಕಾಲ ವ್ಯಾಪಕವಾಗಿ ಹರಡಲಿದ್ದ ವಿಷಮ ಪರಿಸ್ಥಿತಿಯಿಂದ ಪಾರಾಗುವ ಸಲುವಾಗಿ ಅನೇಕಾನೇಕ ಮುನಿ ಶಿಷ್ಯರುಗಳಿಂದ ಕೂಡಿದ ಜೈನರ ದೊಡ್ಡ ತಂಡವೊಂದು ದಕ್ಷಿಣಾಪಥಕ್ಕೆ ವಲಸೆ ಹೊರಟು, ಕರ್ನಾಟಕ ಪ್ರಾಂತವನ್ನು ಪ್ರವೇಶಿಸಿತು. ಕನ್ನಡದ ನೆಲದಲ್ಲಿ ಆ ತಂಡವು ಏನನ್ನು ಕಂಡಿರಬಹುದು ? ಎಲ್ಲೆಲ್ಲೂ ದಟ್ಟವಾಗಿ ಬೆಳೆದಿದ್ದ ಕಾಡುಗಳು, ಅವುಗಳ ಮಧ್ಯೆ, ಅಲ್ಲಲ್ಲಿ, ತೆರವಾದ ಭೂಪ್ರದೇಶಗಳಲ್ಲಿ ಸುಸಮೃದ್ಧವಾದ ಸ್ವತಂತ್ರ ಜನಪದಗಳು. ಆ ಜನಪದಗಳ ಮೂಲನಿವಾಸಿಯಾದ ಬುಡಕಟ್ಟಿನ ಕನ್ನಡಿಗ. ಕನ್ನಡಿಗ ಏಕೆಂದರೆ, ಅವನ ಆಡು ಮಾತು–ಆ ವೇಳೆಗೆ ಮೂಲ ದ್ರಾವಿಡ ಭಾಷೆಯಿಂದ ಹೆಚ್ಚು ದೂರ ಸರಿದಿರದ ಕನ್ನಡನುಡಿ. ಆದರೆ ಅಂದಿನ ಕನ್ನಡ ಬರಿಯ ಆಡುಮಾತಷ್ಟೆ. ಬರೆಯಲು ಯಾವ ಲಿಪಿಯೂ ಬಳಕೆಗೆ ಬಂದಿರಲಿಲ್ಲ. ಅವನ ದೈನಂದಿನ ಜೀವನ ಅತ್ಯಂತ ಸರಳವಾದದ್ದು. ಫಲವತ್ತಾದ ಭೂಮಿಯಲ್ಲಿ ಬೇಕಾದಷ್ಟು ಸಸ್ಯೋತ್ಪತ್ತಿ. ಬೇಟೆಯಾಡಲು ಕಾಡುಗಳಲ್ಲಿ ನಾನಾ ಜಾತಿಯ ವನ್ಯಮೃಗಗಳು. ದನ ಕರುಗಳೇ ಅವನ ಮುಖ್ಯ ಸಂಪತ್ತು. ಹಣಕಾಸಿನ ಬದಲಾವಣೆ ಇದ್ದಂತಿಲ್ಲ. ವಸ್ತು ವಿನಿಮಯ ಪದ್ಧತಿಯೇ ರೂಢಿ ಯಲ್ಲಿತ್ತು. ರಾಜಕೀಯ ಕ್ಷೇತ್ರದಲ್ಲೂ ಅಂದಿನ ಕನ್ನಡಿಗ ಕೂಟವಾದಿಯಲ್ಲ. ಅವನ ಸಾಮಾಜಿಕ ಪರಿಸ್ಥಿತಿಗೆ ಅನುಗುಣ ವಾಗಿ ಸ್ವಯಂಸಿದ್ಧವಾದ ರಾಜಕೀಯ ಆಡಳಿತ ಪದ್ಧತಿಯನ್ನೆ ಅವನು ಅಳವಡಿಸಿಕೊಂಡಿದ್ದ. ಮುಂದಿನ ಶತಮಾನ ಗಳಲ್ಲಿ ಅವನು ಪುರೋಗಾಮಿಯಾಗಿ ಜಾರಿಗೆ ತಂದ ಜಟಿಲವಾದ, ತೊಡಕಿನ, ಅಧಿಕಾರಶಾಹೀ ಆಡಳಿತ ಪದ್ಧತಿಯ ಯಾವ ಕುರುಹುಗಳೂ ಅಂದು ಕಂಡುಬಂದಿರಲಾರವು. ಅವನ ಧಾರ್ಮಿಕ ಜೀವನವೂ ಅಷ್ಟೇ ಸರಳವಾಗಿತ್ತು. ಅವನು 'ಕಡೆಯದ, ಕಂಡರಿಸದ, ಬೇರ್ಪಡಿಸದ, ಕಮ್ಮಯಿಸದ ಅಕೃತ್ರಿಮ ರೂಪ'ದ ಕಲ್ಲುಗಳನ್ನೂ ನೈಸರ್ಗಿಕ ಗುಹೆಗಳಲ್ಲೊ, ಮರದಡಿಯಲ್ಲೊ ನೆಟ್ಟು ಭಯ, ಭಕ್ತಿ, ಶ್ರದ್ಧೆಯಿಂದ ಆರಾಧಿಸುತ್ತಿದ್ದನು. ಒಟ್ಟಿನಲ್ಲಿ ಅವನು ಸರಳಗನ್ನಡಿಗ, ಸಹಜ ಕನ್ನಡಿಗ.

ಇತಿಹಾಸಕಾರನ ದೃಷ್ಟಿಯಿಂದ ನೋಡಿದಾಗ, ನಮ್ಮ ಕಣ್ಣ ಮುಂದೆ ಬಂದು ನಿಲ್ಲುವ ಇಂದಿನ ಕನ್ನಡಿಗನ ವ್ಯಕ್ತಿ ಚಿತ್ರವೇ ಬೇರೆ. ಇಂದಿಗೂ ನಾವು ಅವನನ್ನು ಕನ್ನಡಿಗನೆಂದು ಗುರುತಿಸುವುದು ಅವನಾಡುವ ಕನ್ನಡ ನುಡಿಯಿಂದಲೇ. ಆದರೆ ಅವನ ನುಡಿಯಲ್ಲಿ ವ್ಯಾಕರಣವಷ್ಟೇ ಕನ್ನಡ. ತಮಿಳು ಭಾಷೆಯೊಂದಿಗೆ ಹೋಲಿಸಿದಾಗ ಅವನ ನುಡಿಯ ದ್ರಾವಿಡ ಪದಸಂಪತ್ತು ಹೆಚ್ಚು ಕಡಿಮೆ ಪೂರ್ಣವಾಗಿಯೆ ನಷ್ಟವಾಗಿ ಹೋಗಿದೆ. ಅಳಿದುಳಿದ ತಾಯ್ನುಡಿಯನ್ನು ಉಳಿಸಿ ಬೆಳೆಸಿಕೊಂಡು ಹೋಗುವ ಹಂಬಲ ಅವನಿಗಿದೆ. ಆದರೆ ಅದಕ್ಕೆ ಬೇಕೆನಿಸುವಷ್ಟು ಬೆಂಬಲ ಅವನಿಗಿಲ್ಲ, ಅವನಲ್ಲಿಲ್ಲ.

ಹೆಚ್ಚು ಕಡಿಮೆ ಹದಿನೈದು ಶತಮಾನಗಳ ಅವಧಿಯಲ್ಲಿ ಅವನು ತನ್ನ ನುಡಿಗೆಂದು ಬ್ರಾಹ್ಮೀ ಮೂಲದ ಒಂದು ಲಿಪಿಯನ್ನೂ ಬೆಳೆಸಿಕೊಂಡು ಬಂದಿದ್ದು, ಅದು ಇಂದು ನೋಡಲು ಅತ್ಯಂತ ಸುಂದರವಾದ ರೂಪ ತಾಳಿ ನಿಂತಿದೆ. ಆ ಲಿಪಿಯನ್ನು ಅವನು ಬೆಳೆಸಿಕೊಂಡು ಬಂದಿರುವ ದಾರಿಯುದ್ದಕ್ಕೂ ನಾವು ಕನ್ನಡತನವನ್ನೂ ಅವನ ಜಾಣ್ಮೆಯನ್ನೂ ಸ್ವತಂತ್ರ ಮನೋಭಾವವನ್ನೂ ಕಲಾಪ್ರೇಮವನ್ನೂ ಪ್ರಾಂತೀಯ ಪ್ರತಿಭೆಯನ್ನೂ ಗುರುತಿಸಬಹುದಾಗಿದೆ.

ಇಂದಿನ ಕನ್ನಡಿಗನ ಸಾಮಾಜಿಕ ಜೀವನವು ಅಲ್ಲೋಲ ಕಲ್ಲೋಲವಾಗಿದೆ. ರಾಷ್ಟ್ರೀಕರಣದ ಉನ್ನತ ಧ್ಯೇಯವನ್ನು ಎತ್ತಿ ಹಿಡಿಯುವ ಸದುದ್ದೇಶದಿಂದ ಅವನು ತಾನೇ ತಾನಾಗಿ, ಅಷ್ಟೇ ಅಲ್ಲದೆ, ಐತಿಹಾಸಿಕ ಒತ್ತಡಗಳಿಗೆ ಬಲಿಯಾಗಿ, ತನ್ನ ಸ್ವಾತಂತ್ರ್ಯವನ್ನು ಪರಿತ್ಯಜಿಸಿದ್ದಾನೆ. ಆಧುನಿಕದಲ್ಲಿ ಕಾಲಿಟ್ಟು, ಪ್ರಗತಿಶೀಲ, ಆದರೆ ಬಹುಶಃ ವಿನಾಶಕಾರೀ ವೈಜ್ಞಾನಿಕ ಯುಗದ ಸುಖ ಸೌಕರ್ಯಗಳನ್ನು ಅನುಭವಿಸಿ ಅನುಭವಿಸಿ ಅನುಕರಣಶೀಲನಾಗಿದ್ದಾನೆ. ಅನುಕರಣಶೀಲನೇಕೆಂದರೆ ಈ ದೆಸೆಯಲ್ಲಿ ಅವನ ಕೊಡುಗೆ ಕೇವಲ ಎಳ್ಳಷ್ಟು ಮಾತ್ರ.

ಅವನ ರಾಜಕೀಯ ಜೀವನದಲ್ಲೂ ಇಂತಹುದೇ ದುಃಸ್ಥಿತಿ. ಶತಮಾನಗಳ ಕಾಲ ಅವನು ಕನ್ನಡದ ನೆಲವನ್ನು ಉತ್ತರಾಪಥದಿಂದ ಪ್ರಭಾವಿತವಾದ, ಆದರೂ ತನ್ನ ಪರಿಸರಕ್ಕೆ ಸರಿಯೆನಿಸಿದ, ರಾಜಕೀಯ ಮತ್ತು ಆಡಳಿತ ವಿಧಿವಿಧಾನಗಳ ಪ್ರಯೋಗಶಾಲೆಯನ್ನಾಗಿ ಬೆಳೆಸಿಕೊಂಡು ಬಂದಿದ್ದ. ಆದರೆ ಇಂದಿನ ಕನ್ನಡನಾಡು ರಾಷ್ಟ್ರಮಟ್ಟದ ಮತ್ತು ಬಹುಮಟ್ಟಿಗೆ ಹೊರಗಿನಿಂದ ಆಮದು ಮಾಡಿಕೊಂಡ ರಾಜಕೀಯ ಮತ್ತು ಆಡಳಿತ ಪದ್ಧತಿಗಳ ಬೃಹತ್ಪ್ರಯೋಗಶಾಲೆಯ ಒಂದು ಅಂಗವಾಗಿಯಷ್ಟೆ ಪರಿಣಮಿಸಿದೆ. ಸ್ವಾರ್ಥಿಗಳು ಆಡುತ್ತಿರುವ ಪಕ್ಷಾಂತರದ ನಾಟಕವನ್ನು ನೋಡುತ್ತ, ಅದು ತನಗೆ ಹಾನಿಕಾರಕವೆಂದು ತಿಳಿದು ತೆರೆಯನ್ನೆಳೆಯಲಾಗದೆ ಸ್ತಬ್ಧನಾಗಿ ನಿಂತಿದ್ದಾನೆ ಇಂದಿನ ಕನ್ನಡಿಗ.

ಧಾರ್ಮಿಕ ಜೀವನದಲ್ಲೂ ಅವನು ಸಾಕಷ್ಟು ಮನಃಶಾಂತಿಯನ್ನು ಕಳೆದುಕೊಂಡಿದ್ದಾನೆ. ಹಿಂದಿನ ಶತಮಾನಗಳಲ್ಲಿ ಕರ್ನಾಟಕದಲ್ಲೆ ಹುಟ್ಟಿಕೊಂಡ ಮತ್ತು ಹೊರಗಿನಿಂದ ಇಲ್ಲಿಗೆ ಬಂದ ಧಾರ್ಮಿಕ ಪಂಥಗಳೂ ಪಂಗಡಗಳೂ ಇಂದು ಹೆಸರಿನಿಂದ ಮಾತ್ರ ಉಳಿದಿದ್ದು, ಜಾತೀಯತೆಯ ಅವನತಿಯ ರೂಪತಾಳಿ ಸ್ವಾರ್ಥಿಗಳ ಕೈಗೊಂಬೆಗಳಾಗಿರುವುದನ್ನು ನೋಡುತ್ತ ಕಿಂಕರ್ತವ್ಯತಾಮೂಢನಾಗಿ ನಿಂತಿದ್ದಾನೆ. ತಡೆಗಟ್ಟಲಾರದ ಈ ಐತಿಹಾಸಿಕ ಅವನತಿಯ ಹಿನ್ನೆಲೆಯಲ್ಲಿ, ತನ್ನ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಗುರುತಿಸಿ, ಕನ್ನಡ ನೆಲದಲ್ಲೆ ಹುಟ್ಟಿ ಬೆಳೆದು ಇಳಿಮುಖವಾಗಿರುವ ಜಾನಪದ ಕಲೆಗಳನ್ನು ಪುನರುಜ್ಜೀವನಗೊಳಿಸಿ, ಪೋಷಿಸಿ, ರಾಷ್ಟ್ರೀಯ ರಂಗದಲ್ಲಿ ತನ್ನ ಕನ್ನಡತನದ ಅಂತಸ್ತನ್ನು ಎತ್ತಿ ತೋರಿಸುವ ಪ್ರಯತ್ನ ನಡೆಸಿದ್ದಾನೆ. ಓಬತ, ವೃಥಾ ಪ್ರಯಾಸ !

ನಿಜ ಸಂಗತಿಯೆಂದರೆ, ಇಂದಿನ ಕನ್ನಡಿಗನು ಇತಿಹಾಸವೆಂಬ ಕನ್ನಡಿಯ ಎದುರು ನಿಂತು ನೋಡಿದನೇ ಆದರೆ, ಎರಡು ಸಾವಿರದ ಮುನ್ನೂರು ವರ್ಷಗಳ ಹಿಂದಿನ ತನ್ನನ್ನು ತಾನೇ ಗುರುತಿಸಲಾರ. ಇದಕ್ಕೆ ಕಾರಣ ಅವನ ಮೃದುಸ್ವಭಾವದ ದೌರ್ಬಲ್ಯ ಒಂದೇ ಅಲ್ಲ. ಅವನ ಇತಿಹಾಸದುದ್ದಕ್ಕೂ ಬೇರೆ ಬೇರೆ ಹಂತಗಳಲ್ಲಿ ಒಂದರ ಮೇಲೊಂದಾಗಿ ಹುಟ್ಟಿ ಅವನ ಜೀವನದ ಎಲ್ಲ ರಂಗಗಳನ್ನೂ ಆವರಿಸಿದ ಐತಿಹಾಸಿಕ ಒತ್ತಡಗಳು ಈ ದೆಸೆಯಲ್ಲಿ ಅನಿವಾರ್ಯ ಪ್ರಭಾವ ಬೀರಿವೆ. ಅವುಗಳಲ್ಲಿ ಮುಖ್ಯವಾದುವೆಂದರೆ, ಐತಿಹಾಸಿಕ ಕಲ್ಪದ ಮೊದಲ ಶತಮಾನಗಳಲ್ಲಿ ಉತ್ತರದಿಂದ ದಕ್ಷಿಣಕ್ಕೆ ಬೀಸಿದ ಪ್ರಾಕೃತ ಸಂಸ್ಕೃತಿಯ ಗಾಳಿ; ಆ ನಂತರದ ಅಭಿಜಾತ ಸಂಸ್ಕೃತ ಸಂಸ್ಕೃತಿಯ ಆಕ್ರಮಣ; ಮಧ್ಯಯುಗದಲ್ಲಿ ಇಸ್ಲಾಂಧರ್ಮ ಹಾಗೂ ಅದರ ಭಾಷೆಯ ಆಗಮನ; ಈಚೆಗಿನ ಶತಮಾನಗಳಲ್ಲಿ ಪಾಶ್ಚಾತ್ಯ ಸಂಸ್ಕೃತಿಯ, ಭಾಷೆಗಳ ಆಕರ್ಷಣೆ. ಇಂತಹ ಅನಿವಾರ್ಯ ಒತ್ತಡಗಳ ಪ್ರಭಾವದಿಂದ ಅವನ ವ್ಯಕ್ತಿತ್ವದ ಅಂತರ್ಮೌಲ್ಯಗಳು ಪದೇ ಪದೇ ಬದಲಾಗುತ್ತ ಬಂದಿದ್ದು, 'ಇವನ ವ್ಯಕ್ತಿತ್ವವು ಇಂತಹುದೇ' ಎಂದು ಗುರುತಿಸಲಾಗದ ಪ್ರಶ್ನಾತ್ಮಕ ವ್ಯಕ್ತಿಯಾಗಿ ಉಳಿದಿರುವನು ಇಂದಿನ ಕನ್ನಡಿಗ.

ಈ ಹೇಳಿಕೆಯನ್ನು ಸಮರ್ಥಿಸಲು ಅವನ ತಾಯ್ನುಡಿಯನ್ನೇ ಉದಾಹರಣೆಯಾಗಿ ತೆಗೆದುಕೊಳ್ಳಬಹುದಾಗಿದೆ. ಉತ್ತರಾಪಥದ ಜೈನರು ಮೊದಲಬಾರಿಗೆ ಕರ್ನಾಟಕದಲ್ಲಿ ಕಾಲಿಟ್ಟಾಗ ಅವರಾಡುತ್ತಿದ್ದುದು ಆರ್ಯ ಜನಾಂಗದ ಪ್ರಾಕೃತ ಭಾಷೆ. ಅಂದಿನ ಜೈನರು ತಾವು ಹೋದೆಡೆಗಳಲ್ಲಿ ಯಾವತ್ತೂ ಮತಪ್ರಚಾರಕ್ಕೆಂದು ಕೂಡ ತಮ್ಮ ಭಾಷೆಯನ್ನು ಇತರರ ಮೇಲೆ ಹೇರಿದವರಲ್ಲ. ಆಯಾ ಪ್ರಾಂತದಲ್ಲಿ ಬಳಕೆಯಲ್ಲಿದ್ದ ನುಡಿಯನ್ನೆ ಬಳಸಿದವರು. ಕರ್ನಾಟಕದಿಂದ ತಮಿಳುನಾಡಿಗೆ ಹೋದ ಆ ಜೈನರಿಗೆ ಬರೆಯಲು ಲಿಪಿ ದೊರೆಯಿತು. ತಮಿಳು ನುಡಿಯನ್ನೆ ಬಳಸಿ ಅಭಿಲೇಖಗಳನ್ನು

ಬರೆದರು. ಅದೇ ಲಿಪಿಯು ಕರ್ನಾಟಕದಲ್ಲೂ ಬಳಕೆಯಲ್ಲಿದ್ದಿದ್ದರೆ, ಆ ಕಾಲದ ಕನ್ನಡ ಶಾಸನಗಳೂ ನಮಗೆ ಕಾಣಸಿಗುತ್ತಿದ್ದವು. ತಮಿಳಿನಂತೆ ಕನ್ನಡದ ಭವಿಷ್ಯವೂ ಸುಭದ್ರವಾಗುತ್ತಿತ್ತು.

ಸ್ವಲ್ಪ ಕಾಲಾನಂತರ ಹೆಚ್ಚು ಕಡಿಮೆ ಇಡಿಯ ಭಾರತಕ್ಕೂ ಅಶೋಕನು ಸಮ್ರಾಟನಾಗಿ, ಬೌದ್ಧಧರ್ಮದ ಪ್ರಚಾರವನ್ನು ಕೈಗೊಂಡಾಗ, ಅವನ ಬಳಿ ಬ್ರಾಹ್ಮೀಲಿಪಿಯು ಅತ್ಯಂತ ಮಹತ್ವದ ಆಯುಧವಿತ್ತು. ಜೈನರಂತಲ್ಲದೆ ಬೌದ್ಧರು ತಾವು ಹೋದೆಡೆಗಳಲ್ಲೆಲ್ಲ ಅಲ್ಲಲ್ಲಿಯ ಜನರ ಮೇಲೆ ಪ್ರಾಕೃತ ಭಾಷೆಯನ್ನೇ ಹೇರುತ್ತಿದ್ದರು. ಹೀಗಾಗಿ ಅಶೋಕನ ನಂತರದ ಏಳು ಶತಮಾನಗಳಿಗೂ ಹೆಚ್ಚುಕಾಲ ಕರ್ನಾಟಕದಲ್ಲಿ ಪ್ರಾಕೃತಯುಗವು ಅಧಿಕೃತವಾಗಿ ಪ್ರಚಲಿತವಿತ್ತು. ಆ ಕಾಲಕ್ಕೆ ಸೇರಿದ ಒಂದೇ ಒಂದು ಕನ್ನಡ ಶಾಸನವೂ ನಮಗೆ ದೊರೆತಿಲ್ಲವಾದ ಕಾರಣ, ಕನ್ನಡ ನುಡಿಗೆ ಅಧಿಕೃತವಾದ ಅಂತಸ್ತನ್ನು ನಿರಾಕರಿಸಲಾಗಿತ್ತೆಂದು ನಾವು ಗ್ರಹಿಸಿದರೆ ತಪ್ಪಾಗಲಾರದು. ಪ್ರಾಕೃತದ ಆಗಮನದಿಂದ ಕನ್ನಡಿಗನಿಗಾದ ಒಂದು ಲಾಭವೆಂದರೆ, ಹೊರನಾಡಿನವರ ನಿಕಟ ಸಂಪರ್ಕದಿಂದ ಉದ್ಭವಿಸಿದ ಹೊಸ ಪರಿಸ್ಥಿತಿಗನುಗುಣವಾಗಿ ಪ್ರಾಕೃತದ ನೆರವಿನಿಂದ ಕನ್ನಡ ನುಡಿಯ ಪದಸಂಪತ್ತನ್ನು ಬೆಳೆಸಿಕೊಂಡದ್ದು.

ಪ್ರಾಕೃತಯುಗವು ಕೊನೆಗೊಂಡು ಉತ್ತರಾಪಥದಲ್ಲಿ ಕ್ರಿ. ಶ. ನಾಲ್ಕನೆಯ ಶತಮಾನದ ವೇಳೆಗೆ ವೈದಿಕಧರ್ಮದ ಪುನರುದ್ಧಾರವಾದಾಗ ಅಧಿಕೃತವಾಗಿ ಬಳಕೆಗೆ ಬಂದ ಅಭಿಜಾತ ಸಂಸ್ಕೃತ ಭಾಷೆಯು ಕರ್ನಾಟಕದ ಮೇಲೆ, ಕನ್ನಡಿಗನ ಮೇಲೆ ಬೀರಿದ ಪ್ರಭಾವದ ರೀತಿಯೇ ಬೇರೆಯದು. ಹಿಂದೆ ವಲಸೆ ಬಂದ ಜೈನ ತಂಡವು ಕಂಡು ಹಿಗ್ಗಿದ ಜನಪದಗಳ ಬದಲು ಆರ್ಯ ಸಂಸ್ಕೃತಿಯ ತೆರೆದ ರಾಜ್ಯಗಳು ಕರ್ನಾಟಕದಲ್ಲಿ ಹುಟ್ಟಿಕೊಂಡವು. ಸಂಸ್ಕೃತಯುಗದ ಕರ್ನಾಟಕದ ಅರಸ ಮನೆತನಗಳಲ್ಲಿ ಹೆಚ್ಚಿನವು ಕನ್ನಡ ನೆಲದವೇ ಆಗಿದ್ದಿರಬಹುದಾದರೂ, ಆಳರಸರೆಲ್ಲರೂ ಮನಃಪ್ರವೃತ್ತಿಯಿಂದ, ಧಾರ್ಮಿಕ, ಸಾಂಸ್ಕೃತಿಕ ಮನೋಭಾವದಿಂದ ಉತ್ತರಾಪಥದ ಆರ್ಯ ಸಂಸ್ಕೃತಿಗೇ ಮಾರುಹೋಗಿದ್ದರು. ರಾಜಕೀಯ, ಆಡಳಿತ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಅವರು ಸ್ಫೂರ್ತಿ ಪಡೆದದ್ದು ಅಲ್ಲಿಂದಲೇ. ಆದರೂ ತನ್ನತನಕ್ಕೆ ಹಾಗೂ ಹೀಗೂ ಅಂಟಿಕೊಂಡಿದ್ದ ಬಹುಸಂಖ್ಯಾತ ಕನ್ನಡಿಗನನ್ನು ಅವರು ಪೂರ್ಣವಾಗಿ ಕಡೆಗಣಿಸುವುದು ಸಾಧ್ಯವಿರಲಿಲ್ಲ. ಹೀಗಾಗಿ, ಅಭಿಜಾತ ಸಂಸ್ಕೃತಯುಗದ ಪ್ರಾರಂಭದಿಂದಲೇ ಕರ್ನಾಟಕದಲ್ಲಿ ಅಲ್ಲಲ್ಲಿ ಕನ್ನಡ ಶಾಸನಗಳು ಕಾಣಿಸಿಕೊಂಡವು. ಆದರೂ ಆರ್ಯ ಸಂಸ್ಕೃತಿಯು ತಂದೊಡ್ಡಿದ ಹೊಸ ಮಾದರಿಯ ಆಡಳಿತ ಪದ್ಧತಿಗೆ ಸರಿಹೋಗುವಂತೆ ಅಂದಿನ ಕನ್ನಡ ಪದಸಂಪತ್ತು ಬೆಳೆದಿರಲಾರದು. ಹೀಗಾಗಿ ಆ ಕನ್ನಡ ಶಾಸನಗಳ ಪಾಠಗಳಲ್ಲಿ ಸಂಸ್ಕೃತದ ಪ್ರಭಾವವು ಎದ್ದು ಕಾಣುವುದು ಸಹಜವೇ ಹೌದು. ಆದರೆ ಪ್ರಾರಂಭ ಕಾಲದಲ್ಲಿ ಅನಿವಾರ್ಯವೆನಿಸಿದ್ದ ಈ ಸಂಸ್ಕೃತ ಪ್ರಭಾವಕ್ಕೆ ತಾನು ಎಲ್ಲಿಯವರೆಗೆ, ಎಷ್ಟರಮಟ್ಟಿಗೆ ಒಳಗಾಗಬಹುದು. ಒಳಗಾಗಬೇಕು ಎಂಬ ನಿಷ್ಕರ್ಷೆಯನ್ನು ಅಂದಿನ ಕನ್ನಡಿಗನು ಮಾಡಲಾರದೇ ಹೋದ. ಇದರಿಂದಾಗಿ, ಸೂಕ್ತವಾಗಿ ಬಳಸಬಹುದಾದ ಕನ್ನಡ ಪದಗಳಿದ್ದರೂ, ಶಾಸನ ಪಾಠಗಳ ಒಟ್ಟು ಶೈಲಿಯ ದೃಷ್ಟಿಯಿಂದಲೋ, ಸಾಕಷ್ಟು ಮುಂದಾಲೋಚನೆಯ ಅಭಾವದಿಂದಲೋ ಸಂಸ್ಕೃತ ಪದಗಳನ್ನೇ ಅಥವಾ ಅವುಗಳ ತದ್ಭವಗಳನ್ನೇ ಹೆಚ್ಚು ಹೆಚ್ಚಾಗಿ ಬಳಸಲಾರಂಭಿಸಿದನು. ಮೂಲಗನ್ನಡ ಪದಗಳು ಒಂದೇ ಸಮನೆ ಬಳಕೆ ತಪ್ಪುತ್ತಿರುವುದನ್ನೂ ಕನ್ನಡನುಡಿಯ ಬಿರುಸಿನ ಸಂಸ್ಕೃತೀಕರಣವನ್ನೂ ನಾವು ಕನ್ನಡ ಶಾಸನಪಾಠಗಳಲ್ಲಿ ಕಾಲಾನುಗಾಮಿಯಾಗಿ ಸುಲಭವಾಗಿಯೇ ಗುರುತಿಸಬಹುದಾಗಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ, 'ಕಲ್ಕುಪ್ಪೆ'ಗೂ 'ಪಾಷಾಣ ಪುಂಜ'ಕ್ಕೂ ನಡುವೆ ನಡೆದ ಹೋರಾಟದಲ್ಲಿ, ಪಾಷಾಣಪುಂಜಕ್ಕೇ ಗೆಲುವು. 'ಪೆರ್ಬಾರ್ವಿ'ಗೂ 'ಮಹಾಜನ'ಕ್ಕೂ ನಡೆದ ಹೋರಾಟದಲ್ಲಿ ಮಹಾಜನಕ್ಕೇ ಗೆಲುವು. 'ನೆಲೆವೀಡಿ'ಗೂ 'ರಾಜಧಾನಿ'ಗೂ ನಡೆದ ಹೋರಾಟದಲ್ಲಿ ರಾಜಧಾನಿಗೇ ಗೆಲುವು. ಕನ್ನಡದ ಈ ಸೋಲು ಅವನ ಜೀವನದ ಎಲ್ಲ ರಂಗಗಳನ್ನೂ ಆವರಿಸಿತು. ಮುಂದಿನ ಐತಿಹಾಸಿಕ ಒತ್ತಡಗಳಿಂದ ತನಗಾದ ಸೋಲನ್ನೆ ಗೆಲುವೆಂದು ತಿಳಿದು, ತನ್ನ ನಡೆನುಡಿಗಳ ಮೇಲಾದ ಆಕ್ರಮಣವನ್ನು ಬೆಳವಣಿಗೆಯೆಂದು ನಂಬುವಷ್ಟು ಆತ್ಮವಂಚಕನಾದ.

ಭಾರತೀಯನ, ಅದರಂತೆಯೇ ಕನ್ನಡಿಗನ, ದೈನಂದಿನ ಜೀವನದಲ್ಲಿ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ

ಕ್ಷೇತ್ರಗಳಲ್ಲಿ ಅಂಶಗಳು ಒಂದರಿಂದ ಇನ್ನೊಂದನ್ನು ಬಿಡಿಸಲಾರದಷ್ಟು ಜಟಿಲವಾಗಿ ಹೆಣೆದು ಹೋಗಿವೆಯೆಂಬುದು ಇತಿಹಾಸಸಿದ್ಧವಾದ ಸತ್ಯ. ಈ ಮೊದಲೇ ಸೂಚಿಸಿದಂತೆ ಜೈನರ ತಂಡವು ಮೊದಲಬಾರಿಗೆ ಕರ್ನಾಟಕವನ್ನು ಪ್ರವೇಶಿಸಿದಾಗಿ, ನಮ್ಮ ಪ್ರಾಂತದಲ್ಲಿ ವೈದಿಕಧರ್ಮವಾಗಲಿ, ವರ್ಣಾಶ್ರಮ ಧರ್ಮವಾಗಲಿ ಪ್ರಚಾರದಲ್ಲಿರಲಿಲ್ಲ. ಆದರೆ ಕ್ರಿ. ಶ. ನಾಲ್ಕನೆಯ ಶತಮಾನದಲ್ಲಿ ವೈದಿಕಧರ್ಮದ ನಂತರ ಕಾಲದ ಬೆಳವಣಿಗೆಯಾದ ಬ್ರಾಹ್ಮಣಧರ್ಮವು ಪ್ರಬಲಗೊಂಡು ಕರ್ನಾಟಕದಲ್ಲೂ ಹರಡಿದಾಗ, ಆರ್ಯ ಜನಾಂಗದಲ್ಲಿ ಪ್ರಚಲಿತವಿದ್ದ ವರ್ಣಧರ್ಮದ ಅವನತ ಸ್ವರೂಪವಾದ ಜಾತಿಧರ್ಮವೂ ಕ್ರಮೇಣ ಹರಡಲಾರಂಭಿಸಿರಬೇಕು. ಆ ಜಾತಿಧರ್ಮವನ್ನು ಇನ್ನಷ್ಟು ಬಲಗೊಳಿಸಿ, ಅದರ ಮೂಲಕ ಸಾಮಾಜಿಕ ಶ್ರೇಣಿಯಲ್ಲಿ ತಮ್ಮ ಉನ್ನತ ಸ್ಥಾನವನ್ನು ಬೆಳೆಸಿಕೊಳ್ಳುವ ಸಲುವಾಗಿ ಕರ್ನಾಟಕದ ಪ್ರಾಚೀನ ಅರಸುಗಳು ಉತ್ತರಾಪಥದ ಪ್ರಸಿದ್ಧ ಕ್ಷೇತ್ರಗಳಿಂದ ಬ್ರಾಹ್ಮಣ ಕುಟುಂಬಗಳನ್ನೂ ತಮ್ಮ ರಾಜ್ಯಗಳಿಗೆ ಬರಮಾಡಿಕೊಂಡು, ಅವರಿಗೆ ಸಕಲ ಸೌಕರ್ಯಗಳನ್ನೂ ಮಾಡಿಕೊಡುವುದು ಅಗತ್ಯವಾಯಿತು. ಇದರಿಂದಾಗಿ ಕನ್ನಡಿಗನ ಜೀವನದ ಮೇಲಾದ ಪರಿಣಾಮವನ್ನು ಈ ರೀತಿ ನಿರೂಪಿಸಬಹುದಾಗಿದೆ :

ಬರಮಾಡಿಕೊಂಡ ವೈದಿಕ ಬ್ರಾಹ್ಮಣರ ಮುಖ್ಯ ಕರ್ತವ್ಯ ಅಂದಿನ ಧಾರ್ಮಿಕ ನಂಬಿಕೆಗಳಿಗೆ ಅನುಗುಣವಾಗಿ ಸಮಾಜದ ಒಳಿತಿಗಾಗಿ ವೈದಿಕ ಕ್ರಿಯೆ ಕರ್ಮಗಳನ್ನು ನೆರವೇರಿಸುವುದಾಗಿತ್ತು. ಅದೇ ವೇಳೆಗೆ ಸಾಕಷ್ಟು ವರಮಾನವಿಲ್ಲದ ಷಟ್ಕರ್ಮಗಳಲ್ಲಿ ನಿರತರಾದ ಈ ಬ್ರಾಹ್ಮಣರಿಗೆ ಅವರು ತಮ್ಮ ವೈದಿಕ ಕರ್ಮಗಳನ್ನು ನಿರಾತಂಕವಾಗಿ ನಡೆಸಿಕೊಂಡು ಹೋಗಲನುವಾಗಿ ಜೀವನೋಪಾಯವನ್ನು ಸೃಷ್ಟಿಸುವುದು ಅಗತ್ಯವಿತ್ತು. ಕರ್ನಾಟಕದ ಅರಸುಗಳು ವೈದಿಕ ಬ್ರಾಹ್ಮಣರಿಗೆ ಭೂಮಿಯನ್ನೂ ಮನೆಯ ನಿವೇಶನಗಳನ್ನೂ ಪೈಪೋಟಿಯಿಂದ ದಾನಮಾಡುತ್ತಿದ್ದರೆಂಬುದನ್ನು ಶಾಸನಗಳಿಂದ ತಿಳಿಯುತ್ತೇವೆ. ಈ ದಾನಶಾಸನಗಳನ್ನು ಓದಿದವರಿಗೆ ಆ ಅರಸುಗಳು ಕೇವಲ ಬ್ರಾಹ್ಮಣರಿಗಷ್ಟೇ ಬ್ರಹ್ಮದೇಯಗಳನ್ನೂ ಅಗ್ರಹಾರಗಳನ್ನೂ ಸೃಷ್ಟಿಸಿ ದಾನಮಾಡುತ್ತಿದ್ದರೆಂಬ ಭಾವನೆ ಮೂಡಿ ಬರುವುದು ಸಹಜವೇ ಆಗಿದೆ, ಆದರೂ ನಿಜ ಪರಿಸ್ಥಿತಿ ಹಾಗಿದ್ದಿರಲಾರದೇನೋ. ಬ್ರಾಹ್ಮಣೇತರರಿಗೂ ದಾನಗಳು ಲಭ್ಯವಿದ್ದವೆಂದೂ ಹೇಳಲು ಕೆಲವೊಂದು ಶಾಸನಿಕ ಆಧಾರಗಳಿವೆ. ಉದಾಹರಣೆಗೆ, ತಾಮ್ರ ಮತ್ತು ಶಿಲಾಶಾಸನಗಳನ್ನು ಬರೆದ ಲಿಪಿಕಾರರಿಗೆ ಭೂಮಿದಾನ ಮಾಡುವುದು ವಾಡಿಕೆಯಲ್ಲಿತ್ತು. ಚಾಲುಕ್ಯ ಚಕ್ರವರ್ತಿ ವಿಜಯಾದಿತ್ಯನ ಅಲಂಪೂರ ಪ್ರಶಸ್ತಿಯಲ್ಲಿ,

> ಧರ್ಮಾರ್ಥಂ ವ್ಯಸೃಜದ್ಭೂರಿ ಬ್ರಾಹ್ಮಣೇಭ್ಯಃ ಸಹಸ್ರಶಃ ।
> ದೀನನಾಥ ದರಿದ್ರೇಭ್ಯಃ ಮಹಾದಾನಾನಿ ಸ ಪ್ರಭುಃ ॥

ಎಂದು ಹೇಳಿರುವುದೂ ಬಾಳ್ಗಲ್ಚು, ನೆತ್ತರುಕೊಡುಗೆ, ರುಧಿರಮಾನ್ಯ, ರಕ್ತಮಾನ್ಯ ಮುಂತಾದ ವೀರಗಲ್ಲುಗಳಲ್ಲಿಯ ದಾನದ್ಯೋತಕ ಪದಪ್ರಯೋಗಗಳೂ ಇದನ್ನೆ ದೃಢೀಕರಿಸುತ್ತವೆ. ಏನೇ ಆದರೂ, ಕರ್ನಾಟಕದ ಸಾಮಾಜಿಕ ಜೀವನದಲ್ಲಿ ಮೇಲಿಂದ ಮೇಲೆ ಬಂದೊದಗಿದ ಬದಲಾವಣೆಗಳ ದೃಷ್ಟಿಯಿಂದ ಹೇಳುವುದಾದರೆ, ಬ್ರಹ್ಮದೇಯ ಮತ್ತು ಅಗ್ರಹಾರಗಳ ಸೃಷ್ಟಿಯಲ್ಲಿ ಕಂಡುಬರುವ ಒಂದೆರಡು ಬಹುಮುಖ್ಯವಾದ ನೈತಿಕತಪ್ಪುಗಳಿಂದಾಗಿ, ಸಾಮಾಜಿಕ ಕ್ಷೇತ್ರದಲ್ಲಿ ಕನ್ನಡಿಗನು ತೀವ್ರವಾದ ಸಮಸ್ಯೆಗಳನ್ನು ಎದುರಿಸಬೇಕಾಯಿತು.

ಯೋಗ್ಯರೆನಿಸಿದ ವೈದಿಕ ಬ್ರಾಹ್ಮಣರಿಗೆ ಅವರು ಅನನ್ಯಚಿತ್ತರಾಗಿ ಷಟ್ಕರ್ಮಗಳನ್ನು ನೆರವೇರಿಸಿಕೊಂಡು ಬರಬೇಕೆಂಬ ಉದ್ದೇಶದಿಂದ ಕೊಟ್ಟ ಭೂಮಿದಾನಗಳನ್ನು ನಮೂದಿಸುವ ಶಾಸನಗಳಲ್ಲಿ ಹೆಚ್ಚಿನದಲ್ಲಿ ಆ ದಾನಗಳನ್ನು 'ಪುತ್ರಪೌತ್ರಾನುಭೋಜ್ಯ'ವಾಗಿ 'ಆಚಂದ್ರಾರ್ಕ ಕ್ಷಿತಿಸ್ಥಿತಿ ಸಮಕಾಲೀನ'ವಾಗಿ ಕೊಡಲಾಗಿದೆಯೆಂದು ಸ್ಪಷ್ಟೀಕರಿಸಲಾಗಿದೆ. ಆದರೆ ಇಷ್ಟೊಂದು ಮಹತ್ವದ ಸಲಿಗೆಯನ್ನು ನೀಡುವಾಗ, ಆ ಯೋಗ್ಯ ವೈದಿಕ ಬ್ರಾಹ್ಮಣರ ಪುತ್ರಪೌತ್ರಾದಿ ವಂಶಜರು ಅದೇ ರೀತಿ ಅನನ್ಯವೃತ್ತಿಯುವರಾಗಿ ವೈದಿಕ ಕರ್ಮಗಳನ್ನೆ ಎಂದಿಗೂ ನಡೆಸಿಕೊಂಡು ಹೋಗಬೇಕು ಎಂಬ ಷರತ್ತನ್ನು ವಿಧಿಸುವಷ್ಟು ಅಂದಿನ ಉದಾರ ದಾನಿಗಳು ಜಾಗರೂಕತೆ ವಹಿಸಲಿಲ್ಲ. ಪರಿಣಾಮವಾಗಿ, ದಾನವಾಗಿ ಬಂದ ಭೂಮಿಯನ್ನು ಪರಂಪರಾಗತವಾಗಿ ಭೋಗಿಸುತ್ತ ಬಂದ ಬ್ರಾಹ್ಮಣ ವಂಶಜರು ಹೆಚ್ಚಿನ ಆದಾಯ ಗಳಿಸುವ ಸಲುವಾಗಿ

ಇತರರಿಗೆ ಮೀಸಲಾಗಿದ್ದ ವೃತ್ತಿಗಳಿಗೂ ಕೈಹಾಕುವುದು ಸುಲಭವಾಯಿತು. ಕರ್ನಾಟಕದ ನೂರಾರು ಶಾಸನಗಳಿಂದ ತಿಳಿದುಬರುವಂತೆ, ಅನೇಕ ಬ್ರಾಹ್ಮಣ ಮನೆತನಗಳವರು ತಮ್ಮ ವೈದಿಕ ಪರಂಪರೆಯನ್ನು ಸ್ಮರಿಸುತ್ತ ಉನ್ನತ ಸೈನ್ಯಾಧಿಕಾರಿಗಳಾಗಿ, ಆಡಳಿತಾಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದರು. ಇದರಿಂದಾಗಿ ಕನ್ನಡಿಗನ ಜೀವನದಲ್ಲಿ, ಅದರಲ್ಲೂ ಮುಖ್ಯವಾಗಿ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ, ಸಾಕಷ್ಟು ತೀವ್ರವಾದ ಅಸಮಾಧಾನ ತಲೆಯೆತ್ತಿರಬೇಕು. ಈ ಅಸಮಾಧಾನವು ಕೊನೆಯ ಪಕ್ಷ ಎರಡು ಸಲವಾದರೂ ನಿರಂಕುಶ ಬ್ರಹ್ಮದೇಯ ಸೃಷ್ಟಿಗೆ ಅಡ್ಡ ಬಂದಿತ್ತೆನ್ನಲು ಶಾಸನಾಧಾರಗಳಿವೆ. ಮೊದಲನೆಯ ಸಲ, ಕ್ರಿ. ಶ. ೭ ನೆಯ ಶತಮಾನದ ಮಧ್ಯಭಾಗದಲ್ಲಿ ಚಾಲುಕ್ಯ ಚಕ್ರವರ್ತಿ ಒಂದನೆಯ ವಿಕ್ರಮಾದಿತ್ಯನು ಕರ್ನಾಟಕ ಸಾಮ್ರಾಜ್ಯದ ಆಧಿಪತ್ಯವನ್ನು ಪುನಃ ಸ್ಥಾಪಿಸಿದಾಗ, ಜೊತೆಗೇ, ನಷ್ಟವಾಗಿ ಹೋಗಿದ್ದ ಅನೇಕ ಬ್ರಹ್ಮದೇಯಗಳನ್ನು ಪುನಃ ಸೃಷ್ಟಿಸಿ, ಮೂಲ ಹಕ್ಕುದಾರರ ವಂಶಜರಿಗೇ ಪುನಃ ಒಪ್ಪಿಸುವ ಪರಿಸ್ಥಿತಿ ಒದಗಿ ಬಂದಿತ್ತು. ಎರಡನೆಯ ಸಲ, ಕ್ರಿ. ಶ. ೧೪ನೆಯ ಶತಮಾನದ ಮಧ್ಯಭಾಗದಲ್ಲಿ ವಿಜಯನಗರವು ಸಾಮ್ರಾಜ್ಯವಾಗಿ ಬೆಳೆದ ವೇಳೆಗೆ ಅದರ ಅರಸುಗಳು ಹಿಂದೆ ನಷ್ಟವಾಗಿ ಹೋಗಿದ್ದ ಬ್ರಹ್ಮದೇಯಗಳನ್ನು ಪುನಃ ಸೃಷ್ಟಿಸುವ ಸಾಹಸ ಮಾಡಬೇಕಾಯಿತು. ಒಟ್ಟಿನಲ್ಲಿ ಹೇಳುವುದಾದರೆ, ಬ್ರಹ್ಮದೇಯ ಮತ್ತು ಅಗ್ರಹಾರಗಳ ಸೃಷ್ಟಿಗೆ ಮೇಲಿಂದ ಮೇಲೆ ಬಹುಸಂಖ್ಯಾತ ಕನ್ನಡಿಗನ ವಿರೋಧ ಹಲವು ರೀತಿಗಳಲ್ಲಿ ಹೊರಬಿದ್ದಿರಬೇಕು.

ಜಾತಿಧರ್ಮವು ಕನ್ನಡಿಗನ ಬಾಳಿನಲ್ಲಿ ಇನ್ನೊಂದು ಮುಖ್ಯವಾದ ಬೆಳವಣಿಗೆಗೆ ಕಾರಣವಾಯಿತು. ಜಾತಿಧರ್ಮದ ಪ್ರಾರಂಭ ಕಾಲದಲ್ಲಿ ವಾತಾಪಿ, ಆರ್ಯಪುರ ಮುಂತಾದ ರಾಜಕೀಯ-ಸಾಂಸ್ಕೃತಿಕ ಕೇಂದ್ರಗಳಲ್ಲಿ ಬ್ರಾಹ್ಮಣರ ಒಕ್ಕೂಟಗಳು ರಾಜಕೀಯ ಕ್ಷೇತ್ರದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿದ್ದುವು. ಇದಕ್ಕೆ ಮುಖ್ಯ ಕಾರಣ ರಾಜಾಶ್ರಯ ಮತ್ತು ಭೂಸಂಪತ್ತು ಎನ್ನುವದರಲ್ಲಿ ಸಂಶಯವಿಲ್ಲ. ಕಾಲಕ್ರಮದಲ್ಲಿ ಜೈನ ಮತ್ತು ಹಿಂದೂಧರ್ಮದ ಪಂಗಡಗಳಿಗೆ ಸೇರಿದ ವರ್ತಕ ವೃತ್ತಿಯವರು ಅಪಾರ ಧನ ಗಳಿಸಿ ಕನ್ನಡಿಗನ ಜನಜೀವನದ ಆರ್ಥಿಕ ಕ್ಷೇತ್ರದಲ್ಲಿ ಮೇಲುಗೈ ಪಡೆದು ರಾಜಕೀಯ ಕ್ಷೇತ್ರದಲ್ಲೂ ಪ್ರಭಾವ ಬೀರತೊಡಗಿದರು. ಒಂದು ಕಡೆ ಬ್ರಹ್ಮದೇಯ ಅಗ್ರಹಾರ ಸೃಷ್ಟಿಗಳಿಗೆ ವಿರೋಧ; ಮತ್ತೊಂದು ಕಡೆ ರಾಜಕೀಯ ಕ್ಷೇತ್ರದ ಮೇಲೆ ವಾಣಿಜ್ಯ ಸಂಘಗಳ ಆರ್ಥಿಕ ಒತ್ತಡ. ಇದರಿಂದ ಪಾರಾಗಲು ಬ್ರಾಹ್ಮಣಧರ್ಮದವರಿಗೆ ವೈಯಕ್ತಿಕ ಆಶ್ರಯಕ್ಕಿಂತಲೂ ಸಾಂಸ್ಥಿಕ ಆಶ್ರಯವೇ ಲೇಸು ಎಂದೆನಿಸಿರಬೇಕು. ಇದರ ಪರಿಣಾಮವಾಗಿ ಕನ್ನಡನಾಡಿನ ಎಲ್ಲೆಡೆಗಳಲ್ಲೂ ಅರಸುಗಳ ವರ್ತಕರ ಸಂಘ ಸಂಸ್ಥೆಗಳ ದಾನಗಳ ಸುರಿಮಳೆಯ ಮೂಲಕ ಸ್ವಂತ ಆಧಾರವನ್ನು ಪಡೆದ ಅಸಂಖ್ಯಾತ ದೊಡ್ಡ ಸಣ್ಣ ದೇವಾಲಯಗಳು ಏಳಲಾರಂಭಿಸಿದವು. ಕಾಲಕ್ರಮದಲ್ಲಿ ಈ ದೇವಾಲಯಗಳು ಯಾವುದೇ ಒಂದು ಪಂಗಡಕ್ಕಲ್ಲದೇ ಸಮಾಜದ ಹಲವು ಕುಶಲ ಮತ್ತು ಅಕುಶಲ ಕರ್ಮಿಗಳಿಗೂ ಸಾಧು ಸಂತರಿಗೂ ವಿದ್ಯಾರ್ಥಿಗಳಿಗೂ ಆಸರೆಯಾಗಿ ಪರಿಣಮಿಸಿದವಷ್ಟೆ ಅಲ್ಲದೆ ಕನ್ನಡಿಗನ ದೈನಂದಿನ ಜೀವನದ ಸಾಂಸ್ಕೃತಿಕ ಕೇಂದ್ರಗಳಾಗಿಯೂ ಬೆಳಗಿದವು. ವಿಜಯಾದಿತ್ಯನ ಅಲಂಪುರ ಶಾಸನದ. "ಸಂಗೀತಾರ್ಥಂಚ ಯೋ ಗ್ರಾಮಾನ್ ಪ್ರಾದಾತ್ ದೇವಕುಲೇಷು ಚ" ಎಂಬಮಾತನ್ನು ಇಲ್ಲಿ ನೆನೆಯಬಹುದಾಗಿದೆ.

ದೇವಾಲಯ ಸಂಸ್ಕೃತಿಯು ಬುಡಕಟ್ಟಿನ ಕನ್ನಡಿಗನ ಜೀವನವನ್ನು ಬೇರಿನಿಂದ ಬದಲಾಯಿಸಿತೆಂದೇ ಹೇಳಬೇಕು. ದೇವಾಲಯಗಳ ನಿರ್ಮಾಣವಾಗಲಿ, ನಂತರದ ಅವುಗಳ ಅಸ್ತಿತ್ವವಾಗಲಿ ಭಕ್ತಾದಿಗಳ ಸಂಖ್ಯೆಯ ಮೇಲೆ ಅವಲಂಬಿಸಿರುತ್ತದೆ. ಕ್ರಿ. ಶ. ಎಂಟನೆಯ ಶತಮಾನದವರೆಗೆ ಕೂಡ ಬುಡಕಟ್ಟಿನ ಬಹುಸಂಖ್ಯಾತ ಕನ್ನಡಿಗರು ಕಡೆಯದ, ಕಂಡರಿಸದ ಮರದಡಿಯ ಕಲ್ಲುಗಳನ್ನೇ ಪೂಜಿಸುತ್ತ ಬಂದಿರಬೇಕು. ಅದೇ ವೇಳೆಗೆ ದೇವಾಲಯ ಸಂಸ್ಕೃತಿಯ ಬೆಳವಣಿಗೆಯ ದೃಷ್ಟಿಯಿಂದ ಬ್ರಾಹ್ಮಣಧರ್ಮದವರಿಗೆ ಹೆಚ್ಚಿನ ಜನಸಂಖ್ಯೆಯ ಆಶ್ರಯ ಪಡೆಯುವದು ಅಗತ್ಯವಿತ್ತು. ಆದಕಾರಣ ಅವರು ತಮ್ಮ ಬುದ್ಧಿವಂತಿಕೆಯನ್ನು ಬಳಸಿ ಅಕೃತ್ರಿಮರೂಪದ. ಅದೇ ವೇಳೆಗೆ ಸಾಕಷ್ಟು ಪ್ರಸಿದ್ಧಿ ಗಳಿಸಿದ್ದ ಕಲ್ಲುಗಳನ್ನು ಸ್ವಯಂಭೂ ಲಿಂಗಗಳೆಂದು ಘೋಷಿಸಿ ಮರದಡಿಯ ಆ ಕಲ್ಲುಗಳನ್ನೂ ದೇವಾಲಯಗಳಲ್ಲಿ ಪ್ರತಿಷ್ಠಾಪಿಸಿದರು. ಹೀಗೆಂದು ತಿಳಿಯಗೊಡುವ ಕನ್ನಡ ಶಾಸನಪದ್ಯವೊಂದನ್ನು ಇಲ್ಲಿ ಉದ್ಧರಿಸಬಹುದಾಗಿದೆ :

ಕಡೆಯದ ಕಂಡರಿಸದ ಬೇ—
ರ್ಪಡಿಸದ ಕಮ್ಮೈಸದೊಂದಕೃತ್ರಿಮ ರೂಪಂ ।
ಪಡೆದಂ ಸ್ವಯಂಭು ನೆಲದಿಂ—
ದೊಡೆದುದಯಂಗೈದನಲ್ಲಿ ದಕ್ಷಿಣಸೋಮಂ॥ (E. I., Vol. XVI, p.39. V. 13 ಲಕ್ಷ್ಮೇಶ್ವರದ ಶಾಸನ)

ಇಲ್ಲಿ ಆ ಸ್ವಯಂಭು ಲಿಂಗಕ್ಕೆ 'ದಕ್ಷಿಣ ಸೋಮ' ಎಂದು ಹೆಸರಿಟ್ಟುದುದು ಗಮನಾರ್ಹ. ಅಭಿಜಾತ ಸಂಸ್ಕೃತ ಸಂಸ್ಕೃತಿಯ ಪ್ರಭಾವದಿಂದಾಗಿ, ಕನ್ನಡಿಗನು ತನ್ನ ನೆಲದ ಮೇಲೆ ಹರಿಯುವ ಕೃಷ್ಣೆ, ಗೋದಾವರಿ, ತುಂಗಭದ್ರೆ, ಕಾವೇರಿಯರಿಗಿಂತಲೂ ಗಂಗೆ, ಯಮುನೆ, ಸಿಂಧೂನದಿಗಳು ಪುಣ್ಯತರವಾದುವೆಂದೂ, ತನ್ನ ನೆಲದ ಮೇಲಿನ ಪುಣ್ಯಕ್ಷೇತ್ರಗಳಿಗಿಂತಲೂ ಕುರುಕ್ಷೇತ್ರ, ಪ್ರಯಾಗೆ, ವಾರಣಾಸಿ ಪುಣ್ಯಕರವಾದುವೆಂದೂ ನಂಬಲನುವಾದ. ಇತಿಹಾಸಕಾರನ ದೃಷ್ಟಿಯಿಂದ ಪರಿಶೀಲಿಸಿದಾಗ, ಈ ನಂಬಿಕೆಯು ಎಷ್ಟರಮಟ್ಟಿಗೆ ಕನ್ನಡಿಗನ ಆತ್ಮವಿಶ್ವಾಸವನ್ನು ಕುಂದುಗೊಳಿಸಿರಬೇಕು ಎಂಬುದನ್ನು ಇತಿಹಾಸಕಾರರೇ ಆದ ನಿಮಗೆ ನಾನು ಒತ್ತಿ ಹೇಳುವುದು ಅನಗತ್ಯ.

ರಾಜಕೀಯ ಕ್ಷೇತ್ರದಲ್ಲಿ ಪ್ರಾಚೀನ ಕನ್ನಡಿಗನ ಸಾಧನೆಗಳು ಮಹತ್ವದವು. ಮಯೂರಶರ್ಮನ ಕಾರ್ಯತತ್ಪರತೆ, ಪೊಲೆಕೇಶಿಯರ ಧೈರ್ಯ ಸಾಹಸ, ವಿಷ್ಣುವರ್ಧನನ ದಿಟ್ಟತನ, ಕೃಷ್ಣದೇವರಾಯನ ವಿಜಯಾಕಾಂಕ್ಷೆ ಇವೆಲ್ಲವೂ ಆಯಾ ಕಾಲದ ಕನ್ನಡಿಗನ ಮೇಲೆ ಪ್ರಭಾವ ಬೀರಿದ್ದವು. ಒಂದಲ್ಲ ಒಂದು ಕಾಲದಲ್ಲಿ ಮಹಾರಾಷ್ಟ್ರ, ಗುಜರಾತ, ಆಂಧ್ರಪ್ರದೇಶ, ತಮಿಳುನಾಡಿನ ಬಹುಭಾಗಗಳು ಕರ್ನಾಟಕದ ಅಂಗಗಳಾಗಿದ್ದವು. ದಕ್ಷಿಣ ಮತ್ತು ಆಗ್ನೇಯ ಏಷ್ಯದ ಪ್ರದೇಶಗಳಲ್ಲಿ ಭಾರತೀಯರು ತೋರಿದ ಸಾಹಸಕಾರ್ಯಗಳಲ್ಲಿ ಕನ್ನಡಿಗನೂ ಮಹತ್ವದ ಪಾತ್ರವಹಿಸಿದ್ದನು. ಆದರೆ ಮಧ್ಯಯುಗದಲ್ಲಿ ಕಾಲಿಟ್ಟ ಕನ್ನಡಿಗನು ಒಮ್ಮಿಂದೊಮ್ಮೆಗೇ ತನ್ನ ಸಾಹಸಿ ಪ್ರವೃತ್ತಿಯನ್ನು ಮರೆತು ರಾಜಕೀಯ ಕ್ಷೇತ್ರದಲ್ಲಿ ಸಂಕುಚಿತ ಮನೋಭಾವವನ್ನು ತಾಳುವುದನ್ನೂ ನಾವು ಕಾಣುತ್ತೇವೆ. ಕಲಚುರಿಗಳ ೧೬ ವರ್ಷಗಳ ಆಳಿಡತ ಕಾಲದಲ್ಲಿ ಆಳರಸುಗಳು ದುರ್ಬಲರಿದ್ದ ಕಾರಣ, ಸೈನ್ಯಾಧಿಕಾರಿಗಳೂ ದಂಡನಾಯಕರೂ ಆಡಳಿತಾಧಿಕಾರಿಗಳೂ ಪ್ರಬಲರಾಗಿ, ಸ್ವೇಚ್ಛೆಯಿಂದ ವರ್ತಿಸುವುದನ್ನೂ ಕಲ್ಯಾಣದ ಸಿಂಹಾಸನವನ್ನು ಆಟದ ವಸ್ತುವಾಗಿ ಪರಿಗಣಿಸಿದುದನ್ನೂ ಕಾಣುತ್ತೇವೆ. ಸತ್ಯದ ಮಾತೊಂದನ್ನು ವ್ಯಂಗ್ಯವಾಗಿ ನುಡಿಯುವುದಾದರೆ, ಚಾಳುಕ-ಕಲಚುರಿಗಳ ಹೋರಾಟದ ಆ ದಿನಗಳಲ್ಲಿ ಮಲಗಲು ಹೋದಾಗ ಕಲಚುರಿ ಚಕ್ರವರ್ತಿಯ ಬಂಟನಾಗಿದ್ದವನು, ಮರುದಿನ ಬೆಳಿಗ್ಗೆ ಎದ್ದು ನಿಂತಾಗ ಚಾಳುಕ್ಯ ಚಕ್ರವರ್ತಿಯ ಬಂಟನಾಗಿರುತ್ತಿದ್ದನು. ಈ ದೃಷ್ಟಿಯಿಂದ ನೋಡಿದರೆ, ರಾಜಕೀಯದಲ್ಲಿ ಪಕ್ಷಾಂತರದ ಪಿಡುಗನ್ನು ಹರಡಿಸಿದವರಲ್ಲಿ ಕನ್ನಡಿಗನೇ ಮೊದಲಿಗನೆಂದು ಹೇಳಲೂಬಹುದು.

ಇಷ್ಟೆಲ್ಲ ಹೇಳಿದ ಮೇಲೆ, ನಮ್ಮ ಆಧುನಿಕ ಯುಗಕ್ಕೆ ದಾರಿಮಾಡಿ ಕೊಟ್ಟ ವಿಜಯನಗರ ಕಾಲದ ಕನ್ನಡಿಗನ ಬಗೆಗೆ ಒಂದೆರಡು ಮಾತುಗಳನ್ನು ಹೇಳಲೇಬೇಕು. ಅಳಿದುಳಿದು ಬಂದಿರುವ ಐತಿಹಾಸಿಕ ಸ್ಮಾರಕಗಳ, ಶಾಸನಗಳ ಆಧಾರದ ಮೇಲೆ ಹೇಳುವುದಾದರೆ ವಿಜಯನಗರ ಯುಗವು ಕನ್ನಡಿಗನ ಇತಿಹಾಸದ ವೈಪರೀತ್ಯಗಳ, ವಿರೋಧಾಭಾಸದ ಯುಗವೆನ್ನಬಹುದು. ಆ ಯುಗದ ಕನ್ನಡಿಗನ ಐತಿಹಾಸಿಕ ಸ್ಮಾರಕಗಳು ಮಹತ್ವದ, ಬೃಹತ್ವದ, ಆಡಂಬರದ ರಚನೆಗಳೇನೋ ಹೌದು. ಅವನ ಕಾಲದ ಶಾಸನಗಳ ಸಂಖ್ಯೆಯೂ ಅವುಗಳಿಂದ ತಿಳಿದು ಬರುವ ವಿಷಯಗಳೂ ಹಿಂದೆಂದಿಗಿಂತಲೂ ಹೆಚ್ಚಿನವೇನೋ ಹೌದು. ಆದರೂ ಅವುಗಳಲ್ಲಿ ಕಾಣಲು ಸುಂದರವಾದ, ಒಪ್ಪವಾದ, ಓದಲು ಸ್ಪಷ್ಟವಾದ ವ್ಯಾಕರಣಬದ್ಧವಾದ ಶಾಸನಗಳ ಸಂಖ್ಯೆ ತೀರಾ ಕಡಿಮೆ. ಕರ್ನಾಟಕದಲ್ಲಿ ಶತಮಾನಗಳು ಉರುಳಿದಂತೆ ಬರೇ ಇಳಿಮುಖವಾಗಿ ಮಾತ್ರ ಬಂದಿದ್ದ ಕನ್ನಡ ಕಾವೇರಿಯು ವಿಜಯನಗರ ಕಾಲದ ಕನ್ನಡಿಗನೆದುರು ಹಠಾತ್ತನೆ ಬತ್ತಿಹೋದಂತೆ ನನಗೆ ಭಾಸವಾಗುತ್ತದೆ. ನಮಗಿಂದು ತಿಳಿದು ಬಂದಿರುವ ಅವನ ನಡೆ ನುಡಿಗಳಲ್ಲಿ, ಬರಹಗಳಲ್ಲಿ, ರಚನಾಕ್ರಮಗಳಲ್ಲಿ ಒಂದು ಬಗೆಯ ಅಸ್ತವ್ಯಸ್ತತೆ, ಕಲಬೆರಕೆ ಕಂಡುಬರುತ್ತದೆ. ವಿಜಯನಗರ ಯುಗವು ನಿಜಕ್ಕೂ ಇಂದಿನ ಕನ್ನಡಿಗನ ದಾರುಣ ಪರಿಸ್ಥಿತಿಯ ಉಪಕ್ರಮ ಕಾಲವಿದ್ದಿರಬಹುದು ಎಂಬುದು ನನ್ನ ಅನಿಸಿಕೆ.

ಇಷ್ಟೊಂದು ದೀರ್ಘವಾದ ಉಪನ್ಯಾಸದ ಕೊನೆಯಲ್ಲಿ ನಾನು ಈ ತನಕ ಹೇಳಿದ ವಿಷಯಗಳಿಂದ ಮೂಡಿ ಬರಬಹುದಾದ ಕನ್ನಡಿಗನ ಐತಿಹಾಸಿಕ ವ್ಯಕ್ತಿಚಿತ್ರವನ್ನು ನೀವು ನೀವೇ ಚಿಂತಿಸಿ, ಮಂಥಿಸಿ ನಿಮ್ಮ ಮನದಲ್ಲಿ ರೂಪಿಸಿಕೊಳ್ಳಬೇಕೆಂಬುದು ನನ್ನ ಆಸೆ. ಹಾಗೆ ಮೂಡಿಬರುವ ಚಿತ್ರವು ನನ್ನಲ್ಲಿ ಮನೆಮಾಡಿರಬಹುದೆಂದು ನೀವೆಂದುಕೊಳ್ಳುವ ಸಿನಿಕತನದ ಪ್ರತಿಬಿಂಬವಷ್ಟೇ ಎಂದು ನೀವು ಬಗೆದರೆ, ತಪ್ಪಾದೀತು. ಈ ವಿಷಯದ ಬಗ್ಗೆ ಮಾತಾಡುವುದಾಗಿ ಮಾತು ಕೊಟ್ಟವನೇ, ನನ್ನ ಮನಸ್ಸಿನಿಂದ ಇತರ ಯೋಚನೆಗಳನ್ನೆಲ್ಲ ದೂರಸರಿಸಿ, ಕನ್ನಡಿಗನ ವ್ಯಕ್ತಿತ್ವವನ್ನೆ ಜಪಿಸುತ್ತ, ನಿರ್ಲಿಪ್ತನಾಗಿ ಅವನು ನಡೆದು ಬಂದ ದಾರಿಯಲ್ಲಿ ಹಿನ್ನಡೆ, ಅವನ ಬಾಳಿನಲಿ ಆಗಿಹೋದ ತಿರುವು ಮುರುವುಗಳಲ್ಲಿ ಮುಖ್ಯವಾದುವನ್ನು ಆರಿಸಿ ಇಲ್ಲಿ ಪ್ರಸ್ತಾಪಿಸಿದ್ದೇನೆ. ಇದು ಕನ್ನಡಿಗನ ನಿಂದನೆಯಲ್ಲ. ಏಕೆಂದರೆ ನನಗೆ ಆತ್ಮನಿಂದನೆ ಕಿಂಚಿತ್ತೂ ಹಿಡಿಸದು. ನಾನು ಸ್ವಭಾವತಃ ನಿರಾಶಾವಾದಿಯಲ್ಲ ಎಂಬುದನ್ನು ನಿಮ್ಮ ಮುಂದೆ ಒತ್ತಿ ಹೇಳುವ ಸಲುವಾಗಿ ನನ್ನ ಈ ವಿಶೇಷ ಉಪನ್ಯಾಸವನ್ನು 'ಸಿರಿಗನ್ನಡಂಗೆಲ್ಗೆ' ಎಂಬ ಘೋಷಣೆಯೊಂದಿಗೆ ಮುಗಿಸುತ್ತೇನೆ !

# Summary of Articles

## Inscriptions at Humcha—A Study

—K. Jagannatha Sastry

Humcha in Shimoga district, is a place of piligrimage for Jainas. There are 28 epigraphs in the village. The time span of issuing of these epigraphs spreads from 810 A.D. to 1530 A.D. These inscriptions give details regarding the Santara dynasty from Pomburcha. The present name of Pomburcha is Humcha.

The founder of this kingdom was Jinadatta hailing from Mathura, in the North, Sreekeshi, Jayakeshi, Ranakeshi and Hiranyagarbha were successors of Jinadatta. The last named consolidated his territory called as Shanthalige 1000. He also known as Vikrama Shanthara.

Chagi was the son of Hiranyagarbha. He built a big tank by name Chagi Samudra. Vikrama Shanthara was the son of Chagi. Vikrama had two sons by name Kannara and Kamadeva. Kamadeva hada son whose name was Tyagi Santhara whose son was Nanni Santhara. Nanni's successors were his son Raya and grandson Chikkaveera. Chikkaveera's successors were his son Annamadeva and grandson Tailapa. Tailapa had three sons by name Beeradeva, Singideva and Brahmadeva. Beeradeva, the eldest son, had four sons by his first wife, whose names were Taila, Goggiga, Odduga and Bamma.

Taila had another name, Bhujabala. Goggiga also was known as Govindara and Nanni Shanthra ; Odduga known as Vikrama Shanthara and as Oddamarasa ; Bamma became famous by name Brahmadeva. Perhaps Taila had no male issues ; and Goggiga and Bamma remained unmarried. Odduga had three sons known as Taila, Govinda and Boppuga. Taila also known as Tailuga, Tailaha and Thribhuvanamalla ; Govindara known as Raya Shanthara. Perhaps Govinda and Boppuga remained unmarried.

Taila had three sons by name Kamadeva, Simha and Ammana. Kamadeva had two sons, whose names were Jagadeva and Singideva, and a daughter, Aliya Devi. Jagadeva Raya became the last king of Pomburcha Nadu.

The kings of Pomburcha Nadu had alliances with the kings of Banavasi, the Alupas, the rulers of Adeyur and Palasoge Nadu, the Gangas, Nolambas and Pandyas. The inscriptions give detail information regarding the dynasty of Beerala Devi, queen of Beeradeva.

## Shivasharana Virasangayya of Bidar

—Dr. L. R. Kulkarni

The purpose of this paper is to throw light on the life aspects of Virasangayya, a Shivasharana, who perhaps flourished before Basaveshwara in Bidar. Later records like 'Choupadana' of Channamallayya and 'Sultan Surali Pustak' compiled by an unknown person, inform us that Virasangayya lived in Bidar and fought battles with Bhaskar Raya of Kohir. These records also tell us that Virasangayya was also a ruler of Bidar, perhaps a vassal of the Kalyana Chalukyas.

In support of this view, we have one more record by name 'Onkareshwara Charitre' in Sanskrit found in Kohir (Zahirabad – A.P.). This Sanskrit work throws new light on the life of Virasangayya and also on the genealogy of the ruling dynasty of Kohir which was known as 'Onkarpur' then. Inscriptions too support it. According to this Sanskrit work, Virasangayya was the contemporary of Venambhat of the Dikshit Family of Kohir, that flourised about 1000 years ago. And the details regarding the battles fought between Bhaskara Raya and Virasangayya are also mentioned in this work.

Virasangayya was certainly a Historical figure. He was the contemporary of Bhaskar Raya and Venambhat of Kohir. They flourished during the period of the Chalukyas of Kalyana. The tomb of Virasangayya is found in the fort of Bidar. This could be built there only before the advent of the Muslims.

## Flora as Represented in Hoysala Sculptures

—Dr. T. Dayananda Patel

Though all art historians agree that art reflects the contemporary society and culture, unfortunately it has not been made use of in writing the cultural history of Hoysala period beginning from 11 C.A.D. till the middle of 14 C.A.D. A detailed study of Hoysala sculptures reveal social and cultural aspects of the Hoysala period. The Hoysala temples represent the *flora* in a number of panels and sculptures. It is very difficult to identify them due to the crudeness of their representation. However, a fair idea of the *flora* of the Hoysala period can be obtained from some of the clearer representations. Some trees and shrubs like banyan, *tamala*, pipal tree or *arali*, plantain, jasmine and sugarcane be recognised at a glance.

## Sarvadhikari in Karnataka Administration

—M. P. Mahadevaiah

The office of 'Sarvadhikari' is mentioned in the inscriptions of Karnataka, as an important, influencial and a top ranking functionary performing a variety of duties in ancient and medieval times. But so far no satisfactory explanation has been offered to the powers and function of this officer. Altekar thinks that he was the prime minister, but Derrett feels that it was a title. Dr. A.V. Narasimhamurthy argues that he was a Revenue Officer performing

duties in other departments also. He quotes the instances of many Sarvadhikaris who were prominent in the period of Sevunas of Devagiri. We see that the office gradually lost its importance during the Vijayanagara period. Taking all these into consideration it has been shown in this paper that Sarvadhikari was a top official in ancient Karnataka. He had access to all the departments including finance. This gave him advantage of being closer to kings in ancient Karnataka.

## Ornaments & Gifts to the Chamundeswari Temple by the Odeyars of Mysore

**—C. Mahadeva**

The Chamundeswari Temple being patronised by the successive Odeyars who ruled Mysore, had the good fortune of receiving a large number of ornaments and gifts of unusual type which are worth noting. Not only they are precious, they are also of unusual types. Fortunately the inscriptions and other records have maintained a detailed description and other particulars of these gifts. Hence an attempt has been made here to refer to some important of such ornaments and gifts the deities received.

In the year 1857, Krishnaraja Odeyar III, presented a necklace of gold called Nakshatramalika. An eight-petalled pendent was presented to the Goddess by a lady known as Najjavve of the Bokkasatotti Sannidhana for the Goddess of Uttanahalli. But this jewel is in the Chamundeswari temple now. Lingajammanni, the wife of Krishnaraja Odeyar III was also a great devotee of the Goddess. She presented the brass doorways of the Antarala and the Navaranga of the Chamundeswari temple. Another interesting gift made by Krishnaraja Odeyar III was a silvar Simhavahana to the Goddess. However, the most important gift made by Krishnaraja Odeyar III was the erection of the Gopura in front of the Chamundeswari temple. Another important gift by the late Maharaja Jayachamaraja Odeyar was the silver plated Mahadvara of the Chamundeswari temple. It throws light on the religious leanings of the various rulers who have made these gifts and ornaments.

## Role of Women in Freedom Movement : Motivation

**—Kamala Sampalli**

Gandhiji's attitude towards women appealed to them. They began to realise their standing in the society and also their life mission. He advocated Truth and Ahimasa which enabled women to participate in passive resistance. Gandhiji believed that women could play a noble part with their quality of forbearance in Satyagraha. This belief induced women to play a courageous role in Freedom Movement. Gandhiji came like a magician. His liberal mind to uplift women made women to join campaign for National cause in full enthusiasm. Women grew conscious of their strength. Salt Satyagraha provided an opportunity for women to join

the Movement in large numbers. This incident was a landmark in the History of Freedom Movement.

The Battle for Freedom made the maidens of yester years valiant soliders.

## Genesis of Co-operative Movement in Karnataka and Its Features

**– M. B. Patil**

Co-operative movement basically being peoples' movement was initially launched by the Government of India in 1904 and later by the provincial Governments. Karnataka which was subjected to different administrations before 1956, had no uniform growth of movement in each unit, but each area has its own fascinating historical evolution. The special features of co-operative movement in old Mysore was that a decade earlier to the launching of movement i.e., in 1894, the model Mysore had promoted rural-oriented 'Agricultural Banks', which were the associations of small land holders, on the principles of limited guarantee. These associations had imbibed the principles of both joint stock companies in their structure and co-operative ideals in their *modus operandi* and lending rates etc., which were far below than the rates outside. These banks, however much misused, continued to operate till 1917. The Co-operative Societies Regulation 1905 of Mysore was more progressive and comprehensive compared to the all-India act of 1904, since it had made a provision for establishing non-agriculural non-credit co-operatives which generally were founded in 1912 in other parts of the country. Mysore Government had also deputed an officer to Europe and England to study the movement for its adoption in Mysore.

The Bombay Karnataka area spearheaded the movement from the very beginning by establishing the first agricultural credit society and a urban Bank in the former Bombay state as early as in 1905in Dharwad District. By 1905–1906 Urban Banks had started functioning in about a dozen places in the state, similarly Housing Co-operatives (1909), Consumers Societies (1911), Special Marketing (1913 to 1915), Co-oper-ative Hospitals (1916), Fisheries Co-operatives (1915) were functioning in many parts of Bombay Karnataka.

In the former Hyderabad Karnataka area the movement was started later in 1914.

In Malnad areas of Uttara Kannada district there were crop protection and fencing societies to overcome the dangers to crops by monkeys and pigs. These societies were paying to the hunting parties at the rate of one rupee per tail with a subsidy by the District Board. In the world economic crisis of 1929-1930, Co-operative Banks of Uttara Kannada really stood for the rescue to the members by re-selling the lands to the members to the original pricefor which banks had purchased for old dues, which really enkindled the spirit of mutual help among the ordinary peasants which in turn helped to foster the movement at the grassroot levels. Today Karnataka stands Third in

Co-operative movement next to Maharashtra and Gujarath. Karnataka has the credit of being first in many aspects of Co-operative movement in the country.

## Some Glimpses of the Relevence of Feudatory System to the Indian Freedom

—Prof. C.V. Mathad

As British consolidated their power in India, fewfeudatory States in Karnataka came forward to oppose their power. Such opposition naturally resulted with a great event which is described as 1st year of Independence by the Indian scholars, but a meeting by the Western authors. These feudatory chiefs ran almost a parallel government with all the ingredients of a government at the centre. While studying the history of our country it is possible that lesser known of such feudatory families are normally ignored or by-passed. Needless to stress therefore the need for taking up the study of such feudatory families. In the light of this we have to study some feudatory families in Karnataka. A history of major powers has been dealt with in some detail in standard volumes. But, the due attention has not yet been given to trace the history of the lesser feudatories.

Among such freedom-fighters from Karnataka, mention may be made of few like Ranichennamma of Kittur, Rayanna of Sangolli, Venkatappa Nayaka of Surpur, Babasaheb of Nargund, Bheemarao of Mundargi, Kenchanagouda of Hammige and few others between the period 1800 and 1858.

Let us focus on the activities of some like Venkatappa Nayaka of Surpur, Kenchanagouda of Hammige, Bheemarao of Mundargi, etc. A letter from Dhondo Pant Nana Peshwa, Pant Pradhan, reached to all the leaders and prominent landlords of this part of Karnataka. This news spread to Surpur, Navalgund, Koppal, Shirahatti, Mundargi and Hammige. It is understood by the records that Bheemarao of Mundargi took advantage of the popularity of Kenchanagouda and rebelled against the British. The leaders planned to attack the British.

British, understanding the situation, took quick action. But our own people instead of helping their own leaders, helped the British for some personal benefits. Because of such traitors our leaders who fought heroically, could not succeed.

Role of Kenchanagouda of Hammige does not appear to have received its due recognition. Recorded local accounts prove that Kenchanagouda was not only powerful potentate but was also respected, honoured and obeyed in the area surrounding Koppal. There is a need to review and rewrite the history, without distorting the facts of history.

## Beginning of English Education in Bangalore

—J. V. Gayathri

The role of Christian missionaries-the London mission, the Basel mission and

the Wesleyan mission in spreading English education in Mysore, especially in Bangalore between 1840-1854 was notable. The London mission started by Rev. S. Ladlair and Rev. Forbes in 1824 initiated to start a college to impart English education in Bangalore and as the proposal was not approved by the Board of Directors Bangalore lost the opportunity of having an educational institution of high standard. Among the christian missionaries Benjamin L. Rice, Mrs. Rice and Mrs. Sewell contributed much to the progress of English education in Bangalore. The 'Native Educational Institution' started by the Wesleyan missionaries was converted into High School in 1851 which later became a model for other schools in the province. In 1861 a normal School and an Engineering college were started in Bangalore. The Bangalore High School known as 'Central College' in 1875 had some eminent European principals like Rev. J. Garett, Rice and Charles Waters who took keen interest in the education of native students. As the impact of English Education was restricted to the urban elite the children of the lower and middle strata of society were not sent to English schoolsfor the fearof conversion to Christianity as Bible was taught in these schools. Even in cities where female education was gaining importance English education was limited to females of elite background.

## Auttareya Dravida - Its Characteristics as Described in Vastusastras

**—M. N. Prabhakar**

The elevational parts of Auttareya Dravida temple perspective are pitha, Iangha, thadya Bhumi, Vedi Ghanta and Kalasa.

The text Aparajitaprichcha describes bhumi above the pitha where as the text Diparava describes Dravidi gangha above the pedastral. The number of bhumis may go to twelve. Karnataka, Jatantara, Panjara, tota are the components of bhumi structure. The peripherol arrangement of these structural components is called as talacchanda. Five orders of talacchanda are recognised and they are Padura, Mahapadura, Svastika, Sarvatobhadra and Vardhamana. Padma and Mahapadma are star shaped where as the others are quadrangular. The detailed account of these arrangements may be studied based on texts, Aparajitapriccha and Samarangana Sutradhara.

## Suggikatte – The Harvest Platform of Coorg District

**—M. G. Nagaraj**

The harvest platform with two pillars observed in common or with four pillared (mantapam) is referred to as 'Suggikatte'—the sanctum sanctoram of the goddess of harvest in Coorg District. The 'Suggikatte' is concentrated in the northern Coorg, while it is not seen in the southern parts of the District, which is the paddy granary of Coorg.

The 'Suggikatte' is exclusively used to worship the goddess of harvest - *Parvathi Deviramma* addressed as

*Sugyammathai/Sabathai* considered as representing Sapta Matrikas. People keep three, five or seven facial forms of the goddess for worshipping. This festival is called as *Suggidevara Habba* and is celebrated for 12 to 15 days inculcating folk customs, traditions, dances, tantric rituals and hunting during April-May. In some places this is an annual function, while in some others, it is celebrated once in two years or once in twelve years.

We also find inscriptions carved on 'Suggikatte' and in some cases the inscriptions are found carved on a stone and kept in front of 'Suggikatte'. The pillars carry relief sculptures of elephant, tiger, horse, king, cow, serpant, females and erotic and tantric symbols. The inscriptions indicate the existence of 'Suggikatte' since a long period of time though its name is not explicitly mentioned. For instance, the pillars would be installed at the inception of the town or village. These pillars support a horizontal slab with a hook which holds the oscillating earthern lamp called as Sodlu.

Historical evidences indirectly hint at the existence of *Suggikatte* since 11th century, as seen in the folk stories of the hero-stones. Based on the style of presentation of hero-stones, we can relate the existence of 'Suggikatte' from the times of Vijayanagar empire also. However the folk practices and tantric customs are of a later date (?), and they also contribute to the historicity of the places where they are present.

The Suggikatte is also present in parts of Hassan District which are nearer to Coorg and Chikmagalur districts. The festival traditions of these districts are however endowed with some modifications. But the Huttari in parts of Coorg district is fundamentally a festival during November-December of the year for five days with '*Sri Igguthappa*' being the presiding deity. 'Igguthappa' is considered as an incarnation of 'Ishwara'. This festival is associated with 'huttari-kolata' and other dances with pomp and glory. Hunting is not associated with this festival. Paddy tillers are tied on the assets of farmers and are worshipped. Here rituals and customs are not similar to those of 'Suggikatte' festival.

## Shivamara's Basadi — A Note

**—K. Vasanthalakshmi**

The Earliest Jaina Centre, Shravana Belagola, is very popular since the time of Bhadrabhau Bhattaraka, while the earliest inscription of Shravana Belagola (Sb. No. 1) belongs to 6th C. A.D., the earliest structure is 'Shivamara's Basadi' of Chikkabetta. Though, the basadi is renovated in later days, the original structure belongs to 8th C. A.D. An inscription near the basadi, [Sb. 140(4th)] on paleographical grounds belongs to 8th C and it proves the period of construction of this basadi.

The image in the basadi wrongly identified as 'Chandraprabhanatha' and according to this Thirthankara, the Yaksha, Yakshi's are called as 'Shyama' and 'Jwalamalini', where as the characters of Yaksha-Yakshi's are similar to 'Yaksha

Matanga' and 'Siddhayika Yakshi' of the Digambara pantheon, who are the Yaksha & Yakshi of Mahaveera Tirthankara. So this proves that the Tirthankara image is of 'Mahaveera' only.

The similar images of Tirthankara along with Yaksha & Yakshi, can be seen at Kambadahalli basadi, which are indentified by the local people as 'Mahaveera'. In the Chandanna's basadi, the Tirthankara installed is wrongly called as 'Chandraprabhanatha'; the inscription proves that it is of Adinatha. So, that Shivamara's Basadi, which was built in 8th C. A.D. was consecrated for 'Mahaveera' only and it makes Shravana Belagola to be proud of getting all the four popular Tirthankara's Basadis.

## The Temple Builders of Ancient Karnataka

**—K.S. Kumaraswamy**

The paper deals with the actual temple builders (not the patrons). We come across some problems and ambiguity in identifying the Vastu shilpins. Between 7th - 8th C. A.D. and 18th C. A.D. we come across 55 to 60 temple builders. They have been arranged chronologically. Number of temple builders in 12th C. is more than before and after the said century.

The names of Vastu shilpins, their period, titles, actual work, native place, grants received and all other available points have been taken into consideration here. In some places where there is necessity, it has been discussed.

Kalloja (1186 A.D.), a carpenter builds a home and gets wages. Usually temple builders are mentioned, reference to home builders is a rare one.

First portion of the Essay deals with the norms in identifying the temple builders. The second portion goes on to mention the builders chronologically. Third portion deals with the way in which they used to work, as stated in the inscriptions.

Some notable temples builders are : Srigundam who built the Virupaksha temple, Sarvartha Siddi Achari who built the Lokeswara temple, Revadi Ovajja of the Papanatha temple at Pattadakallu. Ikkuloga or Ikkuda builds two temples near Davanagere town and engraved four inscriptions. Malloja Manioja is another important temple builder who builds Mahalakshmi temple at Doddagaddavalli. Maroja, Masanoja, Senoja, Revoja, Madioja, Bommoja, Kalachari, Raojia, Kamoja, Sirioja, Carpenter Lingoja, Chavundojavachari are some other names evidenced.

## The Mailara Temple at Vidyagiri near Dharwad

**—R.R. Joshi**

Vidyagiri near Dharwad was formerly known as the Mailaralingana Gudda as it has a temple of Mailara Martanda or

or Khandoba, originally built in Kalyana Chalukya times with its *garbhagriha*, *antarala* and *navaranga* in that style. It was expanded in Adilshahi times in 1670 and again by Peshwa Balaji Rao in 1753. The Mailara in the *garbhagriha* is a relief sculpture, four armed, and on his left thigh is seated Ganapathi and on the right Malawwa, Mailara's consort. The *navaranga* has Kalyan Chalukyan pillars and fine engravings of lotus motifs, there being 49 such flowers. The name Madayya engraved on the stone beams indicates that he must be the chief architect of the temple. On one of the frontal pillars of *navaranga* is a Persian inscription informing that the Sarhavaldar of the Dharwad fort under Bijapur, one Mohmad Khan Ullah, in 1670 had converted the temple into a mosque. The Marathas who conquered Dharwad in 1753 re-converted it into a temple. Another Persian incription here is not seen now.

## Natyasastra Tradition in Karnataka Sculptures and Literature

**—Dr. Choodamani Nandagopal**

Karnataka Temples are like open air museums of art and architecture. We could trace out the development of the dual arts, dance and sculpture side by side. The sculptural activities began in Karnataka during 6th century A.D. and flourised in Chalukayan, Rashtrakuta, Hoysala and Vijayanagar times. Karnataka is the only state where so many distinctive schools of sculptures have been evolved. That is the reason we have a rich variety in sculptural representations. In Karnataka, dance has been used as the media of expressing sculptural theme since 6th Century A. D. Thus the study of Karnataka Sculpture in general and dance sculptures in particular has opened a new avenue and vast area of research.

The four-fold classification of Abhinaya as discussed in Natyasastra, Angika, Vachika, Aharya and Satvika find their full expression in Karnataka Sculptures. The various Karanas, Chairis, Sthanakas, Hastas, and major and minor limb movements are brought out on the Natyasastra line in the Karnataka sculptures accurately.

Dance and sculptures are two different and distinctive arts used as vehicles to express human emotions and aesthetic achievement. Both the arts have chosen human body as the means for their exposition. The Rasa theory is common to dance and sculpture. The construction of temples and religious structures gave room for the expression of these dual arts on a common platform. Dance and music provided scope for the sculptors to create the images of free movements and attractive poses instead of stereotyped icons with less differences in attributes and features. This also avoided repetition of images. The ornate temples of Karnataka further used dancing in everyway possible.

## Channakeshava Temple at Aralaguppe

**—Dr. N. S. Rangaraju**

Aralaguppe is a small village in Kibbanahalli hobli of Tiptur taluk, on

the Bangalore–Hubli railway line. It is about 5.6 Kms. from Banasandra and 16 Kms. from Tiptur. In some inscriptions this village is referred as Alariguppe. The Hoysala temple dedicated to Kesava stands on a high ground in the centre of the village. It is a beautiful *ekakuta* temple with tower and appears to have the elements of the Kedaresvara temple at Halebidu and the Lakshmi Narasimha temple at Hosaholalu.

The temple is built facing east. The plan consists of a *garbhagriha*, a *suknanasi* and a *navaranga*, all built over a raised *jagati* of 3½ feet. The outer wall of the *garbhagriha* and the *vimana* are shaped like a star with sixteen points. It is an interesting and important temple with many of the pedestals of wall sculptures bearing the name of a sculptor 'Honoja', a name that has not been met with anywhere else while some of the sculptures bear only the initial 'Ho' and 'Cha'.

Though it is an important Hoysala temple with exquisite sculptures, unfortunately there are no inscriptions which help us to fix the date of this temple. There is an inscription of Vishnuvardhana datable to 1120 A. D. at this place and it does not mention the construction of this temple. From the stylistic evidences also it could not have been a creation of the time of Vishnuvardhana. On the basis of the similarity of this temple with Kedaresvara temple at Halebid and the Lakshminarasimha temple at Nuggehalli and Hosaholalu it can be said with some amount of certainty that this temple must have been built in the first half of the thirteenth century.

## Abhisheka Lakshmi – Image and Inscription Discovered

– Dr. H. R. Raghunatha Bhat

Of the many Abhisheka Lakshmi sculptures, a highly beautiful one, found on a lintel-like slab, excavated at Madasur, Sagar taluk is unique. It has a three-lined Kannada inscription on its *pitha*, of Tulapurusha Santara, this being 48th inscription of the dynasty ruling from Humcha, and of c.10th century. The record says that one Tailaga of 'Mandasur' (called also as 'Mandisur' in another record) caused the creation of the image of Kaccavati (Kaccavi being Lakshmi, emerging from ocean when Vishnu had incarnated as Kacchapa or Koorma). The two-armed relief image, seated with two lotuses in two hands, has two elephants on its either side, pouring water from a *kalasha* on the Goddess and two more elephants are engaged in filling two *kalashas*. The Goddess is flanked by two *chamaradharinis*. Lakshmi, a village Goddess, also of fertility, is called Badubbe or Banadabbe, the name Badubbe perhaps being derived from *badha+pariharini + abbe*, the one helping to overcome obstacles. In Malnad, in places like Sagar, Siddapur-Sirsi, Yellapur, Dharwad, Belgaum etc., this image together with the relief figure of the head of a he-buffalo representing Durga is seen on tank bunds or on outskirts of the village. These are worshipped to assure timely rains or to ward off pestilences. These stones, like herostones or *sati* stones, require special study.

## Inscription of Beli Matha Bangalore

—D. V. Parashiva Murthy

This inscription is found below the wall behind the Basava Mantapa in the Belimatha, Bangalore. It is 88 cm. long and 20 cm. in breadth. Its date is 1761 A.D. This inscription is about 'Mahantheswara Prabhu' and his closest desciple 'Mari-siddalinga Desika' of Hosakote. It tells us about the tomb of Mahantheswara Prabhu which was built by Marisiddalinga Desika, his desciple, when he passed away. We can identify this student-teacher relationship not only in this inscription but also in literary sources. Marisiddalinga Desika has written number of krithis.

The editor of the book 'Mahanthana Tharavali' relates Marisiddalinga Desika's period to be 17th century. But according to the inscription his period is definitely 1761 A. D.

Another speciality of this inscription is a number of Veerashiva 'Paribhashika' words (technical terms) used in it. This is a rare case. From this point of view, this inscription is unique.

## Puradharma Grants — A Survey

—P. V. Krishna Murthy

References like Puradharma Shasana, Puramatha, Puravarga etc., are noticed in some of the inscriptions pertaining to donative type, and the study of such inscriptions bring out the following few facts :

1) All Puradharma villages, like an Agrahara are exempted from many taxes ;

2) The earliest such grants, are by way of Honours conferred on learned persons like poets, scholars, etc. ;

3) In some cases these honours were also conferred on religious personages who were heads of the temples, monasteries and religious groups, etc.

4) During the later period, the same Puradharmas were granted for religious ceremonies such as for amritapadi, naivedya, anga-ranga vaibhava, abhisheka, lighting of lamps, etc. During later times it is very difficult to identify the actual differences between a Devadana grant and a Puradharma grant.

5) During Vijayanagara period, the majority of such Puradharma grants were made by the officials, for the spiritual merit of their overlords like Saluva Narasinga Nayaka, Krishnaraya, Sadasiva-raya, Achutaraya and others ;

6) A few inscriptions from Gundlupet Taluk of Mysore District throw light on construction and leasing systems of puras to develop them as a part and parcel of country's welfare.

7) The word Madapuram, mostly found in Tamil inscriptions is nothing but the pura matha in Kannada. In this respect some inscriptions from Vibhutipura and Dombalur near Bangalore provide valuable information.

8) In all 'Puradharmas', the name of the place which was subjected to the process of Puradharma usually bears the generic suffix 'Pura' as an essential part, in re-naming the place. These puras, also can be categorised under cultural group of place names, like Agraharas.

## Nagattara's Record from Doddabegur

**—Devarakonda Reddy**

This inscription, found recently while clearing the foundation of the famous Begur temple, speaks of Nagattara, mentioned in four other records, and was a Ganga Officer ruling over Bempur-12. The record also calls him as Nanni Perbbana, to indicate the fact that he was a scion of the Bana family. Nagattara defeated Biravarma (perhaps Biramahendra mentioned in the famous Begur herostone, now in Bangalore Museum) and constructed the Somanatha temple and made grants for services in the temple. This 14-lined Kannada record can be ascribed to about 890 A.D.

## The Commoners Mentioned in Some Inscriptions

**—H. S. Gopal Rao**

'Story of a land is the story of its people'. Many common people rendered uncommon service to the community or performed unique deeds. In 1126, one Bammana swore not to take food or bath till he completed a temple. One Lingashivajaya had a brick temple demolished and stone structure raised by funding the scheme by begging in 962. Having ruled over Avani for forty years one Tribhuvana Kartaradeva built 50 temples and two big tanks, etc. Between 1160 and 1177, one Nilakanthadeva of Malur donated new ornaments to the Aprameya temple, when existing ones had been stolen. When the Mahajans of the place payed him for the ornaments, he utilised the money for other charities. At Gorur, the Vasudeva temple was pledged for some loan by the Nambiyar. One lady, Pennakka, released the pawned temple. Dispute over the sanctity of temple was amicably settled by the residents of Kanikatte in 1215. When a zealous Veerashaiva tried to convert a *basadi* at Halebidu into Shivalaya, a Veerashaiva Guru (Mahamahattu) opposed the act and restored the *basadi* to the Jainas by condemning the attempted convertion in clear terms. Of the many instances of self-immolation this is unique: a servant called Katika in 991 immolated himself when his master had a baby son. The Honnudike herostone speaks of three brothers dying for some unknown common cause.

## Jaina Epigraphs of Nagamangala Taluk

**—C. S. Aparna**

This is a religio-regional study of Nagamangala Taluk, which is in Mandya District with reference to Jainism. There

